# ಕನ್ನಡ-ತೆಲಗು ಬುರ್ರಕತೆಗಳ ತೌಲನಿಕ ಅಧ್ಯಯನ

(ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಪಿಎಚ್.ಡಿ. ಮಹಾಪ್ರಬಂಧ)

ಸಂಶೋಧನ

ಮಾಣಿಕಪ್ಪ

ಮಾರ್ಗದರ್ಶನ

ಡಾ.ಎ.ಮೋಹನ ಕುಂಟಾರ್





ಭಾಷಾ ನಿಕಾಯ
ಭಾಷಾಂತರ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ
೨೦೧೨

# ಕನ್ನಡ-ತೆಲುಗು ಬುರ್ರಕತೆಗಳ ತೌಲನಿಕ ಅಧ್ಯಯನ

(ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಪಿಎಚ್.ಡಿ. ಮಹಾಪ್ರಬಂಧ)


ಸಂಶೋಧನೆ

ಮಾಣಿಕಪ್ಪ

ಮಾರ್ಗದರ್ಶನ

ಡಾ. ಎ. ಮೋಹನ ಕುಂಟಾರ್





ಭಾಷಾ ನಿಕಾಯ

ಭಾಷಾಂತರ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ

೨೦೧೨

## ಮಾರ್ಗದರ್ಶಕರ ಪ್ರಮಾಣಪತ್ರ

ಮಾಣಿಕಪ್ಪ ಇವರು 'ಕನ್ನಡ-ತೆಲುಗು ಬುರ್ರಕತೆಗಳ ತೌಲನಿಕ ಅಧ್ಯಯನ' ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ಪಿಎಚ್.ಡಿ. ಪದವಿಗಾಗಿ ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಕನ್ನಡ ವಿಶ್ವವಿದ್ಯಾಲಯದ ಭಾಷಾಂತರ ಅಧ್ಯಯನ ವಿಭಾಗಕ್ಕೆ ಸಲ್ಲಿಸುತ್ತಿದ್ದಾರೆ. ಪ್ರಸ್ತುತ ಮಹಾಪ್ರಬಂಧವು ಅವರ ಸ್ವಂತ ಪರಿಶ್ರಮದ ಫಲವಾಗಿದ್ದು, ಈ ಮೊದಲು ಇದನ್ನು ಇನ್ನಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ದಿನಾಂಕ: ೨೦/೦೪/೧೨

ಸ್ಥಳ: ವಿದ್ಯಾರಣ್ಯ.

ಡಾ. ಎ. ಮೋಹನ ಕುಂಟಾರ

ಮಾರ್ಗದರ್ಶಕರು

ಭಾಷಾಂತರ ಅಧ್ಯಯನ ವಿಭಾಗ

# ಸಂಶೋಧಕರ ಪ್ರಮಾಣಪತ್ರ

**'ಕನ್ನಡ–ತೆಲುಗು ಬುರ್ರಕತೆಗಳ ತೌಲನಿಕ ಅಧ್ಯಯನ'** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ಡಾ. ಎ. ಮೋಹನ **ಕುಂಟಾರ** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಕನ್ನಡ ವಿಶ್ವವಿದ್ಯಾಲಯದ ಭಾಷಾಂತರ ಅಧ್ಯಯನ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ಮಹಾಪ್ರಬಂಧವು ನನ್ನ ಸ್ವಂತ ಪರಿಶ್ರಮದ ಫಲವಾಗಿದ್ದು, ಈ ಮೊದಲು ಇದನ್ನು ಇನ್ನಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ದಿನಾಂಕ: ೨೧-೦೪-೨೦೧೨
ಸ್ಥಳ: ವಿದ್ಯಾರಣ್ಯ.

ಮಾಣಿಕಪ್ಪ
**ಮಾಣಿಕಪ್ಪ**
**ಸಂಶೋಧಕರು**
**ಭಾಷಾಂತರ ಅಧ್ಯಯನ ವಿಭಾಗ**

# ಕೃತಜ್ಞತೆಗಳು

ಕನ್ನಡ-ತೆಲುಗು ಬುರ‍್ರಕತೆಗಳ ತೌಲನಿಕ ಅಧ್ಯಯನ ಎಂಬ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ ಪದವಿಗಾಗಿ ಸಮರ್ಪಿಸುವುದು ನನಗೆ ಅತ್ಯಂತ ಹರ್ಷವೆನಿಸುತ್ತದೆ. ಈ ಸಂದರ್ಭದಲ್ಲಿ ನನ್ನ ಅಧ್ಯಯನಕ್ಕೆ ಅವಕಾಶ ಮಾಡಿಕೊಟ್ಟ ಹಿಂದಿನ ಕುಲಪತಿಗಳಾದ ಡಾ. ಎ. ಮುರಿಗೆಪ್ಪ, ಪ್ರಭಾರ ಕುಲಪತಿಗಳಾದ ಡಾ. ಹಿ.ಚಿ. ಬೋರಲಿಂಗಯ್ಯ, ಕುಲಸಚಿವರಾದ ಡಾ. ಮಂಜುನಾಥ ಬೇವಿನಕಟ್ಟಿ, ಅಧ್ಯಯನಾಂಗದ ನಿರ್ದೇಶಕರಾದ ಡಾ. ಎಫ್.ಟಿ. ಹಳ್ಳಿಕೇರಿ, ಪ್ರಸಾರಾಂಗದ ನಿರ್ದೇಶಕರಾದ ಡಾ. ಸುಬ್ಬಣ್ಣ ರೈ ಹಾಗೂ ಭಾಷಾ ನಿಕಾಯದ ಡೀನ್ ಡಾ. ಪಾಂಡುರಂಗ ಬಾಬು ಅವರುಗಳನ್ನು ಕೃತಜ್ಞತೆಯಿಂದ ನೆನೆಯುತ್ತೇನೆ.

ಮಹಾಪ್ರಬಂಧದ ರಚನೆಯ ಪ್ರತಿ ಹಂತದಲ್ಲು ನನ್ನನ್ನು ಪ್ರೋತ್ಸಾಹಿಸಿ, ಆತ್ಮೀಯವಾಗಿ ಸೂಕ್ತ ಸಲಹೆಗಳನ್ನು ನೀಡಿ ಮಾರ್ಗದರ್ಶನ ಮಾಡಿದ ಡಾ. ಎ. ಮೋಹನ ಕುಂಟಾರ್ ಅವರಿಗೆ ಯಾವತ್ತೂ ಕೃತಜ್ಞ. ವಿಭಾಗದ ಪ್ರಾಧ್ಯಾಪಕರು ಹಾಗೂ ಅಧ್ಯಾಪಕರುಗಳಾದ ಡಾ. ಕರೀಗೌಡ ಬೀಚನಹಳ್ಳಿ, ಡಾ. ವಿಠಲರಾವ್ ಗಾಯಕ್ವಾಡ್, ಡಾ. ಉಷಾ, ವಿಭಾಗದ ಮುಖ್ಯಸ್ಥರಾದ ಡಾ. ಕೆ. ಶಿವಾರೆಡ್ಡಿ ಮತ್ತು ವಿಭಾಗದ ಸಿಬ್ಬಂದಿ ವರ್ಗದವರಾದ ಶ್ರೀ ಗಣೇಶ, ಡಾ. ಶ್ರೀಧರ ಪಿಸ್ಸೆ ಹಾಗೂ ಹನುಮಂತರಾಯ ಇವರುಗಳನ್ನು ಕೃತಜ್ಞತೆಯಿಂದ ನೆನೆಯುತ್ತೇನೆ.

ವಿಷಯವನ್ನು ವಿಸ್ತರಿಸಲು ಬೌದ್ಧಿಕ ತಿಳುವಳಿಕೆ ನೀಡಿದ ಡಾ. ವಿ.ಬಿ. ತಾರಕೇಶ್ವರ(ಕೇಂದ್ರೀಯ ವಿಶ್ವವಿದ್ಯಾಲಯ, ಹೈದರಾಬಾದ್), ಡಾ. ಆರ್. ವೆಂಕಟೇಶಂ, ಡಾ. ಲಿಂಗಪ್ಪ ಗೋನಾಳ(ಉಸ್ಮಾನಿಯ ವಿಶ್ವವಿದ್ಯಾಲಯ, ಹೈದರಾಬಾದ್) ಡಾ. ವೈ.ಪಿ. ರಾಜು(ತೆಲುಗು ವಿಶ್ವವಿದ್ಯಾಲಯ, ಹೈದರಾಬಾದ್), ಡಾ. ಬುದ್ದಪ್ಪ ಎಸ್.ಸಿಂಗೆ, ಡಾ. ಮಾಧವ ಪೆರಾಜೆ, ಡಾ. ಮೊಗಳ್ಳಿ ಗಣೇಶ್, ಡಾ. ಹೆಬ್ಬಾಲೆ ನಾಗೇಶ್, ಡಾ. ಮೈತ್ರಿ ಕೆ.ಎಂ., ಡಾ. ಕೇಶವನ್ ಪ್ರಸಾದ್, ಡಾ. ಚಲುವರಾಜು, ಡಾ. ರಹಮತ್ ತರೀಕೆರೆ, ಡಾ. ಅಮರೇಶ ನುಗಡೋಣಿ, ಡಾ. ಜನಾರ್ಧನ, ಡಾ. ತಾರೀಹಳ್ಳಿ ಹನುಮಂತಪ್ಪ, ಡಾ. ರವೀಂದ್ರನಾಥ, ಸಿ. ವೆಂಕಟೇಶ, ಬಿ. ಸುಜ್ಞಾನಮೂರ್ತಿ ಅವರನ್ನು ಮನದಾಳದಿಂದ ನೆನೆಯುತ್ತೇನೆ.

ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಸರ್ವ ರೀತಿಯಿಂದಲೂ ಆತ್ಮೀಯತೆಯಿಂದ ಮಾಹಿತಿ ನೀಡಿದ ಬುಡ್ಗ ಜಂಗಮ ಸಮುದಾಯದವರಿಗೆ ನನ್ನ ಪ್ರೀತಿಪೂರ್ವಕ ಪ್ರಣಾಮಗಳು.

ಅಕ್ಷರ ಬರೆಯಲು ಒತ್ತು ನೀಡಿದ ಪೂಜ್ಯ ತಂದೆ ತಾಯಿ, ಅಕ್ಕ, ತಂಗಿಯರು, ತಮ್ಮಂದಿರು ಮತ್ತು ನನ್ನ ಕುಟುಂಬದ ವರ್ಗದವರನ್ನು ನೆನೆಯುತ್ತೇನೆ.

ಪಿಎಚ್.ಡಿ ಸಂಶೋಧನ ಮಾಡಲು ಪ್ರೋತ್ಸಾಹ ನೀಡಿದ ದೀಕ್ಷಾ ಗುರುಗಳಾದ ಸ್ವರ್ಗೀಯ ಶ್ರೀ ಶ್ರೀ ಶ್ರೀ ಶಾಂತವೀರಸ್ವಾಮಿಗಳಿಗೆ ಶಿರಸಾಷ್ಟಾಂಗ ಪ್ರಣಾಮಗಳು.

ಸ್ನೇಹಿತರಾದ ಧರ್ಮವೀರ ಕೆ.ಎಚ್., ಹೊಳಿಬಸಪ್ಪ, ಬಸವರಾಜ ಬೆಂಗಳೂರು, ಕುಮಾರ ಬೆಜ್ಜಿಹಳ್ಳಿ, ಮಹಾದೇವ, ಸತ್ಯಮೂರ್ತಿ, ಮುಕ್ತಿಯಾರ್‌ಬಿ, ಪಾಗುಂಡ, ಪಂಪಾಪತಿ, ಹನುಮೇಶ, ರಮೇಶ, ಸಿದ್ದೇಶ, ಶಿವಪ್ಪ, ಅಮರೇಶ, ಮುನಿರಾಜು, ಸಂದೀಪ, ಬಸವರಾಜ ಕಲೆಗಾರ, ಯಲ್ಲಪ್ಪ, ಮೀಟನಾಯಕ್, ಸಿದ್ಲಿಂಗಪ್ಪ ನಾಯಕ್, ಸೋಮರಾಯ, ಪ್ರಸನ್ನ, ವಿಠಲ, ಸಂತೋಷ, ಯಲ್ಲಣ್ಣ, ತಿಪ್ಪಾನಾಯಕ್, ಹೂಲೆಪ್ಪ ಸಂಡೂರು, ರಾಧಾಮಣಿ, ಸುಮನ್, ಸುಜಾತ, ಡಾ. ಹುಲಗಪ್ಪ, ಡಾ. ತುಕಾರಾಮ್, ಡಾ. ಕುಮಾರ್, ಡಾ. ಓಬಯ್ಯ, ಡಾ. ಹನುಮತರಾಯ, ಡಾ. ಜಗದೀಶಕುಮಾರ, ಡಾ. ಬಸವರಾಜ ಎ.ಡಿ., ಡಾ. ಮಲ್ಲಿನಾಥ ತಳವಾರ, ಶಂಕರ ಕಾವಲಿ, ಮಲ್ಲಯ್ಯ, ಬಸವರಾಜ ಎ.ಕೆ., ವೆಳ್ಳಿಮಾ ಹಾಗೂ ಅನನ್ಯ-ಅನಿಕೇತನ-ಅಸ್ಮಿತ ವಸತಿ ನಿಲಯದ ವಿದ್ಯಾರ್ಥಿ ಮಿತ್ರರನ್ನು ಈ ಸಂದರ್ಭದಲ್ಲಿ ನೆನೆಯುತ್ತೇನೆ.

ಮಹಾಪ್ರಬಂಧದ ರಚನೆಯ ಸಂದರ್ಭದಲ್ಲಿ ಗ್ರಂಥಾಲಯದಲ್ಲಿ ಸಹಕರಿಸಿದ ಡಾ. ನಾಗವೇಣಿ, ಡಾ. ಕ.ಅ. ರಾಧಾಕೃಷ್ಣ ಮತ್ತು ಸಿಬ್ಬಂದಿ ವರ್ಗದವರಿಗೆ ನೆನೆಯುತ್ತೇನೆ.

ಅಕ್ಷರ ಸಂಯೋಜನೆ ಮಾಡಿಕೊಟ್ಟ ಹೊಸಪೇಟೆಯ ಯಾಜಿ ಗ್ರಾಫಿಕ್ಸ್‌ನ ಶ್ರೀಮತಿ ಸವಿತಾ ಯಾಜಿ ಮತ್ತು ಗಣೇಶ ಯಾಜಿ ಅವರಿಗೆ ನನ್ನ ಪ್ರೀತಿಪೂರ್ವಕ ಕೃತಜ್ಞತೆಗಳು.

ದಿನಾಂಕ :

(ಮಾಣಿಕಪ್ಪ)
ಸಂಶೋಧನ ವಿದ್ಯಾರ್ಥಿ
ಭಾಷಾಂತರ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ

## ಪರಿವಿಡಿ

# ಕನ್ನಡ-ತೆಲುಗು ಬುರ್ರಕತೆಗಳ ತೌಲನಿಕ ಅಧ್ಯಯನ

# ಅಧ್ಯಾಯ ೧

# ಅಧ್ಯಯನದ ಸ್ವರೂಪ, ಉದ್ದೇಶ, ವ್ಯಾಪ್ತಿ

## ಪ್ರಸ್ತಾವನೆ

ಯಾವುದೇ ಸಾಹಿತ್ಯದ ಕುರುಹುಗಳನ್ನು ಹಾಗೂ ಅದರ ಮೂಲವನ್ನು ಹುಡುಕ ಹೊರಟರೆ ಕಣ್ಣೆದುರು ನಿಲ್ಲುವಂತಹದು ಜನಪದ ಸಾಹಿತ್ಯ. ಹೀಗಾಗಿ ಇಂದು ಜಾನಪದ ಅಧ್ಯಯನವು ಅತ್ಯಂತ ಮಹತ್ವವನ್ನು ಪಡೆದುಕೊಳ್ಳುತ್ತಿದೆ. ಇಂದಿನ ಸಂಶೋಧಕರು ಜಾನಪದದಲ್ಲೇ ವಿವಿಧ ಪ್ರಕಾರಗಳ ಸೂಕ್ಷ್ಮವನ್ನು ಅರಿತು, ಆ ಸೂಕ್ಷ್ಮತೆಗಳ ಒಂದೊಂದು ಪ್ರಕಾರವನ್ನು ಅಧ್ಯಯನ ಮಾಡುತ್ತಿದ್ದಾರೆ. ಶಿಷ್ಟ ಸಾಹಿತ್ಯದಲ್ಲಿ ವಿವಿಧ ಪ್ರಕಾರಗಳು ಇದ್ದಂತೆ ಜನಪದ ಸಾಹಿತ್ಯದಲ್ಲಿ ವಿವಿಧ ಪ್ರಕಾರಗಳಿವೆ. ಮಾನವನ ಪುರಾತನ ಸಂಸ್ಕೃತಿ ಹಾಗೂ ಸಂಪ್ರದಾಯದ ಮೇಲೆ ಹೆಚ್ಚು ಬೆಳಕನ್ನು ಬೀರುವ ಜಾನಪದ ಪ್ರಕಾರಗಳಲ್ಲಿ ಕತೆ ಪ್ರಮುಖವಾದುದು. ಜಾನಪದ ಸಾಹಿತ್ಯದಲ್ಲಿ ಕತೆ ಅಥವಾ ಕಥನಕಾವ್ಯ ಪ್ರಮುಖವಾಗಿ ಎದ್ದು ಕಾಣುವಂತಹದು. ಈ ಕತೆಗಳು ಬಾಯಿಂದ ಬಾಯಿಗೆ ಹರಿದು ಬಂದವುಗಳಾಗಿವೆ. ಇಂತಹ ಸಂಪ್ರದಾಯದ ಬಗ್ಗೆ ಜಗತ್ತಿನ ಅನೇಕ ವಿದ್ವಾಂಸರು ತೋರಿಸಿದ ಆಸಕ್ತಿ, ಅವರು ಮಾಡಿದ ಕೆಲಸ ಅಸದೃಶವಾದುದು. ಜನಪದರು ದುಡಿಮೆಯ ಸಂದರ್ಭದಲ್ಲಿ ಕತೆಯನ್ನು ಹೇಳುತ್ತಿದ್ದರು. ರಾತ್ರಿಯ ವೇಳೆಯಲ್ಲಿ ಅಜ್ಜಿಯು ಕಿರಿಯರನ್ನು, ಮಕ್ಕಳನ್ನು ಕೂಡಿಸಿಕೊಂಡು ಕತೆ ಹೇಳುತ್ತಿದ್ದಳು. ಅದು ಕಟ್ಟು ಕತೆಯಾಗಿರಬಹುದು. ಕೆಲವು ಸಂದರ್ಭದಲ್ಲಿ ವಾಸ್ತವವನ್ನೇ ಕತೆಯಾಗಿ ಕಟ್ಟಿ ಹೇಳುವುದುಂಟು. ಕೆಲವೊಂದು ಕತೆಗಳು ಅತ್ಯಂತ ಚಿಕ್ಕದಾದ ಗದ್ಯ ರೂಪವಾಗಿರುತ್ತವೆ. ಆದರೆ ಕಥನಕಾವ್ಯ ಸಾಮಾನ್ಯವಾಗಿ ದೀರ್ಘವಾಗಿರುತ್ತದೆ. ಒಂದು ಕತೆಯ ವಸ್ತುವನ್ನು ಇಟ್ಟುಕೊಂಡು ಅದನ್ನು ವಿಸ್ತರಿಸುತ್ತಾ ದೀರ್ಘವಾಗಿ ಹಾಡುವ ಕಲೆ ಜನಪದರಲ್ಲಿದೆ. ಹಾಗೆಯೇ ಚಿಕ್ಕಚಿಕ್ಕ ಹಾಡುಗಳನ್ನು ಸಹ ಹಾಡುತ್ತಿರುತ್ತಾರೆ. ಆದರೆ ಅದಕ್ಕೆ ಒಂದು ಕಥಾವಸ್ತು ಪ್ರಾಪ್ತಿಯಾಗಿರುವುದಿಲ್ಲ. ಜನಪದರು ಅವರ ಹಾಡಿನ ಕಾವ್ಯಕ್ಕೆ ಕತೆ ಎಂದೇ ಸಂಬೋಧಿಸುತ್ತಾರೆ. ಅಂದರೆ ಕತೆಯಲ್ಲೇ ಕಾವ್ಯ ಅಡಗಿರುತ್ತದೆ. ಹೀಗಾಗಿ

ಪ್ರಸ್ತುತ ಅಧ್ಯಯನದಲ್ಲಿ ಜನಪದರ ಹಾಡನ್ನು ಬುರ್ರಕಥನಕಾವ್ಯ ಎಂದು ಹೆಸರಿಸದೆ ಬುರ್ರಕತೆಗಳು ಎಂದೇ ಹೇಳಲಾಗಿದೆ.

ದೀರ್ಘವಾದ ಕಥನಕಾವ್ಯವನ್ನು ಅವಲೋಕಿಸಿದಾಗ ಪಾಶ್ಚಾತ್ಯರ ಕಲೇವಾಲ ಕಾವ್ಯವು ಮೌಖಿಕ ಕಾವ್ಯವಾಗಿ ಮೊದಲಿಗೆ ಕಂಡುಬರುತ್ತದೆ. ಈ ಕಾವ್ಯವನ್ನು ವೃತ್ತಿಗಾಯಕರೇ ಹಾಡಿದ್ದುದು ತಿಳಿಯುತ್ತದೆ. ಪ್ರಪಂಚದಲ್ಲಿ ಮೊಟ್ಟಮೊದಲು ಇಂತಹ ಗಾಯಕರು ಹಾಡನ್ನು ಹಾಡಿ ಉಪಜೀವನ ಸಾಗಿಸಿದ್ದನ್ನು ಕಾಣಬಹುದು. ಹಾಗೆಯೇ ಭಾರತದಲ್ಲೂ ಸಹ ಎಲ್ಲಾ ಮುಖ್ಯ ಭಾಷೆಗಳಲ್ಲಿ ಇಂತಹ ವೃತ್ತಿಗಾಯಕರನ್ನು ಕಾಣಬಹುದು. ಕರ್ನಾಟಕದಲ್ಲಿ ವೃತ್ತಿಗಾಯಕರಾದ ನೀಲಗಾರರು, ಕಂಸಾಳೆಯರು, ಚೌಡಿಕೆಯರು, ಗೊರವರು, ಕರಪಾಲದವರು, ಬುರ್ರಕತೆಗಾರರು, ದೊಂಬಿದಾಸರು, ಹೆಳವರು, ಜೋಗಿಗಳು, ತಂಬೂರಿಯರು ಮುಂತಾದವರು ಕಂಡುಬರುತ್ತಾರೆ. ಇವರೆಲ್ಲ ಅವರ ಜೀವನಕ್ಕಾಗಿ ಕಲೆಯನ್ನು ಅವಲಂಬಿಸಿರುತ್ತಾರೆ. ಪ್ರಸ್ತುತ ಅಧ್ಯಯನಕ್ಕಾಗಿ ಬುರ್ರಕತೆಗಾರರ ಮೌಖಿಕ ಕಥನಗಳನ್ನು ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ. ಈ ಬುರ್ರಕತೆ ಕಲೆಯು ಆಂಧ್ರಪದೇಶದಲ್ಲಿ ಅತ್ಯಂತ ಪ್ರಸಿದ್ಧಿ ಪಡೆದಿದೆ. ಈ ಕಥನವನ್ನು ಹೇಳುವ 'ಬುಡ್ಗಜಂಗಮ' ಎನ್ನುವ ಅಲೆಮಾರಿ ಸಮುದಾಯ ಕರ್ನಾಟಕ-ಆಂಧ್ರದ ಗಡಿನಾಡು ಪ್ರದೇಶಗಳಲ್ಲಿ ನೆಲೆಸಿದ್ದಾರೆ. ಕನ್ನಡ-ತೆಲುಗು ಎರಡೂ ಭಾಷೆಗಳಲ್ಲಿ ಬುರ್ರಕತೆಗಳನ್ನು ಪ್ರದರ್ಶಿಸಿ, ಜನರನ್ನು ರಂಜಿಸಿ ಉಪಜೀವನವನ್ನು ಸಾಗಿಸುತ್ತಾರೆ. ಇವರು ಹಾಡುವ ಕತೆಗಳು ಒಂದು ಪ್ರದೇಶದ ಹಾಗೂ ಅಲ್ಲಿನ ಜನಸಮುದಾಯದ ಸಂವೇದನೆಯ ಭಾಗವೇ ಆಗಿದೆ. ಇಲ್ಲಿ ಬರುವ ಅನೇಕ ಸಾಂಸ್ಕೃತಿಕ ವಿವರಗಳು ನಿರ್ದಿಷ್ಟ ಕಾಲಘಟ್ಟದ ಮಾನವ ಸಮುದಾಯದ ಪ್ರತಿಭಾ ವಿಶೇಷಗಳೇ ಆಗಿವೆ. ಈ ಜನರು ಕರ್ನಾಟಕದಲ್ಲಿದ್ದು ಒಬ್ಬರೇ ಕನ್ನಡ-ತೆಲುಗು ಎರಡೂ ಭಾಷೆಗಳಲ್ಲಿ ಹಾಡುವುದರಿಂದ ಅವುಗಳ ವಿಭಿನ್ನ ಆವೃತ್ತಿಗಳು ತೌಲನಿಕ ಅಧ್ಯಯನಕ್ಕೂ ಮುಖ್ಯ ಆಕರಗಳಾಗಿವೆ.

## ಅಧ್ಯಯನದ ಉದ್ದೇಶ

ಗ್ರಾಮಾಂತರ ನಿವಾಸಿಗಳು ನಗರಗಳ ನಾಗರಿಕತೆಯಿಂದ ದೂರವಿದ್ದು ಅವರ ಮೂಲ ಸಂಪ್ರದಾಯಗಳ ನಂಬಿಕೆಗಳು, ಮಾಟ-ಮಂತ್ರಗಳು, ಗೀತೆಗಳು, ಕಥನಗಳು, ಲಾವಣಿಗಳು, ಆಟಗಳು ಮುಂತಾದವು ಇನ್ನೂ ಜೀವಂತವಾಗಿ ಇಟ್ಟುಕೊಂಡಿದ್ದನ್ನು ಕಾಣಬಹುದು. ಅನೇಕ ಆದಿವಾಸಿಗಳ, ಅಲೆಮಾರಿ ಸಮುದಾಯಗಳ ಬದುಕನ್ನು ಅವಲೋಕಿಸಿದಾಗ ಅವರ ಸಂಪ್ರದಾಯ ಮತ್ತು ಅವರದೇ ಆದ ಜ್ಞಾನ ಪರಂಪರೆಯನ್ನು ಉಳಿಸಿಕೊಂಡಿರುವುದನ್ನು ಕಾಣಬಹುದು. ಅವರು ಪ್ರಕೃತಿಯ ಹಾಗೂ ಜೀವಾನಾನುಭವ ಜ್ಞಾನವನ್ನು ಉಳಿಸಿ ಬೆಳೆಸಿಕೊಂಡಿದ್ದಾರೆ. ಕೆಲವು ಜನವರ್ಗಗಳು ಕಥನಗಳನ್ನು ಹಾಡುವುದು ವೃತ್ತಿಯನ್ನಾಗಿಸಿಕೊಂಡಿದ್ದಾರೆ. ಪ್ರಸ್ತುತ ಅಧ್ಯಯನದಲ್ಲಿ ಅಲೆಮಾರಿ ಸಮುದಾಯವಾದ ಬುಡ್ಗಜಂಗಮರ ಕತೆಗಳನ್ನು ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ.

ಈ ಜನರು ಸುಮಾರು ನೂರರಿಂದ ನೂರೈವತ್ತು ಕತೆಗಳನ್ನು ಹಾಡುತ್ತಾರೆ. ಇವರು ಮೊದಮೊದಲು ಶೈವಮತಕ್ಕೆ ಅನುಗುಣವಾಗಿ ಕಥನಗಳನ್ನು ಹಾಡುತ್ತಿದ್ದರು. ಆದರೆ ಕಾಲ ಬದಲಾದಂತೆ ಜನರ ಆಶೆ ಅಭಿಲಾಷೆಗಳಿಗೆ ತಕ್ಕಂತೆ, ಅವರ ಮನೋಧರ್ಮಕ್ಕೆ ಅನುಗುಣವಾಗಿ ಹಾಡಲು ಪ್ರಾರಂಭಿಸಿದರು. ಐತಿಹಾಸಿಕ, ಚಾರಿತ್ರಿಕ, ಆಧುನಿಕ ಕಥಾ ವಸ್ತುವನ್ನು ಆಧರಿಸಿ ಇಂದು ಹಾಡುತ್ತಿದ್ದಾರೆ. ತೆಲುಗಿನಲ್ಲಿ ಈ ಕತೆಗಳನ್ನು ರಾಜಕೀಯ, ಧಾರ್ಮಿಕ, ಸಾಮಾಜಿಕ ಚಳುವಳಿಗಾಗಿ ಬಳಸಿಕೊಂಡಿದ್ದನ್ನು ಕಾಣಬಹುದು. ಸ್ವಾತಂತ್ರ್ಯ ಸಂಗ್ರಾಮದಲ್ಲಿ ಈ ಕತೆಗಳ ಮಹತ್ವವನ್ನು ಅರಿತ ಬ್ರಿಟಿಷರು ಇದರ ವಿರುದ್ಧ ಸುಗ್ರಿವಾಜ್ಞೆ ಹೊರಡಿಸಿದ್ದನ್ನು ಇಲ್ಲಿ ನೆನಪಿಸಿಕೊಳ್ಳಬಹುದು. ಇದರಿಂದ ಕತೆಗಳ ಮೂಲಕ ಇವರು ಮೂಡಿಸುತ್ತಿದ್ದ ಸಾಮಾಜಿಕ ಎಚ್ಚರವನ್ನು ತಿಳಿಯಬಹುದು. ಕರ್ನಾಟಕಕ್ಕೆ ವಲಸೆ ಬಂದು ನೆಲೆಸಿದ ಈ ಜನರು ಕನ್ನಡ-ತೆಲುಗು ಮೌಖಿಕ ಬುರ್ರಕತೆಗಳ ಪ್ರದರ್ಶನ ಮುಂದುವರಿಸಿದರು. ಇಂದು ದೂರದರ್ಶನ, ಸಿನೆಮಾ, ಪಾಶ್ಚಾತ್ಯ ಸಂಗೀತದಿಂದ ಇಂತಹ ಸಂಪ್ರದಾಯದ ಕತೆಗಳು, ಹಾಡುಗಳು ತನ್ನ ಅಸ್ತಿತ್ವವನ್ನು ಕಳೆದುಕೊಳ್ಳುವ ದಾರಿ ಹಿಡಿದಿವೆ. ಒಂದು ಕಾಲದಲ್ಲಿ ಸಾಮಾಜಿಕ ಎಚ್ಚರವನ್ನು ಮೂಡಿಸಿದ ಬುರ್ರಕತೆಗಳು ಜನಪದ ಬದುಕಿನ ಅವಿಭಾಜ್ಯ ಅಂಗವೇ ಆಗಿದ್ದವು. ಇಂತಹ ಬುರ್ರಕತೆಗಳನ್ನು ಕನ್ನಡ ಮತ್ತು ತೆಲುಗು ಎರಡೂ ಭಾಷೆಗಳಲ್ಲಿ ಒಬ್ಬರೇ ಹಾಡುತ್ತಿರುವುದು ವಿಶೇಷ. ಇಂತಹ ಅನೇಕ ಕತೆಗಳನ್ನು ಒಡಲಲ್ಲಿ ತುಂಬಿಕೊಂಡ ಜನಪದ ಬುರ್ರಕತೆಗಾರರ ಪ್ರತಿಭೆಗೆ ಇವು ದೃಷ್ಟಾಂತ ಒದಗಿಸುತ್ತವೆ. ಬುರ್ರಕತೆಗಾರರು ಸೃಜನಶೀಲವಾಗಿ ಎರಡೂ ಭಾಷೆಗಳಲ್ಲಿ ರೂಪಿಸುತ್ತಿದ್ದ ಕಥನ ವಿಧಾನವನ್ನು ಸಂಗ್ರಹಿಸಿ ತೌಲನಿಕವಾಗಿ ಅಧ್ಯಯನ ಮಾಡುವುದರ ಮೂಲಕ ಅದರ ನಿರೂಪಣೆಯ ವೈಶಿಷ್ಟ್ಯವನ್ನು ಗಮನಿಸಬಹುದು. ಹಾಗೆಯೇ ಅವರು ಎರಡೂ ಭಾಷೆಗಳಲ್ಲಿ ರೂಪಿಸುವ ಕತೆಗಳು ಆವೃತ್ತಿಗಳು ಒಂದು ಇನ್ನೊಂದರ ಭಾಷಾಂತರ ಎಂಬಂತೆ ಅಭಿವ್ಯಕ್ತಿಗೊಂಡಿರುವರುವುದು ವಿಶೇಷ. ಇದನ್ನು ಅಧ್ಯಯನ ಸಂದರ್ಭದಲ್ಲಿ ಪ್ರತ್ಯೇಕವಾಗಿ ಗಮನದಲ್ಲಿಟ್ಟು ಕೊಳ್ಳಲಾಗಿದೆ. ಬುರ್ರಕತೆಗಳು ಅದನ್ನು ಹಾಡುವ ಜನರ ಅನುಭವ ಕಥನಗಳಾಗಿ ಅವರ ಸಂವೇದನೆಗಳನ್ನು ಪ್ರಚುರಪಡಿಸುತ್ತಿವೆ. ಸಾಮಾಜಿಕ ದುಷ್ಟತನಗಳನ್ನು ನೀಗಿ ಮಾನವೀಯ ಸಂಬಂಧಗಳನ್ನು ಗಟ್ಟಿಗೊಳಿಸುವ ಆಶಯವು ಬುರ್ರಕತೆಗಳ ಪರಂಪರೆ ಜನಪದದಲ್ಲಿ ಉಳಿದು ಬೆಳೆದು ಬರಲು ಇರುವ ಸಾಹಿತ್ಯ ಹಾಗೂ ಸಾಮಾಜಿಕ ಕಾರಣಗಳ ಶೋಧ ಪ್ರಸ್ತುತ ಅಧ್ಯಯನದ ಮುಖ್ಯ ನೆಲೆಯಾಗಿದೆ.

'ಬುರ್ರಕತೆ' ಎನ್ನುವ ಹೆಸರೇ ಸೂಚಿಸುವಂತೆ ಅದು ತೆಲುಗು ಮೂಲವಾದದ್ದು. ಆದರೆ ಇದು ಕರ್ನಾಟಕ-ಆಂಧ್ರ ಗಡಿ ಜಿಲ್ಲೆಗಳಲ್ಲಿ ಕನ್ನಡ-ತೆಲುಗು ಭಾಷೆಗಳಲ್ಲಿ ಪ್ರಚಲಿತದಲ್ಲಿವೆ. ಒಬ್ಬರೇ ವಕ್ತೃ ಕನ್ನಡ ಮತ್ತು ತೆಲುಗು ಎರಡೂ ಭಾಷೆಗಳಲ್ಲಿ ಕಥೆಗಳನ್ನು ಸಂಪ್ರದಾಯಕವಾಗಿ ಎಷ್ಟೋ ವರ್ಷಗಳಿಂದ ಹಾಡುತ್ತ ಬಂದಿದ್ದಾರೆ. ಇಂತಹ ಅನೇಕ ಕಲಾವಿದರು ಇಂದಿಗೂ ಇದ್ದಾರೆ. ಹಾಗೆಯೇ ಎರಡೂ ಭಾಷೆಗಳ ಕೇಳುಗರೂ ಇದನ್ನು ಆಸ್ವಾದಿಸುತ್ತಿರುತ್ತಾರೆ. ಬುರ್ರಕತೆಗಳು ಪ್ರಯೋಗವಾಗುವ ಸಂದರ್ಭದಲ್ಲಿ ಕತೆ

ಅದರ ನಿರೂಪಣ ವಿಧಾನ, ಅದರ ಭಾಷಿಕ ಅಭಿವ್ಯಕ್ತಿಯ ಸ್ವರೂಪ, ಪ್ರದರ್ಶನದ ಕಲಾತ್ಮಕತೆ ಇತ್ಯಾದಿಗಳೇ ಮುಖ್ಯವಾಗಿ ನಿರ್ದಿಷ್ಟ ಸಂದೇಶಗಳನ್ನು ನೀಡುತ್ತವೆ. ಇದು ಭಾಷೆಯನ್ನು ಮೀರಿ ಕಲಾಸಕ್ತರನ್ನು ತನ್ನತ್ತ ಸೆಳೆಯುತ್ತದೆ. ಹಾಗೆಯೇ ಕಲಾವಿದರು ತಮ್ಮ ವೃತ್ತಿಯನ್ನಾಗಿಯೂ ಇದನ್ನು ಸ್ವೀಕರಿಸಿಕೊಂಡಿದ್ದಾರೆ. ಕನ್ನಡ ಮತ್ತು ತೆಲುಗು ಎರಡೂ ಭಾಷೆಗಳಲ್ಲಿದ್ದು ಭಾಷಾತೀತವಾಗಿ ಕಲೆಯನ್ನು ಕಲಾವಿದರನ್ನು, ಕಲಾಸಕ್ತರನ್ನು ಉಳಿಸಿಕೊಂಡ ಸಂಸ್ಕೃತಿಯ ಅಂತಃಸತ್ವವನ್ನು ಬುರ್ರಕತೆಯ ಮೂಲಕ ಕಂಡುಕೊಳ್ಳುವುದು ಈ ಅಧ್ಯಯನದ ಮುಖ್ಯ ಉದ್ದೇಶ.

ಬುರ್ರಕತೆ ಮತ್ತು ಅದರ ಆಶಯ ಅದು ಪ್ರಕಟಗೊಳ್ಳುವ ಭಾಷಿಕ ಸ್ವರೂಪ, ನಿರೂಪಣೆಯೇ ಮೊದಲಾದ ಸೃಜನಶೀಲ ನೆಲೆಗಳು ಇತ್ಯಾದಿಗಳ ಶೋಧವನ್ನು ಉದ್ದೇಶಕ್ಕೆ ಪೂರಕವಾಗಿ ಅಧ್ಯಯನದ ಕೇಂದ್ರ ಪ್ರಜ್ಞೆಯಾಗಿ ಬಳಸಿಕೊಳ್ಳಲಾಗಿದೆ. ಎಷ್ಟೋ ಜನ ಕಲಾವಿದರು ತಲೆ ತಲಾಂತರಗಳಿಂದ ಮುಂದುವರಿಸಿಕೊಂಡು ಬಂದ ಬುರ್ರಕತೆ ಎಂಬ ಮೌಖಿಕ ಕಥನ ಪರಂಪರೆಯು ಕನ್ನಡ-ತೆಲುಗು ಸಂಸ್ಕೃತಿಗಳ ಅನುಸಂಧಾನದ ಕತೆಯಾಗಿ ಉಳಿದುಕೊಂಡುದರ ಕಾರಣಗಳನ್ನು ಇಲ್ಲಿ ಕಂಡುಕೊಳ್ಳಲು ಯತ್ನಿಸಿದೆ. ಅಲ್ಲದೆ ಬುರ್ರಕತೆಯನ್ನು ಹಾಡುವಾಗ ಪಾಲಿಸುವ ನಿಯಮ, ಪರಿಸರಕ್ಕೆ ತಕ್ಕಂತೆ, ಪ್ರೇಕ್ಷಕರ ಮನೋಭಿಲಾಷೆಗೆ ತಕ್ಕಂತೆ ಬದಲಾವಣೆ ಮಾಡಿಕೊಳ್ಳುವ ಬಗೆಯನ್ನು ಪರಿಶೀಲಿಸಲಾಗಿದೆ. ಭಾಷಾಂತರ ಹಾಗೂ ಬಹುಭಾಷಿಕ ಪಠ್ಯಗಳ ಸ್ವರೂಪ ವಿಶ್ಲೇಷಣೆಯು ಅಧ್ಯಯನದ ಮುಖ್ಯ ಲಕ್ಷ್ಯವೇ ಆಗಿದೆ.

## ಅಧ್ಯಯನದ ಸ್ವರೂಪ

ಆದಿವಾಸಿ ಹಾಗೂ ಅಲೆಮಾರಿ ಸಮುದಾಯಗಳಲ್ಲಿ ಸಂಪ್ರದಾಯ, ನಂಬಿಕೆಗಳು, ಕಥನಗಳು ಮುಂತಾದವು ಇನ್ನೂ ಜೀವಂತವಾಗಿ ಇವೆ. ಈ ಸಮುದಾಯಗಳು .ಅವರದೇ ಆದ ಜ್ಞಾನ ಪರಂಪರೆ, ಪ್ರಕೃತಿ ಹಾಗೂ ಜೀವನಾನುಭವವನ್ನು ಉಳಿಸಿ ಬೆಳೆಸಿಕೊಂಡು ಬಂದಿದ್ದಾರೆ. ಇಲ್ಲಿ ಬುರ್ರಕತೆಗಳನ್ನು ಸಮಗ್ರವಾಗಿ ವಿಶ್ಲೇಷಿಸಿದೆ. ಆ ಕಾವ್ಯಗಳಲ್ಲಿ ಮುಖ್ಯವಾಗಿ ಕಂಡುಬರುವ ಕಥನ ಶೈಲಿ, ಧೋರಣೆ, ಭಾಷೆಯ ಶೈಲಿ, ಗಾಯಕರ ನಿರೂಪಣೆ ಹಾಗೂ ಎರಡೂ ಭಾಷೆಗಳಲ್ಲಿ ಅಭಿವ್ಯಕ್ತಗೊಂಡ ಬಗೆಯನ್ನು ಭಾಷಾಂತರ ನೆಲೆಯಿಂದ ನೋಡಲಾಗಿದೆ. ಬುರ್ರಕತೆಗಳು ಸಂದರ್ಭಾನುಸಾರವಾಗಿ ದೊಡ್ಡಕತೆಗಳಾಗಿ ಕೆಲವೊಮ್ಮೆ ಚಿಕ್ಕಕತೆಗಳಾಗಿ ನಿರೂಪಣೆಗೊಳ್ಳುತ್ತವೆ. ಎರಡೂ ಭಾಷೆಯ ಕತೆಗಳನ್ನು ನೋಡಿದರೆ ಆಶಯ ಒಂದೇ. ಆದರೆ ನಿರೂಪಣೆಯಲ್ಲಾಗುವ ಈ ಬದಲಾವಣೆಗಳಿಗೆ ಕಾರಣವನ್ನು ಶೋಧಿಸಲು ಇಲ್ಲಿ ಯತ್ನಿಸಲಾಗಿದೆ.

ಬೇರೆ ಬೇರೆ ನಿರೂಪಕರ ಕಾರಣಕ್ಕಾಗಿ ಒಂದೇ ಆಶಯವನ್ನು ಒಳಗೊಂಡ ಕಥನವು ಒಂದೇ ಭಾಷೆಯಲ್ಲಿ ಹೇಗೆ ಭಿನ್ನವಾಗಿ ನಿರೂಪಣೆ ಮಾಡುತ್ತಾರೆ ಎಂಬುದು ಇಲ್ಲಿನ ಕುತೂಹಲ. ಅದಕ್ಕಾಗಿ ಕನ್ನಡ-ಕನ್ನಡ ಆವೃತ್ತಿಗಳನ್ನು ಅಧ್ಯಯನಕ್ಕೆ ಅಳವಡಿಸಿದೆ. 'ಕಾಂಭೋಜರಾಜಕತೆ' ಮತ್ತು 'ಕೃಷ್ಣಗೊಲ್ಲರ ಕತೆ' ಇವೆರಡೂ ಒಂದೇ ಕಥಾವಸ್ತುವಿನ, ವಿಭಿನ್ನ ಶೀರ್ಷಿಕೆಯಲ್ಲಿ ವ್ಯಕ್ತವಾದ ಕನ್ನಡದ ಎರಡು ಪಠ್ಯಗಳು. ಇವುಗಳನ್ನು

ನಿರೂಪಣೆ ಮಾಡಿದ ಬಗೆಯನ್ನು ವಿಶ್ಲೇಷಣೆ ಮಾಡಲಾಗಿದೆ. ಹಾಗೆಯೇ ಇಬ್ಬರು ವಕ್ತೃಗಳು ನೆಲೆಸಿರುವ ಪ್ರದೇಶದ ಭೌಗೋಳಿಕ, ಪರಿಸರ, ಆ ಕಲಾವಿದರ ಮೇಲೆ ಹೇಗೆ ಪರಿಣಾಮ ಬೀರಿದೆ ಎಂಬುದನ್ನು ಪರಿಶೀಲಿಸಿದೆ. ಅಲ್ಲದೆ ಎರಡೂ ಆವೃತ್ತಿಗಳಲ್ಲಿ ಭಾಷೆ, ಕತೆಯ ಶೈಲಿ, ರೀತಿ, ವಿಧಾನ ಮುಂತಾದ ವಿಚಾರಗಳನ್ನು ತೌಲನಿಕವಾಗಿ ಅವಲೋಕಿಸಲಾಗಿದೆ.

ಒಬ್ಬರೇ ವಕ್ತೃ ಒಂದೇ ಕತೆಯನ್ನು ಬೇರೆ ಬೇರೆ ಭಾಷೆಗಳಲ್ಲಿ ಹಾಡಿದಾಗ ಇರಬಹುದಾದ ಸಾಮ್ಯ-ವೈಷಮ್ಯಗಳನ್ನು ಅಧ್ಯಯನ ಮಾಡುವುದು ಇಲ್ಲಿನ ಇನ್ನೊಂದು ನೆಲೆ. ಹಾಗಾಗಿ ಒಬ್ಬರೇ ವಕ್ತೃವಿನ ಕನ್ನಡ-ತೆಲುಗು ಎರಡೂ ಆವೃತ್ತಿಗಳನ್ನು ತೌಲನಿಕ ಅಧ್ಯಯನ ಮಾಡಲಾಗಿದೆ. ಒಬ್ಬರೇ ವಕ್ತೃವಿನ ಎರಡು ವಿಭಿನ್ನ ಭಾಷೆಗಳಲ್ಲಿ ಕತೆಯನ್ನು ಬಳಸಿಕೊಳ್ಳುವ ರೀತಿಯನ್ನು ವಿಶ್ಲೇಷಣೆ ಮಾಡಲಾಗಿದೆ. ಎರಡು ಪಠ್ಯಗಳು ಭಾಷಾಂತರ ಪ್ರಕ್ರಿಯೆಯ ನೆಲೆಯಿಂದ ಪರಿಶೀಲಿಸಲಾಗಿದೆ. ಇಲ್ಲಿ ಕಾಂಭೋಜರಾಜಕತೆ, ಬಾಲಗಿರಿರಾಜಕತೆ ಮತ್ತು ಭೂಲಕ್ಷ್ಮಿಕತೆ ಈ ಮೂರು ಕತೆಗಳ ಆರು ಆವೃತ್ತಿಗಳನ್ನು ವಿಶ್ಲೇಷಿಸಿ ಅಧ್ಯಯನ ಮಾಡಲಾಗಿದೆ.

ಇನ್ನು ಒಂದೇ ಕತೆಯು ಬೇರೆ ಬೇರೆ ನಿರೂಪಕರು ವಿಭಿನ್ನ ಭಾಷೆಗಳಲ್ಲಿ ಹಾಡುವಾಗಿನ ಸೃಜನಶೀಲದ ನೆಲೆಗಳನ್ನು ಶೋಧಿಸುವುದು ಮುಖ್ಯವಾಗಿದೆ. ಅದಕ್ಕಾಗಿ ಬೇರೆ ಬೇರೆ ವಕ್ತೃಗಳ ಕನ್ನಡ-ತೆಲುಗು ಎರಡು ಪಠ್ಯಗಳ ತೌಲನಿಕ ಅಧ್ಯಯನ ಮಾಡಲಾಗಿದೆ. ಶಿವಕುಮಾರಕತೆ ಮತ್ತು ಆರ್ಯವರಕತೆ ಇವು ಕನ್ನಡ-ತೆಲುಗು ಎರಡೂ ಆವೃತ್ತಿಗಳು ವಿಭಿನ್ನ ಪ್ರದೇಶದಲ್ಲಿ ಅಭಿವ್ಯಕ್ತಗೊಂಡಿದೆ. ವಕ್ತೃಗಳೂ ಸಹ ಬೇರೆ ಬೇರೆ ಪ್ರದೇಶಕ್ಕೆ ಸಂಬಂಧಿಸಿದವರಾದರಿಂದ ಎರಡೂ ಪಠ್ಯಗಳ ನಿರೂಪಣೆ ನೋಡಿದಾಗ ಕಥಾವಸ್ತುವಿನಲ್ಲಿ ವ್ಯತ್ಯಾಸವಿಲ್ಲದಿದ್ದರೂ ನಿರೂಪಣೆ ಭಿನ್ನವಾಗಿದೆ. ಅದು ಕೆಲವು ಸನ್ನಿವೇಶಗಳಲ್ಲಿ ಮಾತ್ರ ವಿಭಿನ್ನವಾಗಿ ಮೂಡಿದೆ. ಇಲ್ಲಿ ಭಾಷಾಂತರವಾಗಲಿ ಅಥವಾ ರೂಪಾಂತರವಾಗಲಿ ಕಂಡುಬರುವುದಿಲ್ಲ. ಕಥಾವಸ್ತುವಿನಲ್ಲಿ ಮಾತ್ರ ಸಮಾನತೆ ಇದೆ ಎಂಬುದನ್ನು ಖಚಿತಪಡಿಸಲಾಗಿದೆ.

ಇಲ್ಲಿ ಮುಖ್ಯವಾಗಿ ಬೇರೆ ಬೇರೆ ವಕ್ತೃಗಳ ಪಠ್ಯ ನಿರೂಪಣೆ, ಸಾಮ್ಯ-ವೈಷಮ್ಯವನ್ನು ಪರಿಶೀಲಿಸಲಾಗಿದೆ. ಅಲ್ಲದೆ ಕನ್ನಡ-ತೆಲುಗು ಎರಡೂ ಆವೃತ್ತಿಗಳ ಸ್ವರೂಪ, ಧೋರಣೆ ಏನೆಂಬುದನ್ನು ಪ್ರಸ್ತುತ ಅಧ್ಯಯನದಲ್ಲಿ ಶೋಧಿಸಲಾಗಿದೆ.

## ಅಧ್ಯಯನದ ವ್ಯಾಪ್ತಿ

ಪ್ರಸ್ತುತ ಅಧ್ಯಯನಕ್ಕೆ ಕರ್ನಾಟಕ-ಆಂಧ್ರದ ಗಡಿನಾಡು ಜಿಲ್ಲೆಗಳಾದ ಗುಲಬರ್ಗಾ, ಯಾದಗಿರಿ, ಬಳ್ಳಾರಿ, ಮೆಹಬೂಬನಗರಗಳಲ್ಲಿ ಕ್ಷೇತ್ರಕಾರ್ಯ ಮಾಡಲಾಗಿದೆ. ಈ ಜಿಲ್ಲೆಗಳಲ್ಲಿ ಕ್ಷೇತ್ರಕಾರ್ಯ ಕೈಗೊಂಡು ಬುರ್ರಕತೆಗಳನ್ನು ಧ್ವನಿಮುದ್ರಿಸಿ ಲಿಪ್ಯಂತರ ಮಾಡಿ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ. ಗುಲಬರ್ಗಾ ಜಿಲ್ಲೆಯ ಚಿತ್ತಾಪೂರ ತಾಲ್ಲೂಕಿನ ರಾಮತೀರ್ಥ ಗ್ರಾಮದ ಶಂಕ್ರಮ್ಮ(೬೦) ಇವರು ಪ್ರಸಿದ್ಧ ಬುರ್ರಕತೆಗಾರರು.

ಅತ್ತೆ ಮಾರೆಮ್ಮ ಇವರಿಂದ ಚಿಕ್ಕವಯಸ್ಸಿನಲ್ಲೇ ಕತೆಗಳನ್ನು ಹೇಳಲು ಕಲಿತಿದ್ದನ್ನು ನೆನಪಿಸಿಕೊಳ್ಳುತ್ತಾರೆ. ಸುಮಾರು ಐವತ್ತರಿಂದ ಅರವತ್ತು ಬುರ್ರಕತೆಗಳನ್ನು ಹಾಡುತ್ತಾರೆ. ಚಿತ್ತಾಪೂರ ತಾಲ್ಲೂಕಿನಲ್ಲಿ ಪ್ರಸಿದ್ಧ ಬುರ್ರಕತೆಗಾರರೆಂದು ಹೆಸರು ಪಡೆದಿದ್ದಾರೆ. ಇವರು ಕನ್ನಡ-ತೆಲುಗು ಎರಡೂ ಭಾಷೆಗಳಲ್ಲಿ ಕತೆಗಳನ್ನು ಹಾಡುತ್ತಾರೆ. ಇವರಿಂದ ಕಾಂಭೋಜರಾಜಕತೆ, ಬಾಲಗಿರಿರಾಜಕತೆ ಮತ್ತು ಭೂಲಕ್ಷ್ಮಿಕತೆಯ ಮೂರು ಕತೆಗಳ ಆರು ಆವೃತ್ತಿಗಳನ್ನು ಸಂಗ್ರಹಿಸಲಾಗಿದೆ.

ಚಿತ್ತಾಪೂರ ತಾಲ್ಲೂಕಿನ ನೀಲಮ್ಮ(೬೫) ಇವರು ಪ್ರಸಿದ್ಧ ಬುರ್ರಕತೆಗಾರರು. ಆಂಧ್ರಪ್ರದೇಶದ ಪ್ರಸಿದ್ಧ ಬುರ್ರಕತೆಗಾರರಿಂದ ಬುರ್ರಕತೆಗಳನ್ನು ಕಲಿತಿದ್ದಾಗಿ ಹೇಳುತ್ತಾರೆ. ಸುಮಾರು ಎಪ್ಪತ್ತರಿಂದ ಎಂಭತ್ತು ಕತೆಗಳನ್ನು ಹಾಡುತ್ತಾರೆ. ಇವರು ಕತೆಯನ್ನು ಹೇಳುವ ಶೈಲಿಗೆ ತನ್ನ ಊರಿನ ಸುತ್ತಮುತ್ತಲಿನ ಗ್ರಾಮದ ಜನರು ಕತೆಗಳನ್ನು ಹೇಳಿಸಲು ಮೊದಲೇ ದಿನವನ್ನು ನಿಗದಿಪಡಿಸಿಕೊಳ್ಳುತ್ತಿದ್ದರು. ಇಂತಹ ಪ್ರಸಿದ್ಧ ಕತೆಗಾರರು ಹೇಳಿದ ಕನ್ನಡದ 'ಆರ್ಯವರಕತೆ'ಯನ್ನು ಅಧ್ಯಯನಕ್ಕೆ ಬಳಸಿಕೊಂಡಿದೆ. ಹಾಗೆಯೇ ಅದೇ ತಾಲ್ಲೂಕಿನ ಅಣಕೇರಾ ಗ್ರಾಮದ ಎಲ್ಲಮ್ಮ(೫೦) ಇವರೂ ಸಹ ತನ್ನ ಗ್ರಾಮದ ಸುತ್ತಮುತ್ತಲಿನ ಹಳ್ಳಿಗಳಲ್ಲಿ ಕತೆ ಹೇಳುವುದರಲ್ಲಿ ಎತ್ತಿದಕೈ. ಇವರು ಕನ್ನಡದಲ್ಲಿ ಮಾತ್ರ ಬುರ್ರಕತೆಯನ್ನು ಹಾಡುತ್ತಾರೆ. ಅನೇಕ ಬುರ್ರಕತೆಗಳನ್ನು ಹೇಳುವ ಇವರ ಕನ್ನಡದ 'ಶಿವಕುಮಾರಕತೆ'ಯನ್ನು ಅಧ್ಯಯನಕ್ಕೆ ತೆಗೆದುಕೊಳ್ಳಲಾಗಿದೆ.

ಅಲ್ಲದೆ ಯಾದಗಿರಿ ಜಿಲ್ಲೆ ಅದೇ ತಾಲ್ಲೂಕಿನ ಎಲಸತ್ತಿ ಗ್ರಾಮದ ಮಾರೆಮ್ಮ(೬೬) ಇವರೂ ಆಂಧ್ರ-ಕರ್ನಾಟಕ ಗಡಿನಾಡು ಪ್ರದೇಶಗಳಲ್ಲಿ ಹಾಡುವ ಪ್ರಸಿದ್ಧ ಬುರ್ರಕತೆಗಾರರು. ಕರ್ನಾಟಕ-ಆಂಧ್ರದ ಗಡಿಗೆ ಹೊಂದಿಕೊಂಡಿರುವ ಎಲಸತ್ತಿ ಗ್ರಾಮದಲ್ಲಿ ಇವರು ಕತೆಗಳನ್ನು ಹೇಳುವ ಶೈಲಿಗೆ ಮಾರು ಹೋಗಿ ಊರಿನ ಗೌಡರು ಹೊಲವನ್ನೇ ದಾನವಾಗಿ ಕೊಟ್ಟಿದನ್ನು ಸ್ಮರಿಸುತ್ತಾಳೆ. ಕನ್ನಡ-ತೆಲುಗು ಎರಡೂ ಭಾಷೆಗಳಲ್ಲಿ ಸುಮಾರು ಎಂಭತ್ತರಿಂದ ತೊಂಬತ್ತು ಕತೆಗಳನ್ನು ಹಾಡುವುದಾಗಿ ಹೇಳುತ್ತಾರೆ. ಇವರಿಂದ ತೆಲುಗಿನ 'ಆರ್ಯವರಕತೆ'ಯನ್ನು ಅಧ್ಯಯನಕ್ಕೆ ಬಳಸಿದೆ. ಅಲ್ಲದೆ ಆಂಧ್ರದ ಮೆಹಬೂಬನಗರ ಜಿಲ್ಲೆಯ ಮಕ್ತಲ್ ತಾಲ್ಲೂಕಿನ ಶಾಂತಮ್ಮ(೬೩) ಇವರು ಆ ಪ್ರದೇಶದಲ್ಲಿ ತೆಲುಗಿನಲ್ಲಿ ಬುರ್ರಕತೆಗಳನ್ನು ಹೇಳುವಲ್ಲಿ ಪ್ರಸಿದ್ಧರು. ಅನೇಕ ಬುರ್ರಕತೆಗಳನ್ನು ಹಾಡುವ ಇವರ ತೆಲುಗಿನ 'ಶಿವಕುಮಾರಕತೆ'ಯನ್ನು ಅಧ್ಯಯನಕ್ಕೆ ತೆಗೆದುಕೊಂಡಿದೆ. ಇನ್ನು ಬಳ್ಳಾರಿ ಜಿಲ್ಲೆಯ ದರೋಜಿ ಈರಮ್ಮ ಅವರು ಹಾಡಿದ 'ಕೃಷ್ಣಗೊಲ್ಲರ ಕಾವ್ಯ' ಕೆ.ಎಂ.ಮೈತ್ರಿ ಸಂಪಾದಿಸಿದ ಈ ಕನ್ನಡ ಪಠ್ಯವನ್ನು ಸಹ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ. ಶಂಕ್ರಮ್ಮ, ಎಲ್ಲಮ್ಮ, ನೀಲಮ್ಮ, ಮಾರೆಮ್ಮ, ಶಾಂತಮ್ಮ ಮತ್ತು ಈರಮ್ಮ ಇವರು ಹಾಡಿದ ಐದು ಕತೆಗಳ ಹನ್ನೆರಡು ಆವೃತ್ತಿಗಳನ್ನು ಪ್ರಸ್ತುತ ಪ್ರಬಂಧದಲ್ಲಿ ತೌಲನಿಕ ಅಧ್ಯಯನಕ್ಕೆ ಆಕರವಾಗಿ ಬಳಕೆ ಮಾಡಲಾಗಿದೆ.

ಇಲ್ಲಿ ಆರು ಜನ ಹಾಡಿದ ಕತೆಗಳನ್ನು ಅಧ್ಯಯನದ ಸಂದರ್ಭದಲ್ಲಿ ಈ ಕೆಳಗಿನಂತೆ ವಿಭಾಗಿಸಿಕೊಳ್ಳಲಾಗಿದೆ. ಶಂಕ್ರಮ್ಮ ಹಾಡಿದ ಕಾಂಭೋಜರಾಜಕತೆ ಮತ್ತು ಈರಮ್ಮ ಹಾಡಿದ ಕೃಷ್ಣಗೊಲ್ಲರ ಕತೆಯನ್ನು

ಆಯ್ದುಕೊಳ್ಳಲಾಗಿದೆ. ಇವರು ಹಾಡಿದ ಒಂದೇ ಕತೆಯ ಕನ್ನಡ-ಕನ್ನಡ ಆವೃತ್ತಿಗಳನ್ನು ತೌಲನಿಕ ಅಧ್ಯಯನ ಒಳಗೊಂಡಿದೆ. ಒಂದೇ ಕಥಾ ವಸ್ತುವಿನ ಎರಡು ವಿಭಿನ್ನ ಶೀರ್ಷಿಕೆಯ ಎರಡು ಪಠ್ಯಗಳು ಹೇಗೆ ಅಭಿವ್ಯಕ್ತಗೊಂಡಿವೆ ಎಂಬುದನ್ನು ನೋಡಲಾಗಿದೆ. ಬೇರೆ ಬೇರೆ ಪ್ರದೇಶದ ಈ ಕತೆಗಳಲ್ಲಿ ಅಭಿವ್ಯಕ್ತಗೊಂಡಿರುವ ಕತೆಗಾರರ ಆಲೋಚನೆಗಳು ಹಾಗೂ ಅವರ ಹಾಡಿನ ವೈಶಿಷ್ಟ್ಯವನ್ನು ಪರಿಶೀಲಿಸಲಾಗಿದೆ.

ಒಬ್ಬರೇ ವಕ್ತೃ ಶಂಕ್ರಮ್ಮ ಹಾಡಿದ ಕಾಂಭೋಜರಾಜಕತೆ, ಬಾಲಗಿರಿರಾಜಕತೆ, ಭೂಲಕ್ಷ್ಮಿಕತೆ ಮೂರು ಕತೆಗಳ ಕನ್ನಡ-ತೆಲುಗು ಭಾಷೆಯ ಒಟ್ಟು ಆರು ಆವೃತ್ತಿಗಳನ್ನು ಭಾಷಾಂತರ ನೆಲೆಯಲ್ಲಿ ತೌಲನಿಕ ಅಧ್ಯಯನ ಮಾಡಲಾಗಿದೆ. ಆರು ಆವೃತ್ತಿಗಳನ್ನು ಅವಲೋಕಿಸಿದಾಗ ಕನ್ನಡ-ತೆಲುಗು ಎರಡು ಪಠ್ಯಗಳು ಒಂದೇ ಮೂಲ ಎನ್ನುವಷ್ಟರ ಮಟ್ಟಿಗೆ ಕತೆಗಾರರು ಅಭಿವ್ಯಕ್ತಿಸಿದ್ದಾರೆ. ಅವರ ಸೃಜನಶೀಲ ಅಭಿವ್ಯಕ್ತಿಯನ್ನು ಇಲ್ಲಿ ಪರಿಶೀಲಿಸಿದೆ.

ಬೇರೆ ಬೇರೆ ಪ್ರದೇಶಕ್ಕೆ ಸೇರಿದವರಾದ ಎಲ್ಲಮ್ಮ ಅವರ ಕನ್ನಡ ಪಠ್ಯ ಹಾಗೂ ಶಾಂತಮ್ಮ ಹಾಡಿದ ತೆಲುಗು ಪಠ್ಯ ಇವರು ಬೇರೆ ಬೇರೆ ಭಾಷೆ ಹಾಗೂ ಪ್ರದೇಶಕ್ಕೆ ಸಂಬಂಧಿಸಿದರೂ 'ಶಿವಕುಮಾರಕತೆ'ಯ ಕಥಾವಸ್ತುವಿನ ನಿರೂಪಣೆಯಲ್ಲಿ ಒಂದೆ ತೆರನಾಗಿ ಬಂದಿದೆ. ಇಲ್ಲಿ ಎರಡು ಆವೃತ್ತಿಗಳ ವೈಶಿಷ್ಟ್ಯವನ್ನು ಅಧ್ಯಯನ ಮಾಡಲಾಗಿದೆ. ಹಾಗೆಯೇ ನೀಲಮ್ಮ ಹಾಡಿದ ಕನ್ನಡ ಕತೆ ಮತ್ತು ಮಾರೆಮ್ಮ ಹಾಡಿದ ತೆಲುಗು ಕತೆ ಬೇರೆ ಬೇರೆ ಜಿಲ್ಲೆಗಳಿಗೆ ಸೇರಿದ ಇವರ 'ಆರ್ಯವರಕತೆ'ಯು ಅಭಿವ್ಯಕ್ತಗೊಂಡ ವಿಧಾನವನ್ನು ನೋಡಲಾಗಿದೆ. ಮುಖ್ಯವಾಗಿ ಬುರ‍್ರಕತೆಗಳು ಯಾವುದೇ ಭಾಷೆಯಿರಲಿ, ಯಾವುದೇ ಪ್ರದೇಶದಲ್ಲಿ ವ್ಯಕ್ತವಾಗಲಿ, ಅವು ಸಮಾಜವನ್ನು ದೃಷ್ಟಿಯಲ್ಲಿಟ್ಟುಕೊಂಡು ಹುಟ್ಟಿದಂತಹವು. ಹೀಗಾಗಿ ಈ ಕತೆಗಳು ಸಮಾಜಕ್ಕೆ ನೀಡುವ ಸಂದೇಶ ಹಾಗೂ ಕತೆಗಳ ಮಹತ್ವವನ್ನು ಸಾಂಸ್ಕೃತಿಕ ನೆಲೆಯಿಂದ ಚರ್ಚಿಸಲಾಗಿದೆ.

ಅಧ್ಯಯನಕ್ಕೆ ಬಳಸಿಕೊಂಡ ಕತೆಗಳನ್ನು ಈ ಕೆಳಗಿನ ಪಟ್ಟಿಯಲ್ಲಿ ಕಾಣಬಹುದು.

I. ಒಂದೇ ಕತೆಯ ಇಬ್ಬರು ವಕ್ತೃಗಳು ಕನ್ನಡ-ಕನ್ನಡ ಕತೆ ಹಾಡಿದವರು: (ಅ) ಶಂಕ್ರಮ್ಮ- ಕಾಂಭೋಜರಾಜ ಕತೆ. (ಆ) ಈರಮ್ಮ- ಕೃಷ್ಣಗೊಲ್ಲರಕತೆ (ಶೀರ್ಷಿಕೆ ಬೇರೆ ಬೇರೆಯಾದರೂ ಕಥಾವಸ್ತು ಒಂದೇ)

II. ಒಬ್ಬರೇ ವಕ್ತೃ ಕನ್ನಡ-ತೆಲುಗು ಕತೆ ಹಾಡಿದವರು: ಶಂಕ್ರಮ್ಮ ಕತೆಗಳು:

೧. ಕಾಂಭೋಜರಾಜಕತೆ ೨. ಬಾಲಗಿರಿರಾಜಕತೆ ೩. ಭೂಲಕ್ಷ್ಮೀಕತೆ

III. ಬೇರೆ ಬೇರೆ ವಕ್ತೃಗಳು ಕನ್ನಡ-ತೆಲುಗು ಕತೆ ಹಾಡಿದವರು: ೧. ಎಲ್ಲಮ್ಮ-ಶಿವಕುಮಾರಕತೆ (ಕನ್ನಡ) ೨. ಶಾಂತಮ್ಮ-ಶಿವಕುಮಾರಕತೆ (ತೆಲುಗು) ೩.ನೀಲಮ್ಮ-ಆರ್ಯವರಕತೆ (ಕನ್ನಡ) ೪. ಮಾರೆಮ್ಮ -ಆರ್ಯವಳಕತೆ(ತೆಲುಗು).

## ಜನಪದ ಮೌಖಿಕ-ಕಥನಗಳ ಕುರಿತು ಇದುವರೆಗೆ ನಡೆದ ಅಧ್ಯಯನಗಳ ಸಮೀಕ್ಷೆ

ಜನಪದ ಮೌಖಿಕ ಕಥನಗಳ ಅಧ್ಯಯನದ ಬಗೆಗೆ ಮೊದಲು ತಿಳಿದುಕೊಳ್ಳುವುದು ಅಧ್ಯಯನದ ದೃಷ್ಟಿಯಿಂದ ಸೂಕ್ತ ಎಂದು ಭಾವಿಸಲಾಗಿದೆ. ಜನಪದ ಸಾಹಿತ್ಯ ಸಂಶೋಧಕರಿಗೆ ಪಾಶ್ಚಾತ್ಯ ಮತ್ತು ಭಾರತದ ಇತರ ಭಾಷೆಯ ಸಾಹಿತ್ಯದಂತೆ ಕರ್ನಾಟಕವು ಸಹ ಆ ನೆಲೆಯಲ್ಲಿ ಸಂಶೋಧನೆ ಕೈಕೊಳ್ಳಲು ತುಂಬ ವಿಸ್ತಾರವಾದ ಕ್ಷೇತ್ರವಾಗಿದೆ. ಭಾರತದಲ್ಲಿ ಮೊದಲು ಪಾಶ್ಚಾತ್ಯ ವಿದ್ವಾಂಸರು, ಮಿಶನರಿಗಳು ಹವ್ಯಾಸಕ್ಕಾಗಿ ಜನಪದ ಸಾಹಿತ್ಯವನ್ನು ಸಂಗ್ರಹಿಸಿದ್ದರು. ನಂತರ ಸಂಶೋಧನಾತ್ಮಕವಾಗಿ ತಮ್ಮ ಕಾರ್ಯವನ್ನು ಮುಂದುವರಿಸಿದರು. "ಜನಪದ ಗೀತೆ ಎಂಬ ಹೆಸರಿನಲ್ಲಿ ಚಾರ್ಸ್. ಇ. ಗೋವರ್ ೧೮೭೧ರಲ್ಲಿ ಪ್ರಕಟಿಸಿದ, ಗೀತಗಳನ್ನು ಪರಿಗಣಿಸುವುದಾದರೆ ಕನ್ನಡದ ಮೊದಲ ಗೀತ ಸಂಕಲನ ಆದಾಗುತ್ತದೆ" (ಜೀ.ಶಂ.ಪರಮಶಿವಯ್ಯ, ೧೯೭೯: ೩೯) ಕನ್ನಡದಲ್ಲಿ ಫ್ಲೀಟರು ಸಂಗ್ರಹಿಸಿದ ಐತಿಹಾಸಿಕ ಲಾವಣೆಗಳನ್ನು ಮುಖ್ಯವಾಗಿ ಹೆಸರಿಸಬಹುದು. ಇಪ್ಪತ್ತನೆಯ ಶತಮಾನದ ಮೂರನೇ ದಶಕದವರೆಗೂ ಜನಪದ ಸಾಹಿತ್ಯದ ಕಡೆಗೆ ವಿದ್ವಾಂಸರು ಅಷ್ಟೇನು ಗಮನ ಕೊಟ್ಟಿರಲಿಲ್ಲ. ಅದು ವಿದ್ವಾಂಸರ ಗಮನವನ್ನು ಸಹ ಅಷ್ಟಾಗಿ ಸೆಳೆದಿರಲಿಲ್ಲ. ಕರ್ನಾಟಕದಲ್ಲಿ ಜನಪದ ಸಾಹಿತ್ಯ ಕಾವ್ಯವು ಅತ್ಯಂತ ಪ್ರಾಚೀನ ಕಾಲದಿಂದಲೂ ಇದ್ದಿತು ಎನ್ನುವುದಕ್ಕೆ ಬಾದಾಮಿ ಶಾಸನದ 'ತ್ರಿಪದಿ'ಯ ಬಳಕೆ ದೃಷ್ಟಾಂತವಾಗಿ ಕಂಡುಬರುತ್ತದೆ. ಚಂಪೂ ಕವಿಗಳು ಬಳಸಿರುವ 'ಒನಕೆವಾಡು' ಸಹ ಸ್ಪಷ್ಟವಾಗಿ ಜನಪದ ಕಾವ್ಯ ಪ್ರಕಾರವನ್ನು ನಿರ್ದೇಶಿಸುತ್ತದೆ. ವಡ್ಡಾರಾಧನೆಯ ಕತೆಗಳು ಸಹ ಜನಪದ ನೆಲೆಯಲ್ಲಿ ಹುಟ್ಟಿದಂತಹವು. ಆದರೆ ಕನ್ನಡ ಸಾಹಿತ್ಯ ಸಂದರ್ಭದಲ್ಲಿ 'ಜನಪದ ಸಾಹಿತ್ಯ' ಕುರಿತು ಅಧ್ಯಯನ ಕಾರ್ಯದ ಬಗ್ಗೆ ಸ್ಪಷ್ಟವಾಗಿ ಹೇಳಲು ಆಗುವುದಿಲ್ಲ. "೧೯೨೦-೨೫ರ ನಡುವಿನಲ್ಲೆಲ್ಲೋ ಜನಪದದ ಬಗ್ಗೆ ಹೊಸದಾದ ಅಭಿರುಚಿ ಬೆಳೆಯ ತೊಡಗಿ ನಿಜವಾದ 'ಜಾನಪದ ಯುಗ' ತಲೆಯೆತ್ತಿಕೊಳ್ಳತೊಡಗಿತು"(ಜೀ.ಶಂ.ಪರಮಶಿವಯ್ಯ, ೧೯೭೯: ೪೧). "೧೯೨೬ರಲ್ಲಿ ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅವರು ಬರೆದ ಲೇಖನ 'ಕನ್ನಡ ಲಾವಣಿ ಸಾಹಿತ್ಯ' ಒಂದು ವಿಶೇಷ ಪ್ರಯತ್ನ"(ತೀ.ನಂ.ಶಂಕರನಾರಾಯಣ ಎಂ.ಎಸ್.ವೆಂಕಟೇಶ, ೨೦೦೪:೪). ಆ ಕಾಲದಲ್ಲಿ ಚಿಕ್ಕ ಚಿಕ್ಕ ಹಾಡುಗಳನ್ನು ಅಂದು 'ಜಯಕರ್ನಾಟಕ' ಪತ್ರಿಕೆಯಲ್ಲಿ ಪ್ರಕಟಿಸುತ್ತಿದ್ದರು. ದ.ರಾ.ಬೇಂದ್ರೆ, ಚೆನ್ನಮಲ್ಲಪ್ಪ, ಹನುಮಂತರಾವ್, ಮಾಸ್ತಿ ವೆಂಕಟೇಶ ಅಯ್ಯಂಗಾರ್ ಇವರ ಜನಪದ ಹಾಡುಗಳ ಲೇಖನಗಳು 'ಸಾಹಿತ್ಯ ಪರಿಷತ್ ಪತ್ರಿಕೆ'ಯಲ್ಲಿ ಮಹತ್ವದ ಸ್ಥಾನ ಪಡೆದಿದ್ದವು. "ಭಾರತದ ಜನಪದ ಮಹಾಕಾವ್ಯಗಳನ್ನು ಕುರಿತು ೧೯೭೦ರಿಂದಲೂ ಅಮೆರಿಕನ್ ಜನಪದ ವಿದ್ವಾಂಸರು ಅಭ್ಯಾಸ, ಮಾಡುತ್ತಾ ಬಂದಿದ್ದಾರೆ. ಬ್ರೆಂಡಾಬೆಕ್ ತಮಿಳು ಜನಪದ ಮಹಾಕಾವ್ಯ 'ಅಣ್ಣನ್ಮಾರ್ ಕಥೆ' ಕರಿತು ಅಧ್ಯಯನ ಮಾಡಿದ್ದು 'The Three Twins' ಎಂಬ ಶಿರ್ಷಿಕೆಯಲ್ಲಿ ಅದನ್ನು ೧೯೮೨ರಲ್ಲಿ ಪ್ರಕಟಿಸಿದ್ದಾರೆ. ಜಿನೇ ರೋಗೇರ್ ಅವರು 'ಪಲ್ನಾಡು ವೀರ ಚರಿತ್ರ' ಎಂಬ ಜನಪದ ಮಹಾಕಾವ್ಯ ಕುರಿತು ಸಂಶೋಧನೆ ನಡೆಸಿದ್ದಾರೆ.

೧೯೮೩ರಲ್ಲಿ ವಿಸ್ಕಾನ್‌ಸೀನ್ ವಿಶ್ವವಿದ್ಯಾಲಯದಲ್ಲಿ 'Oral Epics in India' ಎಂಬ ವಿಷಯದ ಮೇಲೆ ನಡೆದ ವಿಚಾರ ಸಂಕಿರಣದಲ್ಲಿ ಜೀ.ಶಂ.ಪ, ವಿ.ನಾರಾಯಣರಾವ್, ಕೋಮಲ್ ಕೊಠಾರಿ, ಸುಂದರಂ, ಸ್ಟುವರ್ಟ್ ಬ್ಲಾಕ್ ಬರ್ನ್, ಪೀಟರ್ ಕ್ಲಾಸ್, ಜಾಯ್ಸ್ ಫ್ಲೂಕ್ಕಿಗರ್, ಸೂಸಾನ್ ವ್ಯಾಡ್ಲೀ, ಬ್ರೆಂಡಾಬೆಕ್ ಮುಂತಾದವರು ಸಂಶೋಧನಾತ್ಮಕ ಲೇಖನಗಳನ್ನು ಮಂಡಿಸಿದ್ದಾರೆ"(ಅಂಬಳಿಕೆ ಹಿರಿಯಣ್ಣ, ೧೯೯೮: ೧೪). ಹೀಗೆ ಭಾರತದಲ್ಲಿ ಮುಖ್ಯವಾಗಿ ಪಾಶ್ಚಾತ್ಯರು ಸಂಶೋಧನಾತ್ಮಕ ನೆಲೆಯಲ್ಲಿ ಅಧ್ಯಯನ ಮಾಡಿದ್ದಾರೆ. ಕನ್ನಡ ಜನಪದ ಹಾಡುಗಳ ಮಹತ್ವದ ಕೃತಿ 'ಗರತಿಯ ಹಾಡು' ೧೯೩೧ರಲ್ಲಿ ಪ್ರಕಟಗೊಂಡಿದ್ದು ಹಲಸಂಗಿ ಸಹೋದರರಿಂದ. ಈ ಕೃತಿಯು ಜನಪದ ಸಾಹಿತ್ಯಕ್ಕೆ ಒಂದು ಮುಕುಟಮಣಿ ಇದ್ದ ಹಾಗೆ ಗೋಚರಿಸುತ್ತದೆ.

ಕರ್ನಾಟಕದಲ್ಲಿ ಜನಪದ ಮಹಾಕಾವ್ಯಗಳ ಬಗ್ಗೆ ಅಧ್ಯಯನಕ್ಕೆ ಬುನಾದಿ ಹಾಕಿದವರು ಜೀ.ಶಂ.ಪ ಅವರು. ಅವರು 'ದಕ್ಷಿಣ ಕರ್ನಾಟಕ ಜನಪದ ಕಾವ್ಯ ಪ್ರಕಾರಗಳು' ಎಂಬ ಶೀರ್ಷಿಕೆಯಲ್ಲಿ ಪಿಎಚ್.ಡಿ ಪ್ರಬಂಧವನ್ನು ಮಂಡಿಸಿದ್ದಾರೆ. ಇದು ಕನ್ನಡದ ಮೊದಲ ಜನಪದ ಸಂಶೋಧನ ಕೃತಿಯಾಗಿದೆ. ಕರ್ನಾಟಕದ ಪ್ರಸಿದ್ಧ ಜನಪದ ಕಾವ್ಯಗಳಾದ 'ಮಲೆಯ ಮಾದೇಶ್ವರ, ಮಂಟೇಸ್ವಾಮಿ, ಜುಂಜಪ್ಪ, ಮೈಲಾರಲಿಂಗ, ಸವದತ್ತಿ ಎಲ್ಲಮ್ಮ,' ಈ ಕಾವ್ಯಗಳನ್ನು ಸಮಗ್ರವಾಗಿ ವಿಶ್ಲೇಷಿಸಿ ಅಧ್ಯಯನ ಮಾಡಿದ್ದಾರೆ. ವೈ.ಎಸ್.ಸೈದಾಪುರ ಅವರ 'ಉತ್ತರ ಕರ್ನಾಟದ ಜನಪದ ವೀರಗೀತೆಗಳು' ಪಿಎಚ್.ಡಿ ಮಹಾಪ್ರಬಂಧದಲ್ಲಿ ವೀರಗೀತೆಗಳನ್ನು ಕುರಿತು ವಿಶ್ಲೇಷಿಸಿ ಸಮಗ್ರವಾಗಿ ಅಧ್ಯಯನ ಮಾಡಿದ್ದಾರೆ. ವೀರೇಶ ಬಡಿಗೇರ ಅವರು 'ಉತ್ತರ ಕರ್ನಾಟಕದ ಜಾನಪದ ಗೀತ ಮೇಳಗಳು' ಎಂಬ ಮಹಾಪ್ರಬಂಧದಲ್ಲಿ ಗೀಗಿ ಮೇಳದ ಹಾಡುಗಾರಿಕೆ, ಚೌಡಿಕೆಯರ ಹಾಡಿನ ಸ್ವರೂಪ, 'ಗೊಂದಲಿಗರ ಕಥನ ಕ್ರಿಯೆ, ಕುರುಬರ ಡೊಳ್ಳು ಹಾಡು'ಗಳನ್ನು ವಿಶ್ಲೇಷಿಸಿ ಅದರ ಪ್ರದರ್ಶನವನ್ನು ಅಧ್ಯಯನ ಮಾಡಿದ್ದಾರೆ. ಅಂಬಳಿಕೆ ಹಿರಿಯಣ್ಣ ಅವರು ತಮ್ಮ 'ಜನಪದ ಮಹಾಕಾವ್ಯಗಳು' ಎಂಬ ಕೃತಿಯಲ್ಲಿ ಜನಪದ ಮಹಾಕಾವ್ಯಗಳನ್ನು ಕುರಿತು ಅದರ ಲಕ್ಷಣಗಳು ಸ್ವರೂಪ ಅಲ್ಲದೆ ಜಾಗತಿಕ, ಭಾರತ ಹಾಗೂ ಕರ್ನಾಟಕದಲ್ಲೂ ಹೇಗೆ ಮಹಾಕಾವ್ಯಗಳ ಸ್ವರೂಪ ಇದೆ ಎಂಬುದನ್ನು ವಿಶ್ಲೇಷಿಸಿದ್ದಾರೆ. ಜಾಗತಿಕ ಮಹಾಕಾವ್ಯಗಳಾದ ಬಿಯೊವುಲ್ಫ್, ಗಿಲ್ಗಮಿಶ್, ರೋಲಂಡ್, ಕಲೇವಾಲಾಗಳನ್ನು ಕುರಿತು ವಿಶ್ಲೇಷಿಸಿದ್ದಾರೆ. ಕರ್ನಾಟಕ ಮಹಾಕಾವ್ಯದ ಪರಂಪರೆಯನ್ನು ಗುರುತಿಸಿದ್ದಾರೆ.

"ಸ್ವಾತಂತ್ರ್ಯೋತ್ತರ ಕಾಲದಲ್ಲಿ ಜನಪದ ಹಾಡುಗಳ ಸಂಗ್ರಹಕ್ಕೆ ಹೊಸ ಆಯಾಮ ದೊರಕಿತು. ಈ ಕಾಲದ ಮಹೋನ್ನತ ಹೆಸರೆಂದರೆ ಡಾ. ಬಿಎಸ್.ಗದ್ದಗಿ ಮಠ ಅವರದು. ಉತ್ತರ ಕರ್ನಾಟಕದ ಜನಪದ ಗೀತೆಗಳ ಅಪಾರ ಸಂಗ್ರಹ ಕಾರ್ಯವನ್ನು, ವ್ಯವಸ್ಥಿತ ರೂಪದಲ್ಲಿ ಶಾಸ್ತ್ರೀಯವಾಗಿ ವ್ಯಾಪಕವಾಗಿ ಮಾಡಿದ ಕೀರ್ತಿ ಅವರಿಗಿದೆ. ಅವರು ನಾಲ್ಕು ನಾಡ ಪದಗಳು ಕೃತಿಯನ್ನು ೧೯೫೭ರಲ್ಲಿ ಪ್ರಕಟಿಸಿದರು. ಕಂತ್ರಿಯ ಹಾಡುಗಳು(೧೯೫೫), ಜನಪದ ಗೀತೆಗಳು(೧೯೫೬), ಲೋಕಗೀತೆಗಳು(೧೯೬೦) ಅವರ ಕೃತಿಗಳು"

(ತೀ.ನಂ.ಶಂಕರನಾರಾಯಣ, ಎಂ.ಎನ್. ವೆಂಕಟೇಶ ೨೦೦೪: ೪). ಅವರ 'ಕನ್ನಡ ಜನಪದ ಗೀತೆಗಳು' ಎಂಬ ಪಿಎಚ್.ಡಿ ಮಹಾಪ್ರಬಂಧವು ಮುಖ್ಯವಾಗಿದೆ. ಈ ಸಂದರ್ಭದಲ್ಲಿ ಅನೇಕ ಜನಪದ ಗೀತೆಗಳಿಗೆ ಸಂಬಂಧಪಟ್ಟಂತೆ ಕೃತಿಗಳು ಹೊರಬಂದವು.

ಅಂಬಳಿಕೆ ಹಿರಿಯಣ್ಣನ 'ಲೌಕಿಕ ಸಂಪ್ರದಾಯದ ಚೌಡಿಕೆ ಕಾವ್ಯಗಳು' ಎಂಬ ಕೃತಿಯು ಒಂದು ಮುಖ್ಯ ಸಂಶೋಧನೆ ಕೃತಿಯಾಗಿದೆ. ದೇವೇಂದ್ರಕುಮಾರ ಸಿ. ಹಕಾರಿ ಅವರ ಜಾನಪದ ಸಾಮಾಜಿಕ ಕಥನ ಗೀತೆಗಳಲ್ಲಿ ದುಃಖಾಂತ ನಿರೂಪಣೆ' ಈ ಕೃತಿಯು ಜನಪದ ಸಾಹಿತ್ಯದಲ್ಲಿ ಮುಖ್ಯ ಕೃತಿಯಾಗಿದೆ. ನಿಂಗಪ್ಪ ಮುದೆನೂರು ಅವರ 'ಕನ್ನಡ ಜನಪದ ಮಹಾಕಾವ್ಯಗಳ ಸಾಂಸ್ಕೃತಿಕ ವೀರರು' ಈ ಪಿಎಚ್.ಡಿ ಪ್ರಬಂಧವು ಕಾವ್ಯಗಳ ನಾಯಕರನ್ನು ಸಾಂಸ್ಕೃತಿಕವಾಗಿ ಮುಖಾಮುಖಿಯಾಗಿ ವಿಶ್ಲೇಷಿಸಿದ ಮುಖ್ಯ ಕೃತಿಯಾಗಿದೆ.

ಭಾರತೀಯ ಜನಪದ ಸಾಹಿತ್ಯ ಪರಂಪರೆಯಲ್ಲಿ ಕಂಡುಬರುವ ಕಾವ್ಯಗಳು.

೧. ಲೋರಿಕ್ ಚಂದಾ ಮಹಾಕಾವ್ಯ: ಮಧ್ಯಪ್ರದೇಶ, ಉತ್ತರ ಪ್ರದೇಶ, ಬಿಹಾರ.

೨. ಅಲ್ಹಾ ಮಹಾಕಾವ್ಯ; ಉತ್ತರ ಪ್ರದೇಶ, ಹಿಂದಿಭಾಷಾ ಪ್ರಧಾನವಾದ ಪ್ರದೇಶದಲ್ಲಿ.

೩. ಅಣ್ಣನ್ಮಾರ್ ಮಹಾಕಾವ್ಯ; ತಮಿಳುನಾಡಿನ ಕೊಂಗು ಪ್ರದೇಶದಲ್ಲಿ.

೪. ಬಿಲ್ಲಿನ ಹಾಡು ಮಹಾಕಾವ್ಯ; ತಮಿಳುನಾಡಿನ ತಿರುನಲ್ವೇಲಿ ಪ್ರದೇಶದಲ್ಲಿ.

೫. ದೇವನಾರಾಯಣ ಮಹಾಕಾವ್ಯ; ರಾಜಸ್ಥಾನದಲ್ಲಿ.

೬. ಧೋಲಮಾರು ಮಹಾಕಾವ್ಯ; ರಾಜಸ್ಥಾನ ಮತ್ತು ಉತ್ತರ ಪ್ರದೇಶದ ಪಶ್ಚಿಮ ಭಾಗ.

೭. ಗೂಗಾ ಮಹಾಕಾವ್ಯ; ರಾಜಸ್ಥಾನ, ಪಂಜಾಬ, ಹರಿಯಾಣ, ಉತ್ತರ ಪ್ರದೇಶದ ಈಶಾನ್ಯ ಭಾಗ.

೮. ಜುಂಜಪ್ಪ ಮಹಾಕಾವ್ಯ; ಕರ್ನಾಟಕದಲ್ಲಿ.

೯. ಪಾಬೂಜಿ ಮಹಾಕಾವ್ಯ; ರಾಜಸ್ಥಾನದಲ್ಲಿ.

೧೦. ಪಲ್ನಾಡು ಮಹಾಕಾವ್ಯ; ಆಂಧ್ರಪ್ರದೇಶದ ತೆಲುಗು ಭಾಷಾ ಪ್ರಧಾನವಾದ ಪ್ರದೇಶದಲ್ಲಿ.

೧೧. ಎಲ್ಲಮ್ಮ ಮಹಾಕಾವ್ಯ; ಉತ್ತರ ಕರ್ನಾಟಕದಲ್ಲಿ.

೧೨. ತೆಯ್ಯಂ ಮಹಾಕಾವ್ಯ; ಕೇರಳದಲ್ಲಿ.

೧೩. ಪಾಡ್ದನ ಮಹಾಕಾವ್ಯ; ಕರಾವಳಿ ಕರ್ನಾಟಕದಲ್ಲಿ (ಶಂಕರನಾರಾಯಣ ತೀ.ನಂ. ೧೯೯೭: ೧೮-೧೯).

ಇಂದು ಕರ್ನಾಟಕದಲ್ಲಿ ಜನಪದ ಕಾವ್ಯಗಳನ್ನು ಕುರಿತು ಸಂಶೋಧನ ಕಾರ್ಯ ನಡೆಯುತ್ತಿದೆ. ಕನ್ನಡ ವಿಶ್ವವಿದ್ಯಾಲಯವು ಕೃಷ್ಣಗೊಲ್ಲರಕಾವ್ಯ, ಸ್ವಾಸಿ ಚಿನ್ನಮ್ಮಕಾವ್ಯ, ಕುಮಾರರಾಮಕಾವ್ಯ ಪ್ರಕಟಿಸಿದೆ.

"ಭಾರತದ ಜನಪದ ಸಂಶೋಧನೆಯಲ್ಲಿ ಬಂಗಾಳ ಮಹತ್ವ ಹೆಜ್ಜೆಗಳನ್ನು ಇಟ್ಟಂತೆ ಲಾವಣಿಗಳ ಕ್ರಮಬದ್ಧವಾದ ಅಧ್ಯಯನಕ್ಕೂ ಮೊದಲು ಮಾಡಿತು. ೧೯೨೩ರ ಹೊತ್ತಿಗೆ ಅಲ್ಲಿ ಲಾವಣಿ ಕುರಿತ ಸಂಶೋಧನೆಗಳು ಆರಂಭವಾದವು. ಡಿ.ಸಿ.ಸೇನ್ ಅವರು 'Mynensingh Gitika' ಎಂಬ ದೊಡ್ಡ ಲಾವಣಿ ಸಂಪುಟಗಳನ್ನು ಬಂಗಾಳಿಯಲ್ಲಿ ಪ್ರಕಟಿಸಿ ಲಾವಣಿ ಕ್ಷೇತ್ರದ ಸಮೃದ್ಧತೆಯ ಕಡೆಗೆ ಗಮನ ಸೆಳೆದರು" (ಶ್ರೀಕಂಠಕೂಡಿಗೆ, ೧೯೯೯, ೨೧). ಹಾಗೆಯೇ ಪ್ರಫುಲ್ಲದತ್ತ ಗೋಸ್ವಾಮಿಯರ 'ಅಸ್ಸಾಮಿನ ಲಾವಣಿಗಳು ಮತ್ತು ಕಥೆಗಳು', ಕುಂಜ ಬಿಹಾರಿದಾಸ್ ಅವರ 'ಒರಿಸ್ಸಾ ಜಾನಪದ ಅಧ್ಯಯನ' ದುರ್ಗ ಭಾಗವತರ 'ಭಾರತೀಯ ಲಾವಣಿ ಸಾಹಿತ್ಯದ ಅಧ್ಯಯನ ಮಾಡುವವರಿಗೆ ಅತ್ಯುಪಯುಕ್ತ ಆಕರ ಗ್ರಂಥಗಳಾಗಿವೆ"(ಶ್ರೀಕಂಠ ಕೂಡಿಗೆ, ೧೯೯೯: ೨೨).

ಈ ರೀತಿ ಮೌಖಿಕ ಮಹಾಕಾವ್ಯಗಳನ್ನು ಪರಿಶೀಲಿಸಿದಾಗ ಕರ್ನಾಟಕದಲ್ಲಿ ಇನ್ನೂ ಅನೇಕ ಕಾವ್ಯಗಳನ್ನು ಹಾಡುವ ಸಮುದಾಯಗಳು ಇವೆ. ಬುರ್ರಕತೆಗಾರರು ಇಂದು ನೂರಾರು ಕತೆಗಳನ್ನು ಹಾಡುತ್ತಾರೆ. ಅಧ್ಯಯನಾಸಕ್ತರು ಇವುಗಳನ್ನು ಬಳಸಿಕೊಳ್ಳುವದರ ಮೂಲಕ ಬುರ್ರಕತೆಗಳ ಸಾಂಸ್ಕೃತಿಕ ಮಹತ್ವವನ್ನು ಇನ್ನಷ್ಟು ವ್ಯಾಪಕವಾಗಿ ಅರಿತುಕೊಳ್ಳಲು ಅವಕಾಶವಿದೆ.

# ಅಧ್ಯಾಯ ೨

# ಬುರ್ರಕತೆಗಳ ಸ್ವರೂಪ ಮತ್ತು ಹಿನ್ನೆಲೆ

ಕರ್ನಾಟಕ ಜನಪದ ಕಲಾಪ್ರಕಾರಗಳಲ್ಲಿ ಬುರ್ರಕತೆಯೂ ಒಂದು. ಮಾನವನ ಪುರಾತನ ಸಂಸ್ಕೃತಿಯ ಹಾಗೂ ಸಂಪ್ರದಾಯದ ಮೇಲೆ ಹೆಚ್ಚು ಬೆಳಕನ್ನು ಬೀರಬಲ್ಲ ಜಾನಪದ ಪ್ರಕಾರಗಳಲ್ಲಿ ಕತೆ ಪ್ರಮುಖವಾದುದು. ಜನಪದ ಕತೆಗಳು ಬಾಯಿಂದ ಬಾಯಿಗೆ ಹರಿದು ಬಂದವುಗಳಾಗಿವೆ. ಈ ಕತೆಗಳ ಹುಟ್ಟಿನ ಬಗ್ಗೆ ವಾದ-ವಿವಾದಗಳು, ಸಿದ್ಧಾಂತ-ಪ್ರತಿಸಿದ್ಧಾಂತಗಳು ಇವೆ. ಈ ಕಥನ ಸಂಪ್ರದಾಯವನ್ನು ಕುರಿತು ಜಗತ್ತಿನ ಅನೇಕ ವಿದ್ವಾಂಸರು ತೋರಿಸಿದ ಆಸಕ್ತಿ ಅವರು ಮಾಡಿದ ಕೆಲಸ ಅಸದೃಶವಾದುದು "ಜನಪದ ಮಹಾಕಾವ್ಯದ ಪರಿಕಲ್ಪನೆ ಮೂಲ ಫಿನ್‌ಲ್ಯಾಂಡಿನ 'ಕಲೇವಾಲ'ದಿಂದ ಸ್ಫೂರ್ತಿ ಪಡೆದುಕೊಂಡಿತು. ಸಹಜವಾಗಿ ಜಾನಪದ ಅಧ್ಯಯನಕ್ಕೆ ವೈಜ್ಞಾನಿಕ ತಳಹದಿಯನ್ನು ಹಾಕಿದವರು ಜರ್ಮನ್ನರು. ೧೮೧೨ರ ವೇಳೆಗೆ ಪ್ರಕಟವಾದ ಗ್ರಿಮ್ ಸಹೋದರರ 'ಕೌಟುಂಬಿಕ ಕತೆಗಳು' ಈ ದೃಷ್ಟಿಯಿಂದ ಐತಿಹಾಸಿಕ ಮಹತ್ವವನ್ನು ಪಡೆದ ಕೃತಿ. ಆದರೆ ಮುಂದಿನ ಅಧ್ಯಯನ, ಸಂಗ್ರಹ, ಸಂಶೋಧನೆಗಳಲ್ಲಿ ಇಂಗ್ಲೆಂಡ್, ಫಿನ್‌ಲ್ಯಾಂಡ್‌ಗಳು ನಾಯಕತ್ವ ವಹಿಸಿದವು"(ಕ್ಯಾತನಹಳ್ಳಿ ರಾಮಣ್ಣ, ಬೋರೆಗೌಡ ಚಿಕ್ಕಮರಳಿ, ೨೦೦೭: ೨೫೧). ವೃತ್ತಿಯಾಗಿ ಸ್ವೀಕರಿಸಿ ತಂಡಗಳನ್ನು ಕಟ್ಟಿಕೊಂಡು ಕತೆಗಳನ್ನು ಹೇಳುತ್ತಿದ್ದವರು ಆಗಿನ ಸಂದರ್ಭದಲ್ಲಿ ಸಮಾಜದಲ್ಲಿ ಅತ್ಯುತ್ತಮ ಸ್ಥಾನವನ್ನು ಪಡೆದುಕೊಂಡಿದ್ದರು. "ರಷ್ಯಾದ ಜನಪದ ಕಾವ್ಯ ಸಂಪ್ರದಾಯದಲ್ಲಿ ಸ್ಕೊಮೊರಾಕ್ಸಿ ಎಂಬ ವೃತ್ತಿಗಾಯಕನ ಪಾತ್ರ ವಿಶಿಷ್ಟವಾದುದು. ಶತಮಾನಗಳಿಂದ ಇವರು ಕಂಠಸ್ಥ ಸಂಪ್ರದಾಯದ ಕಾವ್ಯಗಳನ್ನು ಸಂರಕ್ಷಿಸಿಕೊಂಡು ಬಂದಿದ್ದಾರೆ. ಒಂದು ಬಗೆಯ ತಂತಿವಾದ್ಯವನ್ನು ಹಿಡಿದು ಲಾವಣಿಗಳನ್ನು ಹಾಡುವ ಇವರು, ಉಕ್ರೇನ್ ಮತ್ತು ಬಾಲ್ಕನ್‌ಸ್ಲಾವಿಕ್ ಪ್ರದೇಶದ ಪಶ್ಚಿಮ ಭಾಗದಲ್ಲಿ ವಿಶೇಷವಾಗಿದ್ದಾರೆ" (ಜಿ.ಶಂ.ಪರಮಶಿವಯ್ಯ, ೧೯೭೬: ೬೩). ಹಾಗೆಯೇ "ಉಳಿದ ಯೂರೋಪಿಯನ್ ದೇಶಗಳಲ್ಲಿ ಜನಪ್ರಿಯ ಕಥೋಪಜೀವಿಗಳು ಕಾಣಬರುತ್ತಾರೆ. ಥಾಮಸ್‌ಪೆರ್ಸಿ ಹಾಗೂ ಸರ್ ವಾಲ್ಟರ್ ಸ್ಕಾಟ್ ಅವರ ಪ್ರಸಿದ್ಧ ಗ್ರಂಥಗಳು ಈ 'ಮಿನಿಸ್ಟ್ರೇಲ್' ಸಂಪ್ರದಾಯಗಳನ್ನು ವಿವರವಾಗಿ ಪರಿಚಯ ಮಾಡಿಕೊಡುತ್ತವೆ"

(ಜಿ.ಶಂ.ಪರಮಶಿವಯ್ಯ, ೧೯೭೬: ೬೩). 'ಗೋಲ್ಡನ್ ಬೋ' ಮತ್ತು 'ಕಲೇವಾಲ'ಗಳು ಜಾನಪದ ಲೋಕದಲ್ಲಿ ಅತ್ಯುತ್ತಮ ಕೃತಿಗಳಾಗಿವೆ. ಇವುಗಳ ಶೋಧವು ವಿದ್ವಾಂಸರ ಶ್ರೇಷ್ಠ ಕಾಣಿಕೆಯಾಗಿ ಕಂಡುಬರುತ್ತವೆ. ಜಗತ್ತಿನ ಎಲ್ಲ ಸಂಸ್ಕೃತಿಗಳಲ್ಲಿ ಇಂಥ ಸಂಪ್ರದಾಯದ ಗಾಯಕರು ಕಂಡುಬಂದಂತೆ ಭಾರತದ ಒಂದೊಂದು ಪ್ರದೇಶದಲ್ಲಿ ಇಂಥ ಗಾಯನ ಸಂಪ್ರದಾಯಗಳು ಕಂಡುಬರುತ್ತವೆ. ಹಾಗೆಯೇ ಕರ್ನಾಟಕದಲ್ಲಿ ಈ ಸಂಪ್ರದಾಯದ ಕತೆಗಳು ಗದ್ಯ-ಪದ್ಯಗಳೆರಡರಲ್ಲಿಯೂ ಕಂಡುಬರುತ್ತವೆ. ಇಂಥ ಕತೆಗಳನ್ನು 'ಬುಡ್ಗಜಂಗಮ' ಎನ್ನುವ ಅಲೆಮಾರಿ ಸಮುದಾಯಗಳಲ್ಲಿ ಪ್ರದರ್ಶಿಸುವುದನ್ನು ಕಾಣುತ್ತೇವೆ. ಈ ಸಮುದಾಯ ಹಾಡುವ ಕತೆಗಳು ಗದ್ಯ-ಪದ್ಯ ಮಿಶ್ರಿತವಾದ ಕತೆಗಳಾಗಿವೆ. ಈ ಕಲೆಯು ಆಂಧ್ರಪ್ರದೇಶದಲ್ಲಿ ಅತ್ಯಂತ ಜನಪ್ರಿಯ ಜನಪದ ಕಲೆಯಾಗಿದೆ. ಹೀಗಾಗಿ ಆಂಧ್ರಪ್ರದೇಶದಲ್ಲಿ ಅದರ ಮೂಲವನ್ನು ಗುರುತಿಸಲಾಗುತ್ತದೆ. ಅಲ್ಲಿಂದ ಕರ್ನಾಟಕಕ್ಕೆ ವಲಸೆ ಬಂದ ಈ ಜನಸಮುದಾಯಗಳವರು ಕರ್ನಾಟಕ-ಆಂಧ್ರ ಗಡಿಭಾಗದ ಜಿಲ್ಲೆಗಳಾದ ಗುಲಬರ್ಗಾ, ಬೀದರ್, ಯಾದಗಿರಿ, ರಾಯಚೂರು, ಬಳ್ಳಾರಿ, ಕೋಲಾರ, ತುಮಕೂರು ಈ ಪ್ರದೇಶಗಳಲ್ಲಿ ಹೆಚ್ಚಾಗಿ ಕಂಡುಬರುತ್ತಾರೆ. ಇವರು ಕರ್ನಾಟಕದ ಬೇರೆ ಬೇರೆ ಪ್ರದೇಶಗಳಲ್ಲಿ ನೆಲೆನಿಂತು ಕಲೆಗಳನ್ನು ಪ್ರದರ್ಶಿಸಿ ಜೀವನ ಸಾಗಿಸುತ್ತಿದ್ದಾರೆ. ಕರ್ನಾಟಕ-ಆಂಧ್ರ ಗಡಿ ಪ್ರದೇಶಗಳಲ್ಲಿ ಇವರು ಕನ್ನಡ-ತೆಲುಗು ಎರಡು ಭಾಷೆಗಳಲ್ಲಿ ಬುರ್ರಕತೆಗಳನ್ನು ಹಾಡುತ್ತಾರೆ. ಈ ಪ್ರದೇಶದಲ್ಲಿ ಎರಡು ಭಾಷೆಗಳನ್ನು ಹೇಳುವುದರಿಂದ ಭಾಷಿಕವಾಗಿ ಯಾವುದೇ ಸಮಸ್ಯೆಯಾಗಿಲ್ಲ. ಈ ಪ್ರದೇಶದಲ್ಲಿ ಕನ್ನಡ ಮತ್ತು ತೆಲುಗು ಭಾಷೆಯನ್ನಾಡುವ ದ್ವಿಭಾಷಿಕ ಜನರಿರುವುದರಿಂದ, ಬುರ್ರಕತೆಗಾರರ ಮಾತೃಭಾಷೆ ತೆಲುಗು ಹಾಗೂ ಇಲ್ಲಿನ ವ್ಯಾವಹಾರಿಕ ಭಾಷೆ ಕನ್ನಡವಾಗಿದ್ದರಿಂದ ದ್ವಿಭಾಷೆಯಲ್ಲಿ ಕತೆಗಳನ್ನು ನಿರರ್ಗಳವಾಗಿ ಹಾಡುತ್ತಾರೆ. ಬುರ್ರಕತೆಗಳು ಮೌಖಿಕ ಕಥನಗಳಾಗಿದ್ದು ಅಭಿನಯ, ನೃತ್ಯ, ಸಂಗೀತದ ಜೊತೆಗೆ ಜನರ ಆಶೆ ಅಭಿಲಾಷೆಗಳನ್ನು ಹಾಸ್ಯ-ವ್ಯಂಗ್ಯಗಳ ಮೂಲಕ ಹಾಡಿ ಪ್ರದರ್ಶಿಸುತ್ತಾರೆ.

ಅಧ್ಯಯನ ದೃಷ್ಟಿಯಿಂದ 'ಬುಡ್ಗಜಂಗಮ' ಸಮುದಾಯ ಹಾಡಿದ ಕತೆಗಳನ್ನು ಅವಲೋಕಿಸಿದಾಗ ಅಲ್ಲಿನ ಪ್ರದೇಶ, ಭೌಗೋಳಿಕ ಹಿನ್ನೆಲೆ, ಕಾಲವು ಈ ಕಲಾವಿದರ ಮೇಲೆ ಗುಣಾತ್ಮಕವಾದ ಪರಿಣಾಮವು ಬೀರಿರುವುದು ಗೊತ್ತಾಗುತ್ತದೆ. ಒಂದೇ ಕತೆಯನ್ನು ಬೇರೆ ಬೇರೆ ಕಲಾವಿದರು ಹಾಡಿದ ಕತೆಗಳನ್ನು ಪರಿಶೀಲಿಸಿದಾಗ ಅದರಲ್ಲಿ ಬರುವ ಸನ್ನಿವೇಶ, ಪ್ರಾದೇಶಿಕ ವಿವರಗಳು ಅಲ್ಲಿ ಬರುವ ಪಾತ್ರಗಳು, ನಿರ್ವಹಿಸುವ ಕಾರ್ಯಗಳು ಬೇರೆ ಬೇರೆಯಾಗಿರುತ್ತವೆ. ಹಾಗೆಯೇ ಅವರ ನಿರೂಪಣೆಯನ್ನು ಗಮನಿಸಿದಾಗ ಒಬ್ಬ ಗಾಯಕಿಗಿಂತ ಮತ್ತೊಬ್ಬ ಗಾಯಕಿಯ ನಿರೂಪಣೆ ಭಿನ್ನವಾಗಿರುವುದು ಕಂಡುಬರುತ್ತದೆ. ಭಾಷಾಂತರ ನೆಲೆಯಲ್ಲಿಯೂ ಅಧ್ಯಯನ ಮಾಡಲು ಒಬ್ಬರೇ ಹಾಡಿದ ಎರಡೂ ಭಾಷೆಗಳ ಕತೆಗಳನ್ನು ಸಂಶೋಧನೆಗೆ ಆಯ್ದುಕೊಳ್ಳಲು ಅವಕಾಶವಿದೆ. ಈ ಕತೆಗಾರರು ಹಾಡುಗಳಲ್ಲಿ ಮುಖ್ಯವಾಗಿ ವೀರ ರಸವನ್ನು ಅಭಿವ್ಯಕ್ತ ಪಡಿಸುತ್ತಾರೆ. ಹಾಗೆಯೇ ಶೋಕಾತ್ಮಕವಾದ ಕಥಾಭಾಗಗಳು ಅಲ್ಲಲ್ಲಿ ಕಾಣಿಸುತ್ತವೆ. ಇವರ ಕತೆಗಳಲ್ಲಿ

ವೀರರಸ ಪ್ರಧಾನವಾಗಿದ್ದರೂ, ಕರುಣ, ರೌದ್ರ, ಬೀಭತ್ಸ, ಭಯಾನಕ, ಹಾಸ್ಯ, ಶೃಂಗಾರ ರಸಗಳೂ ಒಳಗೊಂಡಿರುತ್ತವೆ. ಕಥನಗಾರರು ಹಾಡುವಾಗ ಪಾತ್ರಗಳ ಚಲನವಲನಗಳನ್ನು ಅಭಿವ್ಯಕ್ತಪಡಿಸುವುದನ್ನು ಗಮನಿಸಿದರೆ, ಅವರ ಸೃಜನಶೀಲ ಪ್ರತಿಭೆಯ ಅಗಾಧತೆಯ ಅರಿವಾಗುತ್ತದೆ.

**ಬುಡ್ಗಜಂಗಮರ ಸಾಂಸ್ಕೃತಿಕ ಹಿನ್ನೆಲೆ**

ಮಾನವನು ತನ್ನ ಚಿಂತನಾಶಕ್ತಿ ಮತ್ತು ಅಸಾಮಾನ್ಯ ಬೌದ್ಧಿಕ ಸಾಮರ್ಥ್ಯದಿಂದ ಬದುಕಿನಲ್ಲಿ ವೈವಿಧ್ಯವನ್ನು ಸೃಷ್ಟಿಸಿಕೊಂಡಿದ್ದಾನೆ. ಹಾಗೆಯೇ ಭಾಷೆಗಳೂ ಸಹ ಪ್ರಾದೇಶಿಕತೆಗನುಗುಣವಾಗಿ, ವೈವಿಧ್ಯಮಯವಾಗಿರುತ್ತವೆ. ಭಾರತೀಯ ಸಂಸ್ಕೃತಿಯಲ್ಲಿ ಅನೇಕ ಧರ್ಮ ಹಾಗೂ ಜಾತಿಗಳು ಇದ್ದರೂ ಅದರ ವಿಭಿನ್ನತೆಯಲ್ಲೇ ಏಕತೆಯನ್ನು ಕಾಣುತ್ತೇವೆ. ಇದು ಭಾರತೀಯ ಸಂಸ್ಕೃತಿಯ ಲಕ್ಷಣವಾಗಿದೆ. ಭಾರತಿಯ ಸಾಂಸ್ಕೃತಿಕ ಸಂದರ್ಭದಲ್ಲಿ ಅನೇಕ ಶತಮಾನಗಳು ಕಳೆದಂತೆ ಮಾನವನ ಜೀವನದ ಪಾರಂಪರಿಕ, ಸಾಮಾಜಿಕ ಮೌಲ್ಯಗಳು ಬದಲಾಗುತ್ತಾ ಹೋಗಿ, ಅವು ಶಾಶ್ವತ ಮೌಲ್ಯಗಳಾಗಿ ಹೊಸ ಸ್ವರೂಪವನ್ನು ಪಡೆದಿವೆ. ಈ ಹಿನ್ನೆಲೆಯಲ್ಲಿ ಒಂದು ಸಮುದಾಯ ಅಥವಾ ಅಲೆಮಾರಿ ಸಮುದಾಯದ ಭಾಷೆ, ಸಂಸ್ಕೃತಿ, ಪರಂಪರೆಗಳನ್ನು ಸಮಗ್ರವಾಗಿ ತಿಳಿದುಕೊಳ್ಳಲು ಅಧ್ಯಯನದ ಅವಶ್ಯಕತೆ ಇದೆ. ಈ ದೃಷ್ಟಿಯಿಂದ 'ಬುಡ್ಗಜಂಗಮ' ಅಲೆಮಾರಿ ಸಮುದಾಯದ ಸಾಂಸ್ಕೃತಿಕ ಹಿನ್ನೆಲೆಯನ್ನು ಮೊದಲು ತಿಳಿದುಕೊಳ್ಳುವುದು ಅವಶ್ಯಕ.

ಅಲೆಮಾರಿ ಜನಾಂಗಗಳು ದೇಸಿಯ ಬೌದ್ಧಿಕ ಜ್ಞಾನದಿಂದ ತುಂಬ ಸಂಪದ್ಭರಿತವಾದಂತಹವು. ಅವರು ಶ್ರೀಮಂತವಾದ ಸಂಸ್ಕೃತಿಯ ಜೀವಂತಿಕೆಯ ಸಾಮಗ್ರಿಯನ್ನು ಒಡಲೊಳಗೆ ಉಳಿಸಿಕೊಂಡು ಬಂದಿದ್ದಾರೆ. ಹೀಗಾಗಿ. ಒಂದು ದೇಶದ ಸಮಗ್ರ ಸಮುದಾಯಗಳ ಜೀವನ ವಿಧಾನವೇ ಆ ದೇಶದ ಸಮಷ್ಟಿ ಸಂಸ್ಕೃತಿಯಾಗಿರುತ್ತದೆ. ಬುಡ್ಗಜಂಗಮರು ಪೂರ್ವಕಾಲದಲ್ಲಿ ಆಂಧ್ರಪ್ರದೇಶದ ಶ್ರೀಶೈಲ ಕಾಡಿನ ಭಾಗಗಳಲ್ಲಿ ಬೇಟೆಯನ್ನೇ ಅವಲಂಬಿಸಿ ನೆಲೆಸಿದ್ದರು. ಇವರು ಮಾಂಸಾಹಾರಿಗಳು. ಹೀಗಾಗಿ ಬೇಟೆಯ ಸಂದರ್ಭದಲ್ಲಿ ತಂದ ಮಾಂಸವನ್ನು ಶಿವನಿಗೆ ಅರ್ಪಿಸುತ್ತಿದ್ದರು. ತರುವಾಯ ಅದನ್ನು ಸೇವಿಸುತ್ತಿದ್ದರು(ಬಾಲಗುರುಮೂರ್ತಿ, ಪ್ರತಾಪ ರಾ. ಬಹುರೂಪಿ, ೨೦೦೮: ೧೧). ಇವರು ಆಹಾರದ ಸಲುವಾಗಿ ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ವಲಸೆ ಹೋಗುತ್ತಾ ಅಂದಿನಿಂದ ಇಂದಿನವರೆಗೆ ಅಲೆಮಾರಿ ಜೀವನ ನಡೆಸುತ್ತಲೇ ಇದ್ದಾರೆ. ಈ ಸಮುದಾಯ ಕಾಲ ಉರುಳಿದಂತೆ ಕಾಡಿನಿಂದ ನಾಡಿಗೆ ಪ್ರವೇಶ ಮಾಡಿತು. ಮುಂದೆ ನಾಡಿನಲ್ಲಿ ಹೊಟ್ಟೆಹೊರೆಯುವುದಕ್ಕಾಗಿ ಸ್ತ್ರೀ-ಪುರುಷರು ವಿವಿಧ ಕಲೆಗಳನ್ನು ಕಲಿತರು. ಸ್ತ್ರೀಯರು 'ಬುಡಿಗೆ' ಎಂಬ ವಾದ್ಯವನ್ನು ಉಪಯೋಗಿಸಿ ಕತೆಗಳನ್ನು ಹೇಳಲು ಪ್ರಾರಂಭಿಸಿದರು. ಪುರುಷರು ಹಗಲು ವೇಷಹಾಕಿ ವಿವಿಧ ಕಲೆಗಳನ್ನು ಪ್ರದರ್ಶಿಸಲು ಪ್ರಾರಂಭಿಸಿದರು. ಅಲೆಮಾರಿಗಳಾದ ಈ ಸಮುದಾಯವು ಒಂದು ಕಡೆ ನಿಲ್ಲದೆ ಹಳ್ಳಿಹಳ್ಳಿಗಳಲ್ಲಿ ಸಂಚರಿಸಿ ವಿವಿಧ ವೃತ್ತಿಗಳನ್ನು ಕಂಡುಕೊಂಡರು.

"ಈ ಸಮುದಾಯವು ನಾಡಿಗೆ ಬರಲು ಕಾಡಿನಲ್ಲಿ ಇರುವ ಚಿಕ್ಕಪುಟ್ಟ ಸಮುದಾಯಗಳ ಒಳಜಗಳಗಳು, ಆಹಾರದ ಕೊರತೆ ಮುಂತಾದವು ಕಾರಣವಾದವು. ನಂತರ ಬ್ರಿಟಿಷರು, ನಿಜಾಮ ಹಾಗೂ ಮುಸ್ಲಿಮರ ದಬ್ಬಾಳಿಕೆ, ದೌರ್ಜನ್ಯಗಳು ಈ ಸಮುದಾಯದ ಬದುಕಲ್ಲಿ ಹೊಸ ತಿರುವು ಪಡೆಯಿತು. ಇವರು ಕಾಡಿನಿಂದ ನಾಡಿಗೆ ಬಂದ ಸಂದರ್ಭದಲ್ಲಿ ನಿತ್ಯ ಜೀವನಕ್ಕಾಗಿ ಸಾಂಸ್ಕೃತಿಕ ಕಲೆಗಳನ್ನು ಪ್ರದರ್ಶನ ಮಾಡಲಾರಂಭಿಸಿದರು"(ಬಾಲಗುರುಮೂರ್ತಿ, ಪ್ರತಾಪ ರಾ. ಬಹುರೂಪಿ, ೨೦೦೮: ೧೧). ಈ ಕಲೆಗಳು ಭಿಕ್ಷಾಟನೆಗಾಗಿ ಕಲಿತಂಥವು. ಶಿವನ ಆರಾಧಕರೂ ಶ್ರೀಶೈಲ ಮಲ್ಲಿಕಾರ್ಜುನನ ಭಕ್ತರೂ ಆದ ಇವರು ಶೈವ ಧರ್ಮವನ್ನು ಅನುಸರಿಸುತ್ತಾರೆ. ವಿಭೂತಿ, ಕುಂಕುಮ, ರುದ್ರಾಕ್ಷಿ ಮಾಲೆ ಧರಿಸುವುದು ಈ ಸಮುದಾಯದ ಸಂಪ್ರದಾಯ. ಹೀಗಾಗಿ ಮೊದಮೊದಲು ಶೈವ ಧರ್ಮಕ್ಕೆ ಸಂಬಂಧಿಸಿದ 'ಬುರ‍್ರಕತೆ'ಗಳನ್ನು ಹೇಳಲು ಪ್ರಾರಂಭಿಸಿದರು. ಸಂಚಾರಿಗಳಾದ ಈ ಜನಸಮುದಾಯ ಆಂಧ್ರಪ್ರದೇಶದಿಂದ ಕರ್ನಾಟಕ, ಮಹಾರಾಷ್ಟ್ರ ತಮಿಳುನಾಡು ಇನ್ನಿತರ ರಾಜ್ಯಗಳಲ್ಲಿ ವಿಸ್ತರಿಸಿದರು.

ಈ ಜನಸಮುದಾಯವು ಕಾಲ ಉರುಳಿದಂತೆ ಅನೇಕ ಮಹಾದಾರ್ಶನಿಕರ ಪ್ರಭಾವದಿಂದ ಜೀವನ ಹಾಗೂ ವೃತ್ತಿಗಳಲ್ಲಿ ಅನೇಕ ಬದಲಾವಣೆಗಳನ್ನು ಕಂಡುಕೊಂಡರು. ಹನ್ನೆರಡನೆಯ ಶತಮಾನದಲ್ಲಿ ಕರ್ನಾಟಕದ ಬಸವಣ್ಣ ಹಾಗೂ ಅನುಯಾಯಿಗಳ ವಿಚಾರಗಳಿಂದ ಅನೇಕ ಕೆಳವರ್ಗದ ಸಮುದಾಯಗಳು ಇವರ ಅನುಯಾಯಿಗಳಾದರು. ಇದು ಆಂಧ್ರ-ಕರ್ನಾಟಕದ ಎರಡು ಪ್ರದೇಶಗಳಲ್ಲಿ ಸಮಾನ ಪ್ರಚಾರ ಪಡೆಯಿತು. ಆ ಸಂದರ್ಭದಲ್ಲಿ ಆಂಧ್ರದ ಪ್ರಸಿದ್ಧವಾದ ಜನಪದ ಬುರ‍್ರಕತೆಗಳನ್ನು ಇವರು ಶೈವ ಆರಾಧನೆಗಾಗಿ ಬಳಸಿಕೊಂಡರು. ಹನ್ನೆರಡನೆಯ ಶತಮಾನದಲ್ಲಿ ಬುಡ್ಗಜಂಗಮರ ಸಮುಯದಾಯದ ಬಹುರೂಪಿ ಚೌಡಯ್ಯ ವಚನಗಳನ್ನು ರಚಿಸಿದ್ದನ್ನು ಕಾಣುತ್ತೇವೆ. ಹೀಗಾಗಿ ಇವರ ಕತೆಗಳು ಜನಸಾಮಾನ್ಯರಲ್ಲಿ ತಲುಪಲು ಕಾರಣವಾಯಿತು. ಒಂದು ಕಡೆ ವೀರಶೈವ ಧರ್ಮದ ಪ್ರಚಾರ ಪಡೆದರೆ ಮತ್ತೊಂದು ಕಡೆ ಇವರ ಬುರ‍್ರಕಥನ ಕಲೆಯು ಜನರ ಮನಸ್ಸಲ್ಲಿ ಅಚ್ಚೊತ್ತಲು ಕಾರಣವಾಯಿತು. "ಶಿವಾಜಿ ಕಾಲದಲ್ಲಿ ಸ್ವಾತಂತ್ರ್ಯ ಹೋರಾಟಕ್ಕೆ ಇವರನ್ನು ಗೂಢಚಾರಿಗಳಾಗಿ ಬಳಸಿಕೊಂಡಿರುವುದು ಕಂಡುಬರುತ್ತದೆ" (ಬಾಲಗುರುಮೂರ್ತಿ, ಬಹುರೂಪಿ, ೨೦೦೮: ೧೧). ಹೀಗೆ ಶಿವಾಜಿ ಮಹಾರಾಜನು ತನ್ನ ಆಡಳಿತದಲ್ಲಿ ಸ್ವಾತಂತ್ರ್ಯ ಹೋರಾಟಕ್ಕೆ ವಿವಿಧ ವೇಷಗಳನ್ನು ಹಾಕಿಸಿ ಇವರನ್ನು ಬಳಸಿಕೊಂಡಿರುವುದರ ಬಗೆಗೆ ಉಲ್ಲೇಖಗಳು ಇವೆ.

ಕರ್ನಾಟಕಕ್ಕೆ ವಲಸೆ ಬಂದ ಈ ಸಮುದಾಯದವರು ಹನ್ನೆರಡನೆಯ ಶತಮಾನದಲ್ಲಿ ಬಸವಣ್ಣನ ಶೈವ ಧರ್ಮದ ಸರ್ವಜನರ ಸಮಾನತೆಯ ಪ್ರಭಾವಕ್ಕೆ ಒಳಗಾಗಿ ಇಲ್ಲೇ ಅಲೆಮಾರಿಗಳಾಗಿ ಉಳಿದರು. ಇವರು ಒಂದೇ ಕಡೆ ನೆಲೆ ನಿಲ್ಲುವುದಿಲ್ಲ. ಈ ಕುಟುಂಬಗಳು ಕೆಲವು ಹಳ್ಳಿಗಳನ್ನು ಆಸ್ತಿಯನ್ನಾಗಿ ಹಂಚಿಕೊಂಡು ಆ ಹಳ್ಳಿಗಳಲ್ಲಿ ಮಾತ್ರ ಕತೆಗಳನ್ನು ಹೇಳುತ್ತಾರೆ. ಹಾಗೆಯೇ ಹಗಲು ವೇಷಗಳನ್ನು

ಹಾಕುತ್ತಾರೆ. ಅವರು ಆಸ್ತಿಯಾಗಿ ಹಂಚಿಕೊಂಡ ಪ್ರದೇಶದಲ್ಲಿ ಮತ್ತೊಬ್ಬರು ಬಂದು ತಮ್ಮ ಕಲೆಗಳನ್ನು ಪ್ರದರ್ಶಿಸುವ ಹಾಗಿಲ್ಲ. ಒಂದು ವೇಳೆ ಹಾಗೆ ಮಾಡಿದ್ದೇ ಆದರೆ ಅವರಿಗೆ ದಂಡವನ್ನು ವಿಧಿಸುವ ಪದ್ಧತಿ ಇದೆ. ಹೀಗಾಗಿ ಈ ಜನಗಳಿಗೆ ಕಲೆ ಹಾಗೂ ಹಳ್ಳಿಗಳೇ ಇವರ ಆಸ್ತಿಯಾಗಿವೆ. ಇದರ ಜೊತೆಗೆ ಬೀದಿಬಾಗೋತರು, ಕುರುಕುರುಮಾಮ, ಕಾಟಿಪಾಪ, ಬಾಳಸಂತೋಷ ಮುಂತಾದ ವೃತ್ತಿ ಜೀವನವನ್ನು ಅಳವಡಿಸಿಕೊಂಡು ಉಪಜೀವನವನ್ನು ಸಾಗಿಸುತ್ತಾರೆ.

ಇಂದು ಜಗತ್ತಿನಲ್ಲಿ ಮಾನವ ತನ್ನ ಬದುಕಿನಲ್ಲಿ ಅಗಾಧವಾದ ಸಾಧನೆ ಮಾಡಿದ್ದಾನೆ. ಆದರೂ ಈ ಎಲ್ಲಾ ಬದಲಾವಣೆಯಿಂದ ದೂರವಿದ್ದು ಸಾಮಾಜಿಕ ಬದುಕಿನಿಂದ ವಂಚಿತವಾಗಿರುವ ಅನೇಕ ಬುಡಕಟ್ಟುಗಳು ಹಾಗೂ ಅಲೆಮಾರಿ ಸಮುದಾಯಗಳನ್ನು ಈಗಲೂ ಕಾಣಬಹುದು. ಆಧುನಿಕ ಕಂಪ್ಯೂಟರ್ ಯುಗದಲ್ಲಿ, ಜಾಗತೀಕರಣ ಸಂದರ್ಭದಲ್ಲೂ ಸಹ ಈ ಸಮುದಾಯಗಳು ನಾಗರಿಕತೆಯಿಂದ ದೂರವಿದ್ದು ತಮ್ಮ ಸೊಗಡನ್ನು ಹಾಗೆಯೇ ಉಳಿಸಿಕೊಂಡಿವೆ. ಅಂತಹ ಸಮುದಾಯಗಳಲ್ಲಿ 'ಬುಡ್ಗಜಂಗಮ' ಸಮುದಾಯವೂ ಒಂದು. "ಈ ಬುಡ್ಗಜಂಗಮರನ್ನು ಜನಪದರು ಮತ್ತು ಇತಿಹಾಸಕಾರರು ತಮ್ಮ ಬರವಣಿಗೆಯಲ್ಲಿ ವೃತ್ತಿ ವೇಷಗಳಿಗೆ ಹಗಲುವೇಷಗಾರ, ವೇಷಗಾರ, ಬಹುರೂಪಿ, ಬಾಳಸಂತ, ಬೈರಾಗಿ, ಬುರ್ರಕತೆಯವರು, ಕತೆ ಹೇಳುವವರು, ಸನ್ಯಾಸಿಗಳು, ಬೀದಿಭಾಗವತ, ಬಾವಡಗಳು, ಸಿದ್ಧರು, ಕೊಂಡಮಾಮ, ಶಾಸ್ತ್ರ ಹೇಳುವವರು, ಜಂಗಾಲರು, ಜಗ್ಗಾಲಿ ಇತ್ಯಾದಿ ಹೆಸರುಗಳಿಂದ ಕರೆಯುವರು. ಆಯಾ ಪ್ರಾಂತಗಳಿಗನು ಗುಣವಾಗಿ ಕಲಾ ಪ್ರದರ್ಶನ ಮಾಡುವ ಮೇಲ್ಕಂಡ ಕಾಯಕದವರನ್ನು ವಿಭಿನ್ನ ಹೆಸರುಗಳಿಂದ ದಾಖಲಿಸಿದ್ದಾರೆ."(ಬಾಲಗುರುಮೂರ್ತಿ, ೨೦೦೮: ೧). "ಸಂಸ್ಕೃತೀಕರಣ ಪ್ರಭಾವದಲ್ಲಿ ಇತರರಂತೆ ಬೇಡ, ಬುಡ್ಗಜಂಗಾಲರು ಮಠಮಾನ್ಯಗಳ ಆಶ್ರಯ ಪಡೆಯಲು ಹವಣಿಸಿ ಸಾಮಾಜಿಕ ಸ್ಥಾನಮಾನ ಪಡೆಯಲು ಜಂಗಾಲದ ಬದಲಾಗಿ ಜಂಗಮರೆಂಬ ಪದ ಬಳಕೆಗೆ ಮುಂದಾದರು"(ಬಾಲಗುರುಮೂರ್ತಿ, ೨೦೦೮: ೮).

ಆಧುನಿಕ ಯುಗದಲ್ಲಿ ಇವರ ಜೀವನ ಅತಂತ್ರ ಸ್ಥಿತಿಯಲ್ಲಿದ್ದು ಮೂಲಸಂಸ್ಕೃತಿಯನ್ನು ಕಳೆದುಕೊಳ್ಳುವ ಸ್ಥಿತಿಯಲ್ಲಿದ್ದಾರೆ. ಇವರನ್ನು ಕರ್ನಾಟಕದ ಆಯಾ ಪ್ರದೇಶದಲ್ಲಿ ಬೇರೆ ಬೇರೆ ಹೆಸರುಗಳಿಂದ ಕರೆಯುತ್ತಾರೆ. "ಕರ್ನಾಟಕದ ನಾಲ್ಕು ಭಾಗಗಳಲ್ಲಿ ಕರೆಯುವ ಜನಪದ ಹೆಸರುಗಳು ಹೀಗಿವೆ. ಉತ್ತರ ಕರ್ನಾಟಕದ ಬೆಳಗಾವಿ, ಬಾಗಲಕೋಟೆ, ವಿಜಾಪುರ, ಜಿಲ್ಲೆಗಳಲ್ಲಿ ಬಹುರೂಪಿ, ಹಗಲು ವೇಷಗಾರರು, ಸಿದ್ದರು, ಕುರುಕುರುಮಾಮಾ ಎಂದು ಕರೆದರೆ, ಗುಲಬರ್ಗಾ, ಯಾದಗಿರಿ, ರಾಯಚೂರು ಬಳ್ಳಾರಿ ಕೊಪ್ಪಳ ಜಿಲ್ಲೆಗಳಲ್ಲಿ ಹಗಲು ವೇಷಗಾರ, ಬುರ್ರಕತೆಯವರು ಸುಡುಗಾಡು ಸಿದ್ಧರು, ಕೊಂಡಮಾಮ, ಬಾಳಸಂತೋಷ ಎಂತಲೂ, ದಕ್ಷಿಣ ಕರ್ನಾಟಕದ ಕೋಲಾರ, ರಾಮನಗರ, ಬೆಂಗಳೂರು ನಗರ, ಬೆಂಗಳೂರು ಗ್ರಾಮಾಂತರ, ತುಮಕೂರು, ಹಾಸನ ಮಂಡ್ಯ ಜಿಲ್ಲೆಗಳಲ್ಲಿ ಸನ್ಯಾಸಿ, ಜಗ್ಗಾವಿ, ಬಾವಚ, ಬಾಬಾಬುಡರು, ಪರಿಜಂಗಾಲು,

ಶಿವಜಂಗಾಲು, ಸಿರಿಜಂಗಾಲು, ಕಾಟಿಪಾಪುಲು, ಕತೆಗಾಳ್ಳು, ಗಣಾಯತಜಂಗಾಲು, ಶ್ರೀಜಂಗಾಲು, ಈತಮುಕ್ಕಜಂಗಮ, ಜಂಗಾಳು ಪಗಟಿವೇಷುಗಾಳ್ಳು, ಪಂಚಗಾಳ್ಳು, ಬೀದಿ ಭಾಗವತರು ಕೊಯಜಂಗಾಲು ಎಂದು ಕರೆಯುತ್ತಾರೆ"(ಬಾಲಗುರುಮೂರ್ತಿ, ೨೦೦೮: ೯).

ಈ ಸಮುದಾಯವನ್ನು ಕುರಿತು ಯಾದಗಿರಿ ಜಿಲ್ಲೆಯಲ್ಲಿ ಕ್ಷೇತ್ರಕಾರ್ಯ ನಡೆಸಿ ಮಾಹಿತಿಗಳನ್ನು ಸಂಗ್ರಹಿಸಲಾಗಿದೆ. ಒಬ್ಬ ವ್ಯಕ್ತಿಯೇ ಬಾಳಸಂತೋಷ ವೇಷ ಹಾಕುತ್ತಾನೆ. ಮರುದಿನ ವೀರಮುಷ್ಠಿ ವೇಷ ಹಾಕುವುದು, ಮತ್ತೊಂದು ದಿನ ಕುರುಕುರುಮಾಮ ವೇಷ ಹಾಕುವುದು ಹೀಗೆ ಹಲವಾರು ವೇಷಗಳನ್ನು ಹಾಕಿ ತಮ್ಮ ಉಪಜೀವನವನ್ನು ಸಾಗಿಸುತ್ತಾರೆ. ಈ ಎಲ್ಲಾ ವೇಷಗಳಿಗೆ ಮುಖ್ಯ ಕಾರಣವೆಂದರೆ ಒಂದೇ ವೇಷ ಒಂದೇ ವೃತ್ತಿ ಅವಲಂಬಿಸಿದರೆ ಪ್ರತಿನಿತ್ಯ ಭಿಕ್ಷೆ ಸಿಗುವುದಿಲ್ಲ. ಅದಕ್ಕಾಗಿ ಬೇರೆ ಬೇರೆ ವೇಷಗಳನ್ನು ಹಾಕುವುದುಂಟು. ಬೇರೆ ಬೇರೆ ಹೆಸರುಗಳಿಂದ ಕರೆದರೂ ಸಹ ಇವರೆಲ್ಲ ಒಂದೇ ಸಮುದಾಯಕ್ಕೆ ಸೇರಿದವರಾಗಿದ್ದಾರೆ. ಮದುವೆಯನ್ನು ಮಾಡುವಾಗ ಕೊಡು-ಕೊಳ್ಳುವಿಕೆ ನಡೆಯುತ್ತದೆ. ಹೊರಗಡೆ ನೋಡಲು ಬೇರೆ ಬೇರೆ ಜಾತಿ, ಪಂಗಡಗಳಂತೆ ಕಾಣಿಸುತ್ತಾರೆ. ಆದರೆ ಇವರೆಲ್ಲರೂ ಒಟ್ಟಾಗಿ ಕೂಡಿಕೊಂಡು ತಮ್ಮ ಕುಟುಂಬದೊಳಗಿನ ವ್ಯವಹಾರವನ್ನು ಮಾಡುತ್ತಾರೆ. ಹೀಗಾಗಿ ನಾಮಗಳು ಹಲವಾಗಿ ಕಂಡುಬಂದರೂ ನೇಮಗಳು ಒಂದೇ ಆಗಿವೆ.

ಈ ಸಮುದಾಯಕ್ಕೆ ಕರ್ನಾಟಕ-ಆಂಧ್ರ ರಾಜ್ಯಗಳಲ್ಲಿ 'ಬುಡ್ಗಜಂಗಮ' ಎಂಬ ಹೆಸರನ್ನೇ ಅಧಿಕೃತವಾಗಿ ಸರಕಾರಗಳು ಮಾನ್ಯ ಮಾಡಿವೆ. ಹೀಗಾಗಿ ಇಂದು ಈ ಜನಾಂಗಗಳಿಗೆ ತಾವೆಲ್ಲ ಒಂದೇ ಎಂಬ ಭಾವನೆ ಉಂಟಾಗಿದೆ. ಬುಡ್ಗಜಂಗಾಲರೆಂದು ಹೆಸರು ಬರಲು ಮುಖ್ಯವಾಗಿ 'ಬುಡಿಗೆ'(ಗಡಿಗೆ ಹೂಜಿಯಾಕಾರದ) ಎನ್ನುವ ವಾದ್ಯವನ್ನು ಸ್ತ್ರೀಯರು ಹಿಡಿದುಕೊಂಡು ತಂದನಾನ-ತಂದಾನ ಎಂದು ಹಾಡು ಹೇಳುತ್ತ ಮನೆಮನೆಗೆ ಭಿಕ್ಷೆ ಬೇಡುತ್ತ ನುಡಿಸುವುದರಿಂದ ಹಾಗೂ ಅಶಿಸ್ತಿನಿಂದ ಪೇಲವಪೇಲಾಗಿ ಇರುವುದರಿಂದ, ಜಂಗಾಲು, ಜಂಗ್ಲಿ ಎನ್ನುವ ಪದವು ಸೇರಿ 'ಬುಡಿಗೆ ಜಂಗಾಲು' ಬುಡ್ಗಜಂಗಮ ಆಗಿದೆ. ಹಳ್ಳಿಗಳಲ್ಲಿ ಯಾರೇ ಆಗಲಿ ಆ ವ್ಯಕ್ತಿ ಅಶಿಸ್ತಿನಿಂದ, ಹರಿದ ಬಟ್ಟೆಗಳ ಹಾಕಿಕೊಂಡು ಪೇಲವಪೇಲಾಗಿ ಕಾಣಿಸಿದರೆ ಅಂತಹ ವ್ಯಕ್ತಿಗೆ ಏನೋ ಜಂಗ್ಲಿ, ಜಂಗ್ಲಿಯಾಗಿದ್ದೀ ಎಂದು ವ್ಯಂಗ್ಯ ಮಾಡುತ್ತಾರೆ. ಹೀಗಾಗಿ ಈ ಸಮುದಾಯವು ಬಳಸುವ ವಾದ್ಯವಾದ 'ಬುಡಿಗೆ' ಹಾಗೂ ಅವರ ವ್ಯಕ್ತಿತ್ವದಿಂದ 'ಜಂಗಾಲು' ಎಂದ ಪದ ಸೇರಿ 'ಬುಡಿಗೆ ಜಂಗಾಲು' ಎಂಬ ಹೆಸರು ಬಂದಿರಬಹುದು. ಈ ಹೆಸರಿನ ನೆಲೆಯಿಂದ ಸಮುದಾಯದ ಆರ್ಥಿಕ ಸ್ಥಿತಿಗತಿಗಳ ಅರಿವೂ ಆಗುತ್ತದೆ. ಭಾರತದ ಸಮಾಜದಲ್ಲಿ ಅವರ ಕಾಯಕದಿಂದ ಜಾತಿಗಳು ಹುಟ್ಟಿದನ್ನು ಕಾಣಬಹುದು. ಹಾಗೆ ಅವರು ವೃತ್ತಿಗಾಗಿ ಉಪಯೋಗಿಸುವ ಪರಿಕರಗಳಿಂದ ಅವರನ್ನು ಗುರುತಿಸುತ್ತಾರೆ. ಉದಾಹರಣೆಗೆ ಗಡಿಗೆ ಮಾಡುವುದರಿಂದ ಕುಂಬಾರ, ಚಪ್ಪಲಿ ಮಾಡುವುದರಿಂದ ಚಮ್ಮಾರ, ಗೊಂದಲಿ ಹಾಕುವುದರಿಂದ ಗೊಂದಲಿಗರು, ಹೀಗೆ ಅವರ ವೃತ್ತಿಯನ್ನು ಅವಲಂಬಿಸಿದ ಜಾತಿಗಳು

ಸಮಾಜದಲ್ಲಿವೆ. ಹೀಗಾಗಿ 'ಬುಡಿಗೆ' ವಾದ್ಯದಿಂದ ಈ ಅಲೆಮಾರಿ ಸಮುದಾಯಕ್ಕೆ 'ಬುಡ್ಗಜಂಗಮ' ಎಂಬ ಹೆಸರು ಬಂದಿದೆ. ಈ ಬುಡಿಗೆಗೆ 'ಡಿಂಕಿ' 'ಗುಮ್ಮಟ' ಎಂದು ಸಹ ಕರೆಯುತ್ತಾರೆ.

ಬುಡುಗ ಪದದ ಅರ್ಥವನ್ನು ಎನ್.ಆರ್.ವೆಂಕಟೇಶಂ ಈ ರೀತಿಯಾಗಿ ವಿವರಿಸುತ್ತಾರೆ. ಈ ಪದವು ಬುಡಿಗ>ಬುಡ್ಗ>ಬುರ್ರ ಆಗಿ ಪರಿವರ್ತನೆ ಹೊಂದಿದೆ. ಬುಡಿಗೆಗೆ ಬುರ್ರ ಎಂಬ ಪದ ಬಂದು ಬುರ್ರ ವಾದ್ಯದಿಂದ ಕತೆಗಳನ್ನು ಹಾಡುವುದು ಬುರ್ರಕತೆಯೆಂದು ಪ್ರಚಲಿತವಾಗಿದೆ. ಇಂದು ಅವರಿಗೆ 'ಬುಡ್ಗಜಂಗಮ' ಎಂಬ ಹೆಸರು ರೂಢಿಯಾಗಿದೆ. ಇವರ ಮೂಲ ವೃತ್ತಿ ಕತೆಗಳನ್ನು ಹೇಳುವುದು ಮತ್ತು ಭಿಕ್ಷೆ ಬೇಡಿ ಜೀವನ ಸಾಗಿಸುವುದು. ಈ ಮೊದಲು ಸ್ತ್ರೀಯರು ಮಾತ್ರ ಕತೆ ಹೇಳುತ್ತಿದ್ದರು. ನಂತರ ಸ್ತ್ರೀ ಪುರುಷರು ಕತೆಗಳನ್ನು ಹೇಳಲು ಪ್ರಾರಂಭಿಸಿದರು. ಪುರುಷರು ಮುಖ್ಯವಾಗಿ ವೇಷಗಳನ್ನು ಹಾಕುತ್ತಾರೆ. ಇತ್ತೀಚೆಗೆ ಅಲೆಮಾರಿಗಳಾದ ಈ ಕುಟುಂಬಗಳು ಅಲೆಮಾರಿ ಜೀವನವನ್ನು ನಿಲ್ಲಿಸಿ ತಮಗೆ ಅನುಕೂಲವಾದ ಊರುಗಳನ್ನು ಗುರುತಿಸಿಕೊಂಡು ಒಂದೆಡೆ ನೆಲೆ ನಿಲ್ಲಲು ಪ್ರಾರಂಭಿಸಿದ್ದಾರೆ.

ಈ ಜನಾಂಗದ ಉಡುಗೆ-ತೊಡುಗೆಗಳನ್ನು ನೋಡಿದರೆ ಬುಡ್ಗಜಂಗಾಲರು ಎಂದು ಮನವರಿಕೆಯಾಗುತ್ತದೆ. ಪುರುಷರು ವಿಶಿಷ್ಟವಾದ ಉಡುಪುಗಳನ್ನು ಧರಿಸುವರು. ಮೊಳಕಾಲು ಕೆಳಗೆ ಪಂಚೆ ತೊಡುವುದು, ನಿಲುವಂಗಿ, ತಲೆಗೆ ಕೆಂಪು ಅಥವಾ ಹಳದಿ ರುಮಾಲನ್ನು ತೊಡುವರು. ಜೊತೆಗೆ ನಿಲುವಂಗಿ ಮೇಲೆ ಕಪ್ಪುಕೋಟನ್ನೂ ವಯಸ್ಸಾದವರು ಧರಿಸುತ್ತಾರೆ. ಕೈಯಲ್ಲಿ ಕಡಗ, ಕೊರಳಲ್ಲಿ ರುದ್ರಾಕ್ಷಿ, ಕಿವಿಯಲ್ಲಿ ಮುರುವು ಇದ್ದು ಉದ್ದವಾದ ಕೂದಲುಗಳನ್ನು ಬಿಟ್ಟಿರುತ್ತಾರೆ. ಹಾಗೆಯೇ ಸ್ತ್ರೀಯರು ಹೆಚ್ಚಾಗಿ ಕೆಂಪು ಬಣ್ಣದ ಗೆರೆಗಳಿರುವ ಸೀರೆ, ಕುಪ್ಪಸ ತೊಡುತ್ತಾರೆ. ಕೈಗೆ ಬಳೆ, ಕುಂಕುಮ, ಮೂಗುತಿ, ತಾಳಿ ಮುಂತಾದವನ್ನು ಧರಿಸುವರು. ಇವರು ತೊಡುವ ಬಟ್ಟೆಗಳು ಮುಖ್ಯವಾಗಿ ಭಿಕ್ಷಾಟನೆಯಿಂದ ಪಡೆದಂತಹವು. ಅವುಗಳನ್ನೇ ವೈವಿಧ್ಯಮಯವಾಗಿ ತೊಡುತ್ತಾರೆ. ವಾದ್ಯ ಪರಿಕರಗಳಿಂದ ಕೆಲವು ಸಮುದಾಯಗಳು ಗುರುತಿಸಿಕೊಳ್ಳುತ್ತವೆ. ವಾದ್ಯ ಪರಿಕರಗಳಿಂದಲೇ ಆಯಾ ಸಂಪ್ರದಾಯವನ್ನು ಪ್ರತಿನಿಧಿಸುತ್ತವೆ. ಬುರ್ರ, ಕಂಸಾಳೆ, ಚೌಡಿಕೆ, ತಂಬೂರಿ ಮೊದಲಾದ ವಾದ್ಯಗಳ ಜೊತೆಗೆ ಕೆಲವೊಂದು ಸಮುದಾಯಗಳ ಸಂಪ್ರದಾಯವೂ ಸೇರಿಕೊಂಡಿದೆ. ಇಲ್ಲೆಲ್ಲ ವಾದ್ಯ ಪರಿಕರಗಳೇ ಪ್ರಮುಖ ಪಾತ್ರ ವಹಿಸುತ್ತವೆ. ಆಯಾ ಜನಾಂಗಗಳು ಬಳಸುವ ವಾದ್ಯ ಪರಿಕರಗಳನ್ನು ಆಯಾ ಸಮುದಾಯಗಳೇ ತಯಾರು ಮಾಡಿಕೊಳ್ಳುತ್ತಿದ್ದರು. ಆದರೆ ಇತ್ತೀಚೆಗೆ ಇಂತಹ ಪರಿಕರಗಳನ್ನು ಬೇರೆಯವರು ತಯಾರಿಸಿದ್ದನ್ನು ಕೊಂಡುಕೊಳ್ಳುತ್ತಿದ್ದಾರೆ.

ಬುಡ್ಗಜಂಗಮರ ಮೂಲವಾದ್ಯ ಪರಿಕರಗಳೆಂದರೆ ಬುಡಿಗೆ, ತಂಬೂರಿ, ಗಗ್ಗರಿ. ಆದರೆ ಇತ್ತೀಚೆಗೆ ಚಿಟಿಕಿ, ತಬಲಾ, ಡಕ್ಕಡೋಲಕ, ಹಾರ್ಮೋನಿಯಂ, ಡಮರು, ಡಿಮ್ಕಿ, ಗಂಟೆ, ಶಂಕು, ಹಲಗೆ ಮುಂತಾದವುಗಳನ್ನು ಬೇರೆ ಬೇರೆ ಸಂದರ್ಭಗಳಲ್ಲಿ ಬಳಸುವುದುಂಟು.

ಈ ಸಮುದಾಯ ಒಂದು ಕಲೆಯನ್ನು ಅವಲಂಬಿಸಿದ ಕಲಾಕಾರರು. ಇವರು ವಂಶಪಾರಂಪರಿಕವಾಗಿ ಒಂದು ತಲೆಯಿಂದ ಮತ್ತೊಂದು ತಲೆಗೆ ವರ್ಗಾಯಿಸಿಕೊಂಡು ಕಥಾ ಸಾಹಿತ್ಯವನ್ನು ಉಳಿಸಿಕೊಂಡು ಬಂದಿದ್ದಾರೆ. ಇವು ಮುಖ್ಯವಾಗಿ ಮೌಖಿಕವಾದವು. ಈ ಸಮುದಾಯದಲ್ಲಿರುವ ಜನಪದ ಬುರ್ರಕತೆಗಳು ಎಷ್ಟಿವೆ ಎಂಬುದೇ ಇವರಿಗೆ ತಿಳಿಯದು. ಆದರೆ ಹಾಡಲು ಪ್ರಾರಂಭಿಸಿದಾಗ ಅದಕ್ಕೆ ಕೊನೆಯಿಲ್ಲವೆಂಬಂತೆ ಹಾಡುತ್ತಾರೆ. ಇವರಲ್ಲಿ ಅದ್ಭುತವಾದ ಮೌಖಿಕ ಸಾಹಿತ್ಯವು ಅಡಗಿದೆ. ಒಬ್ಬೊಬ್ಬ ಕಲಾವಿದರು ಸುಮಾರು ಮೂವತ್ತು ನಲವತ್ತು ಕತೆಗಳನ್ನು ಸುದೀರ್ಘವಾಗಿ ಹಾಡುತ್ತಾರೆ. ಹಾಗೆ ಇವರು ಅಭಿನಯ, ಮೌಖಿಕ ಸಾಹಿತ್ಯ, ಸಂಗೀತ, ವಿನೋದ ಮುಂತಾದವುಗಳನ್ನು ಒಡಲಲ್ಲಿಟ್ಟುಕೊಂಡಿದ್ದಾರೆ. ಈ ಸಮುದಾಯವು ತಾವು ಯಾವ ಪ್ರದೇಶದಲ್ಲಿ ವಾಸಿಸುತ್ತಾರೋ, ಆ ಪ್ರದೇಶದ ಸಂಪೂರ್ಣ ಮಾಹಿತಿಯನ್ನು ಪಡೆದುಕೊಂಡು ಕಥನ ನಿರೂಪಣೆಯ ಸಂದರ್ಭದಲ್ಲಿ ಸೇರಿಸಿ ಜೊತೆಗೆ ಹಾಡುತ್ತಾರೆ.

ಇವರು ಕಥನ ಕ್ರಿಯೆಯನ್ನು ವಿವಿಧ ಪ್ರಾಂತಗಳಲ್ಲಿ ಪ್ರಾಂತೀಯತೆಯನ್ನು ಅನುಸರಿಸಿ ಕಥನ ವಿಧಾನವನ್ನು ಬದಲಾಯಿಸುತ್ತಾರೆ. ಆದರೆ ಸಾಮಾನ್ಯವಾಗಿ ಒಂದೇ ಪದ್ಧತಿಯಲ್ಲಿ ಕಥನ ಕ್ರಿಯೆಯು ನಡೆಯುತ್ತದೆ. ಇವರ ಕತೆಗಳು ಗದ್ಯ-ಪದ್ಯ ಮಿಶ್ರಿತವಾಗಿದ್ದು ಹಾಡುಗಾರಿಕೆಯು ಶ್ರೋತೃಗಳನ್ನು ಮೂಕವಿಸ್ಮಯರಾಗಿಸುತ್ತದೆ. ಇವರ ಕಥನದ ಪ್ರಮುಖ ಲಕ್ಷಣಗಳನ್ನು ಈ ರೀತಿಯಾಗಿ ಪಟ್ಟಿ ಮಾಡಬಹುದು.

೧. ಕಥನರೂಪ, ಸರಳ ಭಾಷೆಯ ಹಾಡುಗಾರಿಕೆ ಇರುತ್ತದೆ.

೨. ವ್ಯವಸ್ಥಿತ ಪ್ರಮಾಣವು ಸಹಜವಾಗಿ ಲಭ್ಯವಾಗಿರುತ್ತದೆ.

೩. ಈ ಗಾಯಕರು ಕತೆಯನ್ನು ಆಶುವಾಗಿ ಹೇಳುತ್ತಾರೆ.

೪. ಕಾವ್ಯ ಪ್ರಾಧಾನ್ಯತೆ ಅಷ್ಟು ಕಾಣಸುವುದಿಲ್ಲ.

೫. ಖಚಿತವಾದ ಪ್ರಚಾರದಲ್ಲಿ ಇದು ಜೀವಿಸುತ್ತದೆ.

೬. ಹಾಡುಗಳ ಜೊತೆಗೆ ಭಾವ, ಭಾಷೆ, ವರ್ಣನೆ ಪುನರಾವೃತ್ತಿಗಳಾಗುತ್ತವೆ.

೭. ವೀರ ಹಾಗೂ ಸಾಹಸ ಪ್ರವೃತ್ತಿಯು ಕತೆಯೊಳಗೆ ಸಹಜವಾಗಿ ಹುಟ್ಟುತ್ತದೆ.

೮. ವ್ಯಂಗ್ಯ ನೀತಿಬೋಧೆ ಇರುತ್ತದೆ.

೯. ಅದ್ಭುತವಾದ ರಚನೆಗಳು, ಅಲೌಕಿಕ-ಶಕ್ತಿಗಳು ಕಥಾ ಪಾತ್ರಗಳನ್ನು ಹಾಗೂ ಆಶಯವನ್ನು ಪ್ರಭಾವಿಸುತ್ತವೆ.

೧೦. ಧರ್ಮಕ್ಕೆ ಜಯ, ಅನ್ಯಾಯಕ್ಕೆ ಅಪಜಯ ಎಂಬುದು ಸರಳ ನೀತಿ.

ಇನ್ನು ಸಂಭಾಷಣೆ ರೂಪದ ನಿರೂಪಣೆಗಳು, ದೇಸಿ ಭಾಷಾ ಸಂಸ್ಕೃತಿಗಳನ್ನು ಪ್ರತಿಬಿಂಬಿಸುವುದು ಇದರ ಉಪಲಕ್ಷಣಗಳು"(ರಾಜು ವೈ.ಪಿ, ೧೯೯೨: ೩೭). ಈ ಸಮುದಾಯದ ಸಾಂಸ್ಕೃತಿಕ ಅಭಿವ್ಯಕ್ತಿಗಳಿಂದ

ಕಥನಗಳು ಸಾಂಸ್ಕೃತಿಕ ವೀರನ ಅಥವಾ ಧಾರ್ಮಿಕ ವೀರನ ಸುತ್ತ ಹೆಣೆದು ಅನೇಕ ಮಜಲುಗಳಲ್ಲಿ ಸಾಗುತ್ತದೆ. ಸಾಂಸ್ಕೃತಿಕ ನೆಲೆಗಟ್ಟಿನಲ್ಲಿ ಹುಟ್ಟಿ, ಬೆಳೆದು ಅಲ್ಲಿನ ಪರಿಸರದ ಜನರ ಆಶೋತ್ತರಗಳನ್ನು ಇವರು ತಮ್ಮ ಕತೆಗಳಲ್ಲಿ ಅಭಿವ್ಯಕ್ತಪಡಿಸುತ್ತಾರೆ.

ಬುಡ್ಗಜಂಗಮರು ಹಾಡಿದ ಕತೆಗಳ ನಾಯಕರು ಉದಾತ್ತ-ಉನ್ನತ ಗುಣಗಳೊಂದಿಗೆ ಜನಸಾಮಾನ್ಯರಲ್ಲಿರುವ ಕೆಲವು ಗುಣಗಳನ್ನು ಒಳಗೊಂಡಿರುತ್ತಾರೆ. ಇವರ ಕತೆಗಳಲ್ಲಿ ಜನಕಲ್ಯಾಣ ಕಾರ್ಯ ಹಾಗೂ ಸತ್ಯ, ಅಹಿಂಸೆ ಮೊದಲಾದ ಉನ್ನತ ಗುಣಗಳು ಒಳಗೊಂಡಿವೆ. ಇವರ ಕತೆಗಳಲ್ಲಿ ಬರುವ ನಾಯಕರ ಪಾತ್ರಗಳು ಸಾಮಾನ್ಯ ಜನರಂತಿರುತ್ತಾರೆ. ಇವರ ಕತೆಗಳಲ್ಲಿ ಬರುವ ನಾಯಕರು ಭಂಗಿ ಸೇದುವುದು, ಬೇಟೆಯಾಡುವುದು, ದನ ಕುರಿಗಳನ್ನು ಕಾಯುವುದು ಮುಂತಾದವುಗಳು ಸಾಮಾನ್ಯ. ಇಂತಹ ಗುಣಗಳಿಂದ ಈ ಗಾಯಕರು ಜನಸಾಮಾನ್ಯ ವರ್ಗಕ್ಕೆ ಆಪ್ತರಾಗಿ ಆತ್ಮೀಯರಾಗುತ್ತಾರೆ. ಈ ಎಲ್ಲಾ ಕಾರಣಗಳಿಗಾಗಿ ಬುರ್ರಕತೆಗಳು ಅತ್ಯಂತ ಜನಪ್ರಿಯತೆಯನ್ನು ಪಡೆದಿರುತ್ತವೆ.

**ಬುರ್ರಕತೆ**

'ಬುರ್ರಕತೆ' ಆಂಧ್ರಪ್ರದೇಶದಲ್ಲಿ ಅತ್ಯಂತ ಜನಪ್ರಿಯ ಕಲೆಯಾಗಿದೆ. "ಇದು ತೆಲುಗು ಸಾಹಿತ್ಯ ಕಲಾರಂಗದಲ್ಲಿ "ಸುವರ್ಣಾಕ್ಷರ" ಮೂಡಿಸಿದ ಮಹತ್ತರವಾದ ಕಲೆಯಾಗಿದೆ. ಇದು ತೆಲಗು ಜಾನಪದ ವಾಙ್ಮಯ ಚರಿತ್ರೆಯಲ್ಲಿ ಪ್ರತ್ಯೇಕ ಸ್ಥಾನವನ್ನು ಹೊಂದಿದ ಅಪರೂಪದ ಕಲಾರೂಪವಾಗಿದೆ"(ರಾಜು ವೈ.ಪಿ., ೧೯೯೨: ೬೪). ಈ ಸಮುದಾಯ ಹಾಗೂ ಕೇಳುಗರು ಇವರು ಹಾಡುವ ಕತೆಗಳಿಗೆ 'ಕತೆ' ಎಂದೇ ಸಂಭೋದಿಸುತ್ತಾರೆ ಹೊರತು ಎಲ್ಲಿಯೂ ಹಾಡು ಅಥವಾ ಕಾವ್ಯ ಎಂದು ಹೇಳುವುದಿಲ್ಲ. ಇವರು ಕತೆಯನ್ನು ಹಾಡಿ ಗದ್ಯದಲ್ಲಿ ವಿಸ್ತರಿಸಿ ಮತ್ತೆ ಹಾಡುವರು. ಇವರ ಕತೆಯ ವೈಶಿಷ್ಟ್ಯ ಗದ್ಯ-ಪದ್ಯ ಮಿಶ್ರಿತವಾದ ಹಾಡ್ಗತೆಗಳು. ಹೀಗೆ 'ಕತೆ' ಎಂಬುದು ವಿಶಾಲ ಅರ್ಥವನ್ನು ಹೊಂದಿದೆ. ಕತೆ ಎಂದರೆ ನಿವೇದಿಸು, ಪ್ರಕಟಿಸು, ವ್ಯಾಖ್ಯಾನಿಸು, ವರ್ಣಿಸು, ಪ್ರದರ್ಶಿಸು, ಸಂಭಾಷಣೆ ಹೀಗೆ ಅನೇಕ ಅರ್ಥಗಳು ಇವೆ. ಇಲ್ಲಿ ಕತೆ ಎಂದರೆ ವೃತ್ತಾಂತ. ಕೆಲವು ಸತ್ಯಾಂಶಗಳು ಕೂಡಿದ ಕಲ್ಪಿತ ಕಲೆ. ಇದು ಹಾಡಿನ ರೂಪದಲ್ಲೋ ಕತೆಯ ರೂಪದಲ್ಲೋ ಇರುವ ವಚನ. ಕತೆ ಎಂಬ ಪದವು ಪ್ರಾಚೀನ ಕಾಲದಿಂದಲೂ ಪ್ರಚಲಿತದಲ್ಲಿದೆ. ಈ ಕತೆಗಳನ್ನು ಹೇಳುವವರು ಮಾತುಬಲ್ಲವರು, ವಾಕ್ಚಾತುರ್ಯವನ್ನು ಹೊಂದಿದವರಾಗಿದ್ದಾರೆ. ವಚನ ರೂಪದಲ್ಲಿ ಇರುವ ಕತೆಗೆ ಹಾಡನ್ನು ಜೋಡಿಸಿದಾಗ ಆ ಕತೆ ಹಾಡಿನ ರೂಪದಲ್ಲಿ ಹೊರಹೊಮ್ಮುತ್ತದೆ. ಇದು ಕಾಲಾನುಕ್ರಮದಲ್ಲಿ ಬದಲಾವಣೆ ಹೊಂದಿ, ಹಾಡನ್ನು ಹೇಳುವ ಹಾಗೂ ಕತೆಯನ್ನು ವಿವರಿಸುವ ನಿರೂಪಣ ಒಳಗೊಂಡಿದೆ. ಈ ರೀತಿಯಾಗಿ ಬುಡ್ಗಜಂಗಮರಲ್ಲಿ ಬುರ್ರಕತೆ ಅಥವಾ ಜಂಗಮ ಕತೆಯಾಗಿ ಹಾಡಿನ ರೂಪದಲ್ಲಿ ಮೂರ್ತರೂಪ ಪಡೆದುಕೊಂಡಿರುತ್ತದೆ.

ಆಂಧ್ರಪ್ರದೇಶದಲ್ಲಿ ಹೆಚ್ಚು ಜನಪ್ರಿಯತೆ ಹೊಂದಿದ ಈ ಕಲೆಯನ್ನು ರಾಜಕೀಯ, ಧಾರ್ಮಿಕ, ಚಾರಿತ್ರಿಕ ಕಾರಣಗಳಿಗಾಗಿ ಅನೇಕ ವಿಧದಲ್ಲಿ ಬಳಸಿಕೊಳ್ಳಲಾಗಿದೆ. ಈ ಕಲೆಗೆ ಆಂಧ್ರಪ್ರದೇಶದಲ್ಲಿ ಬೇರೆ ಬೇರೆ ಹೆಸರುಗಳಿವೆ. ತಂದಾನ ಕತೆ, ಡಕ್ಕಿಲಕತೆ, ಶಾರದಖಿಂಡ್ರು, ಜಂಗಮಕತೆ, ಬುರ್ರಕತೆ ಹೀಗೆ. ಇವರು ಒಂದೇ ಸಮುದಾಯಕ್ಕೆ ಸೇರಿದ್ದು ಇವರು ಹಾಡುವ ಕತೆಗಳ ವಸ್ತು, ಪರಂಪರೆ ಒಂದೆ ತೆರನಾಗಿದೆ. ಇವರ ಕತೆಗೆ ಆಧಾರ 'ತಂಬೂರ.' ಇದರ ನಾದದ ಆಧಾರದಿಂದ ಕತೆಗಾರರು ಹಾಡನ್ನು ಹೇಳುತ್ತಾರೆ. ಹೀಗಾಗಿ ಈ ಕತೆಗಳಿಗೆ ತಂಬೂರ ಕತೆಗಳೆಂದು ಕರೆಯುತ್ತಾರೆ. ತಂಬೂರಿ ಶ್ರುತಿ ಹಾಗೂ ಗಗ್ಗರಿ ಜೊತೆಗೆ ಡಕ್ಕಿಗಳನ್ನು ಉಪಯೋಗಿಸುವರು. ಡಕ್ಕಿಗಳ ನಾದಕ್ಕೆ ತಕ್ಕಂತೆ ಹಾಡುಗಾರ ಹಾಡುತ್ತಾನೆ. ಹಿಮ್ಮೇಳ ಅದಕ್ಕೆ ಧ್ವನಿಗೂಡಿಸುತ್ತದೆ. ಈ ಕತೆಗಳಿಗೆ ಹಿಮ್ಮೇಳ ಅತ್ಯವಶ್ಯ. ಹಿಮ್ಮೇಳ ಇಲ್ಲದಿದ್ದರೆ ಈ ಕತೆಗಳಿಗೆ ಅಂದವೇ ಇರುವುದಿಲ್ಲ. ಅದಕ್ಕಾಗಿ ಹಿಮ್ಮೇಳದಲ್ಲಿ ಇಬ್ಬರು ಭಾಗವಹಿಸಿ ಢಕ್ಕಿಗಳನ್ನು ಬಾರಿಸುತ್ತಾರೆ. ಈ ಢಕ್ಕಿಗಳ ನಾದದಿಂದ ಕತೆಗಳನ್ನು ಹೇಳುವುದರಿಂದ 'ಡಕ್ಕಿಗಳ ಕತೆಗಳೆಂದು' ಸಹ ಕರೆಯುವುದಿದೆ. ಹಾಗೆಯೇ, ಈ ಕತೆಯನ್ನು ಮುಖ್ಯ ಕತೆಗಾರರು ಹಾಡಿದ ಮೇಲೆ ಹಿಮ್ಮೇಳದ ಇಬ್ಬರು ಬಹಳ ಹೊತ್ತಿನವರೆಗೆ ತಂದಾನ... ತಂದಾನ... ತಾನ ದೇವನಂದಾನಾ... ಎಂದು ಒಂದೇ ಶ್ರುತಿಯಿಂದ ಆಲಾಪನೆ ಮಾಡುತ್ತಾರೆ. ಹೀಗಾಗಿ ಈ ಕತೆಗಳಿಗೆ 'ತಂದಾನ' ಕತೆಗಳೆಂದು ಸಹ ಕರೆಯುವ ಪದ್ಧತಿ ಇದೆ. ಇಲ್ಲಿ ಪ್ರಮುಖ ಗಾಯಕರ ಜೊತೆಗೆ ಇಬ್ಬರು ಹಿಮ್ಮೇಳ ಗಾಯಕರು ಸಹ ಪ್ರಮುಖ ಪಾತ್ರ ವಹಿಸುತ್ತಾರೆ.

ಒಟ್ಟಾರೆ 'ಬುರ್ರಕತೆ'ಗಳು ತಮ್ಮ ಜೀವನಕ್ಕಾಗಿ ಬೆಳೆಸಿ, ಉಳಿಸಿಕೊಂಡು ಬಂದಿರುವ ಒಂದು ವೃತ್ತಿ ಕಲೆಯಾಗಿದೆ. ಇಂತಹ ಕಲೆಯು ಜನಪದರಲ್ಲಿ ಮಾತ್ರ ಹುಟ್ಟುವಂತಹುದು. ಅಂದರೆ ಜನರಿಂದ ಹುಟ್ಟುವ ಜನರ ಮಧ್ಯ ಬೆಳೆದು ಜನರಿಗೆ ಸಂತೋಷವನ್ನು ಉಂಟುಮಾಡುವ ಕಲೆಯಾಗಿದೆ. ಇಂತಹ ಕಲೆಯನ್ನು ಬುಡಿಗೆ ಜಂಗಾಲು ಸಮುದಾಯವು ತಮ್ಮ ಉಪಜೀವನಕ್ಕಾಗಿ ಬೆಳೆಸಿ ಉಳಿಸಿಕೊಂಡು ಬಂದಿರುವುದು ಸಹಜ. ಮೌಖಿಕವಾಗಿ ಇವರ ಕತೆಗಳು ಜನರ ಆಶಯ, ಆಲೋಚನೆಗಳಿಗೆ ಅನುಗುಣವಾಗಿ ರಸವತ್ತಾದ, ಸಾರವತ್ತಾದ ಸಂದೇಶವನ್ನು ಕೊಡುವ ಅಪರೂಪದ ಕಲೆಯಾಗಿದೆ.

### ಬುರ್ರಕಥನ ಸ್ವರೂಪ ಹಾಗೂ ಸ್ವಭಾವಗಳು

ಬುರ್ರಕತೆಯ ನಿರೂಪಣೆಯಲ್ಲಿ ಮಹಿಳೆಯರು ಅಥವಾ ಪುರುಷರು ಭಾಗವಹಿಸುತ್ತಾರೆ. ಇದರಲ್ಲಿ ಮೂರು ಜನ ಮಾತ್ರ ಇರುತ್ತಾರೆ. ಕೆಲವು ಸಂದರ್ಭದಲ್ಲಿ ಇಬ್ಬರೇ ಕತೆಯನ್ನು ಹೇಳುತ್ತಾರೆ. ಸಂದರ್ಭಕ್ಕೆ ಅನುಸಾರವಾಗಿ ಎಷ್ಟು ಜನ ಕತೆ ಹೇಳಬೇಕೆಂದು ನಿರ್ಧರಿಸುತ್ತಾರೆ. ಇವರು ಇಡೀ ರಾತ್ರಿ ಜನರಿಗೆ ಮನರಂಜನೆಯನ್ನು ಒದಗಿಸುತ್ತಾರೆ. ಕತೆಯನ್ನು ಹಾಡುವಾಗ ಮಧ್ಯಮಧ್ಯದಲ್ಲಿ ಹಾಸ್ಯ, ಶೃಂಗಾರಮಯವಾದ ಉಪಕತೆಗಳನ್ನು ಮುಖ್ಯಕತೆಗೆ ಹೊಂದಿಸಿಕೊಂಡು ಹೇಳುವುದುಂಟು.

ಈ ಕತೆಯಲ್ಲಿ ಪ್ರಧಾನ ಗಾಯಕ ಕಾಲಿಗೆ ಗೆಜ್ಜೆ ಕಟ್ಟಿಕೊಂಡು ಎಡಗೈ ಹೆಬ್ಬೆರಳು ಹಾಗು ತೋರು ಬೆರಳಿಗೆ ಗಗ್ಗರಿ ಹಾಕಿಕೊಂಡು ಗೆಜ್ಜೆಯ ನಾದವನ್ನು ಹೊರಹೊಮ್ಮಿಸುತ್ತ, ತಂಬೂರಿ ಮೀಟುತ್ತಾ ಕುಣಿಯುತ್ತಿರುತ್ತಾನೆ. ಈ ಕತೆಯ ಸಂಪೂರ್ಣ ಜವಾಬ್ದಾರಿಯನ್ನು ಪ್ರಧಾನ ಗಾಯಕನೇ ಹೊತ್ತಿರುತ್ತಾನೆ. ಇಲ್ಲಿ ಕತೆ ಹೇಳುವುದು ನೆಪ ಮಾತ್ರವಾಗಿದ್ದು ಅದರಲ್ಲಿ ಬರುವ ಸನ್ನಿವೇಶ ಕತೆಗೆ ತಕ್ಕಂತೆ ಹಾಡುಗಳ ಸಂಭಾಷಣೆ, ಅವರ ಹಾವಭಾವಗಳು, ಧ್ವನಿಯ ಏರಿಳಿತಗಳು ಮುಖ್ಯವಾಗಿರುತ್ತದೆ. ಕತೆ ಹೇಳುವಾಗ ಕತೆಗಾರ ಅಂದವಾಗಿ ಸಿಂಗರಿಸಿಕೊಂಡಿರುತ್ತಾನೆ. ಪುರುಷರ ಮೇಳವಾದರೆ ತಲೆಗೆ ರುಮಾಲು ಪೇಟ, ಸಾಧಾರಣ ನಿಲುವಂಗಿ, ಕರಿಕೋಟು, ಹೆಗಲ ಮೇಲೆ ಶಲ್ಯ, ಬಿಳಿಪಂಚೆ, ಕಾಲಿಗೆ ಗೆಜ್ಜೆ, ಎಡಗೈ ಹೆಬ್ಬೆರಳು ಹಾಗೂ ತೋರು ಬೆರಳುಗಳಿಗೆ ಗಗ್ಗರಿ, ಬಲಗೈಯಲ್ಲಿ ತಂಬೂರಿ, ಹಣೆಗೆ ವಿಭೂತಿ ಕುಂಕುಮ ಧರಿಸುತ್ತಾರೆ. ಉಳಿದ ಹಿಮ್ಮೇಳ ಗಾಯಕರು ಸಾಮಾನ್ಯ ವಸ್ತ್ರಗಳನ್ನು ಧರಿಸುತ್ತಾರೆ. ಸ್ತ್ರೀ ಮೇಳಗಳಾದರೆ ಪುರುಷರ ಮೇಳಗಳ ಸಂಪ್ರದಾಯವನ್ನೇ ಅನುಸರಿಸುತ್ತಾರೆ. ಉಡುಗೆಯಲ್ಲಿ ಮಾತ್ರ ಸ್ವಲ್ಪ ವ್ಯತ್ಯಾಸವಿದ್ದು ಸಾಮಾನ್ಯವಾಗಿ ಸೀರೆ, ಕುಪ್ಪಸವನ್ನು ತೊಟ್ಟಿರುತ್ತಾರೆ. ಇದರಲ್ಲಿ ಪುರುಷರಂತೆ ವೈಭವವನ್ನು ಕಾಣುವುದಿಲ್ಲ. ಸ್ತ್ರೀಯರೂ ಪುರುಷರಂತೆ ತಮ್ಮ ಕಲೆಯನ್ನು ಪ್ರದರ್ಶಿಸುತ್ತಾರೆ.

ಈ ಕತೆಗಳು ಗದ್ಯ-ಪದ್ಯ ಮಿಶ್ರಿತ ಜಾನಪದ ಚಂಪೂ ಶೈಲಿಯಿಂದ ಕೂಡಿದೆ. ಇದರ ಭಾಷೆ ಹಾಗೂ ಶೈಲಿಯ ದೃಷ್ಟಿಯಿಂದಲೂ ಪರಿಶೀಲಿಸಿದಾಗ ಅದರ ಹಾಡು ವೈವಿಧ್ಯಮಯವಾದ ಪಲ್ಲವಿಗಳು ಕಂಡುಬರುತ್ತವೆ. ತಂದನಾನ... ತಾನ... ತಂದಾನ.. ರಾಮ.. ರಾಮ.., ಬಳಾಬಳಿ ...ಭುಳಾಸೋಯಿ. ಇಂತಹ ಪಲ್ಲವಿಗಳು ಕಥನ ಕ್ರಿಯೆಯಲ್ಲಿ ಬಂದು ಇದರ ವೈವಿಧ್ಯವು ಸಹೃದಯರಿಗೆ ಉಲ್ಲಾಸವನ್ನುಂಟು ಮಾಡುತ್ತವೆ. ಹಾಗೆ ಕತೆಯನ್ನು ಪ್ರಾರಂಭ ಮಾಡುವಾಗ ಮೊದಲ ಸನ್ನಿವೇಶದಲ್ಲಿ ಪ್ರಧಾನ ಗಾಯಕ, 'ಆಹಾ ಗುರುವೆ, ಶಿವನೇ' ಎಂದು ಹೇಳಿದರೆ ಹಿಮ್ಮೇಳ ಗಾಯಕರು 'ಭುಳಲೋಯಿ, ತಂದಾನ.. ತಾನ' ಎಂದು ಹೇಳುವರು. ಇದಕ್ಕಿಂತ ಮೊದಲು ಒಕ್ಕೊರಲಿನಿಂದ ತಂಬೂರಿ, ಡಿಕ್ಕಿಗಳಿಂದ ಒಂದೇ ಸಮನೆ ಬಾರಿಸಿ ಲಯಬದ್ಧವಾದ ಸಂಗೀತವನ್ನು ಉಂಟುಮಾಡುವರು. ನಂತರ.. 'ಆಹಾ..' ಎಂದು ಸೊಲ್ಲೆತ್ತುವರು. ಹಿಮ್ಮೇಳ ಗಾಯಕರು 'ತಂದನ್ನ... ತಾನ..' ಎಂಬ ಸೊಲ್ಲನ್ನು ಸೇರಿಸಿ ಕತೆಯ ಮೊದಲ ಚರಣವನ್ನು ಮುಗಿಸುತ್ತಾರೆ. ಇವರು ಕತೆಯನ್ನು ಹಾಡುವಾಗ ಇವರ ವಾದ್ಯಗಳಾದ ತಂಬೂರಿ, ಡಕ್ಕಿಗಳು, ಗಗ್ಗರಿಗಳ ನಾದ, ಸ್ವರಾಂದೋಲನ ಹಾಗೂ ಅವರ ಹಾವಭಾವಗಳು ಕೇಳುಗರನ್ನು ತನ್ಮಯಗೊಳಿಸುತ್ತವೆ. ಶಬ್ದ ಮತ್ತು ಲಯ ಭಾರವಾಗದೆ ಭಾಷೆಯು ಕೇಳುಗರೊಡನೆ ನೇರ ಸಂಪರ್ಕ ಸಾಧಿಸಲು ಸಿದ್ಧವಾಗಿರುತ್ತದೆ. ಹಿಮ್ಮೇಳ ಗಾಯಕರು ಉಚ್ಚರಿಸುವ ಉತ್ತರಾರ್ಧ ಪದಗಳ ಕ್ರಿಯೆ ಕೇಳುಗರಲ್ಲಿ ಗಾಢವಾದ ಪರಿಣಾಮವನ್ನು ಉಂಟುಮಾಡುತ್ತದೆ. ಹೀಗಾಗಿ ಇದು ತನ್ನದೇ ಆದ ವೈಶಿಷ್ಟ್ಯವನ್ನು ಗರ್ಭೀಕರಿಸಿಕೊಂಡಿದೆ.

ಇವರ ಕತೆಗಳಲ್ಲಿ ಪ್ರಾದೇಶಿಕ ಭಾಷೆಯನ್ನು ಅಳವಡಿಸಿಕೊಂಡಿದ್ದಾರೆ. ಇಲ್ಲಿ ಭಾಷೆ ಹಾಗೂ ಸಂಸ್ಕೃತಿಗೂ ನಿಕಟವಾದ ಸಂಪರ್ಕವಿದೆ. ಇದು ಕಥನದೊಂದಿಗೆ ಜನಸಮುದಾಯವನ್ನು, ಆ ಸಮುದಾಯದೊಡನೆ ಅವರ ಬದುಕಿನ ರೀತಿಗಳನ್ನು, ಅವರ ರೀತಿ-ನೀತಿಗಳಲ್ಲಿ ಸಾಂಸ್ಕೃತಿಕ ಪದರುಗಳನ್ನು ಕಾಣಬಹುದು. ಇವರ ಕತೆಗಳಲ್ಲಿ ಹೃದಯಸ್ಪರ್ಶಿ ಪ್ರಸಂಗಗಳು ಕಥನದುದ್ದಕ್ಕೂ ಕಂಡುಬರುತ್ತದೆ. ಕಥನ ಸಂದರ್ಭದಲ್ಲಿ ಮಾತಿನ ಅರ್ಥವನ್ನು ಒತ್ತಿ ಹೇಳುವಾಗ ಅನುಕರಣ ವಾಚಕಗಳು ಭಾವಾಭಿವ್ಯಕ್ತಿಯನ್ನು ಸ್ಪಷ್ಟಗೊಳಿಸಲು ನುಡಿಗಟ್ಟುಗಳು, ಪ್ರಾದೇಶಿಕ-ರೂಪಕಗಳು ಮುಂತಾದವು ಹೇರಳವಾಗಿ ಬಳಕೆಯಾಗುತ್ತವೆ. ಇದರಿಂದ ಕಥನದ ಆಶಯ ಹೆಚ್ಚು ಜೀವಂತವಾಗಲು ಕಾರಣವಾಗುತ್ತದೆ.

ಈ ಗಾಯಕರು ತಾವು ಕಲಿತ ಹಾಡನ್ನು ಮಾತ್ರ ಹಾಡುತ್ತಾರೆ. ಇವರು ವೃತ್ತಿಗಾಯಕರಾಗಿದ್ದರಿಂದ ಸಂಪೂರ್ಣವಾಗಿ ಈ ಕಲೆಯನ್ನು ಅವಲಂಬಿಸಿ ಸುದೀರ್ಘವಾಗಿ ಹೇಳುವ ಕತೆಗಳನ್ನು ಅಭ್ಯಾಸ ಮಾಡಿ ಕೊಂಡಿರುತ್ತಾರೆ. ಈ ಸಮುದಾಯವು ಹಾಡುವ ಕತೆಗಳನ್ನು ಕೇಳಲು ಜನರು ತುಂಬ ಇಷ್ಟಪಡುತ್ತಾರೆ. ಜನರೇ ಆಹ್ವಾನಿಸಿ ಹಾಡಲು ಅವಕಾಶ ಕಲ್ಪಿಸಬಹುದು. ಇಲ್ಲವೆ ಗಾಯಕರೇ ಅವರ ಅಗತ್ಯಗನುಗುಣವಾಗಿ ಹಾಡುತ್ತಾ ಸಂಚಾರಶೀಲರಾಗಬಹುದು. ಕೆಲವು ಸಂದರ್ಭದಲ್ಲಿ ಹತ್ತಾರು ಜನ ಹೆಂಗಸರೋ ಅಥವಾ ಗಂಡಸರೋ ಇವರ ಕಥನಗಳನ್ನು ಇಷ್ಟಪಟ್ಟು ಹಾಡಿಸಿ ತಮ್ಮ ಮನೋಭಿಲಾಷೆಯನ್ನು ತೀರಿಸಿಕೊಳ್ಳುತ್ತಾರೆ. ಇವರು ಹಾಡುವ ಸಂದರ್ಭದಲ್ಲಿ ಕಲೆ ಅತ್ಯಂತ ಆಕರ್ಷಕವಾಗಿ ಕಂಡುಬರಲು ತುಂಬ ಎಚ್ಚರಿಕೆ ವಹಿಸುತ್ತಾರೆ. ಗದ್ಯ-ಪದ್ಯ ಮಿಶ್ರಿತವಾದ ಇವರ ಹಾಡು ಅತ್ಯಂತ ವೈವಿಧ್ಯಮಯವಾಗಿ ಕಂಡುಬರುತ್ತದೆ. ಅವರು ಬಳಸುವ ವಾದ್ಯ ವಿಶೇಷಗಳು, ಅವರ ನೃತ್ಯ, ಅಭಿನಯ, ಉಪಕತೆ, ಅಡ್ಡಕತೆ ಮುಂತಾದ ಹಲವು ಬಗೆಯ ವೈವಿಧ್ಯಗಳನ್ನು ಬಳಸಿ ರಂಜನೀಯವಾಗಿ ಹಾಡುತ್ತಾರೆ. ಇವರದು ವೃತ್ತಿಕಲೆಯಾಗಿದ್ದರಿಂದ ಇಂತಹ ವೈವಿಧ್ಯ ಸಾಮಾನ್ಯವಾಗಿ ಅನಿವಾರ್ಯವೇ ಎಂದು ಕಾಣುತ್ತದೆ.

ಈ ಕಲಾಕಾರರು ಜೀವನ ಸಾಗಿಸಲು ಊರಿಂದೂರಿಗೆ ಅಲೆದಾಡುತ್ತಾರೆ. ಒಂದು ದೊಡ್ಡ ಊರಿನಲ್ಲಿ ಡೇರೆ-ಗುಡಿಸಲುಗಳನ್ನು ಹಾಕಿಕೊಂಡು ತಮ್ಮ ಪರಿವಾರದ ಜೊತೆಗೆ ವಾಸಿಸುತ್ತಾರೆ. ಸ್ತ್ರೀಯರು ಕತೆಗಳನ್ನು ಹೇಳಲು ತಾವು ನೆಲೆಸಿರುವ ಹಳ್ಳಿಯ ಸುತ್ತಮುತ್ತಲಿನ ಊರುಗಳಿಗೆ ಹೋಗಿ ಭಿಕ್ಷೆ ಎತ್ತುತ್ತ ಕತೆಗಳನ್ನು ಹೇಳುವರು. ಇವರ ಕತೆಗಳನ್ನು ಇಷ್ಟಪಟ್ಟವರು ಅಂದು ರಾತ್ರಿಪೂರ್ತಿ ಕತೆಯನ್ನು ಹೇಳಿಸುವುದೂ ಇದೆ. ಮುಖ್ಯವಾಗಿ ಜನರ ಆಹ್ವಾನದ ಮೇರೆಗೆ ಯಾವುದೇ ರಂಗಸಜ್ಜಿಕೆ ಇಲ್ಲದೆ ಕತೆಯನ್ನು ರಾತ್ರಿಯಿಂದ ಬೆಳಗಿನವರೆಗೆ ಹಾಡುವರು. ಹಬ್ಬ, ಜಾತ್ರೆ, ಉತ್ಸವ ಸಂದರ್ಭದಲ್ಲಿ ಅಂದರೆ ಒಟ್ಟಾರೆ ಒಳ್ಳೆಯ, ಕೆಟ್ಟ ಸಂದರ್ಭಗಳಲ್ಲಿ ಕತೆಗಳನ್ನು ಹೇಳಲು ಆಹ್ವಾನಿಸಿದರೂ ಕತೆಗಳನ್ನು ಹೇಳುತ್ತಾರೆ. ಇಲ್ಲಿ ಕತೆಯನ್ನು ಪ್ರಧಾನವಾಗಿ ಹಾಡಿನ ಮೂಲಕ ನಿರೂಪಿಸಲಾಗುತ್ತದೆ. ಈ ಹಾಡು ಕತೆಯ ನಿರೂಪಣೆಯ ಒಂದು ಮಾಧ್ಯಮವಾಗಿ ಇಲ್ಲಿ ಕೆಲಸ ಮಾಡುತ್ತದೆ. ಕತೆಯು ಒಬ್ಬ ಸಾಂಸ್ಕೃತಿಕ ವೀರನ ಅಥವಾ ಧಾರ್ಮಿಕ

ನಾಯಕ ಅಥವಾ ಐತಿಹಾಸಿಕ ಮುಂತಾದ ನಾಯಕರ ಸುತ್ತ ಹೆಣೆದುಕೊಂಡು ಅತ್ಯಂತ ವಿಸ್ತಾರವಾಗಿ, ಅನೇಕ ಮಜಲುಗಳಲ್ಲಿ ಸಾಗುತ್ತದೆ. ಇದು ಒಂದು ಸಾಂಸ್ಕೃತಿಕ ನೆಲೆಗಟ್ಟಿನ ಹಿನ್ನೆಲೆಯಲ್ಲಿ ಹುಟ್ಟಿ ತನ್ನದೇ ಆದ ಧ್ಯೇಯ-ಧೋರಣೆಗಳನ್ನು ಹೊಂದಿರುತ್ತದೆ. ಹಾಗೆ ನಾಯಕನಿಗೆ ಹತ್ತಾರು ಪ್ರತಿನಾಯಕರುಗಳು ಕಾಣಿಸಿಕೊಂಡು ಸೋಲು-ಗೆಲುವುಗಳನ್ನು ಅನುಭವಿಸುತ್ತಾ ಹೋಗುವರು. ಪ್ರತಿನಾಯಕರು ನಾಯಕನಿಗೆ ಶರಣಾಗುವುದು, ಜೊತೆಗೆ ಅನುಯಾಯಿಗಳಾಗುವುದು ಅಥವಾ ಸರ್ವನಾಶವನ್ನು ಹೊಂದುವುದೂ ಇದೆ. ಜನರು ಇವರ ಹಾಡುಗಳನ್ನು ಕೇಳಿ ಸಂತೋಷಿಸಿ, ಅವರಿಗೆ ಸೂಕ್ತ ಉಡುಗೊರೆಗಳನ್ನೋ, ದವಸ-ಧಾನ್ಯಗಳನ್ನೋ, ಹಣವನ್ನೋ ಕೊಡುವರು.

ಈ ಕತೆಗಳನ್ನು ಹಾಡಿಸಿ ಕೇಳಿದಾಗ ಮಾತ್ರ ಚೆನ್ನಾಗಿ ಸೊಗಸಾಗಿ ಕಾಣುವುದು. ಆದರೆ ಇವರ ಹಾಡನ್ನು ಸಂಗ್ರಹಿಸಿ ಅಕ್ಷರ ರೂಪಕ್ಕಿಳಿಸಿ ಓದಿದಾಗ ಅದರ ಲಯ ಕಾಣುವುದಿಲ್ಲ. ಏಕೆಂದರೆ ಇವರ ಕಥನ ಕಾವ್ಯ ರಚನೆಯು ಕೆಲವು ಕಡೆ ತುಂಬ ಸಡಿಲ, ಶಿಥಿಲವಾಗಿ ಕಂಡುಬಂದು ಓದಿದಾಗ ಅದು ಗದ್ಯದಂತೆ ಕಂಡುಬರುವುದುಂಟು. ಇದು ಒರಟು ಭಾಷೆಯಲ್ಲಿ ರಚನೆಗೊಂಡಿರುತ್ತದೆ. ಆದ್ದರಿಂದ ಇವರ ಕತೆಗಳನ್ನು ಹಾಡಿಸಿ ಕೇಳಿದಾಗಿನ ಸೊಗಸು ಬೇರೆ. ಅಕ್ಷರರೂಪಕ್ಕೆ ಇಳಿಸಿದಾಗ ಆ ಸೊಗಸು ಇಲ್ಲ. ಒಂದು ಕತೆಯನ್ನು ಲಯದ ಜಾಡನ್ನು ಹಿಡಿದು ಪಲ್ಲವಿಯನ್ನು ಅಳವಡಿಸಿಕೊಂಡು ಆ ಮಟ್ಟಿನಲ್ಲಿ ಸಾಗಿದರೆ ಅದು ಹಾಡಿಸಿಕೊಳ್ಳುತ್ತದೆ. ಮುಖ್ಯವಾಗಿ ಪಲ್ಲವಿಗಳು ಈ ಕಥನದ ಅಥವಾ ಹಾಡಿನ ಸಂಗೀತವನ್ನು ನಿಯಂತ್ರಿಸಿಕೊಳ್ಳುತ್ತವೆ. 'ತಂದಾನ...ತಾನ... ತಂದನಾನ' ಎಂಬ ಲಯಬದ್ಧವಾದ ಪಲ್ಲವಿಯು ಇಡೀ ಕಥನಕ್ಕೆ ಸಂಗೀತದ ಶರೀರವನ್ನು ಮೂಡಿಸುತ್ತದೆ. ಹಾಗೆ ಹಿಮ್ಮೇಳದ ದಕ್ಕಿಗಳ ಸಂಗೀತಲಯವು ಸಂಗೀತದ ಗುಂಗು ಹಿಡಿಸಿ ತನ್ನದೇ ಆದ ರಸಲೋಕವನ್ನು ಸೃಷ್ಟಿ ಮಾಡುತ್ತದೆ. ಕತೆಗಾರರು ಕತೆಯನ್ನು ಸಂದರ್ಭಾನುಸಾರವಾಗಿ ಚಿಕ್ಕದಾಗಿ ಮಾಡುವ, ದೊಡ್ಡದಾಗಿ ಮಾಡುವ ಕಲೆಯನ್ನು ಕರಗತ ಮಾಡಿಕೊಂಡಿರುತ್ತಾರೆ. ಇವರು ಕತೆಯನ್ನು ಹಾಡಿದ ಪ್ರತಿ ಸಂದರ್ಭದಲ್ಲೂ ಇವುಗಳ ಭಾಷಾ ಸ್ವರೂಪ ಹಾಗೂ ರಚನಾವಿನ್ಯಾಸ ಭಿನ್ನವಾಗಿ ಕಂಡುಬರುತ್ತದೆ. ಒಂದೇ ಕತೆಯನ್ನು ಒಬ್ಬನೇ ಕತೆಗಾರನಿಂದ ಮತ್ತೆ ಮತ್ತೆ ಹಾಡಿಸಿದಾಗ ಅದು ಬದಲಾವಣೆ ಹೊಂದುವುದು ಸಹಜ. ಇವರ ಕತೆಗಳು ಮೌಖಿಕ ಕತೆಗಳಾಗಿದ್ದರಿಂದ ಹೊಸದು ಎನ್ನುವಷ್ಟರಮಟ್ಟಿಗೆ ಭಿನ್ನವಾಗಿ ಕಂಡುಬರುತ್ತದೆ. ಇವರ ಕಥನದಲ್ಲಿ ವಾದ್ಯ ಪರಿಕರಗಳು ಪ್ರಮುಖ ಪಾತ್ರ ವಹಿಸುತ್ತವೆ. ಸ್ತ್ರೀಯರ ಕಥಾ ಮೇಳಗಳು ಸಾಮಾನ್ಯವಾಗಿ ಸಾಧಾರಣ ಉಡುಪಿನಲ್ಲೇ ಹೆಚ್ಚಾಗಿ ಪ್ರದರ್ಶನ ನೀಡುತ್ತಾರೆ. ಇವರು ಹೆಚ್ಚಾಗಿ ಕುಳಿತೇ ಕತೆಗಳನ್ನು ಹೇಳುತ್ತಾರೆ. ಇವರ ಕತೆಗಳು ವಾಸ್ತವಿಕ ಬದುಕಿನ ಅನುಭವದ ನೆಲೆಗಟ್ಟಿನ ಮೇಲೆ ಹೃದಯಂಗಮವಾದ ಸನ್ನಿವೇಶಗಳ ಮೂಲಕ ಶ್ರೋತೃಗಳ ಅಂತರಂಗದಲ್ಲಿ ಕರುಣೆಯನ್ನು ತರುವಂತಹ ಪ್ರಧಾನವಾದ ಗುಣಗಳನ್ನು ಅಳವಡಿಸಿ ಕೊಂಡಿರುತ್ತಾರೆ. ಇವರ ಕಥಾನಾಯಕರು ಸಾಮಾನ್ಯ ಜನರಾಗಿ ಕಂಡುಬಂದು, ನಿಷ್ಕಪಟಿಗಳೂ,

ನಿರ್ದೋಷಿಗಳೂ, ನಿರಂಹಂಕಾರಿಗಳು ಆಗಿದ್ದು ತಮ್ಮ ಆದರ್ಶಗುಣಗಳಿಂದ ಕೇಳುಗರ ಮನಸೂರೆಗೊಳ್ಳುತ್ತಾರೆ. ಆ ಕತೆಯ ನಾಯಕ ಅಥವಾ ನಾಯಕಿಯರಿಗೆ ಒದಗುವ ನೋವುನಲಿವುಗಳು ತಮ್ಮ ಪಾಲಿಗೆ ಒದಗಿ ಬಂದಿವೆ ಎಂಬಂತೆ ಕೇಳುವರು ಪರಿಭಾವಿಸಿಕೊಳ್ಳುತ್ತಾರೆ.

**ಬುರ್ರಕತೆಯ ಪೂರ್ವಸ್ಥಿತಿ ಮತ್ತು ಹಿನ್ನೆಲೆ**

ಮಾನವನ ಜೀವನದ ಅಭ್ಯುದಯಕ್ಕಾಗಿ ಕಲೆಗಳು ಹುಟ್ಟಿಕೊಂಡಿವೆ. ಅವುಗಳನ್ನೇ ಇಂದು ಕೆಲವರು ಜೀವನಕ್ಕಾಗಿ, ವೃತ್ತಿಕಲೆಯಾಗಿ ರಕ್ಷಿಸಿಕೊಂಡಿದ್ದಾರೆ. ಇಂತಹ ಕಲೆಗಳಲ್ಲಿ ಬುರ್ರಕಥಾ ಕಲೆಯು ಒಂದು. "ಬುರ್ರಕತೆ ಪ್ರಸ್ತುತ ರೂಪವನ್ನು ಪಡೆದಿದ್ದು ೧೮೪೦ರಲ್ಲಿ. ಪ್ರಾರಂಭದಲ್ಲಿ ಮೌಖಿಕ ಪ್ರಚಾರದಲ್ಲಿ ತಲೆತಲಾಂತರವಾಗಿ ಸಂಗ್ರಹಿಸಿದ ಕತೆಗಳು ವೀರ ಕತೆಗಳು. ಇದರ ರೂಪಾಂತರವೇ ಜಂಗಂ ಕತೆಗಳು"(ರಾಜು ವೈ.ಪಿ., ೧೯೯೨: ೬). ಬುಡಿಗೆ ಜಂಗಾಲು ಸಮುದಾಯದವರು ವಂಶಪಾರಂಪರ್ಯವಾಗಿ ಹೇಳುವ ಬುರ್ರಕತೆಗಳೇ ಜಂಗಾಲು ಅಥವಾ ಜಂಗಂ ಕತೆಗಳಾಗಿವೆ. ಬುರ್ರಕತೆ ಎಂಬ ಪರಿಕಲ್ಪನೆ ಮೂಡಿರುವುದಕ್ಕಿಂತ ಮೊದಲೇ ಈ ಕತೆಗಳು ಪ್ರಚಲಿತದಲ್ಲಿದ್ದವು. ಈ ಕಥನವನ್ನು ಕೆಲಸವಿಲ್ಲದ ವೇಳೆಯಲ್ಲಿ, ದೇವರ ಉತ್ಸವದಲ್ಲಿ ಈ ಕಥಾ ಪ್ರದರ್ಶನ ಜರುಗುತ್ತಿದ್ದವು. ಈ ಬುಡಿಗೆ ಜಂಗಾಲು ಮನೆಮನೆಗೆ ತಿರುಗಿ ಭಿಕ್ಷೆಯನ್ನು ಎತ್ತುತ್ತ, ಭಿಕ್ಷೆ ನೀಡುವ ಮನೆಯ ಮುಂದೆ ಜಂಗಂ ಕತೆಗಳನ್ನು ಹಾಡುತ್ತೇವೆಂದು ತಮಗೇ ತಾವೇ ಪ್ರಚಾರ ಮಾಡಿಕೊಳ್ಳುತ್ತಿದ್ದರು. ನಂತರ ರಾತ್ರಿ ಹೊತ್ತಿನಲ್ಲಿ ಒಂದು ಮನೆಯ ಹತ್ತಿರ ಕಥನ ಮಾಡಲು ಪ್ರಾರಂಭಿಸಿದಾಗ ಜನರು ಸೇರುತ್ತಿದ್ದರು. ಇವರ ಕತೆಗಳನ್ನು ಕೇಳಿ ಜನರು ಸಂತೋಷದಿಂದ ದವಸ-ಧಾನ್ಯ, ಹಳೆಬಟ್ಟೆ ಮೊದಲಾದವುಗಳನ್ನು ದಾನ ರೂಪದಲ್ಲಿ ಕೊಡುತ್ತಿದ್ದರು. ಈ ಕತೆಗಳಿಗೆ ಅಂದು ಜನರಿಂದ ಒಳ್ಳೆಯ ಪ್ರೋತ್ಸಾಹ ಲಭಿಸುತ್ತಿತ್ತು: ಆದರೆ ಇಂದು ಆಧುನಿಕ ಯುಗದಲ್ಲಿ ಕತೆಗಳಿಗೆ ಜನರಿಂದ ಹಿಂದಿನಂತೆ ಪ್ರೋತ್ಸಾಹ ಸಿಗುತ್ತಿಲ್ಲ. ಪೂರ್ವದಲ್ಲಿ ಈ ಕಥನಗಾರರು ತಮ್ಮನ್ನು ತಾವು ತೆಲುಗು ಜಂಗಂ ಮೂಲದವರೆಂದು ಹೇಳಿಕೊಳ್ಳುತ್ತಿದ್ದರು. ಇವರು ಒಂದು ಕಡೆ ನೆಲೆ ನಿಲ್ಲದೆ ಸುತ್ತಾಡುತ್ತಿರುವುದರಿಂದ ಇವರಿಗೆ ಜಂಗಾಲೇರು ಎಂದು ಕರೆಯುತ್ತಲೂ ಇದ್ದರು.

ಬುರ್ರಕತೆಗಾರರು ಯಾವುದೇ ಕೆಲಸವಿಲ್ಲದ ವೇಳೆಯಲ್ಲಿ ದೇವರ ಉತ್ಸವದಲ್ಲಿ ಈ ಕತೆಯ ಪ್ರದರ್ಶನ ನಡೆಸುತ್ತಾರೆ. ಈ ಜಂಗಾಲರು, ಮಧ್ಯಾಹ್ನದ ಹೊತ್ತಿನಲ್ಲಿ ಮನೆ ಮನೆಗೆ ತಿರುಗಿ ಭಿಕ್ಷೆ ಎತ್ತುತ್ತ, ಭಿಕ್ಷೆ ನೀಡುವ ಮನೆಯ ಮುಂದೆ ಜಂಗಂ ಕತೆಗಳನ್ನು ಹೇಳುತ್ತೇವೆಂದು ತಮಗೆ ತಾವೇ ಪ್ರಚಾರ ಮಾಡಿಕೊಳ್ಳುತ್ತಿದ್ದರು. ನಂತರ ಅದೇ ಊರಿನಲ್ಲಿ ಜನರ ಆಹ್ವಾನದ ಮೇರೆಗೆ ಇಡೀ ರಾತ್ರಿಯಿಂದ ಬೆಳಗಿನವರೆಗೆ ಕತೆಯನ್ನು ಹಾಡಿ ಜನರಿಂದ ಹೊಗಳಿಸಿಕೊಳ್ಳುತ್ತಿದ್ದರು. ಮರುದಿನ ಮನೆಮನೆಗೆ ತಿರುಗಿದರೆ ಎರಡು ಮೂಟೆ ಅಕ್ಕಿ, ತರಕಾರಿ, ಹಳೆ ಬಟ್ಟೆಗಳು ತಪ್ಪದೆ ಅವರಿಗೆ ಲಭಿಸುತ್ತಿತ್ತು. ಹೆಚ್ಚಾಗಿ ಮೂವರು ಸ್ತ್ರೀಯರೇ ಈ ಕತೆಯನ್ನು ಪ್ರದರ್ಶಿಸಿದಾಗ ಕತೆಯನ್ನು ಹಾಡುವ ಸಂದರ್ಭದಲ್ಲಿ ಶ್ರೋತೃಗಳು ತಮಗೆ ತಿಳಿಯದಂತೆ ತನ್ಮಯದಿಂದ

ಆಲಿಸುತ್ತಿರುವಾಗ, ವಿಷಾದಭಟ್ಟ ಬಂದಾಗ ಅವರ ಕಣ್ಣಲ್ಲಿ ನೀರು ತನ್ನಷ್ಟಕ್ಕೇ ತಾನೇ ಹೊರಹೋಗುತ್ತಿದ್ದವು. ಸ್ತ್ರೀಯರು ಅವರ ಕಂಠದಿಂದ ಅತ್ಯದ್ಭುತವಾಗಿ ಹಾಡನ್ನು ಹೇಳುತ್ತಿದ್ದರೆ ಶ್ರೋತೃಗಳು ಆನಂದ ಪರವಶರಾಗುತ್ತಾರೆ. ವಿದ್ಯುದ್ದೀಪಗಳಿಲ್ಲದ ಆ ದಿನಗಳಲ್ಲಿ ಎಣ್ಣೆ ದೀಪಗಳಿಂದ, ಪಂಜುಗಳಿಂದ ನಂತರ ಹಲವು ವರ್ಷಗಳ ನಂತರ ಪೆಟ್ರೋಮ್ಯಾಕ್ಸ್ ಇವುಗಳ ಬೆಳಕಿನಲ್ಲಿ ರಾತ್ರಿ ವೇಳೆಯಲ್ಲಿ ಪ್ರದರ್ಶನ ಮಾಡುತ್ತಿದ್ದೇವೆಂದು ಬುರ್ರಕತೆಗಾರರು ಹೇಳುತ್ತಾರೆ.

"೧೯೪೧ರಿಂದ ಇಲ್ಲಿಯವರೆಗೆ ಸಮಾಜದ ಅಭಿವೃದ್ಧಿಯನ್ನು ಆಶಿಸುವ, ಸಮಾಜಕ್ಕೆ ಪ್ರಭಾವವನ್ನು ಬೀರುವ, ಸಾಮಾಜಿಕ ಜ್ಞಾನವನ್ನು ಉಂಟುಮಾಡುವ ಬುರ್ರಕತೆಗೆ ಮೂಲರೂಪವೇ ಈ ಜಂಗಂ ಕತೆಗಳು. ಈ ಕತೆಗಳನ್ನು ಜಂಗಾಲರು ಹೇಳುವವರಾಗಿದ್ದರಿಂದ ಇವರಿಗೆ ಜಂಗಂ ಕತೆಗಳೆಂದು ಹೆಸರು ಬಂದಿದೆ. ಸಿರಿಕಿ, ಜಂಗಾಲು, ಬುರಿಗೆ ಜಂಗಾಳು, ಸಜ್ಜೆ ಜಂಗಾಳು, ಸೆಟ್ಟಿ ಫಣೆಜಲು, ಈತಮುಕ್ಕು ಜಂಗಾಲು ಇವರೆಲ್ಲ ಒಂದೇ. ಇವರು ವಂಶಪಾರಂಪರ್ಯವಾಗಿ ಈ ಜಂಗಂ ಕತೆಗಳನ್ನು ಹೇಳುತ್ತಿದ್ದಾರೆ. ಜಂಗಾಲು ಅಡ್ಡಪಟ್ಟೆ ಅಂದರೆ ವಿಭೂತಿಯನ್ನು ಧರಿಸುವುದರಿಂದ ಇವರು ಶೈವರೆಂದು ಇದರಿಂದ ತಿಳಿಯುತ್ತದೆ. ಶೈವ, ವೈಷ್ಣವ ಸಂಘರ್ಷ ಕಾಲದಲ್ಲಿ ಈ ಕತೆಗಳು ತುಂಬಾ ಪ್ರಚಾರದಲ್ಲಿ ಇದ್ದಿದ್ದುದು ತಿಳಿದು ಬರುತ್ತದೆ. ಶೈವರು ತಮ್ಮ ಮತಪ್ರಚಾರಕ್ಕೆ ಜಂಗಂ ಕತೆಗಳನ್ನು ಉಪಯೋಗಿಸಿಕೊಂಡರು. ಅಂದರೆ ಶೈವ ಮತ ಪ್ರಾಬಲ್ಯ ಸಂದರ್ಭ ಕ್ರಿ.ಶ. ೧೧೫೦ರಲ್ಲಿ ಈ ಕತೆಗಳನ್ನು ಜಂಗಾಲರು ಹಾಡುತ್ತಿದ್ದರು. ಶೈವರು ಜಂಗಾಲರನ್ನು ಸೃಷ್ಟಿಸಿದರೆ, ವೈಷ್ಣವರು ದಾಸರನ್ನು ಸೃಷ್ಟಿಸಿದರು"(ರಾಜು ವೈ.ಪಿ., ೧೯೯೨: ೩೮). ಈ ಜಂಗಾಲರು ನಂತರ ಶೈವ ಕತೆಗಳಲ್ಲದೆ ಶೈವೇತರ ಕತೆಗಳಾದ ದೇಶಿಂಗರಾಜು, ವಿರಾಟಪರ್ವಂ, ಭಲ್ಲಾಣ, ಸಿರಿಯಾಳ, ದೇವಯಾನಿ, ವಾಮನವಿಜಯಂ ಮೊದಲಾದ ಕಥನಗಳನ್ನು ಹಾಡಿ ಪ್ರಚಾರ ಮಾಡಿದ್ದಾರೆ.

"ಆಧುನಿಕ ಸಂದರ್ಭದಲ್ಲೂ ಈ ಕತೆಗಳಿಗೆ ಬೇರೆ ಬೇರೆ ಆಯಾಮಗಳನ್ನು ಕಲ್ಪಿಸಿ ಬುರ್ರಕತೆಗಳಿಗೆ ಆಧುನಿಕ ಸ್ವರೂಪವನ್ನು ಆಂಧ್ರಪ್ರದೇಶದಲ್ಲಿ ಕಲ್ಪಿಸಿದ್ದಾರೆ. ಆದರೆ ಕನ್ನಡ ಬುರ್ರಕತೆಗಳಿಗೆ ಸಂಬಂಧಿಸಿದಂತೆ ಇಲ್ಲಿ ಯಾವುದೇ ಆಧುನಿಕ ಸ್ವರೂಪ ಕೊಟ್ಟಿಲ್ಲ. ಇನ್ನೂ ಸಂಪ್ರದಾಯಬದ್ಧ ಹಾಡುಗಳನ್ನು ಮಾತ್ರ ಹಾಡುತ್ತಾರೆ. ಮುಖ್ಯವಾಗಿ ಈ ಬುರ್ರಕಥಾ ಕಲೆಯು ಒಂದು ಮೂರ್ತರೂಪ ಪಡೆದುಕೊಂಡಿದ್ದು ಹನ್ನೆರಡನೆಯ ಶತಮಾನದಲ್ಲಿ ಎಂದು ವಿದ್ವಾಂಸರು ಊಹಿಸುತ್ತಾರೆ. ಹಾಗೆ ತೆಲುಗು ಕವಿ ಶ್ರೀನಾಥನ ಕಾಲಕ್ಕಿಂತ ಮೊದಲೇ ಈ ಕತೆಗಳು ಪ್ರಚಲಿತವೆಂದು ಹೇಳುತ್ತಾರೆ. ಹಾಗೆ ಯಕ್ಷಗಾನ ಹಾಗೂ ಬೀದಿ ನಾಟಕವು ಬುರ್ರಕತೆಗೆ ಮೂಲವೆಂದು ಹೇಳುವರು"(ರಾಜು ವೈ.ಪಿ., ೧೯೯೨: ೩೮). ಈ ಎಲ್ಲಾ ವಿಚಾರಗಳನ್ನು ಗಮನಿಸಿದಾಗ ಬುರ್ರಕತೆಯು ತುಂಬ ಪ್ರಾಚೀನವಾದುದೆಂದು ತಿಳಿದುಬರುತ್ತದೆ.

**ಬುರ್ರಕತೆಯ ಪ್ರದರ್ಶನ ಹಾಗೂ ಸಂದರ್ಭ**

ಈ ಕತೆಗಳು ಸಮಾಜಕ್ಕೆ ಒಳ್ಳೆಯ ಸಂದೇಶವನ್ನು ತಲುಪಿಸುತ್ತವೆ. ಇದು ಸಮಾಜಕ್ಕೆ ತುಂಬ

ಪ್ರಯೋಜನಕಾರಿಯಾಗಿದ್ದು ಸಾಮಾಜಿಕ ಅರಿವನ್ನು ಮೂಡಿಸಿ ಜನರನ್ನು ಚೈತನ್ಯವಂತರಾಗಿ ಮಾಡುವುದರಲ್ಲಿ ಈ ಕಲೆಯು ಅನನ್ಯವಾದುದು. ಇದನ್ನು ಕೇಳುವ ಶ್ರೋತೃಗಳಲ್ಲಿ ವಿಭಿನ್ನ ಮನೋಭಾವನೆ ಹಾಗೂ ವಿವಿಧ ಅಭಿರುಚಿಗಳನ್ನು ಹೊಂದಿದಂತಹವರು ಇರುತ್ತಾರೆ. ಅದರಲ್ಲಿ ಒಬ್ಬರಿಗೆ ಸಾಹಿತ್ಯ ಸಂಗೀತ ರೂಪದಲ್ಲಿ ಕೇಳಿ ಸಂತೋಷವಾದರೆ ಮತ್ತೊಬ್ಬರಿಗೆ ವಚನ ರೂಪದಲ್ಲಿ ಅಥವಾ ಕಾವ್ಯ ರೂಪದಲ್ಲಿ ಆಸ್ವಾದನೆ ಯೋಗ್ಯವಾಗುತ್ತದೆ. ಮತ್ತು ಕೆಲವರು ಹಾಸ್ಯ ಧೋರಣೆಯಲ್ಲೋ ವ್ಯಂಗ್ಯ ರೂಪದಲ್ಲೋ ಅದರ ಸಾಹಿತ್ಯವನ್ನು ಆಸ್ವಾದಿಸಲು ಅತ್ಯಂತ ಆಸಕ್ತಿ ವಹಿಸುವರು. ಹೀಗೆ ಅನೇಕ ವಿಧವಾದ ಅಭಿರುಚಿಗಳನ್ನು ಹೊಂದಿದ ಶ್ರೋತೃಗಳನ್ನು ಈ ಕತೆಗಳು ಆಕರ್ಷಿಸುತ್ತವೆ.

ಈ ಕಲೆಯನ್ನು ಇವರು ಪ್ರದರ್ಶನದ ಪ್ರಾರಂಭದಲ್ಲಿ ತಂಬೂರ, ಡಕ್ಕಿಗಳನ್ನು ಮೊದಲು ಬಾರಿಸುತ್ತಾರೆ. ಹಿಮ್ಮೇಳದವರು ಮೊದಲು ಆದಿತಾಳ ಆರಂಭಿಸಿ ತಾಳವನ್ನು ಹೆಚ್ಚಿಸುತ್ತಾರೆ. ಒಬ್ಬರಿಗಿಂತ ಒಬ್ಬರು ಮಿಂಚುತ್ತಾ ಉತ್ಸಾಹದಿಂದ ಡಕ್ಕಿಗಳ ನಾದವನ್ನು ಹೆಚ್ಚಿಸುತ್ತಾ, ಕಡಿಮೆ ಮಾಡುತ್ತಾ ಶ್ರೋತೃಗಳ ಮನವನ್ನು ತಮ್ಮ ಕಡೆಗೆ ತಿರುಗಿಸಿಕೊಳ್ಳಲು ಅವರ ಮೊದಲ ಪ್ರದರ್ಶನವನ್ನು ಒದಗಿಸುತ್ತಾರೆ. ನಂತರ ಎರಡನೇ ಹಂತದಲ್ಲಿ ಆಲಾಪನ ಇರುವುದು. ಮುಖ್ಯ ಕತೆಗಾರ ಮುಂದಕ್ಕೆ ಬಂದು 'ಆ.... ಆ' ಎಂದು ಮೊದಲಿಗೆ 'ಆಲಾಪನ' ಮಾಡುವನು. ಯಾವುದೋ ಒಂದು ರಾಗವನ್ನು -ಇಲ್ಲಿ ವಿವಿಧ ರಾಗಗಳ ಮಿಶ್ರಣವನ್ನು ಅನುಸರಿಸುತ್ತ 'ಸ... ಸ...' ಎಂದು ಆಲಾಪಿಸುವರು. ಇದನ್ನು ಹಿಮ್ಮೇಳ ಅನುಸರಿಸುತ್ತದೆ. ಇದಕ್ಕೆ ಮುಖ್ಯ ಕಾರಣ ಕತೆಯನ್ನು ಹಾಡಲು ಕಂಠವನ್ನು ಶ್ರುತಿ ಮಾಡುತ್ತಾರೆ. ಒಟ್ಟಾರೆ ಕಲಾಕಾರರ ಪದ್ಧತಿಯನ್ನು ಅನುಸರಿಸುವರು. ಇದನ್ನು ಕಂಡು ಶ್ರೋತೃಗಳು, ಪಂಡಿತರು, ಮೊದಲಾದವರು ತಮ್ಮ ತಲೆದೂಗುವುದರಿಂದ ಕಲಾಕಾರರು ಇನ್ನಷ್ಟು ಉತ್ಸಾಹದಿಂದ ಹಾಡುತ್ತಾರೆ. ಮೂರನೇ ಹಂತದಲ್ಲಿ ಸಭೆಗೆ ಸಂಬಂಧಿಸಿದ ಸಂದರ್ಭ ಬರುವುದು. ಆಗ 'ತ... ಝುರಿ... ತತರ.... ತಂಗಿಟ....ತಂಗಿಟ...ತ' ಎಂದು ಆಲಾಪನ ಮಾಡಿ ಕತೆಯನ್ನು ಮುಕ್ತಾಯ ಮಾಡುತ್ತಾರೆ. ತದನಂತರ ಸಭೆಯನ್ನುದ್ದೇಶಿಸಿ ಆಲಾಪನ ಮಾಡುತ್ತಾರೆ. ಹಾಗೆ ಹಿಮ್ಮೇಳದವರು ಸಭೆ ಎಂದರೆ ಏನೆಂಬುದನ್ನು ಸಂಭಾಷಣ ಪೂರ್ವಚಲ್ಲಿ ಶ್ರೋತೃಗಳಿಗೆ ತಿಳಿಸುತ್ತಾರೆ. ನಂತರ ಅಂದಿನ ಸಭೆಯ ಹಿರಿಯರಿಗೆ, ಶ್ರೋತೃಗಳಿಗೆ ಪ್ರಶಂಸಾಪೂರ್ವವಾಗಿ ಅಭಿನಂದಿಸುತ್ತಾರೆ.

ಕತೆಯನ್ನು ಪ್ರಾರಂಭ ಮಾಡುವ ಮೊದಲು ಆ ಜಾಗದಲ್ಲಿ ಪೂಜೆ ಮಾಡಿ, ತೆಂಗಿನಕಾಯಿ ಒಡೆದು, ಅವರು ಸ್ಥಳೀಯ ಎಲ್ಲಾ ದೇವರುಗಳನ್ನು ನೆನೆಯುತ್ತಾರೆ. ಆದಿಶಕ್ತಿ ದೇವತೆಗಳನ್ನು ಹೆಚ್ಚಾಗಿ ನೆನೆಯುತ್ತಾರೆ. ಪೂಜೆಯ ಸಂದರ್ಭದಲ್ಲಿ ತೆಂಗಿನಕಾಯಿ ಜೊತೆಗೆ ಎಲೆ ಅಡಿಕೆಯನ್ನು ಪೂಜೆಗೆ ಸಲ್ಲಿಸುತ್ತಾರೆ. ಇವರು ಯಾವುದೇ ಒಂದು ಹಳ್ಳಿಯಲ್ಲಿ ಕತೆಯನ್ನು ಹೇಳಲು ಆಹ್ವಾನ ಬಂದರೆ ಅವರಿಂದ ಎಲೆ ಅಡಿಕೆಯನ್ನು ಸಂಭಾವನೆಯಾಗಿ ತೆಗೆದುಕೊಳ್ಳುವರು. ಕತೆಯ ಮುಕ್ತಾಯದಲ್ಲಿ ಮಂಗಳಾರತಿ ಮಾಡಿ ಕತೆಯನ್ನು ಮುಗಿಸುತ್ತಾರೆ. ಇವರು ಕತೆಯನ್ನು ಪ್ರಾರಂಭ ಮಾಡುವ ಮೊದಲು ಲಘು ಆಹಾರ ಮಾತ್ರ ತೆಗೆದುಕೊಳ್ಳುತ್ತಾರೆ.

ಒಂದು ಕತೆಯನ್ನು ಪ್ರದರ್ಶಿಸಬೇಕಾದರೆ ಸಂದರ್ಭಾನುಸಾರವಾಗಿ ಅಲ್ಲಿಯ ಜನರ ಅಭಿರುಚಿಗನುಸಾರವಾಗಿ ಕತೆಯನ್ನು ಆಯ್ಕೆ ಮಾಡಿಕೊಳ್ಳುತ್ತಾರೆ.

ಆಧುನಿಕ ಯುಗದ ಅಗತ್ಯವನ್ನು ಅನುಸರಿಸಿ ಬದಲಾವಣೆ ಮಾಡಿಕೊಂಡಿರುವುದು ಬುರ್ರಕತೆಯ ಪ್ರದರ್ಶನದ ಹೊಸ ಬೆಳವಣಿಗೆಯಾಗಿದೆ. ಇತ್ತೀಚೆಗೆ ಆಂಧ್ರದಲ್ಲಿ ಆಧುನಿಕ ವಿಚಾರಗಳ ಪ್ರಚಾರಕ್ಕೆ ಈ ಕಲೆಯನ್ನು ಮಾಧ್ಯಮವಾಗಿ ಮಾಡಿಕೊಳ್ಳಲಾಗುತ್ತದೆ. ಇದರಿಂದ ಜನರ ಮನಸ್ಸನ್ನು ತಮ್ಮ ಕಡೆಗೆ ಸೆಳೆಯಲು ರಾಜಕೀಯ ಪಕ್ಷಗಳು ತಮ್ಮ ಪಕ್ಷದ ಪ್ರಣಾಳಿಕೆಯನ್ನು ಜನಗಳಲ್ಲಿ ಪ್ರಚಾರ ಮಾಡಲು ಈ ಮಾಧ್ಯಮವನ್ನು ಬಳಸುತ್ತಿರುವುದನ್ನು ಕಾಣಬಹುದು. ಆದರೆ ವೃತ್ತಿಗಾಯಕರಾದ ಜನಪದ ಸಂಪ್ರದಾಯ ಬುರ್ರಕತೆಗಾರರು ಸಾಂಪ್ರದಾಯಿಕ ಹಾಡುಗಳನ್ನೇ ತಮ್ಮ ಉಪಜೀವನಕ್ಕಾಗಿ ಬಳಸುತ್ತಿದ್ದಾರೆ. ಆಧುನಿಕ ಬುರ್ರಕತೆ ಹಾಗೂ ಸಂಪ್ರದಾಯ ಬುರ್ರಕತೆಗಳ ಎರಡರ ಮಾಧ್ಯಮ ಒಂದೇ. ಆದರೆ ಅವರು ಹಾಡುವ ಕಥಾವಸ್ತುಗಳು ಮಾತ್ರ ಬೇರೆ ಬೇರೆ. ಆಧುನಿಕ ಬುರ್ರಕತೆಗಳಲ್ಲಿ ವಾಮವಾದಿಗಳ ಹಾಗೂ ನಕ್ಸಲೀಯರ ಪ್ರಾಬಲ್ಯವಿರುವ ಆಂಧ್ರಪ್ರದೇಶದಲ್ಲಿ ಮಾರ್ಕ್ಸ್‌ವಾದಿ ತತ್ವಗಳನ್ನು ಜಮೀನ್ದಾರರ ವಿರುದ್ಧ ದಂಗೆಯೇಳುವ ಆಕ್ರೋಶ ಭಾವನೆ ಆಶಯಗಳನ್ನು ಈ ಕಲಾಮಾಧ್ಯಮದಲ್ಲಿ ಪ್ರಚಾರಕ್ಕೆ ತರುತ್ತಿದ್ದಾರೆ. ಸರ್ಕಾರದ ವಿರುದ್ಧ ವಿರೋಧ ಪಕ್ಷಗಳು ಚುನಾವಣೆ ಸಮಯದಲ್ಲಿ ಜನರ ಭಾವನೆಯನ್ನು ಕೆರಳಿಸುವಂತೆಯೂ ಈ ಮಾಧ್ಯಮವನ್ನು ಬಳಸಿಕೊಳ್ಳುತ್ತಿವೆ.

ಆದರೆ ಸಾಂಪ್ರದಾಯಿಕ ಬುರ್ರಕತೆಗಾರರು ಆಧುನಿಕ ಬುರ್ರಕತೆಗಳಂತೆ ಆಸಕ್ತಿ ಹಾಗೂ ಹವ್ಯಾಸಕ್ಕಾಗಿ ಈ ಕಲೆ ಪ್ರದರ್ಶಿಸುವುದಿಲ್ಲ. ಭಿಕ್ಷೆ ಬೇಡಲು ಹೋದಾಗ ಮೂರು ಜನರು ಒಟ್ಟೊಟ್ಟಿಗೆ ಹೋಗದೆ, ಒಬ್ಬೊಬ್ಬರು ಒಂದೊಂದು ಮನೆಗೆ ಅಥವಾ ಊರಿಗೆ ಹೋಗಿ ತಮ್ಮಲ್ಲಿದ್ದ ಒಬ್ಬರು ಗುಮ್ಮಟಿ, ಇನ್ನೊಬ್ಬರು ತಂಬೂರಿ ಹೀಗೆ ಬೇರೆ ವಾದ್ಯ ಪರಿಕರಗಳನ್ನು ಬಳಸಿ ಒಂದಿಷ್ಟು ಕತೆಯ ಹಾಡನ್ನು ಹೇಳಿ ಮುಂದಿನ ಮನೆಗೆ ಈ ಬುರ್ರಕತೆಗಾರರು ಹೋಗುತ್ತಾರೆ. ಆಗ ಇವರ ಕತೆಗಳನ್ನು ಕೇಳಬೇಕೆಂಬ ಬಯಕೆ ಜನರಲ್ಲಿ ಉಂಟಾದಾಗ ಅವರ ಆಹ್ವಾನದ ಮೇಲೆ ರಾತ್ರಿ ಸಮಯದಲ್ಲಿ ಕತೆಯನ್ನು ಹೇಳಲು ಮೂರು ಜನ ಕಲಾವಿದರು ಕೂಡುತ್ತಾರೆ. ಸಮ್ಮಿಶ್ರ ಕಲೆಯಾದ ಬುರ್ರಕತೆಯು ಸಾಮೂಹಿಕ ಶ್ರಮದಿಂದ ಶೋಭಿಸುತ್ತದೆ. ಇದರಲ್ಲಿ ಮೂರು ಜನ ಕಲಾವಿದರ ಪಾತ್ರ ಅನನ್ಯವಾದುದು. ಆದರೆ ಪ್ರಧಾನ ನಿರೂಪಕ ಸೂತ್ರದಾರನಂತೆ ಕಾರ್ಯ ನಿರ್ವಹಿಸಬೇಕಾಗುತ್ತದೆ. ಹೀಗಾಗಿ ಬುರ್ರಕತೆಯು ಒಂದು ಜೀವಂತ ಕಲೆಯಾಗಿದ್ದು ಇಂದಿಗೂ ಸಹ ಅದರಲ್ಲಿ ಮಾನವ ಸಂವೇದನೆಯ ಸೃಷ್ಟಿಕ್ರಿಯೆಯು ನಿರಂತರವಾಗಿ ನಡೆಯುತ್ತಿದೆ.

### ಬುರ್ರಕತೆಯ ರಚನೆಕಾರರು

ಆಂಧ್ರಪ್ರದೇಶದಲ್ಲಿ ಪ್ರಚಲಿತವಿರುವ ಈ ಜನಪದ ಕಲೆ ಬುರ್ರಕತೆ ಎಂದು ಪ್ರಸಿದ್ಧಿ ಪಡೆದಿದೆ. ಈ ಕಲೆಗೆ ತುಂಬ ಮಹತ್ವವಿದೆ. "೧೯೪೨ರ ಸ್ವಾತಂತ್ರ್ಯ ಸಂಗ್ರಾಮದ ಚಳುವಳಿಯ ಸಂದರ್ಭದಲ್ಲಿ ದೇಶದ

ಜನರನ್ನು ಉತ್ತೇಜಿಸುವುದಕ್ಕಾಗಿ ಅಂದು ಈ ಜನಪ್ರಿಯ ಬುರ್ರಕಥಾ ಕಲೆಯನ್ನು ಪ್ರಚಾರಕ್ಕಾಗಿ ಬಳಸಿಕೊಂಡಿದ್ದರು. ಈ ಕತೆಗಳ ಜನಪ್ರಿಯತೆಯನ್ನು ಕಂಡು ಅಂದಿನ ಬ್ರಿಟಿಷ್ ಆಡಳಿತ ಈ ಕತೆಗಳ ಮೇಲೆ ಅಂದು ಸುಗ್ರೀವಾಜ್ಞೆಯನ್ನು ಹೊರಡಿಸಿತ್ತು. ಈ ಕತೆಗಳು ಜನರ ಮೇಲೆ ತುಂಬ ಪ್ರಭಾವ ಬೀರಿ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಧುಮುಕಲು ಪ್ರಚೋದಿಸಿದವು. ಆದಕ್ಕಾಗಿಯೇ ಬ್ರಿಟಿಷರು "ಡ್ರಮೆಟಿಕ್ ಪರ್‌ಫಾರ್ಮೆನ್ಸ್ ಆಕ್ಟ್" ಜಾರಿಗೆ ತಂದು, ಈ ಕತೆಗಳ ಮೇಲೆ ನಿರ್ಬಂಧ ಹೇರಲಾಗಿತ್ತು"(ರಾಜ ವೈ.ಪಿ., ೧೯೯೨: ೪೬). ಶೈವ, ವೈಷ್ಣವ ಹಾಗು ಕ್ರಿಶ್ಚಿಯನ್ ಧರ್ಮದ ಪ್ರಚಾರಕ್ಕಾಗಿ ಸಹ ಈ ಕತೆಗಳನ್ನು ಬಳಸಿಕೊಂಡಿರುವುದಕ್ಕೆ ಇತಿಹಾಸದಲ್ಲಿ ಉಲ್ಲೇಖಗಳಿವೆ.

ಆದರೆ ಈ ಕತೆಗಳ ಮೂಲವನ್ನು ಬುಡ್ಗಜಂಗಾಲು ಎನ್ನುವ ಅಲೆಮಾರಿ ಸಮುದಾಯದವರು ರಚಿಸಿದ್ದಾರೆ. ಭಿಕ್ಷೆ ಬೇಡಲು ಈ ಸಮುದಾಯವು ಸ್ತ್ರೀಯರು ಈ ಕತೆಗಳನ್ನು ಕಲಿತರು. ತಮ್ಮ ವೃತ್ತಿ ಜೀವನಕ್ಕಾಗಿ ಈ ಕತೆಗಳನ್ನು ರಚಿಸಿದರು. ಇವು ಮೌಖಿಕವಾದವು. ಒಬ್ಬರ ಬಾಯಿಂದ ಒಬ್ಬರು ಕಲಿತ ಕತೆಗಳಾದ್ದರಿಂದ ವಾಸ್ತವಿಕವಾಗಿ ಇದರ ರಚನೆಕಾರರಿಗೆ ಪ್ರಾಧಾನ್ಯ ಇಲ್ಲ. ಇದು ಜಾನಪದ ಕಲಾರೂಪ. ಆ ಲಕ್ಷಣವನ್ನು ಅನುಸರಿಸಿ ನೋಡಿದರೆ ಇವೆಲ್ಲ ಅನಾಮಧೇಯ ಕವಿಗಳ ರಚನೆಗಳು. ಜಾನಪದರು ತಮ್ಮ ವೃತ್ತಿಗಾಗಿ ರೂಪಿಸಿದ ಒಂದು ಕಲೆಯಾಗಿದೆ. ಈ ಕಲಾಕಾರರ ಪ್ರತಿಭೆಯಿಂದ ಮುಂದೆ ಇದು ಅತ್ಯಂತ ಪ್ರಸಿದ್ಧ ಕಲೆಯಾಗಿ ರೂಪುಗೊಂಡಿದೆ. ಆದಿಮ ಯುಗದಲ್ಲಿ ಸ್ತ್ರೀಯೇ ಕೃಷಿ, ಕುಟುಂಬ ಮುಂತಾದ ರಂಗದಲ್ಲಿ ಮೂಲವಾಗಿದ್ದಳು. ಆಗ ಸ್ತ್ರೀಪ್ರಧಾನವಾದ ಕುಟುಂಬಗಳಿದ್ದವು. ಕ್ರಮೇಣ ಆ ಸ್ಥಾನವನ್ನು ಪುರುಷರು ಅಲಂಕರಿಸಿಕೊಂಡಂತೆ, ಇಲ್ಲಿಯೂ ಸಹ ಕ್ರಮೇಣ ಪುರುಷರು ಈ ಕತೆಗಳನ್ನು ಹಾಡಲು ಪ್ರಾರಂಭಿಸಿದರು. ಇಂದು ಆಂಧ್ರದಲ್ಲಿ ಆಧುನಿಕ ಬುರ್ರಕತೆಗಳನ್ನು ಪುರುಷರೇ ಪ್ರಧಾನವಾಗಿ ಹಾಡುವುದು ಕಂಡುಬರುತ್ತದೆ. ಈಗಲೂ ಸಹ ಸಾಂಪ್ರದಾಯಿಕ ಬುಡ್ಗಜಂಗಮರಲ್ಲಿ ಮುಖ್ಯವಾಗಿ ಸ್ತ್ರೀಯರು ಭಿಕ್ಷೆ ಎತ್ತಲು ಒಬ್ಬರು ಇಬ್ಬರು ಜೊತೆಯಾಗಿ ಮನೆ ಮನೆ ತಿರುಗಿ ದವಸ, ಧಾನ್ಯ, ಸಂಗ್ರಹಿಸುತ್ತಾರೆ. ಹತ್ತು-ಹನ್ನೆರಡು ವರ್ಷದ ಚಿಕ್ಕ ಹುಡುಗಿಯರು ಸಹ ಭಿಕ್ಷೆ ಎತ್ತಲು ಈ ಕತೆಗಳನ್ನು ಹಾಡುತ್ತಾರೆ. ಈ ಸಂದರ್ಭದಲ್ಲಿ ಕತೆಯ ಒಂದೆರಡು ನುಡಿಗಳನ್ನು ಮಾತ್ರ ಹಾಡುತ್ತಾರೆ. ಇದನ್ನು ಕ್ಷೇತ್ರಕಾರ್ಯ ಅಧ್ಯಯನ ಸಂದರ್ಭದಲ್ಲಿ ಕರ್ನಾಟಕಾಂಧ್ರದ ಗಡಿನಾಡು ಹಳ್ಳಿಗಳಲ್ಲಿ ಯಾದಗಿರಿ ಜಿಲ್ಲೆಯ ಗುರುಮಠಕಲ್, ಚಂಡ್ರಿಕಿ, ಮೆದಕ್, ಸೈದಾಪುರ, ಚಪೆಟ್ಲಾ, ಗಾಜರಕೋಟ್, ಕಾಕಲವಾರ, ಪುಟ್‌ಪಾಕ್ ಮುಂತಾದ ಹಳ್ಳಿಗಳಲ್ಲಿ ಪ್ರತಿನಿತ್ಯ ಭಿಕ್ಷೆ ಬೇಡುವುದು ಕಂಡುಬರುತ್ತದೆ. ಈ ಜನಾಂಗದ ಸ್ತ್ರೀಯರನ್ನು ಸಂದರ್ಶಿಸಿ ಮಾಹಿತಿಯನ್ನು ಪಡೆದಾಗ ಪುರುಷರಲ್ಲ. ಈ ಕತೆಗಳಿಗೆ ಸ್ತ್ರೀಯರೇ ಮೂಲ ಎಂದು ಹೇಳುತ್ತಾರೆ. ಈಗಲೂ ಸಹ ತಮ್ಮ ಮೂಲವೃತ್ತಿಯನ್ನು ಬಿಡದೆ ಹಾಗೆ ಉಳಿಸಿಕೊಂಡು ಬಂದಿದ್ದಾರೆ.

ಸಂಪ್ರದಾಯಸ್ಥ ಬುಡ್ಗಜಂಗಾಲು ಹಾಡುವ ಕತೆಗಳೆಂದರೆ ಶರವಂದರಾಜುಕತೆ, ಕಾಂಭೋಜರಾಜಕತೆ, ನಲ್ಲನೀಲರಾಜಕತೆ, ಸೂರ್ಯಚಂದ್ರರಾಜುಕತೆ, ಆರ್ಯವಳಕತೆ, ಕುಮಾರರಾಮಕತೆ, ಬಾಲನಾಗಮ್ಮಕತೆ, ಚಕ್ರವರ್ತಿರಾಜುಕತೆ, ಬಾಲಗಿರಿರಾಜಕತೆ, ಬಿಟ್ಟಿರಾಜುಕತೆ, ಯಾನಗುಂದಿ ಮಾಣಿಕೇಶ್ವರಿಕತೆ, ಲಕ್ಷ್ಮಿದೇವಿಕತೆ, ಭೂಲಕ್ಷ್ಮಿಕತೆ, ಸವರಮ್ಮಕತೆ, ಯಲ್ಲಮ್ಮಕತೆ, ಹರಿಶ್ಚಂದ್ರಕತೆ, ಬಸ್ಮಾಸುರಕತೆ, ಕಂಸಾಸುರಕತೆ, ಜಟಾಸುರಕತೆ, ಪೀರಬ್ರಹ್ಮಂಗಾರಿಕತೆ, ಪಾಂಡವರ ಚರಿತ್ರಕತೆ, ಪೀರಸಿಂಧೂರ ಲಕ್ಷ್ಮಣಕತೆ, ಅಲ್ಲರಾಣಿಕತೆ, ಸ್ವಾಸಿ ಚಿನ್ನಮ್ಮಕತೆ, ಜರಾಸಂದನ ಕತೆ, ಸದಾಶಿವರೆಡ್ಡಿಕತೆ, ಈಡಿಗೊಳ್ಳ ಸತ್ಯಮ್ಮಕತೆ, ಅಡ್ಡಬಿಡ್ಡ ಶಂಕರಮ್ಮಕತೆ, ಎರುಕಲ ನಾಂಚಾರಿಕತೆ, ಏಕಚಕ್ರವರ್ತಿಕತೆ, ಕನಕಾವತಾರಕತೆ, ಕಲಿಯುಗ ಪೊನ್ನಕತೆ, ಕಾಟಮರಾಜಕತೆ, ಅಪರೂಪ ರಾಜುಲಕತೆ, ಗಾಂಧಾರಿಕತೆ, ಕಾಮಮ್ಮಕತೆ, ಕಾಂತಮತಿಕತೆ, ಕಮಲ ಸಂಗಯ್ಯಕತೆ, ಅಮರ ಮೇಘಮಹಾರಾಜಕತೆ, ಕುಸುಮ ಕೋಮಲಕತೆ, ಗಾರ್ಲಾಮಸಿಕೋಟೆಕತೆ, ಗೌಂಡ್ಲ ಅಂಜಯ್ಯಕತೆ, ತಾಬೇಲು ಮುತ್ರುಡುಕತೆ, ದೇಶಿಂಗರಾಜಕತೆ, ನಳಚಕ್ರವರ್ತಿಕತೆ, ನಾಗಿರೆಡ್ಡಿಕತೆ, ಬೀರಪ್ಪಕತೆ, ಬುಡ್ಡಾವೆಂಗಾಳರೆಡ್ಡಿಕತೆ, ಬೊಬ್ಬಿಲಿಯುದ್ಧಕತೆ, ಬಬ್ರುವಾಹನಕತೆ, ಮೈನಾವತಿಕತೆ, ಬಲ್ಲೂರಿ ಕೊಂಡಯ್ಯಕತೆ, ಬಂಗಾರಿ ತಿಮ್ಮರಾಜುಕತೆ, ನೀಲರೂಪ ನೀಲಸೇನಕತೆ, ನಲ್ಲತಂಗ ಮಹಾರಾಜಕತೆ, ತಲವಂಚನಿ ವೀರುಡುಕತೆ, ಬಲಿಚಕ್ರವರ್ತಿಕತೆ, ಮುದ್ದುರಾಮನ್ನಕತೆ ಇನ್ನು ಹಲವಾರು ಕತೆಗಳನ್ನು ಈ ಸಮುದಾಯವು ಹಾಡುತ್ತದೆ. ಇದು ಮೌಖಿಕ ಕಥನಗಳಾಗಿದ್ದರಿಂದ ಇದರ ರಚನೆಯ ಹೊಣೆ ಇಡೀ ಸಮುದಾಯಕ್ಕೆ ಸಲ್ಲುತ್ತದೆ.

ಪ್ರಸ್ತುತ ತೆಲುಗು ಬುರ್ರಕತೆಗಳನ್ನು ಪರಿಶೀಲಿಸಿದಾಗ ಅವುಗಳಲ್ಲಿ ಎರಡು ವಿಧಗಳಿವೆ. ಮೊದಲನೆಯದು ಜನಪದ ಸಂಪ್ರದಾಯ ಬುರ್ರಕತೆ ಹಾಗೂ ಆಧುನಿಕ ಬುರ್ರಕತೆಗಳು. ಜಾನಪದ ಬುರ್ರಕತೆಗಳನ್ನು ಬುಡಿಗೆ ಜಂಗಾಲು ಸಾಂಪ್ರದಾಯಿಕವಾಗಿ ಹಾಡಿದ್ದಾರೆ. ಆಧುನಿಕ ಬುರ್ರಕತೆಗಳು ಅಕ್ಷರಸ್ಥ ಕವಿಗಳ ಸ್ವಂತ ರಚನೆಗಳು. ಬುಡಿಗೆ ಜಂಗಾಲು ಕತೆಗಳು ಮೌಖಿಕ ಕತೆಗಳು ಪಾರಂಪರ್ಯವಾಗಿ ಬಂದಂತವು. ಆಧುನಿಕ ಬುರ್ರಕತೆಗಾರರು ಹವ್ಯಾಸಕ್ಕಾಗಿ ರಚಿಸಿರುತ್ತಾರೆ. ಇವು ಚಿಕ್ಕ ಕತೆಗಳಾಗಿರುತ್ತವೆ. ಇಂತಹ ಕತೆಗಳನ್ನು ರಚಿಸಿದ ಆಧುನಿಕ ಕತೆಗಾರರಲ್ಲಿ ಪ್ರಮುಖವಾಗಿ ಎದ್ದು ಕಾಣುವವರೆಂದರೆ 'ಶೇಖನಾಜರ್.' ಇವರನ್ನು ಬುರ್ರಕಥಾ ಕವಿ ಎಂದು, ಬುರ್ರಕಥಾ ಪಿತಾಮಹ ಎಂದು ಕರೆಯುತ್ತಾರೆ. ಇನ್ನೂ ಅನೇಕ ಹವ್ಯಾಸಿ ಕತೆಗಾರರಿದ್ದು ಅವರಲ್ಲಿ ಪ್ರಮುಖರೆಂದರೆ "ಸುಂಕರ ಸತ್ಯನಾರಾಯಣ, ಕಾಕುಮನಿ ಸುಬ್ಬಾರಾವು, ಲಕ್ಷ್ಮೀಕಾಂತಮೋಹನ, ಅಡ್ಲೂರಿ ಅಯೋಧ್ಯರಾಮ ಕವಿ, ತಿರುನಗರಿ ರಾಮಾಂಜನೇಯುಲು, ಕೊರಪಾಟಿ ವೆಂಕಟರಾಜು ಮುಂತಾದವರು ಬುರ್ರಕತೆಗಳನ್ನು ರಚಿಸಿದ್ದಾರೆ. ವಾಸ್ತವಿಕವಾಗಿ ಇಂತಹ ಬುರ್ರಕತೆಗಾರರಿಗೆ ಪ್ರಾಧಾನ್ಯವಿಲ್ಲ"(ರಾಜು ವೈ.ಪಿ., ೧೯೯೨: ೫೮). ಮೌಖಿಕವಾಗಿ ಪರಂಪರೆಯಿಂದ ಬಂದಂತಹ ಕಲೆಯಾಗಿದ್ದರಿಂದ ಇದಕ್ಕೆ ಜಾನಪದ ಲಕ್ಷಣ ಹೊಂದಿದೆ. ಇಂತಹ ಪರಂಪರೆಯನ್ನು ಹೊಂದಿದ ಕತೆಗಳ ನಡುವೆ ಹವ್ಯಾಸಿ ಕಲಾವಿದರು ರಚಿಸಿದ ಕತೆಗಳಿಗೆಲ್ಲ ಮಹತ್ವವಿಲ್ಲ. ಹಾಗೆ ಜನಪದ ಬುರ್ರಕಥನಗಾರರು ಸಹ ಕವಿಗಳಲ್ಲ. ಅವರ ಕಥನ

ಕಾವ್ಯದ ಸತ್ವದಿಂದ ಹುಟ್ಟಿದ್ದಲ್ಲ. ಈ ಕತೆಗಳು ಬುರ್ರಾಕಥಾ ಸಮುದಾಯದ ವೃತ್ತಿಯಿಂದ ಹುಟ್ಟಿದ ಕಥನ ಕಲೆಯಾಗಿದೆ.

ಇಂದಿನ ಬುರ್ರಕತೆ ಮೂರ್ತರೂಪ ಪಡೆದದ್ದು ಮರಾಠ ರಾಜರ ಕಾಲದಲ್ಲೆಂದು ಕೆಲವರ ಅಭಿಪ್ರಾಯ. ವಿಜಯನಗರ ಸಾಮ್ರಾಜ್ಯದ ಕೊನೆಯ ಅರಸ ಅಳಿಯ ರಾಮರಾಯ. ಈತನ ತಾಳಿಕೋಟೆ ಯುದ್ಧವು 'ರಾಮರಾಯ ಬಖೈರ್' ಎನ್ನುವ ಮರಾಠ ಬುರ್ರಕತೆಯಲ್ಲಿ ಸಿಗುತ್ತದೆ. ಶಿವಾಜಿಯ ದಂಡಯಾತ್ರೆಯ ಕಾಲದಲ್ಲಿ ಮರಾಠ ಸೈನಿಕರಲ್ಲಿ ಉತ್ಸಾಹ ತುಂಬಲು ಈ ಕತೆಗಳನ್ನು ಸೈನಿಕ ಶಿಬಿರಗಳಲ್ಲಿ ಪ್ರಚುರ ಪಡಿಸುತ್ತಿದ್ದರೆಂಬ ಉಲ್ಲೇಖಗಳಿವೆ. ಹೀಗಾಗಿ ಈ ಬುರ್ರಕತೆಗಳು ಮರಾಠಿಯಿಂದ ತೆಲುಗಿಗೆ ಅಂದರೆ ಆಂಧ್ರಪ್ರದೇಶಕ್ಕೆ ಬಂದಿವೆಯೆಂದು ಅಧ್ಯಯನಕಾರರು ಅಭಿಪ್ರಾಯಪಡುತ್ತಾರೆ. "ಕ್ರಿ.ಶ. ೧೯೪೨ರಲ್ಲಿ ಗುಂಟೂರು ಜಿಲ್ಲೆ ಬಾಪಟ್ಲ ಪ್ರಾಂತದಲ್ಲಿ ಕಾಕುಮನಿ ಸುಬ್ಬರಾವು ಜಂಗಂ ಕತೆಯಾದ 'ಬೊಬ್ಬಿಲಿ ಕತೆ'ಯನ್ನು ರಚಿಸಿದ್ದಾರೆ. ತಂಗಿರಾಲ ವೆಂಕಟಸುಬ್ಬರಾವು ಪ್ರಕಾರ ಇದೇ ಪ್ರಥಮ ಕತೆಯೆಂದು ಅಭಿಪ್ರಾಯಪಟ್ಟಿದ್ದಾರೆ. ಈ ಕತೆಗಳನ್ನು ರಾಜಕೀಯ ರಾಜಕೀಯ ನಾಯಕರುಗಳ ಭಗವದ್ಗೀತ, ಇತಿಹಾಸ, ಚರಿತ್ರೆ, ಸಂಪ್ರದಾಯ ವೀರರ ಮುಂತಾದ ಪ್ರಚಾರ ಸಾಧನವಾಗಿ ಉಪಯೋಗಿಸಿದ್ದಾರೆ. ಹಾಗೆ ಕ್ರಿ.ಶ. ೧೯೫೪ರಲ್ಲಿ ಅಬ್ಬಶರ್ಮರವರು 'ಸ್ವತಂತ್ರ ಪೋರಾಟಂ' ಎಂದು ಬುರ್ರಕತೆ ರಚಿಸಿದ್ದಾರೆ. ಇಂತಹ ಬುರ್ರಕತೆಗಳ ರಚನೆಯಿಂದ ಪ್ರಜೆಗಳಲ್ಲಿ ರಾಷ್ಟ್ರೀಯ ಭಾವನೆ ಮೂಡಿತು. ನಂತರ ೧೯೪೬-೪೮ರ ಮಧ್ಯಕಾಲದಲ್ಲಿ ಭಾರತ ನಾಯಕರ ಜೀವನ ಚರಿತ್ರೆಗಳನ್ನು ಕುರಿತು ಹವ್ಯಾಸಿ ಬುರ್ರಕತೆಗಳು ಹೊರಬಂದವು. ಅದರಲ್ಲಿ 'ಕಾಂಗ್ರೆಸ್ ವಿಜಯಂ' ಪ್ರಮುಖವಾದುದು. 'ಭಗತ್ ಸಿಂಗ್' ಕತೆಯಲ್ಲಿ ಬ್ರಿಟಿಷ್ ಆಡಳಿತದಲ್ಲಿ ೧೯೧೯ರ 'ಜಲಿಯನ್ ವಾಲಾಬಾಗ್' ದುರಂತಗಳನ್ನು, ೧೯೦೫ರ ಬಂಗಾಳಿ ವಿಭಜನೆ, ಪಂಜಾಬ ರೈತರ ಹೋರಾಟ ವಿಜಯ, ಸ್ವಾತಂತ್ರ್ಯ ಹೋರಾಟಗಾರರ ಚರಿತ್ರೆಗಳನ್ನು ಕುರಿತು ಬುರ್ರಕತೆಗಳು ರಚನೆಗೊಂಡಿವೆ"(ರಾಜು ವೈ.ಪಿ. ೧೯೭೦, ಪು. ೭೩). ಈ ಎಲ್ಲಾ ಆಧುನಿಕ ಬುರ್ರಕತೆಗಳ ರಚನೆಗೆ ಬುಡ್ಗಜಂಗಾಲರ ಕಲೆಗಳೇ ಪ್ರೇರಣೆ. ಸಮಕಾಲೀನ ದಿನಗಳಲ್ಲೂ ಆಧುನಿಕ ಹವ್ಯಾಸಿಗಳು ಇಂತಹ ಕತೆಗಳನ್ನು ರಚಿಸಿ ಹಾಡುತ್ತಿದ್ದಾರೆ.

## ಬುರ್ರಕಥಾ ಮೇಳ ಹಾಗೂ ಕರಪಾಲ ಮೇಳ

ಬುರ್ರಕಥಾ ಮೇಳವು ಸರ್ವ ವಿಷಯಗಳನ್ನು ಯಥೇಚ್ಛವಾಗಿ ವ್ಯಕ್ತಮಾಡುವ ಪ್ರತಿಭೆ. ಇದು ವಿಶಾಲ ದೃಷ್ಟಿಕೋನವನ್ನು ಹೊಂದಿರುವುದು ಒಂದು ವಿಶೇಷ. ಇಲ್ಲಿ ಕರಪಾಲ ಮೇಳ ಮತ್ತು ಬುರ್ರಕಥಾ ಮೇಳವನ್ನು ಅವಲೋಕಿಸಿದಾಗ ಇವುಗಳಲ್ಲಿ ಸಾಮ್ಯ ಕಂಡುಬರುತ್ತದೆ. ಬುರ್ರಕಥಾ ಮೇಳದಲ್ಲಿ ಇದ್ದಂತೆ ಕರಪಾಲ ಮೇಳದಲ್ಲಿ ಒಬ್ಬ ಪ್ರಧಾನ ಗಾಯಕ ಇದ್ದು ಇಬ್ಬರು ಶಿಷ್ಯರಿರುತ್ತಾರೆ. ಇದೂ ಸಹ ವೃತ್ತಿ ಕಲೆಯೇ ಆಗಿದೆ. ಆದರೆ ಬುರ್ರಕಥಾ ಮೇಳವು ಕೇವಲ ಜನಪದ ವೃತ್ತಿ ಕಲೆಯಾಗಿದ್ದು ಆಧುನಿಕ ಹವ್ಯಾಸಿ ಕಲಾಕಾರರೂ ತೊಡಗಿಸಿಕೊಂಡಿರುವುದನ್ನು ಕಾಣಬಹುದು. ಬುರ್ರಕಥಾ ಮೇಳವು ಆಂಧ್ರಪ್ರದೇಶದಿಂದ

ಕರ್ನಾಟಕಕ್ಕೆ ವಲಸೆ ಬಂದಂತೆ, ಕರಪಾಲ ಮೇಳವು ಉತ್ತರ ಕರ್ನಾಟಕದಿಂದ ದಕ್ಷಿಣ ಕರ್ನಾಟಕಕ್ಕೆ ಬಂದು ಪ್ರಸಿದ್ಧಿಯನ್ನು ಪಡೆದಿದೆ. ಈ ಮೇಳದಲ್ಲಿ ಸಾಹಿತ್ಯ, ಸಂಗೀತ, ನೃತ್ಯ ಎಲ್ಲವೂ ಮುಖ್ಯ. ಈ ಕಲೆಯಲ್ಲಿ ಸಹ ಮೂರು ಜನರಿದ್ದರೆ ಸಾಕು, ಈ ಕಲೆಯನ್ನು ಪ್ರದರ್ಶಿಸಬಹುದು. ಪ್ರಧಾನ ಗಾಯಕರಿಗೆ ಸಹಕಲಾವಿದರೂ ಬುರ್ರಕಲಾಕಾರರಂತೆ ಸಹಕರಿಸುತ್ತಾರೆ.

ಕರಪಾಲ ಮೇಳದಲ್ಲಿ ಕಥೆ, ಕುಣಿತ, ನಾಟಕೀಯತೆ, ಕತೆಗಳ ಆಯ್ಕೆ, ವಾದ್ಯ ತಬಲ, ಮೃದಂಗ ವೇಷಭೂಷಣಗಳಲ್ಲಿ ಸ್ವಲ್ಪ ಬದಲಾವಣೆ ಕಾಣಿಸುತ್ತದೆ. "ಕರಪಾಲದಲ್ಲಿ ಸಹ ಕಲಾವಿದರ ವೇಷಭೂಷಣ ಸಾಮಾನ್ಯವಾಗಿದ್ದರೂ ಪ್ರಧಾನ ಗಾಯಕನ ವೇಷಭೂಷಣ ಭಿನ್ನವಾಗಿರುತ್ತದೆ. ತಲೆಗೆ ಕಿರೀಟಾಕೃತಿಯ ವರ್ಣರಂಜಿತ ಕುಲಾವಿ, ಅದರಿಂದ ಇಳಿಬಿದ್ದ ಮುತ್ತಿನ ತುರಾಯಿ, ಕಿವಿಯಲ್ಲಿ ಕರ್ಣಕುಂಡಲಗಳು, ಕುಲಾವಿಯನ್ನು ಬಳಸಿದ ರುದ್ರಾಕ್ಷಿಗಳ ಸರ, ಕೊರಳು ಕೈಗಳಲ್ಲಿ ರುದ್ರಾಕ್ಷಿ ಮಾಲೆ, ಕಾಲಿಗೆ ಗೆಜ್ಜೆ, ಕಾವಿಯ ನಿಲುವಂಗಿ, ನಡುವಿಗೆ ಕೆಂಪು ವಸ್ತ್ರದ ಗುರುವಿನ ವೇಷಭೂಷಣಗಳು, ಶಿಷ್ಯರಿಬ್ಬರು ಕಾವಿವಸ್ತ್ರದಿಂದ ತಲೆಗೆ ಪೇಟ ಸುತ್ತಿ, ನಿಲುವಂಗಿ, ಕಾಸೆ ಪಂಚೆ ಧರಿಸಿ, ಕಾಲಿಗೆ ಗೆಜ್ಜೆ ನಡುವಿಗೆ ಬಿಳಿವಸ್ತ್ರದ ನಡುಪಟ್ಟಿಗೆ ಕಟ್ಟಿ, ಹಣೆಗೆ ವಿಭೂತಿಯನ್ನು ಧರಿಸಿರುತ್ತಾರೆ. ಈ ಮೇಳಕ್ಕೂ ಸಹ ವಿಶೇಷ ರಂಗಸಜ್ಜಿಗೆ ಇರುವುದಿಲ್ಲ. ಮೂರು ಜನ ಕುಣಿಯುವಂತಹ ಎತ್ತರವಾದ ವೇದಿಕೆ ಇದ್ದರೆ ಸಾಕು, ಕೆಲವು ಕಡೆ ಹಸಿರು ಚಪ್ಪರವನ್ನು ಹಾಕುವರು"(ಗೋ.ರು.ಚ, ೧೯೯೭: ೨೮). ಬುರ್ರಕಥಾ ಮೇಳದಂತೆ ಈ ಮೇಳದಲ್ಲೂ ಪ್ರಧಾನ ಗಾಯಕನೇ ಪ್ರಮುಖ ಪಾತ್ರ ವಹಿಸುತ್ತಾನೆ. ಇಲ್ಲಿಯೂ ಸಹ ಪ್ರಧಾನ ಗಾಯಕನನ್ನು ನಿರೂಪಕ ಎಂದು ಕರೆಯುವರು. ಈತನಲ್ಲಿ ಪ್ರೇಕ್ಷಕರನ್ನು ಸೆರೆಹಿಡಿಯುವ ವಿಶಿಷ್ಟ ಕಲೆ ಇರುತ್ತದೆ. ವಾಕ್ಚಾತುರ್ಯ ನಿರೂಪಣಾವೈಖರಿಯಿಂದ ಪ್ರೇಕ್ಷಕರ ಮನಸ್ಸನ್ನು ನಿರೂಪಕ ಗೆಲ್ಲುತ್ತಾನೆ. ಕತೆಯ ನಿರೂಪಣೆ ಹಾಗೂ ಹಾಡುಗಾರಿಕೆ ಆಕರ್ಷಣೀಯ ವಾಗಿರುತ್ತದೆ. ನವರಸಗಳನ್ನು ತನ್ನ ಮೇಳದಲ್ಲಿ ತುಂಬಿ ಜನರನ್ನು ರಂಜಿಸುತ್ತಾರೆ. ಈ ಮೇಳದವರು ಶೈವ ಪಂಥಕ್ಕೆ ಸೇರಿದ್ದು ಕಾಲಜ್ಞಾನಕ್ಕೆ ಸಂಬಂಧಿಸಿದ ಹಾಡುಗಳನ್ನು ಹೆಚ್ಚಾಗಿ ಹಾಡುತ್ತಾರೆ.

"ಸುವ್ವಿ ಬಾ ಸಂಗಯ್ಯ
ಸುವ್ವಿ ಬಾ ಲಿಂಗಯ್ಯ
ಸುವ್ವಿ ಬಾ ಚನ್ನಬಸವಯ್ಯ ||ಸುವ್ವಿ||
ಸುವ್ವಿ ಬಾ ನೀ ಚನ್ನಬಸವಯ್ಯ ಬರುವಾಗ
ಹೋಯ್ಕಲಂ ಬೊಬ್ಬಿ ಜಗವೆಲ್ಲ ||ಸುವ್ವಿ||

ಎಂದು ಹಾಡುತ್ತಾರೆ. ಇವರು ಕಾಡುಸಿದ್ದಮ್ಮನ ಕತೆ, ಬಸವಕುಮಾರ ಲೋಹಿಕುಮಾರ, ನೀಲಕಂಠ, ರೂಪವತಿ ಮುಂತಾದ ಕಥೆಗಳನ್ನು ಕುತೂಹಲ ಕೆರಳುವಂತೆ ಹಾಡುತ್ತಾ ನಿರೂಪಿಸಿರುತ್ತಾರೆ"(ಗೋ.ರು.ಚ, ೧೯೯೭: ೨೯). ಹೀಗೆ ಬುರ್ರಕಥಾ ಮೇಳ ಕರಪಾಲ ಮೇಳಕ್ಕೂ ಸ್ವಲ್ಪ ವ್ಯತ್ಯಾಸವಿದ್ದರೂ ಹೆಚ್ಚಾಗಿ ಸಾಮ್ಯ

ಕಂಡುಬರುತ್ತದೆ. ಬುರ್ರಕಥಾ ಮೇಳದವರು ಸಹ ಶೈವ ಪಂಥವನ್ನು ಅನುಸರಿಸುತ್ತಾರೆ. ಇವರು ಮೊದ ಮೊದಲು ಶೈವ ಪಂಥಕ್ಕೆ ಸಂಬಂಧಿಸಿದಂತೆ ಕತೆಗಳನ್ನು ಹಾಡುತ್ತಿದ್ದರು. "ಕರಪಾಲದ ಕಥಾ ನಿರೂಪಣಾ ವೈಖರಿ ಹಾಗೂ ಧಾಟಿ ವಿಶಿಷ್ಟವಾದುದು. ಇದು ಒಂದು ರೀತಿ ವಿಶಿಷ್ಟ ಚಂಪೂ ಶೈಲಿಯ ಗದ್ಯ ಪದ್ಯವಷ್ಟೇ ಅಲ್ಲದೆ ಸಂಭಾಷಣೆ ಉದ್ದಕ್ಕೂ ಸ್ಥಾನ ಪಡೆದಿರುತ್ತದೆ. ಅವು ಮೂರನ್ನು ಒಟ್ಟಿಗೆ ನಿರ್ವಹಿಸುವ ನಿರೂಪಕನ ಜಾಣ್ಮೆ ಅತ್ಯಪೂರ್ವವಾದುದು. ಹೆಚ್ಚು ಗದ್ಯ ಹಾಗೂ ಸಂಭಾಷಣೆಯಲ್ಲಿಯೇ ಕತೆ ಇದ್ದು ಹಾಡುಗಳು ಮಧ್ಯೆ ಮಧ್ಯೆ ಬರುತ್ತವೆ. ಹಾಡುಗಳನ್ನು ಕೈಬಿಟ್ಟು ಕತೆಯನ್ನು ಯಾವುದೇ ಭಂಗವಿಲ್ಲದೆ ಪೂರ್ಣಗೊಳಿಸಬಹುದು. ಏಕೆಂದರೆ ಹಾಡಿನ ಅರ್ಥವನ್ನು ಗದ್ಯದಲ್ಲಿ ಮತ್ತೊಮ್ಮೆ ಹೇಳುತ್ತಾನೆ" (ಬೋರಲಿಂಗಯ್ಯ ಹಿ.ಚಿ., ೧೯೮೧: ೧೨೭). ಹೀಗೆ ಬುರ್ರಕಥನದ ಗದ್ಯ ಪದ್ಯ ಮಿಶ್ರಣ ಜನಪದ ಚಂಪೂವಿದ್ದಂತೆ ಕರಪಾಲದಲ್ಲಿ ಕಾಣಬಹುದು. ನಿರೂಪಣಾಶೈಲಿ ಮುಂತಾದ ವಿಷಯದಲ್ಲಿ ಈ ಎರಡು ಮೇಳದಲ್ಲಿ ಸಮಾನತೆ ಇದೆ. ಬುರ್ರಕಥನಗಳಿಗೆ ಜನರು ಮಾರುಹೋದಂತೆ ಈ ಕರಪಾಲ ಕತೆಗಳಿಗೆ ಮಾರುಹೋದ ಹಳ್ಳಿಜನರು ಇವರನ್ನು ಹಬ್ಬ, ಜಾತ್ರೆ, ಉತ್ಸವಗಳಿಗೆ ತಮ್ಮ ಊರುಗಳಿಗೆ ಬರಮಾಡಿಕೊಂಡು ಕತೆಯನ್ನು ಹಾಡಿಸುತ್ತಾರೆ. ಇವರೂ ಸಹ ಇಡೀ ರಾತ್ರಿ ಕತೆಯನ್ನು ಹಾಡುತ್ತಾರೆ. ಜನರು ಆಸಕ್ತಿಯಿಂದ ಕೇಳುತ್ತಾರೆ. ಬುರ್ರಕಥಾ ಮೇಳದವರಿಗೆ ದವಸಧಾನ್ಯ ಕೊಟ್ಟಂತೆ ಇವರಿಗೂ ಸಹ ಕತೆ ಹೇಳಿದ ಮರುದಿನದಲ್ಲಿ ದವಸಧಾನ್ಯ ರೂಪದಲ್ಲಿ ಸಂಭಾವನೆಯನ್ನು ಕೊಟ್ಟು ಕಳುಹಿಸುತ್ತಾರೆ. ಪ್ರೇಕ್ಷಕರಿಗೆ ಬೇಸರವಾಗದಿರಲೆಂದು ಬುರ್ರಕಥಾ ಮೇಳದಂತೆ ಈ ಮೇಳದಲ್ಲಿ ಮಧ್ಯ ಮಧ್ಯ ಹಾಸ್ಯದ ಪ್ರಸಂಗಗಳನ್ನು ಹೇಳಿ ಕತೆ ಮುಂದುವರಿಸುತ್ತಾರೆ. ಕರಪಾಲಮೇಳದಲ್ಲಿ ಒಂದು ವಿಶಿಷ್ಟ ಕಲೆಯನ್ನು ರೂಢಿಸಿಕೊಂಡಿದ್ದಾರೆ. ಅಲ್ಲಿ ಸೇರಿದ ಗುಂಪಿನಲ್ಲಿ ಯಾರಾದರೂ ನಿರ್ದಿಷ್ಟ ವ್ಯಕ್ತಿಯ ಹೆಸರನ್ನು ತಿಳಿದುಕೊಂಡ ಗುರು ದೂರದಲ್ಲಿ ನಿಂತಿರುವ ಶಿಷ್ಯರಿಗೆ ಆ ಹೆಸರನ್ನು ಬೆರಳಿನಲ್ಲಿ ಸಂಜ್ಞೆ ಮಾಡಿ ತಿಳಿಸುತ್ತಾನೆ. ಬುರ್ರಕಥಾ ಮೇಳದಲ್ಲಿ ಕತೆಯ ಮಧ್ಯದಲ್ಲಿ ಯಾರಾದರೂ ಹಣವನ್ನು ನೀಡಿದರೆ ಅವರನ್ನು ಕತೆಯ ಜೊತೆಗೆ ವರ್ಣಿಸುತ್ತಾರೆ. ಹೀಗೆ ಎರಡೂ ಮೇಳಗಳಲ್ಲಿ ವಾದ್ಯಗಳು, ಕಥಾನಿರೂಪಣಾ ವಿಧಾನ, ಹಲವಾರು ವಿಧದಲ್ಲಿ ಸಾಂಪ್ರದಾಯಿಕವಾಗಿ ಸಾಮ್ಯತೆಯನ್ನು ಕಾಣುತ್ತೇವೆ.

### ಬುರ್ರಕಥಾ ಮೇಳ ಮತ್ತು ಗೊಂದಲಿಗರ ಮೇಳ

ಬುರ್ರಕಥಾ ಮೇಳದಂತೆ ಗೊಂದಲಿಗರ ಮೇಳವೂ ವೃತ್ತಿಯನ್ನಾಧರಿಸಿಯೇ ಹುಟ್ಟಿದೆ. ಇವರು ನೀಡುವ ಪ್ರದರ್ಶನಕ್ಕೆ ಗೊಂದಲ ಹಾಕುವುದು, ಗೊಂದಲಿಗರ ಮೇಳ ಎಂಬ ಹೆಸರು ಬಂದಿದೆ. ಇದು ವಿಶೇಷವಾಗಿ ಉತ್ತರ ಕರ್ನಾಟಕದಲ್ಲಿ ಕಂಡುಬರುತ್ತದೆ. ಗೊಂದಲಿಗರು ಮೂಲತಃ ಮಹಾರಾಷ್ಟ್ರದ ಜನಸಮುದಾಯವಾಗಿದ್ದು ಶಿವಾಜಿಯ ಕಾಲದಲ್ಲಿ ಮುಸಲ್ಮಾನರು ಆಳುತ್ತಿದ್ದ ಬಿಜಾಪುರಕ್ಕೆ ಗೂಢಚರ್ಯೆ ಕಾರ್ಯಕ್ಕಾಗಿ ಬಂದು ಗೊಂದಲ ಹಾಕುವ ಕಲೆಯನ್ನು ಗೂಢಚರ್ಯಗೆ ಬಳಸಿಕೊಂಡರೆಂದು ಹೇಳುತ್ತಾರೆ. ನಂತರ ಕಾರಣಾಂತರಗಳಿಂದ

ಈ ಸಮುದಾಯ ಕರ್ನಾಟಕದಲ್ಲಿಯೇ ಉಳಿಯಬೇಕಾಯಿತು. ಇವರ ಕುಲದೇವತೆ 'ಅಂಬಾಭವಾನಿ.' ಅಂದರೆ ಶಕ್ತಿದೇವತೆಯನ್ನು ಪೂಜಿಸುತ್ತಾರೆ.

"ಬುರ್ರಾಕಥಾ ಮೇಳದಂತೆ ಈ ಮೇಳದಲ್ಲಿ ಸಹ ಮೂರು ಜನ ಕಲಾವಿದರು ಇರುತ್ತಾರೆ. ಇವರಲ್ಲಿ ನಾಯಕನು ತಾಳವನ್ನು ಉಳಿದಿಬ್ಬರು ಸಂಬಾಳ ಮತ್ತು ಶ್ರುತಿಯನ್ನು ಹಿಡಿದಿರುತ್ತಾರೆ. ಸಂಬಾಳವೆಂದರೆ ಮಣ್ಣು, ಮರ ಇಲ್ಲವೇ ಲೋಹದಿಂದ ತಯಾರಿಸಿದ ಅಗಲ ಬಾಯಿಯ ಪಾತ್ರೆಗಳಂತಹ ಎರಡು ಹೊಳವುಗಳಿಗೆ ಚರ್ಮ ಹೊಂದಿಸಿ ಮಾಡಿದ ವಾದ್ಯ. ಚರ್ಮವನ್ನು ಹೊದಿಸಿ ಎರಡೂ ವಾದ್ಯಗಳ ನಡುವೆ ಕಂಚಿನ ತಾಳವನ್ನು ಜೋಡಿಸಿರುವುದರಿಂದ ಎರಡೂ ಕೈಗಳಲ್ಲಿ ಬಾಗಿದ ಬಿದಿರಿನ ಕಡ್ಡಿಗಳಿಂದ ಬಾರಿಸಿದಾಗ ತಾಳವೂ ಧ್ವನಿಗೂಡಿಸಿ ಆಕರ್ಷಣೀಯವಾದ ನಾದ ಹೊರಚಿಮ್ಮುತ್ತದೆ. ಮತ್ತೊಂದು ವಾದ್ಯ ಶ್ರುತಿ, ಇದನ್ನು 'ತಿಂತಿಣಿ' ಎಂದೂ ಕರೆಯುತ್ತಾರೆ. ದಕ್ಷಿಣ ಕರ್ನಾಟಕ ಭಾಗದಲ್ಲಿ ಇದಕ್ಕೆ 'ಚೌಡಿಕೆ' ಎಂದು ಕರೆಯುತ್ತಾರೆ. ಸುಮಾರು ಒಂದು ಅಡಿ ಎತ್ತರದ ಹಾಗೂ ಒಂದು ಅಡಿ ವ್ಯಾಸವುಳ್ಳ ಮರದ ತುಂಡನ್ನು ಕೊಳವೆಯಾಕಾರದಲ್ಲಿ ತೋಡಿ ತಿರುಳನ್ನು ತೆಗೆದು ಅದರ ಒಂದು ಕಡೆಯ ಮುಖಕ್ಕೆ ಹದ ಮಾಡಿದ ಚರ್ಮವನ್ನು ಹೊದಿಸಿರುತ್ತಾರೆ. ಚರ್ಮದ ಮಧ್ಯ ಭಾಗದಲ್ಲಿ ಒಂದು ರಂಧ್ರ ತೆಗೆದು ಈ ರಂಧ್ರದ ಹೊರಭಾಗದಲ್ಲಿ ಲೋಹದ ಸಣ್ಣ ತಗಡಿನ ಚೂರನ್ನು ಸೇರಿಸಿರುತ್ತಾರೆ. ಮರದ ಕೊಳವೆಯ ಒಂದು ಮೈಗೆ ಸುಮಾರು ಮೂರು ಅಡಿ ಉದ್ದನೆಯ ಬಿದಿರುಕೋಲನ್ನು ಜೋಡಿಸಿ ಅದರ ತುದಿಗೆ ಒಂದು ಬಿರಡೆಯನ್ನು ಕೂಡಿಸಿರುತ್ತಾರೆ. ನಾದ ಮೂಡಿಸಬಲ್ಲ ತಂತಿಯೊಂದನ್ನು ಚರ್ಮ ಹೊದಿಸಿದ ಹೊರಮೈಗೆ ರಂಧ್ರದ ಮೂಲಕ ಹೊರಗೆಳೆದು ಚಿಕ್ಕಕಡ್ಡಿಗೆ ಕಟ್ಟಿ, ಅದರ ಇನ್ನೊಂದು ತುದಿಯನ್ನು ಬಿದಿರಿನ ಕೊನೆಯ ಬಿರಡೆಗೆ ಬಿಗಿಯಾಗಿ ಎಳೆದು ಸುತ್ತಿರುತ್ತಾರೆ. ಬಿರಡೆಯನ್ನು ತಿರುಗಿಸುವ ಮೂಲಕ ತಂತಿಯನ್ನು ಬಿಗಿ ಅಥವಾ ಸಡಿಲ ಮಾಡಿಕೊಂಡು ಬೇಕಾದ ಶ್ರುತಿಗೆ ಹೊಂದಿಸಿಕೊಳ್ಳಬಹುದು"(ಗೋ.ರು.ಚ, ೧೯೯೭: ೬೬). ಈ ಎಲ್ಲವನ್ನು ಗಮನಿಸಿದಾಗ ಬುರ್ರಕಥಾ ಮೇಳದ ಪರಿಕರಗಳಂತೆ ಇಲ್ಲಿಯೂ ಸಾಮ್ಯತೆಯನ್ನು ಕಾಣುತ್ತೇವೆ. ಇವರು ಸಹ ಜಾತ್ರೆ, ಉತ್ಸವ, ಸುಗ್ಗಿಯ ಸಂದರ್ಭದಲ್ಲಿ ತಮ್ಮ ಕಥಾ ಮೇಳವನ್ನು ಪ್ರದರ್ಶಿಸುತ್ತಾರೆ. ಇವರು 'ಗುಜರಾತ್, ಮಧ್ಯಪ್ರದೇಶ ಮಹಾರಾಷ್ಟ್ರ ಆಂಧ್ರಪ್ರದೇಶದಲ್ಲಿ ಕಂಡುಬರುತ್ತಾರೆ. ಇವರು ಪ್ರದರ್ಶನಕ್ಕೆ ಚಿಕ್ಕ ವೇದಿಕೆ ಬಳಸುತ್ತಾರೆ. ತಮ್ಮ ಕಥಾಮೇಳದ ಆರಂಭದಲ್ಲಿ ಅಂಭಾಭವಾನಿಯ ಕಲಶವನ್ನು ಸ್ಥಾಪಿಸಿ ಪೂಜೆ ಮಾಡಿ ಶ್ರುತಿ ನುಡಿಸುವುದರ ಮೂಲಕ ಪ್ರದರ್ಶನ ಆರಂಭ ಮಾಡುತ್ತಾರೆ. ಬುರ್ರಕಥಾ ಮೇಳದಂತೆ ಇವರು ಸಹ ವೃತ್ತಿ ಕಲಾವಿದರಾಗಿದ್ದರಿಂದ ತಮ್ಮಕುಟುಂಬವನ್ನು ಕಟ್ಟಿಕೊಂಡು ಹಳ್ಳಿ ಹಳ್ಳಿ ಸುತ್ತುತ್ತಾರೆ. ಬುರ್ರಕಥಾ ಮೇಳದಂತೆ ಇವರ ಕಥಾ ಮೇಳಕ್ಕೆ ವಿಶಿಷ್ಟ ಉಡುಪುಗಳನ್ನು ಧರಿಸುತ್ತಾರೆ. ತಲೆಗೆ ಕೆಂಪು ಅಥವಾ ಬಿಳಿ ರುಮಾಲು, ಪಂಚೆ, ನಿಲುವಂಗಿ, ಅದರ ಮೇಲೆ ಕೋಟು, ಕೊರಳಲ್ಲಿ ಸಣ್ಣ ಕವಡೆಗಳ ಸರ, ಕಾಲಿಗೆ ಗೆಜ್ಜೆ ಇವು ಅವರ ವೇಷಭೂಷಣಗಳು. ಇವರ ಕಥಾ

ನಿರೂಪಣೆ ತುಂಬಾ ಸೊಗಸಾಗಿರುತ್ತದೆ. ಅದರ ಕಾರ್ಯವೈಖರಿ ಈ ರೀತಿ ಇರುತ್ತದೆ. ಮುಖ್ಯ ನಿರೂಪಕ 'ಕುದರೀನ ವಿರ್‍ಯಾನ' ಎಂದು ರಾಗವಾಗಿ ಹಾಡಿದರೆ ಸಹ ಕಲಾವಿದರು 'ಹರ ನನ್ನ ಮಹದೇವ' ಎನ್ನುತ್ತಾರೆ. ಬುರ್ರಕಥಾ ಮೇಳದಲ್ಲಿ ಒಂದೊಂದು ಚರಣಕ್ಕೆ 'ತಂದಾನ ತಂದಾನ' ಎನ್ನುವಂತೆ ಇಲ್ಲಿ ಹರ ನನ್ನ ಮಹದೇವ ಎಂದು ಹೇಳುತ್ತಾರೆ. ಅದು ಈ ರೀತಿ ಉಂಟು:

"ಚಪ್ಪರಿಸಿ ಬಿಟ್ಯಾನ । ಹರ ನನ್ನ ಮಹದೇವ
ಒಂದು ಗಾವುದ ಮ್ಯಾಲ । ಹರ ನನ್ನ ಮಹದೇವ
ಒಂದೆಂಬ ಪಟ್ಟಣ । ಹರ ನನ್ನ ಮಹದೇವ
ಎರಡು ಗಾವುದ ಮ್ಯಾಲ । ಹರ ನನ್ನ ಮಹದೇವ
ಎರಡೆಂಬ ಪಟ್ಟಣ । ಹರ ನನ್ನ ಮಹದೇವ
ಕುದುರೀಯ ಹಾರೈತಿ । ಹರ ನನ್ನ ಮಹದೇವ
ಗಗನಕ್ಕೆ ಎಗರೈತಿ । ಹರ ನನ್ನ ಮಹದೇವ

ಹೀಗೆ ಕತೆಯನ್ನು ಸರಳವಾಗಿ ಭಾವಪೂರ್ಣವಾಗಿ ನಿರೂಪಿಸುತ್ತಾರೆ. ಇಂಪಾದ ಹಾಡು, ಗೆಜ್ಜೆಯ ಸದ್ದು, ವಾದ್ಯದ ಹಿಮ್ಮೇಳ ಇವು ಕೇಳುಗರನ್ನು ಸೆರೆ ಹಿಡಿಯುತ್ತದೆ"(ಗೋ.ರು.ಚ. ೧೯೯೭: ೭೭). ಇವರ ಕತೆಗಳಲ್ಲಿ ಐತಿಹಾಸಿಕ ಸಾಹಿತ್ಯದ ನಿಧಿಯೇ ಅಡಗಿರುತ್ತದೆ. ಇವರು ಕಥನ ಸಂದರ್ಭದಲ್ಲಿ ರಾಗಬದ್ಧವಾಗಿ ಹಾಡುತ್ತಾ ಮಧ್ಯೆ ಮಧ್ಯೆ ಸ್ವಾರಸ್ಯಕರವಾದ ವಿವರಣೆ ನೀಡುತ್ತಾ ಜನರನ್ನು ರಂಜಿಸುತ್ತಾರೆ. ಇಂಥ ವೈವಿಧ್ಯತೆಯನ್ನು ಬುರ್ರಕತೆಯ ನಿರೂಪಣೆಯಲ್ಲಿ ಕಾಣುತ್ತೇವೆ. ಹೀಗಾಗಿ ಈ ಎರಡರ ಮೇಳದಲ್ಲಿ ಅನನ್ಯತೆಯನ್ನು ಗುರುತಿಸಲಾಗಿದೆ. ಉಪಕತೆಯನ್ನು ಇಲ್ಲಿಯೂ ಸಹ ಸೇರಿಸಿಕೊಂಡು ಹಾಡುತ್ತಾರೆ. ಕೇಳುಗರಿಗೆ ಬೇಸರವಾಗದಿರಲೆಂದು ಬುರ್ರಕತೆಯ ಸಂಭಾಷಣೆಯಂತೆ ಈ ಮೇಳದವರು ಪ್ರೇಕ್ಷಕರ ಅಭಿರುಚಿಗೆ ಅನುಗುಣವಾಗಿ ಸುಮಾರು ಐವತ್ತು ಅರವತ್ತು ಕತೆಗಳನ್ನು ಹೆಸರಿಸಿ ಪ್ರೇಕ್ಷಕರಿಂದ ಕತೆಯನ್ನು ಆರಿಸಲು ಹೇಳುತ್ತಾರೆ. ಅವರು ಹೇಳುವ ಪ್ರಮುಖ ಕತೆಗಳು. ಎಲ್ಲಮ್ಮಕತೆ, ಸೋಮಶೇಖರಕತೆ, ಭೋಜರಾಜಕತೆ, ಗುಣಸಾಗರಿಕತೆ, ಜಯರಾಣಿಕತೆ, ಬಾಳಾವತಿಕತೆ, ಶಿವಶಂಕರಕತೆ, ಬಸವಕುಮಾರಕತೆ, ಲಕ್ಷಾಪತಿಕತೆ, ಪಾಂಡು ದತ್ತಾಜಿಕತೆ, ಶ್ರವಣಕುಮಾರಕತೆ, ರಾಜಾ ಹರಿಶ್ಚಂದ್ರಕತೆ, ಅರಣ್ಯಕುಮಾರಕತೆ, ಸತಿಅನುಸೂಯಕತೆ, ಸಿರಿಯಾಳಕತೆ, ಶಂಕಿನಿಕುಮಾರಕತೆ, ಚಂದ್ರ ಚೂಡಾಮಣಿಕತೆ ಮುಂತಾದವುಗಳು. ಈ ಮೇಳದಲ್ಲಿ ಇಡೀ ರಾತ್ರಿ ಕತೆಯನ್ನು ಹಾಡುತ್ತಾರೆ. ಜನಪದ ಕತೆಗಳನ್ನು ಹಾಡುವ ಈ ಸಮುದಾಯ ಇತ್ತೀಚೆಗೆ ಐತಿಹಾಸಿಕ ಕತೆಗಳನ್ನು ಸಹ ಹಾಡುತ್ತಾರೆ. ಕಿತ್ತೂರ ರಾಣಿ ಚೆನ್ನಮ್ಮಕತೆ, ಸಂಗೊಳ್ಳಿರಾಯಣ್ಣಕತೆ ಮುಂತಾದವು. ಇವರು ಕಥನವನ್ನು ಸೂರ್ಯೋದಯಕ್ಕೆ ಮೊದಲೇ ಮುಕ್ತಾಯ ಮಾಡುತ್ತಾರೆ. ದೇವಿಯ ಕಲಶಕ್ಕೆ ಕಾಯಿ ಒಡೆದು ಕರ್ಪೂರ ಬೆಳಗಿ ಮಂಗಳಾರತಿ ಮಾಡುತ್ತಾರೆ. ಕತೆ ಹೇಳಿಸಿದ ಯಜಮಾನನಿಂದ ವೀಳ್ಯ

ಮತ್ತು ಸಂಭಾವನೆಯನ್ನು ಪಡೆದು ದೇವಿಯು ಒಳ್ಳೆಯದು ಮಾಡಲೆಂದು ಪ್ರಾರ್ಥಿಸಿ ಕತೆಯನ್ನು ಮುಕ್ತಾಯ ಮಾಡುತ್ತಾರೆ.

## ಬುರ್ರಕತೆ ಮತ್ತು ಯಕ್ಷಗಾನ

ಆಂಧ್ರದ ಬುರ್ರಕತೆ ಕಲೆಯಂತೆ ಕರ್ನಾಟಕದಲ್ಲಿ ಯಕ್ಷಗಾನ ಕಲೆ ಮುಖ್ಯವಾಗಿ ಕಂಡುಬರುತ್ತದೆ. ಹಾಗೆ ಯಕ್ಷಗಾನವನ್ನು ಅವಲೋಕಿಸಿದಾಗ "ಗೊಂಬೆಯಾಟವೇ ಯಕ್ಷಗಾನ ಮುಂತಾದವುಗಳಿಗೆ ಮೂಲವೆಂಬ ಅಭಿಪ್ರಾಯವಿದೆ. ಧಾರ್ಮಿಕ ಹಿನ್ನೆಲೆಯ ಆರಾಧನೆಗಳನ್ನು ಮನರಂಜನೆಯ ಕಡೆಗೆ ಪರಿವರ್ತಿಸಿದಾಗ ರೂಪುಗೊಂಡ ಕಲಾಪ್ರಕಾರಗಳಲ್ಲಿ ಗೊಂಬೆಯಾಟ ಮುಖ್ಯವಾದುದೆಂದು ಒಂದು ಅಭಿಪ್ರಾಯ. ಗೊಂಬೆಯಾಟ ಜನಪ್ರಿಯತೆ, ವೈವಿಧ್ಯ ಜಗತ್ತಿನಲ್ಲೆಲ್ಲಾ ಹರಡಿಕೊಂಡಿದೆ. ಪ್ರಾಚೀನ ಕಾಲದ ಚೀನಿ ಧಾರ್ಮಿಕ ಆಚರಣೆಗಳಲ್ಲಿ, ಭಾರತೀಯ ತಂತ್ರ ವಿಧಿಗಳಲ್ಲಿ, ಈಜಿಪ್ಟಿನ ಸ್ಮಾರಕಗಳಲ್ಲಿ ಗೊಂಬೆಯಾಟದ ಮಾಹಿತಿಗಳನ್ನು ಗುರುತಿಸಲಾಗಿದೆ. ಕರ್ನಾಟಕ ಮತ್ತು ಆಂಧ್ರಪ್ರದೇಶಗಳಲ್ಲಿಯೂ ಗೊಂಬೆಯಾಟದ ಬಗೆಗಿನ ಹಲವು ಪ್ರಾಚೀನ ಮಾಹಿತಿಗಳು ಸಿಗುತ್ತವೆ. ಹೀಗೆ ನೂರಾರು ವರ್ಷಗಳಿಂದ ಜನರ ಮನರಂಜನೆಯ ಮಾಧ್ಯಮವಾಗಿರುವ ಗೊಂಬೆಯಾಟವೇ ಯಕ್ಷಗಾನದ ಉಗಮಕ್ಕೆ ಕಾರಣವೆಂದು ಅಭಿಪ್ರಾಯವಿದೆ. ಅನೇಕ ಪ್ರಾಂತಗಳ ಜನಪದ ನಾಟಕಗಳಿಗೂ ಗೊಂಬೆಯಾಟವೇ ಮೂಲವೆಂಬ ಅಭಿಪ್ರಾಯ ವ್ಯಕ್ತವಾಗಿದೆ. ಜಪಾನ್ ಮುಂತಾದ ಪಾಶ್ಚಾತ್ಯ ದೇಶಗಳಲ್ಲಿ ಜನಪ್ರಿಯ ನಾಟಕಕ್ಕೆ ಗೊಂಬೆಯಾಟ ಪ್ರೇರಣೆ ನೀಡಿದೆ ಎಂದು ಹೇಳಲಾಗಿದೆ"(ಆರ್ಶ್ವಿಯಸ್ ಸುಂದರಂ, ೧೯೮೫: ೭) ಬುರ್ರಕತೆ ಹಾಗೂ ಯಕ್ಷಗಾನ ಕಲೆಗಳಲ್ಲಿ ಸಾಮ್ಯ ಹಾಗೂ ವ್ಯತ್ಯಾಸಗಳನ್ನು ಕಾಣುತ್ತೇವೆ. ಆದರೆ ಸಾಂಪ್ರದಾಯಿಕ ಅನನ್ಯತೆಯನ್ನು ಕಾಣುತ್ತೇವೆ. ಈ ಎರಡೂ ಕಲಾ ರೂಪಗಳು ನವರಸಗಳಿಗೆ ಅಭಿವ್ಯಕ್ತಿ-ಮಾಧ್ಯಮವಾಗಿದೆ. ಬುರ್ರಕತೆಯಂತೆ ಯಕ್ಷಗಾನವು ಸಹ ಜನಸಾಮಾನ್ಯರಿಗೆ ತೀರ ಹತ್ತಿರವಾದ, ಸುಲಭವಾಗಿ ಅರ್ಥವಾಗುವ ಸರಳ ಭಾಷೆಯಲ್ಲಿ ಇವುಗಳ ನಿರೂಪಣೆ ಇರುವುದನ್ನು ಕಾಣುತ್ತೇವೆ.

ಈ ಎರಡು ಹಾಡುಗಾರಿಕೆಗೆ ಪ್ರಧಾನವಾದುದು ಬುರ್ರಕತೆಯಲ್ಲಿ ಹಾಡಿದ ನಂತರ ಗದ್ಯದಲ್ಲಿ ಹೇಳುವಂತೆ ಇಲ್ಲಿ ಸಹ ಹಾಡುಗಾರಿಕೆ ನಂತರ ವಿಶ್ಲೇಷಣೆ ಬರುತ್ತದೆ. ತೆಲುಗು ಕವಿ ಶ್ರೀನಾಥನ ಕಾಲದಲ್ಲೇ ಯಕ್ಷಗಾನ ತುಂಬಾ ಪ್ರಚಾರದಲ್ಲಿತ್ತೆಂದು ತಿಳಿಯುತ್ತದೆ. "ವೇಷಗಳನ್ನು ಹಾಕಿಕೊಂಡು ಹಾಡುತ್ತಾ ಪ್ರದರ್ಶಿಸುವ ಕಲಾ ರೂಪವೇ ಯಕ್ಷಗಾನ" ಎಂದು ರಾಧಾಕೃಷ್ಣ ಮೂರ್ತಿ ಮಿಕ್ಕಿಲಿನೇನಿ ತಮ್ಮ 'ಆಂಧ್ರನಾಟಕ ರಂಗ ಚರಿತ್ರ' ಕೃತಿಯಲ್ಲಿ ಹೇಳಿದ್ದಾರೆ. ಯಕ್ಷಗಾನವು ಹಾಡುಗಾರಿಕೆ ಗಮಕ ಶೈಲಿಯಲ್ಲಿ ಅಥವಾ ತಾಳಬದ್ಧವಾದ ವಿವಿಧ ಮಟ್ಟುಗಳಲ್ಲಿ ಸಾಗುತ್ತದೆ. ಹಾಗೆಯೇ ಗದ್ಯ ಸ್ವರೂಪದ ಚೂರ್ಣಿಕೆ ವಚನಗಳನ್ನು ಶ್ರುತಿಬದ್ಧವಾಗಿಯೇ ಹಾಡಲಾಗುತ್ತದೆ. ಯಕ್ಷಗಾನವು ತನ್ನತನವನ್ನು ಉಳಿಸಿ ಬೆಳೆಸಿಕೊಂಡು ಬರಲು ವೃತ್ತಿ ಹಾಗೂ ಹವ್ಯಾಸಿ ಕಲಾವಿದರ ಪಾತ್ರವು ಅತ್ಯಂತ ಪ್ರಮುಖವಾದುದು. ಇಂದು ಅವರೆಲ್ಲ ವೃತ್ತಿ ಕಲಾವಿದರಾಗಿ ಪೋಷಿಸಿಕೊಂಡು ಬರುತ್ತಿದ್ದಾರೆ. ಅಂದರೆ ಈ ಎರಡು ಕಲಾರೂಪಗಳು ವೃತ್ತಿಯನ್ನು ಅವಲಂಬಿಸಿದವು.

ಯಕ್ಷಗಾನದಲ್ಲಿ ವಿದೂಷಕನು ಹಾಸ್ಯರೂಪವನ್ನು ಪೋಷಿಸಿದರೆ, ಬುರ್ರಕತೆಯಲ್ಲಿ ಹಿಮ್ಮೇಳ ಗಾಯಕರು ಹಾಸ್ಯವನ್ನು ಹೇಳುತ್ತಾರೆ. ಈ ವ್ಯತ್ಯಾಸದಲ್ಲೂ ಹೆಚ್ಚಾಗಿ ಅನನ್ಯತೆಯನ್ನು ಕಾಣುತ್ತೇವೆ. "ಮುಖ್ಯವಾಗಿ ಯಕ್ಷಗಾನದಿಂದ ಬುರ್ರಕಥಾ ಕಲಾರೂಪ ಪರಿಣತಿ ಹೊಂದಿದೆ ಎಂದು ಶ್ರೀನಿವಾಸ ಚಕ್ರವರ್ತಿಯ ಅಭಿಪ್ರಾಯ. ಅದಕ್ಕಾಗಿ ಬುರ್ರಕತೆಯನ್ನು ಶುದ್ಧ ಯಕ್ಷಗಾನ ಎಂದು ವಿವರಿಸುತ್ತಾರೆ"(ರಾಜು ವೈ.ಪಿ., ೧೯೯೨: ೪೪). ಹೀಗೆ ಎರಡು ಕಲೆಗಳನ್ನು ಅವಲೋಕಿಸಿದಾಗ ಅದರ ಅನನ್ಯತೆಯು ಕಂಡುಬರುತ್ತದೆ.

## ಹರಿಕತೆ ಮತ್ತು ಬುರ್ರಕತೆ

ಹರಿಕತೆಗಳಿಗೆ ಮೂಲ ಸ್ಫೂರ್ತಿ ಜನಪದ ಬಹುರೂಪಿಗಳು ಎಂದು ಹೇಳಬಹುದು. ಬಹುರೂಪಿಗಳು ಪೇಟಿ, ತಬಲ, ತಾಳ, ದಮ್ಮಡಿ ಮೊದಲಾದ ವಾದ್ಯಗಳೊಂದಿಗೆ ಹಾಡುತ್ತಾರೆ. ನಾಟಕದಲ್ಲಿ ಪಾತ್ರ ವಹಿಸಿ, ಕಲಾಪ್ರದರ್ಶನ ಮಾಡಿದಂತೆ, ಹರಿಕತೆಗಾರರು ಸಹ ಇವರನ್ನು ಅನುಸರಿಸಿದ್ದು ಅವರಲ್ಲಿ ಅವರ ಸಂಪ್ರದಾಯದಲ್ಲಿ ಕಾಣುತ್ತೇವೆ. ಬುರ್ರಕತೆ ಶೈವಪಂಥದ ಕತೆಗಳನ್ನು ಪ್ರಚಾರ ಮಾಡಲು ಹುಟ್ಟಿದರೆ ಹರಿಕತೆಯು ವೈಷ್ಣವ ಪಂಥವನ್ನು ಪ್ರಚಾರ ಮಾಡಲು, ಸರಳ ಭಾಷೆಯಲ್ಲಿ ಹಾಡುಗಳು ಹುಟ್ಟಿಕೊಂಡಿದ್ದನ್ನು ಕಾಣುತ್ತೇವೆ. ಇನ್ನು ಮುಖ್ಯವಾಗಿ ಜನರಲ್ಲಿ ಧಾರ್ಮಿಕ ಮನೋಭಾವನೆ ಬೆಳೆಯಲು ಹಬ್ಬ, ಹರಿದಿನ ಸಂದರ್ಭದಲ್ಲಿ ರಾತ್ರಿಯ ಜಾಗರಣೆ ಸಂದರ್ಭದಲ್ಲಿ ವೈಷ್ಣವ ಪಂಥಕ್ಕೆ ಸಂಬಂಧಿಸಿದ ಹಾಡುಗಳನ್ನು ಹರಿಕತೆಗಾರರು ಸೃಷ್ಟಿಸಿದರು. ಇವರು ಪೌರಾಣಿಕ ಕತೆಗಳನ್ನು ಮಾತ್ರ ಪ್ರಚಾರಪಡಿಸಿದರು. ಈ ಎರಡು ಕಲೆಗಳಲ್ಲಿಯೂ ಮೂವರು ಕಥನವನ್ನು ಹೇಳಲು ಭಾಗವಹಿಸುತ್ತಾರೆ. ಬುರ್ರಕತೆ ಹಾಗೂ ಹರಿಕತೆಗೂ ಅಷ್ಟೇನು ವ್ಯತ್ಯಾಸ ಕಾಣಿಸುವುದಿಲ್ಲ. ಹರಿಕತೆಗಾರರು ಬುರ್ರಕತೆಯಂತೆ ನಡು ನಡುವೆ ಹಾಸ್ಯವನ್ನು ತರುತ್ತಾರೆ.

ಇಲ್ಲಿ ಬುರ್ರಕತೆಗಳು ಅದರದೇ ಆದ ಸ್ವರೂಪ ಹಾಗೂ ಹಿನ್ನೆಲೆಯನ್ನು ಪಡೆದಿವೆ. ಹವ್ಯಾಸಿ ಬುರ್ರಕತೆಗಾರರಿಗಿಂತ ಬುಡ್ಗಜಂಗಮ ಸಮುದಾಯದ ಬುರ್ರಕತೆಗಾರರು ಅವರ ಕಲೆಯಿಂದ ಪ್ರಮುಖವಾಗಿ ಕಾಣಿಸುತ್ತಾರೆ. ಬುರ್ರಕತೆಗಳನ್ನು ಇತರ ಕಲೆಗಳೊಂದಿಗೆ ನೋಡಿದಾಗ ಹೆಚ್ಚಾಗಿ ಸಾಮ್ಯತೆ ಕಾಣುತ್ತದೆ. ಮುಖ್ಯವಾಗಿ ಬುರ್ರಕತೆಗಾರರು ಈ ಕತೆಗಳನ್ನು ಸಮಾಜಮುಖಿಯಾಗಿ ನಿರೂಪಿಸಿದ್ದರಿಂದ ಪ್ರಸಿದ್ಧಿಯನ್ನು ಪಡೆದಿವೆ.

# ಅಧ್ಯಾಯ ೩

## ಬುರ್ರಕತೆಗಳ ಪಠ್ಯ ವಿಶ್ಲೇಷಣೆ

# ಅಧ್ಯಾಯ ೩

## ಬುರ್ರಕತೆಗಳ ಪಠ್ಯ ವಿಶ್ಲೇಷಣೆ

ಜನಪದ ಕತೆಗಳು ಯಾವುದೋ ಒಂದು ವಿಶಿಷ್ಟ ಸಂದರ್ಭದಲ್ಲಿ ಸಹಜವಾಗಿ ಹೊರಹೊಮ್ಮುವುದನ್ನು ಗುರುತಿಸಬಹುದಾಗಿದೆ. ಆ ಸಂದರ್ಭದಲ್ಲಿ ಮೂಡಿದಂತಹ ಕತೆಗಳು ಅದರ ಭಾವ, ಲಯ, ಸಂಗೀತ, ನೃತ್ಯ, ಧಾಟಿ, ಛಂದಸ್ಸುಗಳ ಸಹಿತ ಹಾಡಿನ ರೂಪದಲ್ಲಿ ಹೊರಹೊಮ್ಮಿ ಬರುತ್ತದೆ. ಹೀಗೆ ಹೊರಹೊಮ್ಮಿದ ಹಾಡು ಕೆಲವೊಮ್ಮೆ ಮಹಾಕಾವ್ಯದ ವಿಸ್ತಾರವನ್ನು ಪಡೆದುಕೊಳ್ಳುತ್ತದೆ. ಜನಪದ ಗಾಯಕರು ತಾವು ಕಾವ್ಯ ಹಾಡಬೇಕೆಂದು ಉದ್ದೇಶಪೂರ್ವಕವಾಗಿ ಹಾಡಿದಂತಹವುಗಳಲ್ಲ. ಅವು ಅವರ ಬದುಕಿನೊಂದಿಗೆ ಅನಿವಾರ್ಯವಾಗಿ ಹುಟ್ಟಿಕೊಂಡಂತಹವು. ಜನಪದ ಸಾಹಿತ್ಯ ಅಥವಾ ಕಾವ್ಯವು ಸಾಮಾನ್ಯ ಜನರ ಬದುಕಿನ ಒಂದು ಭಾಗವಾಗಿ ಹುಟ್ಟಿ, ಅದು ಆಯಾ ಕಾಲದ ಬದುಕಿನ ಪ್ರತಿಬಿಂಬವೇ ಆಗಿರುತ್ತದೆ.

ಶಿಷ್ಟ ಹಾಗೂ ಜನಪದ ಮಹಾಕಾವ್ಯಗಳನ್ನು ಅವಲೋಕಿಸಿದಾಗ, ಶಿಷ್ಟ ಮಹಾಕಾವ್ಯದ ವಸ್ತು ಅಂದರೆ ರಾಮಾಯಣ, ಮಹಾಭಾರತದಂತಹ ಕಾವ್ಯಗಳೂ ವಿಶಾಲವಾದ ವ್ಯಾಪ್ತಿಯನ್ನು ಹೊಂದಿ ಅವು ಇಡೀ ರಾಷ್ಟ್ರವನ್ನು ಪ್ರತಿನಿಧಿಸುತ್ತವೆ. ಆದರೆ ಜನಪದ ಮಹಾಕಾವ್ಯಗಳು ಮಾತ್ರ ಯಾವುದೋ ಒಂದು ಪ್ರಾದೇಶಿಕ ವ್ಯಾಪ್ತಿಯನ್ನು ಹೊಂದಿರುತ್ತದೆ. ಶಿಷ್ಟ ಮಹಾಕಾವ್ಯ ಶಿಷ್ಟಪದದಿಂದ ಅಂಗೀಕೃತವಾದಂತಹ ಮಹಾಕಾವ್ಯವಾದರೆ, ಜನಪದ ಮಹಾಕಾವ್ಯ ಜನಪದರಿಂದ ಸ್ವೀಕೃತವಾದ ಮಹಾಕಾವ್ಯ. ಇವು ಜನಪದ ಹಾಡುಗಳೇ ವಿಸ್ತೃತಗೊಂಡು ಕಥನಕಾವ್ಯಗಳೆನಿಸಿವೆ. ಜನಪದ ಕಥನಕಾವ್ಯದ ನಾಯಕನ ಗುಣ ಹಾಗೂ ಅದರ ವಸ್ತು ಅತ್ಯುನ್ನತವಾದುದು. ಇಲ್ಲಿ ಬರುವ ನಾಯಕ ಕೂಡ ಪವಾಡಪುರುಷನಾಗಿರುತ್ತಾನೆ. ಆ ಪಾತ್ರವು ದುಷ್ಟರಿಗೆ ದುಷ್ಟನಾಗಿ, ಭಕ್ತ ಜನರ ಕಷ್ಟ ಕಾರ್ಪಣ್ಯಗಳನ್ನು ಹೋಗಲಾಡಿಸಿ ಅವರನ್ನು ಉದ್ಧಾರ ಮಾಡುವುದು. ಹಾಗೆಯೇ ಸಾಮಾನ್ಯ ಜನರ ನೋವು-ನಲಿವುಗಳಿಗೆ, ಅವರ ಬದುಕಿಗೆ ಹತ್ತಿರದವನಾಗಿರುತ್ತಾನೆ. ಇಂತಹ ಪವಾಡಪುರುಷನ ಮುಂದೆ ಯಾವುದೇ ಶಕ್ತಿ ನಿಲ್ಲುವುದಿಲ್ಲ. ದುಷ್ಟರನ್ನು ಶಿಕ್ಷಿಸಿ, ಶಿಷ್ಟರನ್ನು ರಕ್ಷಿಸಿ ಧರ್ಮವನ್ನು ಸ್ಥಾಪಿಸುವುದೇ

ಕಥಾನಾಯಕನ ಮುಖ್ಯ ಉದ್ದೇಶವಾಗಿರುತ್ತದೆ. ಅದು ಕಥಾನಾಯಕನು ತುಳಿದ ನೆಲ ಪಾವನವಾಗಿ ಸಾಮಾನ್ಯ ಜನರಿಗೆ ಅದು ಸ್ಫೂರ್ತಿಯ ಸೆಲೆಯಾಗುತ್ತದೆ.

ಈ ಜನಪದ ಕಥನಕಾವ್ಯಗಳ ಮುಖ್ಯಗುರಿ ಮಾನವೀಯ ಮೌಲ್ಯಗಳನ್ನು ಎತ್ತಿ ಹಿಡಿಯುವುದಾಗಿದೆ. ಸೃಷ್ಟಿಯನ್ನು ಕುರಿತ ಸಾಮಾನ್ಯ ಮಾನವನ ಕಲ್ಪನೆಗಳು ಇಲ್ಲಿ ಮುಖ್ಯವಾಗಿ ಕಂಡುಬರುತ್ತವೆ. ಭಾರತೀಯತೆಯ ಕಲ್ಪನೆ, ಅದರ ಮೂಲ ಉದ್ದೇಶ, ಭಾರತೀಯ ಜೀವನ ದರ್ಶನ ಅದರ ಮುಖ್ಯ ಮೌಲ್ಯಗಳಾದ ಧರ್ಮ, ಅರ್ಥ, ಕಾಮ, ಮೋಕ್ಷವೇ ಈ ಜನಪದ ಕಥನಕಾವ್ಯಗಳ ಗುರಿ. ಇಂಥ ಕಾವ್ಯವು ಶುದ್ಧ ಜನಪದೀಯ ಶೈಲಿಯಲ್ಲಿದ್ದು ಮುಖ್ಯವಾಗಿ ಅತಿಮಾನುಷ ಘಟನೆಗಳು ಯಥೇಚ್ಛವಾಗಿ ಕಂಡುಬರುತ್ತವೆ. ಇಂತಹ ಕಾವ್ಯ ರಚನೆಕಾರರಾದ ಜನಪದ ಗಾಯಕರು ಕಾವ್ಯ ನಿರೂಪಣೆ ಮಾಡುವಾಗ ವಾಸ್ತವಿಕ ನಿತ್ಯ ಬಳಕೆಯ ಪದಪುಂಜಗಳನ್ನು ಬಳಸುತ್ತಾರೆ. ಶಿಷ್ಟ ಸಾಹಿತ್ಯಕ್ಕಿಂತ ಜನಪದ ಗಾಯಕರಿಗೆ ಸಂಪೂರ್ಣ ಸ್ವಾತಂತ್ರ್ಯ ಇರುವುದರಿಂದ ಸಾಮಾನ್ಯ ಜನರ, ಶೋಷಿತ ವರ್ಗದ ಜನತೆಯ ಮನೋಸ್ಥೈರ್ಯ, ಮನೋಧರ್ಮ, ಅಭಿಲಾಷೆಗಳಿಗೆ ಅನುಗುಣವಾಗಿ ಹಾಡುತ್ತಾರೆ. ಇಂತಹ ಗಾಯಕರಲ್ಲಿ ಪಾಂಡಿತ್ಯವಿಲ್ಲದೆ ಹೋಗಿರಬಹುದು, ಅದು ಪಂಡಿತವರ್ಗವನ್ನು ಗುರಿಯಾಗಿಟ್ಟುಕೊಂಡು ಹಾಡಿ ಮೆಚ್ಚಿಸುವುದಿಲ್ಲ. ಮುಖ್ಯವಾಗಿ ಸಾಮಾನ್ಯ ಜನವರ್ಗವನ್ನು ಎಚ್ಚರಿಸುವ, ತಿದ್ದುವ, ಅವರ ನೋವು-ನಲಿವುಗಳಿಗೆ ಸಾಂತ್ವನ ಹೇಳುವ, ನಿಷ್ಕಲ್ಮಷವಾದ ಗುಣವನ್ನು ಜನರಲ್ಲಿ ಹೊರಹೊಮ್ಮಿಸುತ್ತಾರೆ. ಜನಪದ ಗಾಯಕರ ನಿರೂಪಣ ಶೈಲಿಯನ್ನು ಪರಿಶೀಲಿಸಿದಾಗ ಎಲ್ಲಾ ಗಾಯಕರ ಶೈಲಿ ಹೆಚ್ಚಾಗಿ ಒಂದೇ ತೆರನಾಗಿ ಕಾಣುವುದುಂಟು. ಅವರಲ್ಲಿ ವೈವಿಧ್ಯತೆ ಕಾಣಿಸದೆ ಇರಬಹುದು. ಆದರೆ ಅವರ ಕಾವ್ಯಗಳು ಇನ್ನು ಬೆಳೆಯುತ್ತಿರುವುದರಿಂದ ಹೊಸದಾಗಿ ಸಮಕಾಲೀನ ವಿಚಾರಗಳು ಸೇರಿಕೊಂಡು ಆಯಾ ಕಾಲದ ನಡೆ-ನುಡಿಗಳು, ಆಚಾರ-ವಿಚಾರಗಳು, ರೀತಿ-ನೀತಿಗಳು ಸೇರ್ಪಡೆಗೊಳ್ಳುತ್ತಾ ಅದು ಒಂದು ವಿಸ್ತಾರವಾದ ಜನಪದ ಮಹಾಕಾವ್ಯವಾಗಿ ರೂಪುಗೊಳ್ಳುತ್ತಿರುತ್ತದೆ.

ಜನಪದ ಗಾಯಕರಲ್ಲಿ ವೃತ್ತಿಗಾಯಕರೇ ಮುಖ್ಯವಾಗಿ ಕಾಣಸುತ್ತಾರೆ. ಇಂಥ ಗಾಯಕರೇ ಮಹಾಕಾವ್ಯಗಳನ್ನು ಹಾಡಿರುವುದು ಕಂಡುಬರುತ್ತದೆ. ಭಾರತೀಯ ಮಹಾಕಾವ್ಯಗಳಾದ 'ರಾಮಾಯಣ, ಮಹಾಭಾರತ'ಗಳು ಕೂಡ ಮೂಲತಃ ಜನಪದ ಕಾವ್ಯಗಳೇ ಆಗಿದ್ದು ಶಿಷ್ಟ ಕವಿಗಳು ಅವುಗಳನ್ನು ಸ್ವೀಕರಿಸಿ ಪರಿಷ್ಕರಿಸಿರಬೇಕು ಎಂಬ ಊಹೆಗಳೂ ಇವೆ. ಲವ-ಕುಶರೇ ಏಕತಾರಿಯನ್ನು ಹಿಡಿದು ವೃತ್ತಿಗಾಯಕರಾಗಿದ್ದರು ಎಂಬ ಅಂಶ ಎಂತಹವರ ಕುತೂಹಲವನ್ನು ಕೆರಳಿಸುತ್ತದೆ. ಭಾರತದಲ್ಲಿ ಋಗ್ವೇದ ಕಾಲದಿಂದಲೂ ಜಾನಪದ ಮೂಲವನ್ನು ಅರಸಲಾಗುತ್ತದೆ. ಪಂಚತಂತ್ರ, ಹಿತೋಪದೇಶ, ಬೇತಾಳ ಪಂಚವಿಂಶತಿ, ಶುಕಸಪ್ತತಿ, ಗುಣಾಢ್ಯನ ಬೃಹತ್ಕಥೆಯ ಆಧಾರದ ಮೇಲೆ ರಚಿತವಾದ ಕ್ಷೇಮೇಂದ್ರನ ಬೃಹತ್ಕಥಾಮಂಜರಿ, ಸೋಮದೇವನ ಕಥಾಸರಿತ್ಸಾಗರ ಮುಂತಾದವು ಜನಪದ ಕಥೆಗಳ ದೊಡ್ಡ ಕೋಶಗಳೆನಿಸಿವೆ. ಕನ್ನಡದಲ್ಲಿ ಪ್ರಥಮ ಗದ್ಯ ಗ್ರಂಥ 'ವಡ್ಡಾರಾಧನೆ'ಯೇ ಜನಪದ ಕತೆ ಸಂಕಲನ ಎನಿಸಿದೆ. ಅಲ್ಲಿನ ಅನೇಕ ಕಥೆಗಳು ಇಂದಿಗೂ

ಜನಪದರ ಮೌಖಿಕ ಸಂಪ್ರದಾಯದಲ್ಲಿ ಲಭ್ಯವಾಗುತ್ತದೆ. ಕರಪಾಲ ಮೇಳದ ಪೂಜಾರಿ ಪುಟ್ಟಕ್ಕನ ಕಥೆ, ವಡ್ಡಾರಾಧನೆಯ ಒಂದು ಕಥೆಯೇ ಆಗಿದೆ. ಮುಂದೆ ನಯಸೇನ, ರಾಘವಾಂಕ, ಕುಮಾರವ್ಯಾಸ, ಲಕ್ಷ್ಮೀಶ, ಅಪಾರ ಸಂಖ್ಯೆಯ ಸಾಂಗತ್ಯ ಕವಿಗಳು, ನೇಮಿಚಂದ್ರ ಮೊದಲಾದವರು ಜನಪದ ಭಂಡಾರದಿಂದ ಅಪಾರ ಸಾಮಗ್ರಿಯನ್ನು ಸ್ವೀಕರಿಸಿ ತಮ್ಮ ಕೃತಿಗಳ ಸತ್ವವನ್ನು ಹೆಚ್ಚಿಸಿಕೊಂಡಿದ್ದಾರೆ. ನೇಮಿಚಂದ್ರನ ಲೀಲಾವತಿ ಕಾವ್ಯ, ನಂಜುಂಡ, ಪಾಂಚಾಲಗಂಗ ಮೊದಲಾದವರ ಕೃತಿಗಳು ಸಂಪೂರ್ಣವಾಗಿ ಜನಪದ ಕಥೆಗಳನ್ನೋ ಕಾವ್ಯಗಳನ್ನೋ ಆಧರಿಸಿಯೇ ರಚಿತವಾದ ಕಾವ್ಯಗಳಾಗಿವೆ"(ಕ್ಯಾತನಹಳ್ಳಿ ರಾಮಣ್ಣ, ೨೦೦೭: ೮). ಹೀಗೆ ವೃತ್ತಿಗಾಯಕರ ಹಾಡುಗಳು ಹಿಂದೆಯೇ ಪ್ರಚಲಿತದಲ್ಲಿದ್ದವು ಹಾಗೂ ಶಿಷ್ಟ ಸಾಹಿತ್ಯಕ್ಕೆ ಜನಪದ ಸಾಹಿತ್ಯವು ಅಪಾರ ಸಂಪತ್ತನ್ನು ಕೊಟ್ಟಿದೆ ಎಂಬುದು ಇದರಿಂದ ತಿಳಿಯುತ್ತದೆ.

ಕರ್ನಾಟಕದ ಮೌಖಿಕ ಸಂಪ್ರದಾಯದಲ್ಲಿ ದೀರ್ಘ ಕಾವ್ಯಗಳನ್ನು ಹಾಡುವ ಅನೇಕ ಕತೆಗಾರರು ಇದ್ದಾರೆ. ಇಂಥ ಸಾಂಪ್ರದಾಯಿಕ ಕತೆಗಾರರು ಹಾಡುವ ಕಥನ ಕಾವ್ಯವು ಜನರ ಬದುಕನ್ನು ನಿರೂಪಿಸುವುದಲ್ಲದೆ ವಿಶ್ಲೇಷಿಸುತ್ತದೆ. ಹಾಗೆಯೇ ಸಾಮಾಜಿಕ, ಸಾಂಸ್ಕೃತಿಕ ಸಂಗತಿಗಳನ್ನು ಅಭಿವ್ಯಕ್ತ ಮಾಡುತ್ತದೆ. ಕೆ.ಆರ್.ಸಂಧ್ಯಾರೆಡ್ಡಿ ಅವರು ಸರಿಯಾಗಿಯೇ ಗುರುತಿಸುವಂತೆ "ಜಗತ್ತಿನಲ್ಲಿ ಶಿಷ್ಟ ಸಾಹಿತ್ಯ ಆರಂಭಗೊಳ್ಳುವ ಸಾವಿರಾರು ವರ್ಷಗಳ ಮುಂಚೆಯೇ ಜನಪದ ಮೌಖಿಕ ಸಾಹಿತ್ಯ ಆರಂಭವಾಗಿತ್ತು ಎನ್ನುವುದು ಎಲ್ಲರಿಗೂ ಗೊತ್ತಿರುವ ಸಂಗತಿಯೇ ಆಗಿದೆ. ಎಲ್ಲ ದೇಶಗಳ ಆರಂಭಿಕ ಅನಕ್ಷರಸ್ಥ ಜನಾಂಗ ತಮ್ಮ ಅಂದಿನ ಜೀವನದಲ್ಲಿ ಕಂಡು ಉಂಡ ಸುಖ-ದುಃಖ, ನೋವು-ನಲಿವುಗಳನ್ನು ಅನನ್ಯ ವಿಶಿಷ್ಟ ಅನುಭವಗಳನ್ನು ಅಂದು ತಮಗೆ ತಿಳಿದಿದ್ದ ಭಾಷೆಯಲ್ಲಿ ತಮ್ಮ ಸೃಜನಶೀಲ ಶಕ್ತಿಗೆ ಅನುಗುಣವಾಗಿ ಹಾಡು, ಕತೆ, ಗಾದೆ, ಒಗಟುಗಳ ಮೂಲಕ ಅಭಿವ್ಯಕ್ತ ಮಾಡಿದರು. ಒಬ್ಬರ ಬಾಯಿಂದ ಮತ್ತೊಬ್ಬರಿಗೆ ಹರಿದು ಅವರ ಕಲ್ಪನೆ, ಅನುಭವಗಳ ಮಳೆಯಲ್ಲಿ ನೆಂದು, ಹೊಸ ಹೊಸ ಸ್ವರೂಪಗಳನ್ನು ಪಡೆಯುತ್ತ ಹೋದವು. ಕೆಲಮೊಮ್ಮೆ ಯಾವುದೋ ಒಂದು ಸಾಮಾನ್ಯ ಸೂತ್ರವಿರುವ ವಿಭಿನ್ನ ಹಾಡುಗಳನ್ನು, ಕಥೆಗಳನ್ನು ಒಟ್ಟಿಗೆ ನೇಯ್ದು ದೀರ್ಘವಾದ ಕಥನಗಳನ್ನು ಸೃಷ್ಟಿಮಾಡಿದರು. ಹೀಗಾಗಿ ಬಿಡಿಬಿಡಿಯ ಹಾಡು ಕಥೆಗಳ ಜೊತೆಗೆ ದೀರ್ಘವಾದ ಕಥಾಗುಚ್ಛಗಳು ಆರಂಭವಾಗಿ ಮತ್ತು ಕಾಲದಿಂದ ಕಾಲಕ್ಕೆ ಪರಿಷ್ಕೃತವಾಗಿ ಆಯಾಯ ಸಂಸ್ಕೃತಿಯ ಜೀವಸೆಲೆಗಳನ್ನು ತಮ್ಮಲ್ಲಿ ಗರ್ಭೀಕರಿಸಿಕೊಂಡು ಬೆಳೆದವು. ಇವೇ ಜನಪದ ಮಹಾಕಾವ್ಯಗಳು. ಇಂಥ ಮಹಾಕಾವ್ಯಗಳ ಆಧಾರದ ಮೇಲೆಯೇ ರಾಮಾಯಣ, ಮಹಾಭಾರತ, ಇಲಿಯಡ್, ಒಡಿಸ್ಸಿ ಮುಂತಾದ ಕಾವ್ಯಗಳು ನಿರ್ಮಾಣವಾಗಿವೆ"(ಸಂಧ್ಯಾರೆಡ್ಡಿ ಕೆ.ಆರ್., ೨೦೦೧: viii). ಜಗತ್ತಿನ ಅನೇಕ ದೇಶಗಳು ಇಂಥ ಪರಂಪರೆಯ ಕಾವ್ಯಗಳನ್ನು ಸೃಷ್ಟಿಸಿವೆ. ಭಾರತೀಯ ಭಾಷೆಗಳಲ್ಲೂ ಸಹ ನೂರಾರು ಕಾವ್ಯಗಳು ಜನ್ಮ ತಾಳಿವೆ. ಹಾಗೆ ಕರ್ನಾಟಕದಲ್ಲಿ ಇಂಥ ಮೌಖಿಕ ಪರಂಪರೆಯಲ್ಲಿ ಕಾವ್ಯಗಳು ಹುಟ್ಟಿಕೊಂಡಿದ್ದನ್ನು ಕಾಣುತ್ತೇವೆ.

ಕರ್ನಾಟಕದಲ್ಲಿ ಜನಪದ ಗಾಯಕರು ಅದರಲ್ಲೂ ವೃತ್ತಿಯನ್ನೇ ಅವಲಂಬಿಸಿದ ಗಾಯಕರಲ್ಲಿ ಮುಖ್ಯವಾಗಿ ಸ್ತ್ರೀಯರು ಹೆಚ್ಚಾಗಿ ಕಂಡುಬರುತ್ತಾರೆ. ಇವರ ಮೌಖಿಕ ಕಾವ್ಯಗಳು ಒಬ್ಬರಿಂದ ಒಬ್ಬರಿಗೆ, ಬಾಯಿಂದ ಬಾಯಿಗೆ ಹರಿದುಬಂದಂತಹ ಕಾವ್ಯಗಳಾಗಿವೆ. ಈ ಗಾಯಕರಲ್ಲಿ ಸರಳ ಸುಂದರವಾದ ಅಭಿವ್ಯಕ್ತಿ ಕಂಡುಬಂದು, ಕತೆಯ ವಸ್ತುವಿಗೆ ತಕ್ಕಂತೆ ಭಾವವಿದ್ದು ಭಾವಕ್ಕೆ ತಕ್ಕಂತೆ ಭಾಷೆ ಇದ್ದು ಜನಸಾಮಾನ್ಯರ ಮನವನ್ನು ಮುಟ್ಟುವಂತಹವುಗಳಾಗಿವೆ. 'ಬುರ್ರಕತೆ'ಗಳನ್ನು ಹಾಡುವ ಕಾವ್ಯಗಳ ವಸ್ತು ವೈವಿಧ್ಯತೆಯಿಂದ ಕೂಡಿದ್ದು ಅವು ಪ್ರೇಕ್ಷಕರ ವರ್ಗವನ್ನೇ ಗುರಿಯಾಗಿಟ್ಟುಕೊಂಡು ಹುಟ್ಟಿದಂತಹವು. ಬುರ್ರಕತೆಗಳಲ್ಲಿ ಕೆಲವು ಭಕ್ತಿಪ್ರಧಾನ ಅಂಶಗಳು ಸರ್ವಧರ್ಮ ಸಮನ್ವಯ ಸಾರುವ ಅಂಶಗಳು ಹಾಗೂ ಮತ ಸಂಘರ್ಷ ಮುಂತಾದವು ಕಂಡುಬರುತ್ತದೆ. ಸಂಗ್ರಹಿಸಿದ 'ಕನ್ನಡ-ತೆಲುಗು' ಎರಡೂ ಭಾಷೆಗಳ ಕೃತಿಗಳಾದ ಕಾಂಭೋಜರಾಜಕತೆ, ಬಾಲಗಿರಿರಾಜಕತೆ, ಭೂಲಕ್ಷ್ಮಿಕತೆ, ಶಿವಕುಮಾರಕತೆ, ಆರ್ಯವರಕತೆಗಳನ್ನು ಇಲ್ಲಿ ಪ್ರಸ್ತುತ ಅಧ್ಯಯನಕ್ಕಾಗಿ ವಿಶ್ಲೇಷಣೆ ಮಾಡಲಾಗಿದೆ.

### ಮೌಖಿಕ ಪಠ್ಯದ ಸ್ವರೂಪ

ಮೌಖಿಕ ಪಠ್ಯದಲ್ಲಿ ಜನಸಾಮಾನ್ಯರ ಬದುಕು ಅವರ ನೋವು-ನಲಿವುಗಳ ಒಳದನಿಯೂ ಕೂಡಿರುತ್ತದೆ. ಪ್ರಾದೇಶಿಕವಾಗಿ ರಚನೆಗೊಂಡ ಯಾವುದೇ ಪಠ್ಯವು ಸಮಷ್ಟಿ ಅನುಭವದಿಂದ ರಚನೆಗೊಂಡಿರುತ್ತದೆ. ಇದನ್ನು ಇನ್ನಷ್ಟು ಸ್ಪಷ್ಟಮಾಡಿಕೊಳ್ಳಲು ಮೊಗಳ್ಳಿ ಗಣೇಶ್ ಅವರ ಮಾತುಗಳನ್ನು ಇಲ್ಲಿ ಉಲ್ಲೇಖಿಸಬಹುದು. "ದೇಶಿ ಕಥನಗಳು ಬೃಹತ್ ಪಠ್ಯವನ್ನು ನಿರ್ಮಿಸುತ್ತವೆ, ಪಠ್ಯ ಎಂದರೆ ಕಥನದ ಶರೀರ. ಪಠ್ಯದ ಶರೀರವಾಗಿರುವ ಹೊರರೂಪವು ನಿರಂತರವಾಗಿ ಪ್ರತಿಸೃಷ್ಟಿಯ ಮೂಲಕ ಬದಲಾಗುತ್ತಾ, ಬಲವಾಗುತ್ತಾ, ಬಹುರೂಪಿ .ಮಾರ್ಪಾಟುಗಳಿಗೆ, ಭಿನ್ನ ನಿರೂಪಣೆಗಳಿಗೆ ದಾರಿ ಮಾಡುತ್ತದೆ. ಪಠ್ಯಗಳು ಸ್ಥಾನೀಯ ಸ್ವರೂಪವೇ ಆಗಿರುತ್ತವೆ. ಸ್ಥಾನೀಯವಾದ ಅರಿವಿನಿಂದಾಗಿಯೇ ಒಂದು ಪಠ್ಯವು ಹಲವು ಪಠ್ಯಗಳಾಗಲು ಅವಕಾಶವಾಗುವುದು. ದೇಶೀ ಕಥನಗಳ ಸಾವಯವ ರಚನೆಯು ಬೃಹತ್‌ಪಠ್ಯವಾಗಿ ವ್ಯಾಪಿಸಿಕೊಂಡಿರುತ್ತದೆ. ದೇಶಿ ಕಥನದ ಬಹುರೂಪಿ ಸಂದರ್ಭದಲ್ಲಿ ಕಥನವನ್ನು ಹಾಡುವವರು, ಕೇಳುವವರು ಒಂದೆಡೆ ಕಥನದ ನರನಾಡಿಗಳಲ್ಲಿ ಬೆರೆತರೆ ಅದೇ ದೇಶೀ ಕಥನವು ನಂಬಿಕೆಯ, ಆಚರಣೆಯ, ಸಂಪ್ರದಾಯಗಳ ಸಮಷ್ಟಿ ಜಾಗೃತ ಸ್ಥಿತಿಯ ಕ್ರಿಯಾತ್ಮಕ ಜಗತ್ತನ್ನೇ ಲೌಕಿಕ-ಅಲೌಕಿಕ ಎರಡೂ ನೀತಿಯನ್ನು ಒಂದು ಬೃಹತ್‌ದರ್ಶನ ಸಾಧಿಸುತ್ತದೆ. ಹೀಗಾಗಿ ಪಠ್ಯ ಎಂದರೆ ಅದು ಒಂದು ಕಥನದ ಶರೀರವಾಗಿರುವಂತೆಯೇ ಆ ಸಮುದಾಯದ ಮನಸ್ಸಿನ ಪ್ರತಿನಿಧಿಯೂ ಆಗಿರುತ್ತದೆ. ದೇಶಿ ಕಥನಗಳ ಪಠ್ಯವು ಸಮಷ್ಟಿ ಪ್ರಜ್ಞೆಯಲ್ಲಿರುತ್ತದೆಯೇ ವಿನಃ ಆ ಕ್ಷಣದಲ್ಲಿ ಒಬ್ಬ ಗಾಯಕನ ಮೂಲಕ ಅನಾವರಣಗೊಂಡ ಒಂದೇ ಒಂದು ಆಕೃತಿಯಲ್ಲಿ ಪೂರ್ಣವಾಗಿ ಅಭಿವ್ಯಕ್ತವಾಗಿರುವುದಿಲ್ಲ. ದೇಶಿ ಕಥನಗಳ ಪಠ್ಯದ ಪ್ರಕ್ರಿಯೆಯು ಆಚರಣಾತ್ಮಕವಾದದ್ದೇ ಆಗಿದ್ದು ಅದು ಮನರಂಜನೆಯ ಒಂದೇ ಉದ್ದೇಶಕ್ಕೆ ಬರುವುದಿಲ್ಲ. ಪಠ್ಯವನ್ನು ಸಂಗ್ರಹಿಸುವ ಕ್ರಮದಲ್ಲಿ ನಾವೂ

ಯಾವತ್ತೂ ಅಪೂರ್ಣ ಪಠ್ಯಗಳನ್ನೇ ಪಡೆದಿರುತ್ತೇವೆ. ಅವುಗಳ ಬಹುರೂಪಿ ಅಖಂಡ ಪಠ್ಯ ಯಾವಾಗಲೂ ಕ್ಷೇತ್ರದಲ್ಲೇ ಉಳಿದಿರುತ್ತವೆ"(ಮೊಗಳ್ಳಿ ಗಣೇಶ, ೨೦೦೬: ೭೩). ಮೌಖಿಕ ಪಠ್ಯ ಪ್ರಕ್ರಿಯೆ ಕುರಿತು ಪಾಶ್ಚಾತ್ಯ ವಿದ್ವಾಂಸರಲ್ಲಿ ಸುಮಾರು ಐವತ್ತು ವರ್ಷಗಳ ಹಿಂದೆ ಬಂದಿದ್ದನ್ನು ಕಾಣುತ್ತೇವೆ. ಆದರೆ ಕನ್ನಡ ಸಂದರ್ಭದಲ್ಲಿ ಪಠ್ಯದ ಚರ್ಚೆಯನ್ನು ಕುರಿತು ಇನ್ನೂ ಪ್ರಾಥಮಿಕ ಹಂತದಲ್ಲಿದ್ದೇವೆ.

ಮೌಖಿಕ ಪಠ್ಯ ಸೃಷ್ಟಿ ಒಬ್ಬರಿಂದ ಸೃಷ್ಟಿಯಾದುದಲ್ಲ. ಅದು ಸಾಮೂಹಿಕವಾದುದು. ಇದು ಮೌಖಿಕ ಪಠ್ಯವಾಗಿದ್ದರಿಂದ ಬಾಯಿಂದ-ಬಾಯಿಗೆ ಹಲವು ತಲೆಮಾರುಗಳಿಂದ ವಿಕಾಸಗೊಳ್ಳುತ್ತಾ ರೂಪಾಂತರ ಪಡೆದಿರುತ್ತದೆ. ಒಬ್ಬ ಗಾಯಕ ಅಥವಾ ಗಾಯಕಿ ಹಾಡಿದ ಹಾಡನ್ನು ಮತ್ತೊಬ್ಬರು ಹಾಡುವಾಗ ಅದನ್ನು ತನಗೆ ಅನುಕೂಲವಾಗುವಂತೆ ಬೇಕಾದ ರೀತಿಯಲ್ಲಿ ಬದಲಾವಣೆ ಮಾಡಿಕೊಂಡಿರುತ್ತಾರೆ. ಹೀಗೆ ಮೌಖಿಕ ಪಠ್ಯವು ನಿರಂತರವಾದ ಸೃಜನಶೀಲ ಪ್ರಕ್ರಿಯೆಯನ್ನು ಒಬ್ಬರಿಂದ ಇನ್ನೊಬ್ಬರಿಗೆ ರವಾನಿಸುತ್ತಾ ಸಾಗುತ್ತದೆ. ಮುಖ್ಯವಾಗಿ ಜನಪದರ ಮೌಖಿಕ ಪಠ್ಯವು ಅವರ ವೃತ್ತಿ ಕಾಯಕದಿಂದ ರಚನೆಯನ್ನು ಪಡೆದಿರುತ್ತದೆ. ಹೀಗಾಗಿ ಅವರ ಪಠ್ಯದಲ್ಲಿ ಅವರ ಬದುಕು, ದುಡಿಮೆ, ಜೀವನ ಚಿತ್ರಣವನ್ನೇ ಅಭಿವ್ಯಕ್ತಿಸಿರುತ್ತಾರೆ. ಅವರ ಮೌಖಿಕ ಪಠ್ಯ ನೆನಪಿಸಲು ಹಿಮ್ಮೇಳ ಅಥವಾ ಸಹಗಾಯಕರು ಪ್ರಮುಖ ಪಾತ್ರ ವಹಿಸುತ್ತಾರೆ.

ಮೌಖಿಕ ಪರಂಪರೆಯು ಹಳೆಯ ತಲೆಮಾರಿನಿಂದ ಬಂದಿದ್ದರೂ ಸಹ ಅದು ವಿಕಾಸಗೊಂಡು ವಾಸ್ತವಿಕ ವರ್ತಮಾನ ಬದುಕಿನ ಚಿತ್ರಣವನ್ನು ತನ್ನ ಪರಿಸರದಲ್ಲಿ ಪಠ್ಯವನ್ನು ಚಿತ್ರಿಸುತ್ತದೆ. ಇಲ್ಲಿ ಪಠ್ಯದ ಪರಿಕಲ್ಪನೆ ಹಾಗೂ ಸಾಹಿತ್ಯದ ವಿಶ್ಲೇಷಣೆಯು ಅತ್ಯಂತ ಮಹತ್ವ ಪಡೆದಿದೆ. ಒಂದು ಕೃತಿಯ ಆಕೃತಿಯೇ ಪಠ್ಯವಾಗಿರುತ್ತದೆ. ಮೌಖಿಕವಾದ ಪಠ್ಯ ಅನೇಕ ಹಂತಗಳನ್ನು ದಾಟಿ ಬಂದಿರುತ್ತದೆ. ಇದು ಜನಪದರ ಅಂತರಂಗದಿಂದ ಹೊರಹೊಮ್ಮಿದಂತಹುದು. ಇಲ್ಲಿ ವೈಯಕ್ತಿಕವಾದ ಅವರ ಅನುಭವಗಳು ಸಮಷ್ಟಿ ಅಭಿವ್ಯಕ್ತಿಯಲ್ಲಿ ರೂಪಾಂತರವಾಗುವವು. ಮೌಖಿಕ ಪರಂಪರೆಯ ಉದ್ದಕ್ಕೂ ಪಠ್ಯಗಳು ಒಂದು ಭಾಷೆಯಿಂದ ಇನ್ನೊಂದು ಭಾಷೆಗೆ, ಒಬ್ಬ ಹಾಡುಗಾರನಿಂದ ಇನ್ನೊಬ್ಬ ಹಾಡುಗಾರನಿಗೆ ರೂಪಾಂತರ ಹೊಂದಿ ಬದಲಾವಣೆ ಹೊಂದುತ್ತದೆ. ಇಂತಹ ವೈಶಿಷ್ಟ್ಯವು ಬುರ‍್ರಕತೆಗಳಲ್ಲಿ ಕಂಡುಬರುತ್ತದೆ. ಹಾಗೆಯೇ ಮಾದೇಶ್ವರಕಾವ್ಯ, ಮಂಟೆಸ್ವಾಮಿಕಾವ್ಯ, ಜುಂಜಪ್ಪಕಾವ್ಯ, ಸಿರಿಕಾವ್ಯ ಮುಂತಾದ ಜನಪದ ಕಾವ್ಯಗಳಲ್ಲಿ ಈ ವೈಶಿಷ್ಟ್ಯವನ್ನು ಕಾಣಬಹುದು.

ಮೌಖಿಕ ಪಠ್ಯಗಳು ಅತ್ಯಂತ ದೀರ್ಘವಾಗಿ ಹೊರಹೊಮ್ಮಿರುತ್ತವೆ. "ಈ ಬೃಹತ್‌ಪಠ್ಯದ ಪರಿಕಲ್ಪನೆಯು ಆ ದೇಶಿ ಕಥನದ ಸಾಂಸ್ಕೃತಿಕ ಬಂಧುತ್ವತ ಸಾಮಾಜಿಕ ರಚನೆಯನ್ನು ಧ್ವನಿಸುತ್ತಿರುತ್ತದೆ. ಕಥನಗಳ ಸಾಂಸ್ಕೃತಿಕ ರಚನೆಗೂ ಪಠ್ಯದ ಭಾಷಿಕ ರಚನೆಗೂ ವ್ಯತ್ಯಾಸವಿಲ್ಲ. ಪಠ್ಯವೂ ಸೂಕ್ಷ್ಮವಾಗಿ ಒಂದೇ ಸಂದರ್ಭದಲ್ಲಿ ವಾಚ್ಯಪಠ್ಯ ಮತ್ತು ಸೂಚ್ಯಪಠ್ಯ ಎಂಬ ಎರಡು ಪಠ್ಯಗಳನ್ನು ನಿರೂಪಿಸುತ್ತಿರುತ್ತದೆ. ಹಾಡುಗಾರನದು ಒಂದು ಬಗೆಯ ವಾಚ್ಯಪಠ್ಯವಾದರೆ ಆಲಿಸುವ, ಇಡೀ ಸಮುದಾಯವೇ ತಮ್ಮ ಸುಪ್ತ

ಮನಸ್ಸಿನಲ್ಲಿ ಸೂಚ್ಯಪಠ್ಯವನ್ನು ಅನುಭವಿಸುವ ಮೂಲಕ ಹಾಡುಗಾರನ ಬಾಯಿಂದ ಹರಿದು ಬಂದ ಕಥನವನ್ನು ತಮ್ಮ ಮನೋಭೂಮಿಕೆಯಲ್ಲಿ ಪುನರ್ ಅನುಭವಿಗೊಳಿಸುತ್ತ ಪಠ್ಯವನ್ನು ಬೆಳೆಸುತ್ತವೆ. ಈ ಎರಡೂ ಬಗೆಯ ಪಠ್ಯಗಳು ಪೂರ್ವದ ಸ್ಮೃತಿ ಸಂಚಯದ ಕೋಶಗಳಿಂದ ತಮ್ಮ ಕಾಲದ ಆಕೃತಿಗಳನ್ನು ಒಟ್ಟು ಸಮಾಜದ ಬಿಂಬವಾಗಿ ನಿರ್ಮಿಸುತ್ತಿರುತ್ತದೆ. ಹೀಗಾಗಿ ಪಠ್ಯ ಎಂಬುದು ಗೋಚರ ಅಗೋಚರ ಎರಡೂ ಶೈಲಿಗಳಲ್ಲಿ ಅನಾವರಣಗೊಳ್ಳುತ್ತದೆ. ಪಠ್ಯದ ಅಗೋಚರ ಶೈಲಿಯೆಂದರೆ ಆ ಸಮುದಾಯದ ಸಾಂಸ್ಕೃತಿಕ ಮನಸ್ಸು ಪ್ರತಿಯೊಂದು ದೇಶಿ ಕಥನವೂ ತನ್ನದೇ ಆದ ಸಾಂಸ್ಕೃತಿಕ ಮನಸ್ಸನ್ನು ಸೂಚ್ಯಪಠ್ಯದಲ್ಲಿ ತನಗೆ ತಾನೆ ರೂಪಿಸಿಕೊಳ್ಳುತ್ತದೆ. ವಾಚ್ಯಪಠ್ಯ ಎಂದರೆ ಗಾಯಕನು ರೂಪಿಸುವ ಒಂದು ಪಠ್ಯವಾಗಿದ್ದು ಅದು ತನ್ನ ಆಳದಲ್ಲಿ ಸೂಚ್ಯಪಠ್ಯದ ಗುಣವನ್ನು ಗುಪ್ತವಾಗಿ ಬಚ್ಚಿಟ್ಟುಕೊಂಡಿರುತ್ತದೆ"(ಮೊಗಳ್ಳಿ ಗಣೇಶ, ೨೦೦೬: ೭೫). ಜನಪದ ಪಠ್ಯಗಳೆಲ್ಲವು ಸಮಕಾಲೀನ ಜಗತ್ತಿನ ವಿಷಯವನ್ನು ನೀಡುತ್ತವೆ. ಈ ಪಠ್ಯಗಳು ದೇಸೀ ಕಥನಗಳನ್ನು ಒಳಗೊಂಡಿದ್ದರಿಂದ ಆ ಕಾಲದ ಸಂಸ್ಕೃತಿಯನ್ನು ಹುಡುಕಬಹುದು. ಒಟ್ಟಾರೆ ಈ ಕಥನಗಳಲ್ಲಿ ಸಾಂಸ್ಕೃತಿಕ, ಸಾಮಾಜಿಕ ಮುಂತಾದ ವಿಷಯಗಳನ್ನು ತಿಳಿದುಕೊಳ್ಳಬಹುದು. ಇಂತಹ ಅಂಶಗಳನ್ನು ಬುರ್ರಕತೆಗಳಲ್ಲಿ ನೋಡಲಾಗುವುದು.

### ಬುರ್ರಕತೆಗಳ ವಸ್ತು

ಬುರ್ರಕತೆಗಳು ಗದ್ಯ ಮತ್ತು ಪದ್ಯಮಿಶ್ರಿತವಾದ ಕಾವ್ಯ ಬಂಧವಾಗಿದೆ. ಆದರೆ ಈ ಕಾವ್ಯಗಳಲ್ಲಿ ಗದ್ಯಕ್ಕಿಂತ ಪದ್ಯವೇ ಪ್ರಧಾನ ಅಂಶವನ್ನು ಒಳಗೊಂಡಿರುವ ಭಾಗ. ಇಲ್ಲಿ ಗದ್ಯ ಇದ್ದರೂ ಸಹ ಪದ್ಯದ ಧಾಟಿ, ಅಭಿನಯ, ಸಂಗೀತ, ನೃತ್ಯದಿಂದ ಕಾವ್ಯದ ಸೊಗಸು ಕಾಣಿಸುತ್ತದೆ. ಬುರ್ರಕತೆಗಳ ನಿರೂಪಣೆಯು ಪ್ರತಿಯೊಂದು ಸನ್ನಿವೇಶ ಕಣ್ಣಿಗೆ ಕಟ್ಟುವಂತೆ ಚಿತ್ರಿಸಿರುತ್ತಾರೆ. ಮುಖ್ಯವಾಗಿ ಈ ಕತೆಗಳು ತನ್ನದೇ ಆದ ಪರಂಪರೆ ಹಾಗೂ ವೈವಿಧ್ಯತೆಯನ್ನು ಮೈಗೂಡಿಸಿಕೊಂಡಿವೆ. ಇವು ವೃತ್ತಿಯನ್ನು ಅವಲಂಬಿಸಿ ರಚನೆಗೊಂಡಿದ್ದರಿಂದ ಇವು ಪ್ರೇಕ್ಷಕರ ಅಭಿಲಾಷೆಗಳಿಗೆ ಅನುಗುಣವಾಗಿ ಕಥನದ ವಸ್ತುವನ್ನು ಒಳಗೊಂಡ ರಚನೆಗಳಾಗಿರುತ್ತವೆ. ಹೀಗಾಗಿ ಈ ಕಾವ್ಯಗಳಲ್ಲಿ ಸಾಮಾನ್ಯ ಜನರ ಬದುಕು ವಾಸ್ತವಿಕ ಪ್ರಪಂಚದ ವಸ್ತುವನ್ನು ಒಳಗೊಂಡಿರುತ್ತದೆ. ಪ್ರಸ್ತುತ ಬಾಲಗಿರಿರಾಜಕತೆ, ಕಾಂಭೋಜರಾಜಕತೆ, ಭೂಲಕ್ಷ್ಮಿಕತೆ, ಶಿವಕುಮಾರಕತೆ ಹಾಗೂ ಆರ್ಯವರಕತೆಗಳನ್ನು ಬೇರೆ ಬೇರೆ ವಕ್ತೃಗಳಿಂದ ಸಂಗ್ರಹಿಸಿದೆ. ಈ ಕತೆಗಳು ವೀರ, ಛಲ, ಧರ್ಮ, ಸಂಘರ್ಷ, ಸ್ತ್ರೀಧರ್ಮ, ತ್ಯಾಗ ಮುಂತಾದ ಮೌಲ್ಯಗಳನ್ನು ಒಳಗೊಂಡಿವೆ. ಹಾಗೆಯೇ ಪ್ರಾಣಿಗಳು, ಪಕ್ಷಿಗಳು, ಪ್ರಕೃತಿ, ದ್ವೇಷ-ಅಸೂಯೆ, ಧರ್ಮ ಸಮನ್ವಯತೆ ಮುಂತಾದ ಅಂಶಗಳು ಈ ಕತೆಗಳಲ್ಲಿ ಕಂಡುಬರುತ್ತದೆ.

ಒಬ್ಬರೇ ವಕ್ತೃವಿನಿಂದ ಸಂಗ್ರಹಿಸಿದ ಕತೆಗಳ ವಸ್ತುವಿನಲ್ಲಿ ಹಾಗೂ ಅದರ ಶೈಲಿಯಲ್ಲಿ ವ್ಯತ್ಯಾಸ ಕಂಡುಬರುವುದಿಲ್ಲ. 'ಕನ್ನಡ-ತೆಲುಗು' ಎರಡೂ ಭಾಷೆಗಳಲ್ಲಿ ಒಬ್ಬರೇ ಹಾಡುವುದರಿಂದ ಎರಡೂ ಭಾಷೆಗಳನ್ನು

ಅವಲೋಕಿಸಿದಾಗ ಅದರ ಕಥಾವಸ್ತು, ಶೈಲಿ ಒಂದೇ ತೆರನಾಗಿ ಇದ್ದುದ್ದು ಕಾಣಬಹುದು. ಹಾಗೆಯೇ ಕಥಾವಸ್ತುವನ್ನು ಪರಿಶೀಲಿಸಿದಾಗ ಕನ್ನಡದಿಂದ ತೆಲುಗು, ತೆಲುಗಿನಿಂದ ಕನ್ನಡಕ್ಕೆ ರೂಪಾಂತರ ಹೊಂದಿವೆ ಎಂಬಂತೆ ಎರಡೂ ಭಾಷೆಗಳಲ್ಲಿ ಕಂಡುಬರುತ್ತವೆ. ಹಾಗೆಯೇ ಒಬ್ಬರೇ ವಕ್ತೃ ಹಾಡಿದ ಎರಡು ಆವೃತ್ತಿಗಳು ಭಾಷಾಂತರವಾಗಿ ಕಾಣುತ್ತವೆ. ಅಲ್ಲಿರುವ ಪ್ರತಿಯೊಂದು ಸನ್ನಿವೇಶವನ್ನು ಒಂದೇ ತೆರನಾಗಿ ನಿರೂಪಿಸಿರುತ್ತಾರೆ. ಅಲ್ಲಿ ಹೆಚ್ಚಾಗಿ ವ್ಯತ್ಯಾಸ ಕಂಡುಬರುವುದಿಲ್ಲ. ಹಾಗೆಯೇ ಬೇರೆ ಬೇರೆ ವಕ್ತೃಗಳಿಂದ ಸಂಗ್ರಹಿಸಿದ ಒಂದೇ ಕಥಾವಸ್ತುವಿನ 'ಕನ್ನಡ-ತೆಲುಗು' ಎರಡು ಆವೃತ್ತಿಗಳನ್ನು ನೋಡಿದರೆ ಕಥಾವಸ್ತುವಿನಲ್ಲಿ ಭಿನ್ನತೆಯಿಲ್ಲದೆ ಅಭಿವ್ಯಕ್ತ ಮಾಡಿದ್ದಾರೆ. ಆದರೆ ಕತೆಯ ಒಳಗೆ ಕೆಲವು ಸನ್ನವೇಶಗಳಲ್ಲಿ ಭಿನ್ನತೆ ವ್ಯಕ್ತವಾಗಿದೆ. ಉಳಿದಂತೆ ಸಮಾನ ಅಂಶಗಳು ಕಂಡುಬರುತ್ತವೆ. ಇಲ್ಲಿ ಎರಡು ಭಾಷೆಗಳಾದ 'ಕನ್ನಡ-ತೆಲುಗು' ಕತೆಗಳನ್ನು ಪರಿಶೀಲಿಸಿ, ಕನ್ನಡದಲ್ಲಿ ಅದರ ಪಠ್ಯವನ್ನು ವಿಶ್ಲೇಷಿಸುವುದು ಅವಶ್ಯ.

### ೩.೧. ಕಾಂಭೋಜರಾಜಕತೆ

ಈ ಕತೆಯನ್ನು ಅನೇಕ ಜನಪದ ಗಾಯಕರು ಹಾಡುತ್ತಾರೆ. ಬುರ್ರಕತೆಗಾರರು, ಚೌಡಿಕೆಯವರು ಮುಖ್ಯವಾಗಿ ಹಾಡುತ್ತಾರೆ. ಶಂಕ್ರಮ್ಮ ಹಾಡಿದ ಈ ಕತೆಯನ್ನು 'ಕಾಂಭೋಜರಾಜನ ಕತೆ' ಎಂದು ಕರೆಯುತ್ತಾರೆ. ಇದನ್ನು 'ಕನ್ನಡ-ತೆಲುಗು' ಎರಡು ಭಾಷೆಗಳಲ್ಲೂ ಸಂಗ್ರಹಿಸಲಾಗಿದೆ. ಈ ಕತೆಗೆ ಆಂಧ್ರಪ್ರದೇಶದಲ್ಲೂ ಸಹ 'ಕಾಂಭೋಜರಾಜ ಕತೆ' ಎಂದು ಕರೆಯುತ್ತಾರೆ. ಕರ್ನಾಟಕ ಚೌಡಿಕೆ ಸಂಪ್ರದಾಯದವರು ಸಹ ಈ ಕತೆಗೆ 'ಕಾಂಭೋಜರಾಜ ಕತೆ' ಎಂದು ಕರೆಯುತ್ತಾರೆ. ಆದರೆ ಬಳ್ಳಾರಿ ಜಿಲ್ಲೆಯ ಸಂಡೂರು ತಾಲ್ಲೂಕಿನ ದರೋಜಿ ಈರಮ್ಮ ಮಾತ್ರ 'ಕೃಷ್ಣಗೊಲ್ಲರ ಕತೆ' ಎಂದು ಕರೆಯುತ್ತಾರೆ. ಶಂಕ್ರಮ್ಮನ ಕಥನ, ಆಂಧ್ರಪ್ರದೇಶದ ಕಥನ ಚೌಡಿಕೆಯರ ಕಥನಕ್ಕಿಂತ ಈರಮ್ಮ ಕಥನದ ಹಾಡು ವಿಶಿಷ್ಟವಾಗಿ ಭಿನ್ನವಾಗಿ ಕಾಣುತ್ತದೆ. ಇದರಲ್ಲಿ ಬರುವ ಹುಬ್ಬಳ್ಳಿ ಡಾಕ್ಟ್ರು, ಶರಬಂಧರಾಜನ ಮದುವೆ ಸಂದರ್ಭದಲ್ಲಿ ತನ್ನ ಸುತ್ತಮುತ್ತಲಿನ ಹಳ್ಳಿಗಳ ಹೆಸರನ್ನು ಪ್ರಸ್ತಾಪಿಸುವುದು ಕಾಣುತ್ತೇವೆ. ಇವರ ಕಥನದಲ್ಲಿ ಒಂದು ಸಮುದಾಯದ ಚಿತ್ರಣವನ್ನು ಕೊಟ್ಟಿದ್ದಾರೆ. ಆದರೆ ಶಂಕ್ರಮ್ಮನವರ ಹಾಗೂ ಚೌಡಿಕೆಯರ ಕತೆಯಲ್ಲಿ ಮೂಲ ಜನಪದ ಆಶಯವು ಕಾಣಿಸುತ್ತದೆ. ಇವರು ತಮ್ಮ ಕತೆಗಳಲ್ಲಿ ಆಧುನಿಕತೆಯನ್ನು ಬಳಸಿಕೊಂಡಿಲ್ಲ. ಎಲ್ಲಾ ಕಥನಕಾರರ ಕತೆಯನ್ನು ಪರಿಶೀಲಿಸಿದಾಗ ಆ ಕಾವ್ಯದಲ್ಲಿ ಪ್ರಕೃತಿಯ ರಮ್ಯತೆ, ಮನುಷ್ಯನಂತೆ ಪ್ರಾಣಿ ಪಕ್ಷಿಗಳ ಬುದ್ಧಿ ಕೌಶಲ್ಯ ಇದ್ದು ಮನುಷ್ಯನು ಮೌಲ್ಯಯುತವಾದ ಜೀವನವನ್ನು ಹೇಗೆ ನಡೆಸಿಕೊಂಡು ಹೋಗಬೇಕೆಂಬುದನ್ನು ಈ ಕತೆಗಳಲ್ಲಿ ನಿರೂಪಿಸಲಾಗಿದೆ. ಇಲ್ಲಿ ಅರಸರ ಕತೆಯನ್ನು ಹೇಳಿದ್ದರೂ ಅವರು ಜನಸಾಮಾನ್ಯರ ಪ್ರತಿನಿಧಿಗಳಂತೆ ಚಿತ್ರಿತವಾಗಿದ್ದಾರೆ.

ಶಾಂಪುರ ಪಟ್ಟಣದ ಅರಸ ಶಮರಾಜ. ಹೆಂಡತಿ ಪಾಂದೇವಿ. ಒಬ್ಬನೇ ಮಗನಾದ ಕಾಂಭೋಜರಾಜನಿಗೆ ಏಳು ಜನ ಹೆಂಡತಿಯರು. ಒಬ್ಬರಿಗೂ ಮಕ್ಕಳ ಭಾಗ್ಯ ಇದ್ದಿಲ್ಲ. ಇದರಿಂದ ಕಾಂಭೋಜರಾಜ

ಜ್ಯೋತಿಷಿಯನ್ನು ಕರೆಸಿ ಪಂಚಾಂಗ ನೋಡಿದಾಗ, ಶಮರಾಜನು ಗರ್ಭಿಣಿ ಆಕಳನ್ನು ಕೊಂದಿದ್ದರಿಂದ ಅದರ ಶಾಪ ಹತ್ತಿದೆ ಎನ್ನುತ್ತಾನೆ. ಜ್ಯೋತಿಷಿಯ ಆಜ್ಞೆಯಂತೆ ಶಾಪ ಮುಕ್ತಿಗಾಗಿ ಊರು ಮುಂದೆ ಬಾವಿ ತೋಡಿಸಿ, ಎತ್ತುಗಳಿಲ್ಲದೆ ರಾಜ ರಾಣಿಯರು ಶ್ರಮವಹಿಸಿ ಹಣ್ಣುಹಂಪಲ ಬೆಳೆಯುತ್ತಾರೆ. ಕಷ್ಟಪಟ್ಟು ದುಡಿದರು ಮಕ್ಕಳ ಭಾಗ್ಯ ಸಿಗದಿದ್ದರಿಂದ ರಾಜರಾಣಿಯರು ವಿಷ ಕುಡಿದು ಸಾಯಲು ಮುಂದಾಗುತ್ತಾರೆ. ಆಗ ಪರಮಾತ್ಮ ಪ್ರತ್ಯಕ್ಷನಾಗಿ ಆರು ಜನ ಹಿರಿಯ ರಾಣಿಯರಿಗೆ ಸಂತಾನವನ್ನು ಕೊಟ್ಟು ಹೋಗುತ್ತಾನೆ. ಆದರೆ ಕಿರಿಯ ಹೆಂಡತಿ ಸಿರಿದೇವಿಗೆ ಸಂತಾನ ಕೊಡುವುದಿಲ್ಲ. ರಾಜನು ಪರಮಾತ್ಮನ ಆಜ್ಞೆಯ ಮೇರೆಗೆ ಆರು ಜನ ಹಿರಿಯ ರಾಣಿಯರು ಹೆತ್ತ ಮಕ್ಕಳನ್ನು ಸಿರಿದೇವಿಯ ಉಡಿಯಲ್ಲಿ ಹಾಕಿ ಪೋಷಣೆ ಮಾಡಲು ಹೇಳುತ್ತಾನೆ. ಅದರಂತೆ ಸಿರಿದೇವಿ ಮಕ್ಕಳ ಪೋಷಣೆ ಮಾಡುತ್ತಾಳೆ. ಹಿರಿಯ ರಾಣಿಯರು ಸಿರಿದೇವಿಯ ಮೇಲಿನ ಮತ್ಸರದಿಂದ ಮಕ್ಕಳನ್ನು ತಮ್ಮ ವಶ ಮಾಡಿಕೊಳ್ಳಬೇಕೆಂದು, ಸಿರಿದೇವಿಯ ಮನೆಗೆ ಹೋಗಿ ಮಾವಿನ ಹಣ್ಣುಗಳಲ್ಲಿ ವಿಷ ಬೆರೆಸುತ್ತಾರೆ. ಹಣ್ಣುಗಳನ್ನು ತಿಂದ ಮಕ್ಕಳು ಪ್ರಜ್ಞೆ ತಪ್ಪುತ್ತಾರೆ. ಸಿರಿದೇವಿ ಮಕ್ಕಳಿಗೆ ವಿಷ ಕೊಟ್ಟಿದ್ದಾಳೆಂದು ಹಿರಿಯ ರಾಣಿಯರ ಒತ್ತಾಯದ ಮೇರೆಗೆ ರಾಜನು ಸಿರಿದೇವಿಗೆ ಶಿಕ್ಷೆ ವಿಧಿಸುತ್ತಾನೆ. ಸಿರಿದೇವಿಯನ್ನು ಸ್ಮಶಾನದಲ್ಲಿ ತೋಡಿದ ಗವಿಯಲ್ಲಿ ಜೀವಂತ ಇಟ್ಟು, ಮೈ, ಕೈ, ಕಾಲುಗಳಿಗೆ ಸರಪಳಿ ಹಾಕಿ ಅರಮನೆಗೆ ಬರುತ್ತಾನೆ.

ಸಿರಿದೇವಿಯ ಪತಿಭಕ್ತಿಯನ್ನು ಕಂಡು ಪರಮಾತ್ಮನು ಜಂಗಮ ರೂಪ ಧರಿಸಿ ಮಕ್ಕಳ ಭಾಗ್ಯ ಕೊಟ್ಟು ಹೋಗುತ್ತಾನೆ. ಸಿರಿದೇವಿಗೆ 'ಶರಬಂಧನ'ದಲ್ಲಿ ಮಗ ಜನಿಸಿದ್ದರಿಂದ 'ಶರಬಂಧರಾಜ'ಎಂದು ಹೆಸರಿಸುತ್ತಾಳೆ. ಪರಮಾತ್ಮನು ಜಂಗಮರೂಪಧರಿಸಿ ಕಾಂಭೋಜರಾಜನ ಅರಮನೆಗೆ ಬಂದು ಭಿಕ್ಷೆ ಬೇಡುತ್ತಾನೆ. ರಾಜ ಜಂಗಮನಿಗೆ ಭಿಕ್ಷೆ ನೀಡುವುದಿಲ್ಲ ಎಂದಾಗ, ವಿಭೂತಿಯಾದರು ಹಚ್ಚಿಕೋ ಎನ್ನುತ್ತಾನೆ. ಬೆನ್ನು ತಿರುವಿದ ಕಾಂಭೋಜರಾಜನಿಗೆ ಬೆನ್ನಿಗೆ ವಿಭೂತಿ ಹಚ್ಚಿದ ಕೂಡಲೇ ಬೆನ್ನಿನಲ್ಲಿ ಬೇತಾಳ ಹುಣ್ಣು ಹುಟ್ಟುತ್ತದೆ. ಆ ಹುಣ್ಣನ್ನು ವಾಸಿ ಮಾಡಲು ಯಾವ ವೈದ್ಯರಿಂದಲೂ ಆಗುವುದಿಲ್ಲ. ಇದರಿಂದ ರಾಜನು ದುಃಖಿಸುತ್ತಾನೆ.

ಅತ್ತ ಸಿರಿದೇವಿ ಮಗನ ಪೋಷಣೆಯಲ್ಲಿ ತನ್ನ ಕಷ್ಟವನ್ನು ಮರೆತಿರುತ್ತಾಳೆ. ಮಗ ಏಳು ವರ್ಷದವನಾಗುತ್ತಾನೆ. ಅರಮನೆಯ ಮೇಲಿಂದ ಶಾಂಪುರ ಪಟ್ಟಣವನ್ನು ನೋಡಿ ಹಟಮಾಡಿ ತಾಯಿಗೆ ಹೇಳಿ, ಆ ಪಟ್ಟಣಕ್ಕೆ ಹೋಗುತ್ತಾನೆ. ರಾಜನ ಅರಮನೆಯ ಮುಂದೆ ಹುಡುಗರು ಗೋಲಿ ಆಟ ಆಡುತ್ತಿರುತ್ತಾರೆ. ಶರಬಂಧ ಆಟ ನೋಡುತ್ತ ನಿಂತುಕೊಂಡಾಗ, ಕಾಂಭೋಜರಾಜನು ಸಿರಿದೇವಿಯನ್ನು ನೆನೆದು ಅಳುತ್ತಿರುತ್ತಾನೆ ಇದನ್ನು ರಾಜನ ಬಂಟರಿಂದ ಶರಬಂಧರಾಜಕುಮಾರನು ತಿಳಿದುಕೊಳ್ಳುತ್ತಾನೆ. ನೇರವಾಗಿ ಮನೆಗೆ ಬಂದ ಶರಬಂಧನು ತಾಯಿಗೆ ತಂದೆ ಯಾರೆಂದು ಪ್ರಶ್ನಿಸುತ್ತಾನೆ. ರಾಜನ ಹಿರಿಯ ರಾಣಿಯರ ಕುತಂತ್ರ, ತನಗೆ ಕೊಟ್ಟ ಶಿಕ್ಷೆ ಮುಂತಾದ ವಿಷಯಗಳನ್ನು ವಿವರವಾಗಿ ಮಗನಿಗೆ ಹೇಳುತ್ತಾಳೆ. ಆಗ ವೈರಾಮಜೋಗಿ ವೇಷ ಹಾಕಿಕೊಂಡು ಶರಬಂಧನು ಶಾಂಪುರ ಪಟ್ಟಣಕ್ಕೆ ಬರುತ್ತಾನೆ. ರಾಜನ

ಬಂಟರು ಹೊಸ ವೈದ್ಯನೆಂದು ಅರಮನೆಗೆ ಕರೆದುಕೊಂಡು ಹೋಗಿ ರಾಜನ ಬೆನ್ನಿನ ಹುಣ್ಣನ್ನು ವಾಸಿ ಮಾಡಲು ಹೇಳುತ್ತಾರೆ. ಶರಬಂಧನು ಗೋಡೆಯ ಮೇಲೆ ಬರೆದ ಪರಮಾತ್ಮನ ಅಕ್ಷರಗಳನ್ನು ಓದಿಕೊಂಡು, ಮದ್ದು ತಂದು ವಾಸಿ ಮಾಡುತ್ತೇನೆಂದು ಹೊರಡುತ್ತಾನೆ. ಅಲ್ಲಿಂದ ನೇರವಾಗಿ ತಾಯಿಗೆ ಬಂದು ಹೇಳಿದಾಗ ಆಕೆ ಬೇಡ ಎಂದು ಗೋಳಾಡುತ್ತಾಳೆ. ಶರಬಂಧನು ಮನೆಯ ಮುಂದೆ ತುಳಸಿಗಿಡ ಇಟ್ಟು ಅದು ಹಸಿರಾಗಿದ್ದರೆ ಬದುಕಿದ್ದಾನೆಂದು ಒಣಗಿದರೆ ಸತ್ತನೆಂದು ತಿಳಿಯಬೇಕೆಂದು ಹೇಳಿ ಅರಣ್ಯ ಮಾರ್ಗವಾಗಿ ಹೋಗುತ್ತಾನೆ.

ಇತ್ತ ಹಿರಿಯ ಆರು ಜನ ರಾಜಕುಮಾರರು ನಾವೇ ಮದ್ದು ತರುತ್ತೇವೆಂದು ತಂದೆಗೆ ಹೇಳಿ ಹೋಗುತ್ತಾರೆ. ಹೋಗುವಾಗ ಅರಣ್ಯದಲ್ಲಿ ದಾರಿ ಕಾಯುವ ಮಲ್ಲಣ್ಣನಿಗೆ ಸುಂದರವಾದ ಹೆಣ್ಣು ಇರುವ ಪಟ್ಟಣವನ್ನು ಕೇಳಿ, ಸುಂದರಮ್ಮ ಪಟ್ಟಣಕ್ಕೆ ಹೋಗುತ್ತಾರೆ. ಸುಂದರಮ್ಮ ಆರು ಜನ ರಾಜಕುಮಾರರನ್ನು ಹಿಡಿದು ತನ್ನ ಅಗ್ನಿಕುಂಡದಲ್ಲಿ ಹಾಕುತ್ತಾಳೆ. ಶರಬಂಧನು ಸಹ ಅದೇ ದಾರಿಯಲ್ಲಿ ಬಂದು, ದಾರಿ ಕಾಯುವ ಮಲ್ಲಣ್ಣನಲ್ಲಿ ಎಲ್ಲಾ ದಾರಿಗಳ ವಿಷಯವನ್ನು ತಿಳಿದುಕೊಂಡನು. ಮೊದಲು ಎದಿನಗಂಧಿ ಪಟ್ಟಣಕ್ಕೆ ಹೋಗುತ್ತಾನೆ. ಎದಿನಗಂಧಿ ಹತ್ತಿರ ಮದ್ದನ್ನು ಪಡೆದು, ಅವಳನ್ನು ಮದುವೆಯಾಗಲು ಒಪ್ಪುತ್ತಾನೆ. ಅಲ್ಲಿಂದ ಚಿತ್ರಾಂಗಿ ಪಟ್ಟಣದ ಚಿತ್ರಾಂಗಿಯನ್ನು ಸಾಕಿದ ಎರಡು ಹುಲಿಗಳನ್ನು ಕೊಂದು ಅವಳನ್ನು ಮದುವೆಯಾಗಲು ಒಪ್ಪುತ್ತಾನೆ. ನಂತರ ಪೂಲಾವತಿ, ರೂಪಾವತಿ ಪಟ್ಟಣಕ್ಕೆ ಬಂದು, ಫೂಲಾವತಿ, ರೂಪಾವತಿಯನ್ನು ಮದುವೆಯಾಗಲು ಒಪ್ಪುತ್ತಾನೆ. ಮುಂದೆ ಸುಂದರಮ್ಮ ಪಟ್ಟಣಕ್ಕೆ ಬರುತ್ತಾನೆ. ಸುಂದರಮ್ಮಳನ್ನು ಗೆಲ್ಲುವ ಉಪಾಯವನ್ನು ಅದೇ ಪಟ್ಟಣದ ಬಡಿಗೇರ ಮೋನಯ್ಯನಿಂದ ತಿಳಿದುಕೊಂಡು ಸುಂದರಮ್ಮಳನ್ನು ಗೆಲ್ಲುತ್ತಾನೆ. ಆಗ 'ಓಡಿದರೆ ಒನ್ನೆಕಾರ ಸೋತೆನಯ್ಯ ಸೊಗಸುಗಾರ' ಎಂದು ತನ್ನ ಸೋಲನ್ನು ಒಪ್ಪಿಕೊಂಡು ತನ್ನನ್ನು ಮದುವೆಯಾಗಲು ಕೇಳಿಕೊಳ್ಳುತ್ತಾಳೆ. ಆರು ಜನ ಹಿರಿಯ ಅಣ್ಣಂದಿರನ್ನು ಜಟ್ಟಿಗಳನ್ನು ಬದುಕಿಸಿದರೆ ಮದುವೆಯಾಗುತ್ತೇನೆಂದು ಹೇಳುತ್ತಾನೆ, ಸುಂದರಮ್ಮ ಎಲ್ಲರನ್ನು ಬದುಕಿಸುತ್ತಾಳೆ. ಶರಬಂಧರಾಜಕುಮಾರನು ಸುಂದರಮ್ಮ, ಫೂಲಾವತಿ, ರೂಪಾವತಿ, ಚಿತ್ರಾಂಗಿ, ಎದಿನಗಂಧಿ ಐದು ಜನ ಸುಂದರಿಯರನ್ನು ಮದುವೆಯಾಗಿ, ಮದ್ದನ್ನು ತೆಗೆದುಕೊಂಡು ಶಾಂಪುರ ಪಟ್ಟಣದ ದಾರಿ ಹಿಡಿದು ಬರುತ್ತಾನೆ. ಆರು ಜನ ಹಿರಿಯ ರಾಜಕುಮಾರರಿಗೆ ಶರಬಂಧನ ಮೇಲೆ ಮತ್ಸರ ಉಂಟಾಗಿ ಸಮುದ್ರದಲ್ಲಿ ಜಳಕ ಮಾಡುವಾಗ ಶರಬಂಧನನ್ನು ಕೊಲ್ಲುತ್ತಾರೆ. ಇದನ್ನು ನೋಡಿದ ಪರಮಾತ್ಮನು ಆರು ಜನರನ್ನೂ ಕುರುಡರಾಗಿ ಮಾಡುತ್ತಾನೆ. ಸಿರಿದೇವಿಯು ತನ್ನ ಮನೆಯ ಮುಂದಿನ ತುಳಸಿ ಗಿಡ ಒಣಗಿದ್ದನ್ನು ಕಂಡು ಮಗ ಸತ್ತನೆಂದು ಪ್ರಲಾಪಿಸುತ್ತಾಳೆ. ಪರಮಾತ್ಮನು ಸಿರಿದೇವಿಯ ಪತಿಭಕ್ತಿ, ಶರಬಂಧನ ಪ್ರಾಮಾಣಿಕತೆಯನ್ನು ಕಂಡು ಶರಬಂಧನನ್ನು ಬದುಕಿಸಿ ಹೋಗುತ್ತಾನೆ. ಶರಬಂಧನು ಅಲ್ಲಿಂದ ಹೆಂಡಿತಿಯರಿದ್ದ ಸ್ಥಳಕ್ಕೆ ಬಂದಾಗ, ಆರು ಜನ ಹಿರಿಯ ಅಣ್ಣಂದಿರು ಕುರುಡರಾಗಿದ್ದನ್ನು ಕಂಡು, ಶಾಂಪುರ ಪಟ್ಟಣಕ್ಕೆ ಕರೆದುಕೊಂಡು

ಬರುತ್ತಾನೆ. ಶರಬಂಧನು ಐದು ಜನ ಹೆಂಡತಿಯರನ್ನು ಸ್ಮಶಾನದಲ್ಲಿದ್ದ ಅರಮನೆಗೆ ಕರೆದುಕೊಂಡು ಬಂದು ತಾಯಿಗೆ ಪರಿಚಯಿಸುತ್ತಾನೆ. ನಂತರ ಎದಿನಗಂಧಿಯನು ಕರೆದುಕೊಂಡು, ಮದ್ದನ್ನು ತೆಗೆದುಕೊಂಡು ಶಾಂಪುರು ಪಟ್ಟಣಕ್ಕೆ ಬರುತ್ತಾನೆ. ಎದಿನಗಂಧಿಯೇ ಮಾವನ ಬೆನ್ನಿನ ಹುಣ್ಣಿಗೆ ಮದ್ದು ಹಾಕಿ ವಾಸಿ ಮಾಡುತ್ತಾಳೆ.

ಕಾಂಭೋಜರಾಜನು ಶರಬಂಧನು ತನ್ನ ಮಗನೆಂದು ತಿಳಿದ ಮೇಲೆ ತನ್ನ ಆಸ್ಥಾನದ ಪಟ್ಟಾಭಿಷೇಕ ಮಾಡುತ್ತಾನೆ. ಇದರಿಂದ ಹಿರಿಯ ರಾಣಿಯರು ತಮ್ಮ ಮಕ್ಕಳಿಗೆ ಅಧಿಕಾರ ಸಿಗಲಿಲ್ಲ ಎಂದು, ಸಿರಿದೇವಿ, ಶರಬಂಧನು ಇದ್ದ ಅರಮನೆಗೆ ಬೆಂಕಿ ಇಡುತ್ತಾರೆ. ಪರಮಾತ್ಮನು ನೋಡಿ ತನ್ನ ಜಡೆಯಲ್ಲಿದ್ದ ಗಂಗೆಗೆ ಜಲಬಿಡಲು ಹೇಳುತ್ತಾನೆ. ಆಗ ತಾಯಿ ಮಗ ಬೆಂಕಿ ಅನಾಹುತದಿಂದ ಪಾರಾಗುತ್ತಾರೆ. ಕಾಂಭೋಜರಾಜನು ಹಿರಿಯ ರಾಣಿಯರು ಹಾಗೂ ಮಕ್ಕಳ ದುಷ್ಟತನವನ್ನು ಅರಿತ ಮೇಲೆ ಅವರ ಗುಣಗಳು ಮತ್ತೊಬ್ಬರು ಕಲಿಯಬಾರದೆಂದು (ಆರು ಜನ ರಾಣಿಯರು ಆರು ಜನ ರಾಜಕುಮಾರರು) ಒಟ್ಟು ಹನ್ನೆರಡು ಜನರ ತಲೆ ಬೋಳಿಸಿ ಮೆರವಣಿಗೆ ಮಾಡಿ ಕುದಿಯುವ ಸುಣ್ಣದ ಬಟ್ಟಿಯಲ್ಲಿ ಹಾಕಿಸುತ್ತಾನೆ.

ಇನ್ನು ಶಾಂಪುರ ಪಟ್ಟಣದಲ್ಲಿ ಕಾಂಭೋಜರಾಜ ಹೆಂಡತಿ ಸಿರಿದೇವಿ ಸಂತೋಷದಿಂದ ಇರುತ್ತಾಳೆ. ಮಗ ಶರಬಂಧರಾಜಕುಮಾರನಿಗೆ ಈಗಾಗಲೇ ಐದು ಜನ ಹೆಂಡತಿಯರಿದ್ದರೂ ಕೂಡ ಊರಲ್ಲಿ ತಮ್ಮ ಗೊಲ್ಲ ಸಮುದಾಯದ ಮಲ್ಲಯ್ಯ ಹೆಂಡತಿ ಕಮಲಾಕ್ಷಮ್ಮಳ ಮಕ್ಕಳಾದ ಗಿರಿದೇವಿ, ರತ್ನಾದೇವಿಯ ಜೊತೆ ಶರಬಂಧರಾಜಕುಮಾರನ ಮದುವೆ ಮಾಡುತ್ತಾರೆ. ಮಗನಿಗೆ ತಮ್ಮ ಸಮುದಾಯವನ್ನು ಚೆನ್ನಾಗಿ ನೋಡಿಕೊಳ್ಳಬೇಕೆಂದು ಹೇಳಿದ ತಂದೆ ತಾಯಿ ಇನ್ನು ಈ ಭೂಲೋಕ ಸಾಕು ಕೈಲಾಸಕ್ಕೆ ಹೋಗುತ್ತೇವೆಂದು ಹೇಳುತ್ತಾರೆ. ಪರಮಾತ್ಮನು ಕಳಿಸಿದ ಹೂವಿನ ರಥದಲ್ಲಿ ಸಿರಿದೇವಿ ಕುಳಿತುಕೊಳ್ಳುತ್ತಾಳೆ. ಗಂಡ ಕಾಂಭೋಜರಾಜ ಕುಳಿತುಕೊಳ್ಳಲು ಹೋದಾಗ ಅದರಲ್ಲಿ ಇದ್ದ ವಿಶ್ವಾಮಿತ್ರನು ಕೆಳಗೆ ದಬ್ಬುತ್ತಾನೆ. ಆಗ ಹೂವಿನ ರಥ ನಿಧಾನ ಮೇಲಕ್ಕೆ ಚಲಿಸುತ್ತಿದ್ದಾಗ, ಕಾಂಭೋಜರಾಜ ತನ್ನ ಹೆಂಡತಿಯ ಪಾದಗಳನ್ನು ಹಿಡಿದುಕೊಂಡು ಆಕೆಯೊಡನೆ ಕೈಲಾಸಕ್ಕೆ ಹೋಗುತ್ತಾನೆ.

**ವಿಶ್ಲೇಷಣೆ**

ಶಂಕ್ರಮ್ಮ ಹಾಗೂ ಸಂಗಡಿಗರಿಂದ ಸಂಗ್ರಹಿಸಿದ ಈ ಕಥನವು, ದರೋಜಿ ಈರಮ್ಮ ಅವರ ಕಥನ ಹಾಗೂ ಚೌಡಿಕೆಯರು ಹಾಡುವ ಕಥನಕ್ಕಿಂತ ಭಿನ್ನವಾಗಿ ಕಂಡುಬರುತ್ತದೆ. ಶಂಕ್ರಮ್ಮ ಅವರು ಹಾಡಿದ ಈ ಕಥನವು ಅದರ ಸ್ವರೂಪವನ್ನು ಅವಲೋಕಿಸಿದಾಗ ಮೂಲಕತೆಯಾಗಿ ಕಾಣಿಸುತ್ತದೆ.

**ಭೌಗೋಳಿಕ ವ್ಯಾಪ್ತಿ**

ಬುರ್ರಕಥನಕಾರರು ನೆಲೆಸಿರುವ ಪ್ರದೇಶದ ವ್ಯಾಪ್ತಿಯ ಊರುಗಳನ್ನು ಹೆಸರಿಸುತ್ತ ಕತೆಯನ್ನು ಹೆಚ್ಚು ಪ್ರಸ್ತುತಗೊಳ್ಳುವಂತೆ ಮಾಡುವ ವಿಧಾನವನ್ನು ಕಥಾ ನಿರೂಪಣೆಯಲ್ಲಿ ಕಾಣಬಹುದು. ಹಾಗೆ ವಿವರಿಸುವಾಗ

ಅವರ ತಿಳುವಳಿಕೆಯು ವ್ಯಾಪ್ತಿಯಲ್ಲಿ ನಿರ್ದಿಷ್ಟ ಪ್ರದೇಶದ ಹೆಸರುಗಳನ್ನು ಉಲ್ಲೇಖಿಸುತ್ತ ಕತೆಗೆ ಇತಿಹಾಸದ ಸ್ಪರ್ಶವನ್ನು ನೀಡುವುದಿದೆ. ಈ ಹಿನ್ನೆಲೆಯಲ್ಲಿ ಕತೆಯ ಭೌಗೋಳಿಕ ವ್ಯಾಪ್ತಿ ಎಂದರೆ ಕತೆಯ ವಿವರಗಳು ಹರಡಿಕೊಂಡಿರುವ ಪ್ರದೇಶಗಳೆ ಆಗಿವೆ.

ಕಾಂಭೋಜರಾಜನ ಕತೆಯನ್ನು ಅವಲೋಕಿಸಿದಾಗ ಕಥನಗಾರರ ಅನುಭವ ಅವರ ಕಾಲ್ಪನಿಕ ಭೌಗೋಳಿಕ ವ್ಯಾಪ್ತಿ ಗೋಚರಿಸುತ್ತದೆ. ಕಾಂಭೋಜರಾಜನಿಗೆ ಮಕ್ಕಳಿಲ್ಲದ ಕೊರಗು ಹಾಗೂ ಅದಕ್ಕಾಗಿ ರಾಜ ಪರಿತಪಿಸುವ ರೀತಿ:

ಹೊಟ್ಟೆಯೊಳಗೆ ಮಕ್ಕಳಿಲ್ಲ ಗುರುವೆ ಮಹದೇವ
ಅರವತ್ತಳ್ಳಿ ಜಹಗೀರ ಇದ್ದನಲ್ಲ ರಾಜಗ
ಇದ್ದ ಊರಿಗೆ ದೊರಿತನ ಇದ್ದದಿಲ್ಲ
ಬಂಗಾರಕಚೇರಿ ಇದ್ದದೇನ
ಬೆಳ್ಳಿದೊಂದು ಚಾವಡಿ ಇದ್ದದೇನ
ಕಾಶಿಗೊಂದು ದಾರಿಹಿಡಿದಾನ ರಾಜ
ಕಾಶಿದೊಳಗ ಕಲಕೋಟಿ ಗಂಟೆ ಕಟ್ಟಿನಲ್ಲ
ದಿಲ್ಲಿಯೊಳಗ ಡಿವಶಂಭ ಏರಿಸ್ಯಾನ
ಪಕ್ಷಿಗಳಿಗೆ ಫಲಗಳು ಹಂಚಿನಲ್ಲ



ರಾಜನು ಮಕ್ಕಳಿಗಾಗಿ ಪರಿತಪಿಸುವ ಸನ್ನಿವೇಶ ಇಲ್ಲಿ ಮೂಡಿದೆ. ರಾಜನಿಗೆ ರಾಜ್ಯದ ಅಧಿಕಾರ ಇದೆ, ಸಿರಿಸಂಪತ್ತು ಇದೆ, ಆದರೆ ಮಕ್ಕಳಿಲ್ಲದ ಕೊರಗಿನಿಂದ ಪುಣ್ಯಕ್ಷೇತ್ರಗಳ ಯಾತ್ರೆ ಮಾಡುತ್ತಾನೆ. ಉದಾರ ಮನೋಭಾವ, ಪಕ್ಷಿಗಳಲ್ಲೂ, ಕೀಟಗಳಲ್ಲೂ, ದಯೆ ಉಳ್ಳವನಾಗಿರುತ್ತಾನೆ. ಕಥನಗಾರರು ನಿರೂಪಣೆಯಲ್ಲಿ ಐತಿಹಾಸಿಕ ಸ್ಥಳಗಳನ್ನು ಹೆಸರಿಸಿರುವುದನ್ನು ಕಾಣಬಹುದು. 'ಅರವತ್ತಳ್ಳಿ ಜಹಗೀರ' ಇದ್ದು 'ಊರಿಗೆ ದೊರಿತನ' ಇದೆ ಎಂಬ ಸಾಲುಗಳನ್ನು ಪರಿಶೀಲಿಸಿದಾಗ ಕಥನಗಾರರಿಗೆ ಸ್ವಾತಂತ್ರ್ಯ ಪೂರ್ವದಲ್ಲಿ ತನ್ನ ಸುತ್ತಮುತ್ತಲಿನ ಪ್ರದೇಶದ ಪಾಳೆಯಗಾರ ಆಡಳಿತದ ತಿಳುವಳಿಕೆ, ಪಾಳೆಯಗಾರರಿಗೆ 'ದೊರೆ' ಎಂದ ಪರಿಕಲ್ಪನೆ ಹಿಂದೆ ಇದ್ದುದನ್ನು ಅಭಿವ್ಯಕ್ತಿಸಲಾಗಿದೆ. ಕಾಶಿಯಾತ್ರೆ, ದಿಲ್ಲಿಯಲ್ಲಿ ತನ್ನ ಪತಾಕೆಯನ್ನು ಹಾರಿಸುವುದು ಇವು ಐತಿಹಾಸಿಕ ಹಾಗೂ ಭೌಗೋಳಿಕತೆಯ ಬಗ್ಗೆ ಕಥನಗಾರರ ಕಾಳಜಿಯನ್ನು ತಿಳಿಸುತ್ತದೆ. ದೆಹಲಿ ಗದ್ದುಗೆ ಏರುವ ಮಹತ್ವಾಕಾಂಕ್ಷೆ ಸಮಕಾಲೀನ ರಾಜಕೀಯ ಪ್ರೇರಿತವಾದದ್ದು ಮಾತ್ರವೇ ಅಲ್ಲ, ಸ್ವಾತಂತ್ರ್ಯಪೂರ್ವ ರಾಜಕೀಯದಲ್ಲಿ ದೆಹಲಿಯ ಆಡಳಿತಕ್ಕಾಗಿ ನಡೆದ ಪೈಪೋಟಿ ಐತಿಹಾಸಿಕವಾಗಿ ಮಹತ್ವವನ್ನು ಪಡೆದಿದೆ. ಈ ಎಲ್ಲಾ ಅರಿವಿನ ನೆಲೆಯ ನಿರೂಪಕರು ಕಾಂಭೋಜರಾಜನಿಗೂ ಅಂತಹ ಮಹತ್ವಾಕಾಂಕ್ಷೆ ಇತ್ತು ಎಂಬುದನ್ನು ತಿಳಿಯಪಡಿಸುತ್ತದೆ.

ರಾಜನ ಹಿರಿಯ ರಾಣಿಯರು ಬಜಾರಕ್ಕೆ ಬಂದಿರುತ್ತಾರೆ. ಆರು ಜನ ಮಕ್ಕಳು ಶಾಲೆಗೆ ಹೋಗಿ ಬಜಾರದಲ್ಲಿ ಬರುತ್ತಿರುತ್ತಾರೆ. ಬಜಾರಕ್ಕೆ ಬಂದ ತಾಯಿಯರು ನೋಡಿ ತಮ್ಮ ಮಕ್ಕಳನ್ನು ಮಾತನಾಡಿಸಲು ಹತ್ತಿರಕ್ಕೆ ಹೋದಾಗ ಮಕ್ಕಳು ಅವರನ್ನು ಹೀಯಾಳಿಸಿ ಓಡಿ ಹೋಗುತ್ತಾರೆ. ಆ ಸಂದರ್ಭದ ಕಥನಗಾರರು ತನ್ನ ಪ್ರದೇಶದ ವೈಶಿಷ್ಟ್ಯತೆಯನ್ನು ಅಭಿವ್ಯಕ್ತಿ ಮಾಡಿದ್ದಾರೆ. ಆರು ಮಂದಿ ತಾಯಂದಿರು ಮಕ್ಕಳಿಗೆ ಅಡ್ಡ ಬಂದು,

ಮಕ್ಕಳಿರೆ ನಿಮ್ಮ ಕಾಲು ಬಿಳ್ತಿವಿ
ಹಡೆದಂತ ತಾಯಿದವರು ನಾವೇ ಇದ್ದಿವಿ
ನಾವು ಹಣ್ಣು ತಂದೀವಪ್ಪ
ತಿನ್ನ ಬೇಕು ಮಕ್ಕಳಿ
ತಾಯಿದವರು ಹಿಂದ ಬಿದ್ದರ
ಮಕ್ಕಳಿಗೆ ತಾಯಿದವರ ಕೂನ ಇಲ್ಲ
ತಾಂಡ್ಯದ ಮಂದಿ ಇವರು
ಜೋಗಿ ಮಂದಿ ಇವರು
ನಮ್ಮನ್ನ ಹಿಡಕೊಂಡು ಹೋಗಾಕ ಹಿಂದೆ ಬಿದ್ದರ
ನೀವು ತಾಯಿದವರು ಅಲ್ಲ
ನಮ್ಮನ್ನು ಹಡೆದಂತ ತಾಯಿ ಸಿರಿದೇವಿ

ರಾಜನ ಕಿರಿಯ ರಾಣಿ ಸಿರಿದೇವಿ ಹಿರಿಯ ರಾಣಿಯರ ಮಕ್ಕಳನ್ನು ತನ್ನ ಉಡಿಯಲ್ಲಿ ಹಾಕಿಕೊಂಡಿದ್ದರಿಂದ ಮಕ್ಕಳನ್ನು ಮುದ್ದಾಗಿ ಬೆಳೆಸಿ ಪೋಷಿಸಿರುತ್ತಾಳೆ. ಹೀಗಾಗಿ ಹಿರಿಯ ಆರು ಜನ ರಾಣಿಯರು, ಮಕ್ಕಳ ಹತ್ತಿರ ಹೋದರೆ ನಮ್ಮ ತಾಯಿಯರು ಅಲ್ಲವೆಂದು ಹೇಳುತ್ತಾ 'ನೀವು ತಾಂಡ್ಯದ ಮಂದಿ, 'ಜೋಗಿ ಮಂದಿ' ಇದ್ದಿರೆಂದು ಓಡುತ್ತಾರೆ. ನಮ್ಮ ತಾಯಿ ಸಿರಿದೇವಿ ಎಂದು ಹೇಳುವರು. ಕಥನಗಾರರ ಸುತ್ತಮುತ್ತಲಿನ ಪರಿಸರದ ವಿವರಗಳು ಧ್ವನಿಸುತ್ತವೆ. ಇವರ ಸುತ್ತಮುತ್ತಲಿನ ಪರಿಸರದಲ್ಲಿ ತಾಂಡಗಳು ಹೆಚ್ಚಾಗಿ ಇದ್ದು ಈ ಜನಾಂಗ ಅಲ್ಲಿ ತುಂಬ ಇದ್ದುದು ಕಾಣುತ್ತದೆ. ಅಲ್ಲಿಯ ಜನರು ತಮ್ಮ ಮಕ್ಕಳಿಗೆ ತಾಂಡದ ಜನರು ಬಂದು ಹಿಡಿದುಕೊಂಡು ಹೋಗುತ್ತಾರೆಂದು ಭಯಹುಟ್ಟಿಸಿ ಹೊರಗೆ ಹೋಗದಂತೆ, ನಿರ್ಬಂಧ ಹೇರುತ್ತಾರೆ. ಈ ಹಿನ್ನೆಲೆಯಲ್ಲಿ 'ತಾಂಡದ ಜನರು, ಜೋಗಿ ಜನರನ್ನು ತಮ್ಮ ಅನುಭವದ ಹಿನ್ನೆಲೆಯಲ್ಲಿ ಪ್ರಸ್ತುತ ಸನ್ನಿವೇಶವನ್ನು ನಿರೂಪಿಸಿರುವುದು ಕಂಡುಬರುತ್ತದೆ.

ರಾಜನ ಹಿರಿಯ ರಾಣಿಯರ ಮಕ್ಕಳು ಆರು ಜನ 'ಚಿತ್ರಗುಪ್ಪಿ ರಾಜ ಕುಮಾರರು' ತಂದೆಯ ಬೆನ್ನಿನ ಹುಣ್ಣಿಗೆ ಮದ್ದನ್ನು ತರಲು ಹೊರಡುವ ಸಂದರ್ಭ ಪಟ್ಟಣಗಳ ಹೆಸರುಗಳು ಅಲ್ಲಿ ಬರುವ ಪಾತ್ರಗಳ

ಹೆಸರು ಸನ್ನಿವೇಶಕ್ಕೆ ತಕ್ಕಂತೆ ನಿರೂಪಣೆ ಎದ್ದು ಕಾಣುತ್ತದೆ. ಅದು ಆರು ಮಂದಿ ಮಕ್ಕಳು ಆರು ಕುದುರೆ ಮೇಲೆ ಕುಳಿತುಕೊಂಡು, ಒಂದು ಗಾವುದದಿಂದ ಆರು ಗಾವುದ ತನಕ ಬರುತ್ತಾರೆ.

ದಾರಿ ಕಾಯುವ ಮಲ್ಲಣ್ಣ ಮುದುಕ

ಗುಡಿಸಲು ಕಟ್ಟಿಕೊಂಡು

ದಾರಿಗಳು ಕಾಯುಕೊಂಡು ಕುಂತನ

ದಾರಿಕಾಯುವ ಮಲ್ಲಣ್ಣನಿಗೆ ಆರು ಮಂದಿ ಅಣ್ಣತಮ್ಮಂದಿರು ಬಂದು ಕೇಳುತ್ತಾರೆ.

ಏ ಮುತ್ತ್ಯಾ ಮಲ್ಲಣ್ಣ ಮುತ್ತ್ಯಾ

ಏನು ಸುದ್ದಿ ಮೊಮ್ಮಕ್ಕಳೆ

ಮುತ್ತ್ಯಾ ಈ ದಾರಿ ಯಾವ ಊರಿಗೆ ಹೋಗ್ತದ ಎಂದರೆ

ಘಸ್ಕು ಮೊಮ್ಮಕ್ಕಳೇ, ಇದು ಎದಿನಗಂಧಿ ಪಟ್ನಕ ಹೋಗ್ತದ

ಈ ದಾರಿ ಘೂಲಾವತಿ ರೂಪಾವತಿ ಪಟ್ನಕ ಹೋಗ್ತದ ।

ಈ ದಾರಿ ಸುಂದರಮ್ಮ ಪಟ್ನಕ ಹೋಗ್ತದ

ಎಲ್ಲಾ ದಾರಿ ಹೇಳಿ ಕೊಟ್ಟನ ಮುತ್ತ್ಯಾ

ಈ ಪಟ್ನದೊಳಗ ಯಾ ಪಟ್ನದಲ್ಲಿ ಹೆಣ್ಣು ಪಾಡಾದ

ಇಲ್ಲಿ ದಾರಿ ಕಾಯುವ ಮಲ್ಲಣ್ಣಮುತ್ತ್ಯಾ ಹಾಗೂ ಚಿತ್ರಗುಪ್ಪಿ ರಾಜಕುಮಾರರ ಮಧ್ಯೆ ಯಾವ ದಾರಿ ಎಲ್ಲಿಗೆ ಹೋಗುತ್ತದೆಂದು ಸಂಭಾಷಣೆ ನಡೆಯುತ್ತದೆ. ಮಲ್ಲಣ್ಣ ದಾರಿಗಳ ಬಗ್ಗೆ ವಿವರವಾಗಿ ತಿಳಿಸುತ್ತಾನೆ. ಇವರ ಮನೋಧರ್ಮವನ್ನು ಅರಿತ ಮಲ್ಲಣ್ಣ ಮೊದಲು ಸುಂದರಮ್ಮ ಪಟ್ಟಣಕ್ಕೆ ಮೊದಲು ಹೋಗಲು ತಿಳಿಸುತ್ತಾನೆ. ಕಥಾ ಪಾತ್ರಗಳು, ಹೋಗುವ ದಾರಿಯಲ್ಲಿ ಸಿಗುವ ಪಟ್ಟಣಗಳು ಮತ್ತು ಪಟ್ಟಣಗಳ ವೈಶಿಷ್ಟ್ಯವು ಅಲ್ಲಿನ ಸನ್ನಿವೇಶಗಳೆಲ್ಲ ಕತೆಯಲ್ಲಿ ವಿಸ್ತಾರವಾಗಿ ಬಂದಿದೆ. ಇಲ್ಲಿಯ ಸನ್ನಿವೇಶಕ್ಕೆ ತಕ್ಕಂತೆ ಪಾತ್ರಗಳ ಹಾಗೂ ಪಟ್ಟಣಗಳ ಹೆಸರುಗಳನ್ನು ಹೇಳುತ್ತಾರೆ. ನಿರೂಪಕಿ ಪಾತ್ರಗಳ ಹೆಸರಿನಿಂದ ಆ ಪಟ್ಟಣದ ಹೆಸರನ್ನು ಒದಗಿಸುತ್ತಾರೆ. ಇಲ್ಲಿನ ಪ್ರದೇಶದ ಹೆಸರುಗಳು ಕಾಲ್ಪನಿಕ, ಆದರೆ ಕತೆಗೊಂದು ಆವರಣ ನಿರೂಪಿಸುವ ದೃಷ್ಟಿಯಿಂದ ಇಂತಹ ಪಟ್ಟಣಗಳನ್ನು ಕಲ್ಪಿಸಿಕೊಳ್ಳಲಾಗಿದೆ.

ನಿರೂಪಕರು ಪಾತ್ರಗಳ ವರ್ಣನೆ, ಗಾದೆಗಳು, ನಾಣ್ನುಡಿಗಳು, ನುಡಿಗಟ್ಟುಗಳು ಸೇರಿ ಕಥನಕ್ಕೆ ಹೊಸಕಳೆ ತರಲು ಪ್ರಯತ್ನಿಸಿದ್ದಾರೆ. ನಿರೂಪಣೆಯಲ್ಲಿ ಅವರ ಗುಲಬರ್ಗಾ ಪ್ರದೇಶದ ಭಾಷೆಯನ್ನು ಬಳಸಲಾಗಿದೆ. ಕನ್ನಡ ಕತೆಯಲ್ಲಿ ತೆಲುಗು, ಉರ್ದು, ಇಂಗ್ಲಿಷ್ ಪದಗಳು ಹಾಗು ತೆಲುಗು ಕತೆಯಲ್ಲಿ ಅಲ್ಲಲ್ಲಿ ಕನ್ನಡ

ಪದಗಳೂ, ಉರ್ದು, ಇಂಗ್ಲಿಷ್ ಪದಗಳು ಕಂಡುಬರುತ್ತವೆ. ಈ ಬೌದ್ಧಿಕ ಮಿಶ್ರಣಗಳು ಸಹ ಭೌಗೋಳಿಕವಾಗಿ ನಿರ್ದಿಷ್ಟವಾದ ಪ್ರದೇಶವೊಂದರ ವ್ಯಾಪ್ತಿಯನ್ನು ಸೂಚಿಸುತ್ತವೆ. ಹೀಗೆ ಕಾಂಭೋಜರಾಜನ ಕತೆಯು ನಿರ್ದಿಷ್ಟ ಭೌಗೋಳಿಕ ಪರಿಸರದ ಸಾಂಸ್ಕೃತಿಕ ವಿವರಗಳ ಮೂಲಕ ದಾಖಲಾಗಿದೆ.

**ಪ್ರಾದೇಶಿಕತೆ**

ಬುರ್ರಕತೆ ಕಥೆಯನ್ನು ಕೆಳವರ್ಗದ ಹಾಗೂ ಹಿಂದುಳಿದ ಜನರು ಹೆಚ್ಚಾಗಿ ಕೇಳುವುದರಿಂದ ಅಂತಹ ಜನರನ್ನು ದೃಷ್ಟಿಯಲ್ಲಿಟ್ಟುಕೊಂಡೇ ಹೇಳುತ್ತಾರೆ. ಹೀಗಾಗಿ ಅವರ ಬದುಕಿನ ಹಿನ್ನೆಲೆ ಮನೋಭಾವ ಅವರ ಕಥನದಲ್ಲಿ ಇದ್ದು ಅಲ್ಲಿನ ಪರಿಸರವನ್ನು ಪ್ರತಿನಿಧಿಸುತ್ತದೆ. ಶಂಕ್ರಮ್ಮ ರಾಮತೀರ್ಥ ಅವರು ಹಾಡಿದ ಈ ಕಥನದಲ್ಲಿ ಅವರು ನೆಲೆಸಿರುವ ಯಾದಗಿರಿ, ಗುಲಬರ್ಗಾದ ಪ್ರಾದೇಶಿಕತೆ ಎದ್ದು ಕಾಣಿಸುತ್ತದೆ. ಅಲ್ಲಿ ಪ್ರಚಲಿತವಿರುವ ಭಾಷೆ ಉರ್ದು ಮಿಶ್ರಿತ ಕನ್ನಡ ಪದಗಳು ಕಂಡುಬಂದು, ಪ್ರಾದೇಶಿಕ ಸೊಗಡು ಕಾಣಿಸುತ್ತದೆ. ಕಾಂಭೋಜರಾಜನ ಕತೆಯಲ್ಲಿ ಸರಳ ಅಭಿವ್ಯಕ್ತಿ ಇದ್ದು ಅಲ್ಲಿನ ಗ್ರಾಮೀಣ ಭಾಷೆಯ ಸೊಗಡು, ಆಡುನುಡಿ ಎದ್ದು ಕಾಣಿಸುತ್ತದೆ.

ಕಾಂಭೋಜರಾಜನು ಎತ್ತುಗಳು ಇಲ್ಲದೆ ಬರಿಗೈಯಿಂದ ಹೊಲವನ್ನು ಹಸನು ಮಾಡಿ ಬಿತ್ತುತ್ತಾನೆ. ಮೊಳಕೆ ಒಡೆದ ಸಂದರ್ಭದಲ್ಲಿ ಪರಮಾತ್ಮನು ಮಿಡತೆಗಳನ್ನು ಬಿಟ್ಟು ಮೊಳಕೆಗಳನ್ನು ನಾಶಪಡಿಸಿ ಪರೀಕ್ಷೆಗೆ ಒಡ್ಡುತ್ತಾನೆ. ರಾಜನು ಆಸ್ಥಾನ ಬಿಟ್ಟು ಹೊಲಕ್ಕೆ ಬರುತ್ತಾನೆ. ಅಲ್ಲಿ ಹೊಲದ ದೋಣದ ಮೇಲೆ ನಿಂತು ಹೊಲದ ಕಡೆಗೆ ನೋಡುತ್ತಾನೆ.

ಹೊಲದಲ್ಲಿ ಸಣ್ಣ ಮೊಳಕೆ ಹೊಂಟವ
ಹೊಲೆಲ್ಲ ಹಚ್ಚಗ ಕಾಣಬರ್‍ತದ
ಪರಮಾತ್ಮ ಅದರಾಗ ಏನು ಬಿಟ್ಟನ
ಸಣ್ಣ ಮಿಡಿತೆಗಳು ಬಿಟ್ಟನ
ಮಿಡತೆಗಳು ಹೊಲದಾಗ ಹೋಡ್ಯಾಡಿ
ಮೊಳಕೆ ಆದಂಗ ಕತ್ತರಿಸಿ ಹಾಕ್ಲಕತ್ತ್ಯವ

ಪರಮಾತ್ಮನು ರಾಜನಿಗೆ ಅನೇಕ ಪರೀಕ್ಷೆಗಳನ್ನು ಒಡ್ಡುತ್ತಾನೆ. ಇಲ್ಲಿ ಸಹ ರಾಜನು ಹೊಲದಲ್ಲಿ ಬಿತ್ತಿದರೆ ಮೊಳಕೆ ಒಡೆದ ಎಲ್ಲಾ ಸಸಿಗಳನ್ನು ಮಿಡತೆಗಳು ಕತ್ತರಿಸಿ ಹಾಕುತ್ತವೆ. ಇಲ್ಲಿ ಕಥನದ ಸನ್ನಿವೇಶಕ್ಕೆ ಅನುಗುಣವಾಗಿ ಯಾದಗಿರಿ ಹಾಗೂ ಗುಲಬರ್ಗಾ ಪ್ರದೇಶದಲ್ಲಿ ಬಿತ್ತಿದಾಗ ಮಿಡತೆಗಳು ಇಡೀ ಹೊಲವನ್ನು ನಾಶಪಡಿಸುವುದನ್ನು ಕಥನಗಾರ್ತಿಯು ಅನುಭವದ ವಾಸ್ತವ ಬದುಕಿನಲ್ಲಿ ಕಂಡುಕೊಂಡದ್ದನ್ನು ಚಿತ್ರಿಸಿದ್ದಾರೆ. ಈ ಹಿನ್ನೆಲೆಯಲ್ಲಿ ಕಥೆಗಾರ್ತಿ ಮಿಡತೆಗಳನ್ನು ಈ ಸನ್ನಿವೇಶದಲ್ಲಿ ಅಭಿವ್ಯಕ್ತ ಮಾಡಿದ್ದಾರೆ. ಇದು ಕಥನದ ಪ್ರಾದೇಶಿಕತೆ ಮತ್ತು ವಾಸ್ತವಿಕತೆಯನ್ನು ಪ್ರತಿಬಿಂಬಿಸುತ್ತದೆ.

ರಾಜನ ಕಿರಿಯ ರಾಣಿ ಸಿರಿದೇವಿ ಆರು ಜನ ಹಿರಿಯ ಅಕ್ಕಂದಿರ ಮಕ್ಕಳನ್ನು ತನ್ನ ಉಡಿಯಲ್ಲಿ ಹಾಕಿಕೊಂಡು ರಾಜನ ಆಜ್ಞೆಯು ಮೇರೆಗೆ ಮಕ್ಕಳ ಪೋಷಣೆಯ ಜವಾಬ್ದಾರಿಯನ್ನು ಹೊತ್ತಿರುತ್ತಾಳೆ. ಆರು ಜನ ಹಿರಿಯ ಅಕ್ಕಂದಿರ ಆರು ಜನ ಮಕ್ಕಳನ್ನು ಸಿರಿದೇವಿ ತೊಟ್ಟಿಲಲ್ಲಿ ಹಾಕುವಾಗ ಸಾಂಪ್ರದಾಯಿಕ ವರ್ಣನೆ ಕಥನಗಾರರು ವಾಸ್ತವಿಕ ಬದುಕಿನ ಪ್ರತಿಬಿಂಬವನ್ನು ಅಭಿವ್ಯಕ್ತಿ ಮಾಡಿದ್ದಾರೆ.

ಜೋ ಜೋ ಎನ್ನ ರಾಜಕುಮಾರ
ಎನ್ನ ಜೋಗಿಸಿ ಕಂದನ ತೂಗಿರಿ
ಹಡೆದಂತ ಬಾಣಂತಿಗೆ ತೊಡೆಗಳು ತೊಳೆದು
ಮೋಡಿ ಹಿಪ್ಪಲಿ ಪುಡಿ ಮಾಡಿಸಿ ತಿನಿಸಿ
ಅಂದ ಚೆಂದದಿಂದ ಬಡಿಗೇರನ ಕರೆದು
ಎವ್ವ ರನ್ನದ ತೊಟ್ಲ ನಾ ಮಾಡಿಸಿ ಕಳಿಸಿ
ಎವ್ವ ಬಣ್ಣದ ತೊಟ್ಲ ನಾ ಮಾಡಿಸಿ ಕಳಿಸಿ
ಐದು ಮಂದಿ ಬಾಲ್ಕರು ಕೂಡಿ
ಎವ್ವ ಬಾಳೆಯ ಬನದಾಗ ತೊಟ್ಲಾನ ಕಟ್ಟಿ
ಎವ್ವ ನಿಂಬಿಯ ಬನದಾಗ ತೊಟ್ಲಾನ ಕಟ್ಟಿ
ಸೋದರ ಮಾವನ ಬಳಗ ನಿಮಗೆ ಬಂದರ
ಅಂಗಿ ಕುಲಾವಿ ನಿಮಗೆ ತಂದರ
ಆಯಿಮುತ್ತೈನವರು ನಿಮಗೆ ಬಂದರ
ಮುತ್ತಿನ ಉಂಗುರ ನಿಮಗೆ ತಂದರ
ಅಳಿಜೋಳ ಕೆಂಜೋಳ ಗುಗ್ಗರಿಗಿ ಹಾಕಿ
ಸೂಲಗಿತ್ತಿ ಮೂಗಿನಗೆ ಬಳ್ಳೊಳ್ಳಿ ತುರುಕಿ
ಚಿತ್ರುಗುಪ್ತಿರಾಜದವರು ಹೆಸರು ಪಡೆದರು

ಕಾಂಭೋಜರಾಜನ ಹಿರಿಯ ರಾಣಿಯರ ಆರು ಜನ ಮಕ್ಕಳು ಕಿರಿಯ ರಾಣಿ ಸಿರಿದೇವಿ ಅರಮನೆಯ ತೊಟ್ಟಿಲಿನಲ್ಲಿ ಹಾಕುವ ಸಂದರ್ಭವನ್ನು ಬದುಕಿನ ವಾಸ್ತವ ವಿವರಗಳೊಂದಿಗೆ ವರ್ಣಿಸಲಾಗಿದೆ. ಈ ಮಕ್ಕಳ ಪೋಷಣೆ ಜವಾಬ್ದಾರಿ ಹೊತ್ತ ಕಿರಿಯ ರಾಣಿ ಸಿರಿದೇವಿ ಅರಮನೆಯಲ್ಲೇ ತೊಟ್ಟಿಲು ಕಾರ್ಯಕ್ರಮ ಏರ್ಪಡುತ್ತದೆ. ಮಗುವನ್ನು ಹೆತ್ತ ಮೇಲೆ ಬಾಣಂತಿಗೆ ಸ್ನಾನವನ್ನು ಮಾಡಿಸುವುದು ಸಹ ಒಂದು ವಿಶೇಷತೆ ಕಂಡುಬರುತ್ತದೆ. ಸ್ನಾನ ಮಾಡಿಸಿದ ಮೇಲೆ 'ಮೋಡಿ ಹಿಪ್ಪಲಿ ಪುಡಿ ಮಾಡಿ ಕುಡಿಸುವರು' ಸಾಂಪ್ರದಾಯಿಕವಾಗಿ ಹಳ್ಳಿಗಳಲ್ಲಿ ನಾಟಿ ಪದ್ಧತಿಯ ಅನುಸಾರವಾಗಿ ನಾಟಿ ಔಷಧವನ್ನು ಬಾಣಂತಿಯರಿಗೆ

ಕೊಡುವುದನ್ನು ಕಾಣಬಹುದು. ಮೋಡಿ ಹಿಪ್ಪಲಿ ಅಲ್ಲದೆ ಇನ್ನು ಅನೇಕ ತರಹದ ವಸ್ತುಗಳನ್ನು ಕೂಡಿಸಿ ತಿನಿಸುವ ವಿವರಗಳೂ ಇಲ್ಲಿ ಬಂದಿವೆ. 'ಅಂದ ಚೆಂದದಿಂದ ಬಡಿಗೇರನ ಕರೆದು' ಎಂಬ ಸಾಲಿನಲ್ಲಿ ತೊಟ್ಟಿಲನ್ನು ಮಾಡಿಸಲು ಕಾಣಿಕೆಗಳಿಂದ ಸಡಗರ ಸಂಭ್ರಮದಿಂದ ದೀನಬಾಜದ ಜೊತೆ ಹೋಗಿ ಬಡಿಗೇರರನ್ನು ಕರೆಸಲಾಗುತ್ತದೆ. ಎಂತಹ ತೊಟ್ಟಿಲ ಅಂದರೆ ಮುತ್ತು ಮಾಣಿಕ್ಯದ ತೊಟ್ಟಿಲನ್ನು ಮಾಡಿಸಿ, ಅದಕ್ಕೆ ಚಿತ್ರ ಚಿತ್ತಾರದಿಂದ ಮೂಡಿಸಿದ ಬಣ್ಣದ ತೊಟ್ಟಿಲೆಂದು ಹೇಳುತ್ತಾರೆ. ಏಕೆಂದರೆ ಇದು ರಾಜಕುಮಾರರ ತೊಟ್ಟಿಲುಗಳಾಗಿದ್ದರಿಂದ ತೊಟ್ಟಿಲುಗಳಲ್ಲೂ ವಿಶೇಷತೆ ಇರಬೇಕೆಂಬ ಆಶಯ ವ್ಯಕ್ತವಾಗಿದೆ. 'ಐದು ಮಂದಿ ಬಾಲ್ಯರು ಕೂಡಿ' ಅಂದರೆ ಐದು ಜನ ಮುತ್ತೈದೆಯರು ತಂದಿಟ್ಟ ತೊಟ್ಟಿಲನ್ನು 'ಬಾಳಿಯ ಬನ, ನಿಂಬೆಯ ಬನ' ದಲ್ಲಿ ಕಟ್ಟುವರು, ಬಾಳಿಯ ಬನವು ನೆರಳನ್ನು ಸೂಚಿಸುತ್ತದೆ. ಅಲ್ಲದೆ ಅದು ಪೂಜನೀಯ ಮನೋಭಾವನೆಯುನ್ನು ಮೂಡಿಸುತ್ತದೆ. 'ನಿಂಬೆಯ ಬನ'ವು ಮಗುವಿಗೆ ಯಾವುದೇ ಕೆಟ್ಟ ಪರಿಣಾಮ ದುಷ್ಟಶಕ್ತಿಯಿಂದ ರಕ್ಷಣೆ ಹಾಗೂ ಆಯುರ್ವೇದದ ತಿಳುವಳಿಕೆಯಿಂದ 'ಬಾಳಿಯ ಬನ' ಹಾಗೂ 'ನಿಂಬೆಯ ಬನ'ದಲ್ಲಿ ತೊಟ್ಟಿಲನ್ನು ಕಟ್ಟುವುದೆಂಬ ಪ್ರತೀತಿಯು ಕಥನಗಾರ್ತಿಯ ಅನುಭವದಿಂದ ವ್ಯಕ್ತವಾಗಿದೆ. ಐದು ಜನ ಮುತ್ತೈದೆಯರೇ ತೊಟ್ಟಿಲಲ್ಲಿ ಹಾಕಿ ಜೋಗುಳ ಹಾಡಿ 'ಚಿತ್ರಗುಪ್ಪಿ ರಾಜಕುಮಾರರು' ಎಂದು ಒಂದೇ ಹೆಸರಿನಿಂದ ನಾಮಕರಣ ಮಾಡುತ್ತಾರೆ. ವಾಸ್ತವಿಕ ಬದುಕಿನ ಹಿನ್ನೆಲೆಯಲ್ಲಿ ಸಾಮಾನ್ಯ ಹೆಣ್ಣೊಬ್ಬಳ ಮಗುವಿನ ತೊಟ್ಟಿಲು ಕಾರ್ಯಕ್ರಮದಲ್ಲಿ ಜೋಗುಳ ಪದವನ್ನು ಹಾಡುವ ಸನ್ನಿವೇಶ ಕತೆಗಾರರ ಪ್ರಜ್ಞೆಯಲ್ಲಿ ಮೂಡಿ ಬಂದಿದೆ. ಸೋದರಮಾವ, ಆಯಿಮುತ್ತ್ಯಾ, ಅಳಿಜೋಳ, ಬಿಳಿಜೋಳ, ಕೆಂಜೋಳ ಮುಂತಾದ ಪದಗಳು ಜೋಗುಳ ಹಾಡಿನ ಸನ್ನಿವೇಶವನ್ನು ಮೂಡಿಸುತ್ತದೆ. ಸೋದರಮಾವನ ಬಳಗ ಬಂದು, ಅಂಗಿಕುಲಾವಿ ನೀಡುವ ವಿವರಗಳೆಲ್ಲ ಪ್ರಾದೇಶಿಕ ಸಂಪ್ರದಾಯವೇ ಆಗಿದೆ. ಹಾಡಿನ ಅಂತ್ಯದಲ್ಲಿ ಕೇಳುಗರನ್ನು ನಗೆಗಡಲಲ್ಲಿ ಮುಳುಗಿಸಲು 'ಸೂಲಗಿತ್ತಿಯ ಮೂಗಿನಾಗ ಬಳ್ಳೊಳ್ಳಿ' 'ತುರುಕಿ ಎಂಬ ವಿವರ ಕಥನದಲ್ಲಿ ಅನೇಕ ಧ್ವನ್ಯರ್ಥಗಳನ್ನು ಪಡೆಯುತ್ತದೆ. ಮೂಗಿನಲ್ಲಿ ಬಳ್ಳೊಳ್ಳಿ ತುರುಕುವ ಸನ್ನಿವೇಶ ಹಾಸ್ಯವಾಗಿ ರಂಜಿಸುತ್ತದೆ. ಆದರೆ ಕತೆಯಲ್ಲಿ ಮುಂದೆ ಈ ಮಕ್ಕಳು ದುಷ್ಟಗುಣವುಳ್ಳವರಾಗುತ್ತಾರೆ ಎಂಬ ಮುನ್ಸೂಚನೆಯನ್ನು ಸೂಲಗಿತ್ತಿ ಬಳ್ಳೊಳ್ಳಿ ತುರುಕುವುದರ ಮೂಲಕ ಧ್ವನಿಸಲಾಗಿದೆ. ಅಂದರೆ ಕೆಟ್ಟವರಾದ ಮಕ್ಕಳ ಆರೈಕೆಯನ್ನು ಕೆಟ್ಟದಾಗಿಯೇ ಮಾಡಲಾಗಿದೆ ಎಂದು ಕತೆಯಲ್ಲಿ ನಿರೂಪಿಸಿರುವುದು ಕತೆಗಾರರ ಪ್ರತಿಭೆ ಹಾಗೂ ಕವಿತಾಶಕ್ತಿಗೆ ನಿದರ್ಶನ.

ಶರಬಂಧರಾಜಕುಮಾರನು ಜೋಗಿ ವೇಷ ಹಾಕಿ ಶಾಂಪುರ ಪಟ್ಟಣಕ್ಕೆ ಮದ್ದು ಮಾರುವ ಹುಡುಗನಾಗಿ ಬರುತ್ತಾನೆ. ಮೊದಲು ಶಂಕಿಣಿ, ಚಿತ್ತಿಣಿ ಓಣಿಗೆ ಬರುತ್ತಾನೆ. ಆ ಸಂದರ್ಭದಲ್ಲಿ ಪ್ರದೇಶದ ಹೆಸರುಗಳು, ಗಿಡ, ಮರಗಳ ಹೆಸರುಗಳನ್ನು ಸನ್ನಿವೇಶಕ್ಕೆ ತಕ್ಕಂತೆ ಅಭಿವ್ಯಕ್ತಿಸಿದ್ದಾರೆ. ಹನ್ನೆರಡು ಜನ ಹೆಣ್ಣುಮಕ್ಕಳು ಆ ಓಣಿಯಲ್ಲಿ ಶರಬಂಧ ರಾಜಕುಮಾರನಿಗೆ ಮದ್ದು ನೀಡಲು ಕರೆಯುತ್ತಾರೆ. ಅವನ ಸೌಂದರ್ಯಕ್ಕೆ

ಮರುಳಾಗಿ ಅವನನ್ನು ಪಡೆಯಲು ಪ್ರಯತ್ನಿಸಿ ವಿಫಲರಾಗುತ್ತಾರೆ. ಹನ್ನೆರಡು ಮಂದಿ ಶಂಕಿಣಿ, ಚಿತ್ತಿಣಿ ಓಣಿಯ ಹೆಣ್ಣುಮಕ್ಕಳು ಶರಬಂಧ ರಾಜಕುಮಾರನನ್ನು ಪಡೆಯಲು ಪ್ರಯತ್ನಿಸುತ್ತಾರೆ. ಜೋಗಿ ವೇಷದ ರಾಜಕುಮಾರನು ಎಲ್ಲರನ್ನು ಜಾಡಿಸಿ ಒಗೆಯುತ್ತಾನೆ. ಆಗ ಎಲ್ಲರೂ ಕೆಳಗೆ ಬಿದ್ದು ಒಬ್ಬೊಬ್ಬರು ಒಂದೊಂದು ದೇಹದ ಅಂಗಗಳನ್ನು ಕಳೆದುಕೊಳ್ಳುತ್ತಾರೆ. ಅವರಲ್ಲಿ ಕಣ್ಣು ಹೋಗಿದ್ದ ಹೆಣ್ಣುಮಗಳು ತನ್ನ ಗಂಡನಿಂದ ತಪ್ಪಿಸಿಕೊಳ್ಳುವ ಉಪಾಯವನ್ನು ಹುಡುಕಿಕೊಂಡಿರುತ್ತಾಳೆ.

ನನ್ನ ಗಂಡನ ಮುಂದೆ ನಾ ಹೇಳ್ತಿನಿ
ಕಣ್ಣು ಹೋಗಿದಾಕಿ ಏನು ಹೇಳ್ತಳ
ಊರು ಮುಂದ ಮಾಲಿಗೌಡರ ಹೊಲ
ಹೊಲದಲ್ಲಿ ಪುಂಡಿ ಪಲ್ಯ ಹಾಕಿದ್ದರು
ಪುಂಡಿ ಪಲ್ಯ ಹರಿಲಿಕ್ಕ ಹೋಗಿದ್ದೆ
ಮುಂದೆ ನೋಡಿ ಪುಂಡಿ ಪಲ್ಯ ಹರಿತಿದ್ದೆ
ಹೊಲಕಾಯ ಭೀಮಣ್ಣ
ಏ ಯಾರು ಪುಂಡಿ ಪಲ್ಯ ಹರಿಯುವವರು
ಓ ಯಮ್ಮ ಯಾರೆಂದು ಓಡುವಾಗ
ಪುಂಡಿಪಲ್ಯ ಕಣ್ಣಗ ಚುಚ್ಚಿ
ಕಣ್ಣು ಹೊಗ್ಯದ ಎಂದು
ನನ್ನ ಗಂಡಗ ನಾ ಹೇಳ್ತಿನವ್ವ

'ಮಾಲಿಗೌಡರ ಹೊಲದಲ್ಲಿ ಪುಂಡಿ ಪಲ್ಲೆ ಕೀಳುವುದು. ಕಥನಗಾರರು ಕತೆಯನ್ನು ಹಾಡುವ ಪ್ರದೇಶದಲ್ಲಿ ಪುಂಡಿ ಪಲ್ಲೆ ಹೊಲದಲ್ಲಿ ಸಿಗುವ ಪ್ರಮುಖ ತರಕಾರಿ. ಪ್ರತಿಯೊಬ್ಬರ ಮನೆಯಲ್ಲಿ ಈ ತರಕಾರಿಯನ್ನೇ ಉಪಯೋಗಿಸುತ್ತಾರೆ. ಈ ಹಿನ್ನೆಲೆಯಲ್ಲಿ ಕಣ್ಣು ಕಳೆದುಕೊಂಡವಳು ಪುಂಡಿ ಪಲ್ಲೆ ಕೀಳುವಾಗ ಹೊಲ ಕಾಯುವ ಭೀಮಣ್ಣ ನೋಡಿ ಕೂಗಿದ್ದರಿಂದ ಓಡುವಾಗ ಕಣ್ಣು ಕಳೆದುಕೊಂಡೆ ಎಂದು ತನ್ನ ಗಂಡನಿಗೆ ಸುಳ್ಳು ಹೇಳುವ ಉಪಾಯವನ್ನು ತನ್ನ ಜೊತೆಗಾರ್ತಿಯರಿಗೆ ಹೇಳುತ್ತಾಳೆ. ಇಲ್ಲಿನ ನಿರೂಪಣೆಯು ಪ್ರಾದೇಶಿಕವಾಗಿ ಯಾದಗಿರಿ, ಗುಲಬರ್ಗಾ ಪರಿಸರದಲ್ಲಿನ ಹೆಸರುಗಳೂ ಮಾಲಿಗೌಡ, ಭೀಮಣ್ಣ, ವಾಲಿಕಾರ ರಾಮಣ್ಣ ಮೊದಲಾದ ಹೆಸರುಗಳ ಬಳಕೆಯಾಗಿವೆ. ಪುಂಡಿ ಪಲ್ಲೆಯು ಅಲ್ಲಿನ ಜನರ ಪ್ರಮುಖ ತರಕಾರಿಯಾಗಿದ್ದು ಅವು ಹೊಲಗಳಲ್ಲಿ ಪುಕ್ಕಟೆ ಸಿಗುತ್ತದೆ. ಹೀಗಾಗಿ ಕಥನದ ಸನ್ನಿವೇಶಕ್ಕೆ ಅನುಗುಣವಾಗಿ ಇದನ್ನು ಅಭಿವ್ಯಕ್ತಿ ಮಾಡಿದ್ದಾರೆ. ಇಲ್ಲಿ ಕಥನದ ಪಾತ್ರಗಳ ಸಂಭಾಷಣೆ ಎಲ್ಲವೂ ಪ್ರಾದೇಶಿಕತೆಯ ಅನುಭವದ ಹಿನ್ನೆಲೆಯಲ್ಲಿದೆ.

### ವೈದ್ಯೋಪಚಾರ

ಕಾಂಭೋಜರಾಜನ ಬೆನ್ನ ಹುಣ್ಣಿಗೆ ಶರಬಂಧರಾಜನು ಎದಿನಗಂಧಿ ಪಟ್ಟಣದ ಎದಿನಗಂಧಿಯ ತಲೆಯ ಕೆಳಗೆ 'ಬಳಿಬುಡ್ಡಿ'ಯೊಳಗೆ ಮದ್ದು ಇರುವುದು ಎಂಬುದನ್ನು ತಿಳಿದುಕೊಂಡಿರುತ್ತಾನೆ. ಅಂತಹ ಮದ್ದನ್ನು ತರಲು ಹೋದಾಗ ಅನೇಕ ಕಷ್ಟಗಳನ್ನು ಅನುಭವಿಸುತ್ತಾನೆ. ಎದಿನಗಂಧಿ ಪಟ್ಟಣಕ್ಕೆ ಹೋಗಿ ಎದಿನಗಂಧಿಯ ತಂದೆಯ ಅಪ್ಪಣೆ ಮೇರೆಗೆ ಎದಿನಗಂಧಿಯನ್ನು ಮದ್ದು ಕೊಡಬೇಕೆಂದು ಕೇಳುತ್ತಾನೆ. ತನ್ನ ಮದುವೆ ಪ್ರಸ್ತಾಪ ಒಪ್ಪಿಕೊಂಡ ಮೇಲೆ ಮದ್ದನ್ನು ಕೊಡಲು ಒಪ್ಪುತ್ತಾಳೆ. ಮದ್ದನ್ನು ತೆಗೆದುಕೊಂಡು ಶಾಂಪುರ ಪಟ್ಟಣಕ್ಕೆ ಬಂದು, ಮೊದಲ ತಾಯಿ ನೆಲೆಸಿರುವ ಸ್ಮಶಾನದಲ್ಲಿ ಇರುವ ಅರಮನೆಗೆ ಬರುತ್ತಾನೆ. ತಾಯಿ ಸಿರಿದೇವಿಯ ಆಶೀರ್ವಾದ ಪಡೆದು ಕಾಂಭೋಜರಾಜನ ಬೆನ್ನಿನ ಹುಣ್ಣಿನ ಉಪಚಾರ ಮಾಡಲು ಶರಬಂಧರಾಜ ಮತ್ತು ಎದಿನಗಂಧಿ ಇಬ್ಬರು ಬರುತ್ತಾರೆ. ಶರಬಂಧರಾಜ ಮದ್ದು ಮಾರುವ ವೈರಾಮ ಜೋಗಿ ವೇಷ ಧರಿಸಿಕೊಂಡು ಭುಜದ ಮೇಲೆ ಕಟ್ಟಿಗೆ ಇಟ್ಟುಕೊಂಡು ಎದಿನಗಂಧಿಯನ್ನು ಕರೆದುಕೊಂಡು ರಾಜನ ಆಸ್ಥಾನಕ್ಕೆ ಬರುತ್ತಾನೆ. ಮುಖ್ಯವಾಗಿ ಎದಿನಗಂಧಿಯೇ ಔಷಧೋಪಚಾರವನ್ನು ಮಾಡುತ್ತಾಳೆ.

ಚಾಲು ತೆಗೆದಳಲ್ಲ
ಏಳು ಕೊಡ ತಣ್ಣೀರು
ಏಳು ಕೊಡ ಬಿಸಿನೀರು
ತಣ್ಣೀರು ಬಿಸಿ ನೀರು ಕಲಿಸಿ
ನವಿಲು ಪುಚ್ಛ ಸಂಗಟ
ಹುಣ್ಣು ಪಾಡ ತೊಳೆದು
ಮಾವನ ಜಳಕ ಮಾಡಿಸಿ
ತಕ್ಕಡಿ ತಗೊಂಡು ಔಷಧ ತೂಕಮಾಡಿ
ಔಷಧಿ ಬಿಲ್ಲೆ ಮಾಡಿ
ಮಾವನ ಹುಣ್ಣಿಗೆ ಕಟ್ಟಿದಳು
ಕಟ್ಟೆ ಆ ಹೊತ್ತು ರಾತ್ರಿ ಅಲ್ಲೆ ಇದ್ದು
ಬೆಳಗ ಮುಂಜಾನೆ ಮತ್ತೆ ಬಿಚ್ಚಿದಳು
ರೂಪಾಯಿ ಭಾಗದಾಗ ಎಂಟಾಣೆ ಭಾಗ ಉಳಿದದ
ಎಂಟಾಣೆ ಬಿಲ್ಲೆ ಹಾಕಿ ತೂಕ ಮಾಡಿ
ಔಷಧ ಬಿಲ್ಲೆ ಮಾಡಿ ಕಟ್ಟಿದಳು
ಅದೊಂದು ರಾತ್ರಿ ಇದ್ದು

ಬೆಳಗ ಮುಂಜಾನೆ ಬಿಚ್ಚಿದಳು

ಚಾರಣೆ ಭಾಗ ಉಳಿದಿತ್ತು

ಚಾರಣೆ ಬಿಲ್ಲೆ ಹಾಕಿ ತೂಕಮಾಡಿ

ಬಿಲ್ಲೆ ಮಾಡಿ ಮಾವನ ಹುಣ್ಣಿಗೆ ಕಟ್ಟಿದಳು

ಬೆಳಗ ಮುಂಜಾನೆ ಬಿಚ್ಚಿ ನೋಡಿದರೆ

ಹುಣ್ಣು ಇಲ್ಲ ಹುಣ್ಣು ಬಿಂದು ಇಲ್ಲ

ಶರಬಂಧರಾಜಕುಮಾರನ ಹೆಂಡತಿ ಎದಿನಗಂಧಿಯೇ ಮಾವ ಕಾಂಭೋಜರಾಜನಿಗೆ ಉಪಚಾರ ಮಾಡುತ್ತಾಳೆ. ಮನೆಯಲ್ಲಿದ್ದ ಸ್ತ್ರೀಯರು ಅಥವಾ ಸೊಸೆಯರೇ ಮಾವನ ಬಗ್ಗೆ ಕಾಳಜಿ ವಹಿಸಿ ಅವರಿಗೆ ಯಾವುದೇ ಉಪಚಾರ ಮಾಡುವ ಸಂಪ್ರದಾಯ ಎದಿನಗಂಧಿಯಲ್ಲಿ ಅಭಿವ್ಯಕ್ತಗೊಂಡಿದೆ. ಅವಳು ರಾಜನ ಬೆನ್ನಿನ ಮೇಲೆ ಹೊದಿಸಿದ ಶಾಲನ್ನು ತೆಗೆದು ತಣ್ಣೀರು ಬಿಸಿ ನೀರು ಕಲಸಿ ಹುಣ್ಣಿನ ಮೇಲೆ ಸುರಿದು, 'ನವಿಲು ಪುಚ್ಛದಿಂದ ಹುಣ್ಣನ್ನು ಚೆನ್ನಾಗಿ ತೊಳೆಯುವಳು. ಮಾವನಿಗೆ ಜಳಕ ಮಾಡಿಸಿ, ತಕ್ಕಡಿ ತೆಗೆದುಕೊಂಡು ಔಷಧಿಯನ್ನು ತೂಕ ಮಾಡಿ ಅದನ್ನು ಒಂದು ಬಿಲ್ಲೆ ಮಾಡಿ ಮಾವನ ಹುಣ್ಣಿಗೆ ಕಟ್ಟುತ್ತಾಳೆ. ಅಂದು ರಾತ್ರಿ ಅಲ್ಲೇ ಇದ್ದು ಹುಣ್ಣಿಗೆ ಕಟ್ಟಿದ ಬಿಲ್ಲೆಯನ್ನು ಮುಂಜಾನೆ ಬಿಚ್ಚುತ್ತಾಳೆ. ಆಗ ಹುಣ್ಣು ಒಂದು ರೂಪಾಯಿಯ ಅರ್ಧಭಾಗ ಉಳಿದಿರುತ್ತದೆ. ಮತ್ತೆ ರೂಪಾಯಿಯ ಅರ್ಧ ಭಾಗ ಔಷಧಿ ತೂಕ ಮಾಡಿ ಅದನ್ನು ಬಿಲ್ಲೆ ಮಾಡಿ ಮತ್ತೆ ಕಟ್ಟುವಳು. ಅಂದು ರಾತ್ರಿ ಅಲ್ಲೇ ಇದ್ದು ಅದನ್ನು ಬೆಳಿಗ್ಗೆ ಬಿಚ್ಚುತ್ತಾಳೆ. ಆಗ ಹುಣ್ಣು ರೂಪಾಯಿಯ ಕಾಲು ಭಾಗ ಉಳಿದಿರುತ್ತದೆ. 'ಚಾರಣೆ ಬಿಲ್ಲೆ ಹಾಕಿ ತೂಕ ಮಾಡಿ' ಅಂದರೆ ರೂಪಾಯಿ ಕಾಲು ಭಾಗ (ನಾಲ್ಕಾಣೆ) ತೂಕ ಮಾಡಿ ಔಷಧಿಯ ಬಿಲ್ಲೆ ಮಾಡಿ ಮತ್ತೆ ಕಟ್ಟುತ್ತಾಳೆ. ಬೆಳಿಗ್ಗೆ ಎದ್ದು ಬಿಚ್ಚಲು ಹುಣ್ಣಿನ ಗುರುತು ಇಲ್ಲದಂತೆ ಮಾಯವಾಗಿರುತ್ತದೆ. ಸೊಸೆಯೇ ಮಾವನ ಉಪಚಾರ ಮಾಡಬೇಕೆಂಬ ಸಾಂಪ್ರದಾಯಕತೆಯ ವಾಸ್ತವಿಕ ಬದುಕು ಎದಿನಗಂಧಿ ಪಾತ್ರದಲ್ಲಿ ಅಭಿವ್ಯಕ್ತಗೊಂಡಿದೆ. ಎದಿನಗಂಧಿಯ ಉಪಚಾರ ಸ್ತ್ರೀಕುಲದ ಉಪಚಾರವನ್ನು ನೆನಪಿಸುತ್ತದೆ. ಇಂತಹ ವಿಧಾನವು ಗ್ರಾಮೀಣ ಜನರ ಬದುಕಿನಲ್ಲಿ ಕಾಣಬಹುದು. ಈ ಮದ್ದನ್ನು ಕಟ್ಟುವ ವಿಧಾನವನ್ನು ಕಥನದಲ್ಲಿ ಬುರ್ರಕಥನಗಾರರು ಅಭಿವ್ಯಕ್ತ ಮಾಡಿದ್ದರಿಂದ ಕೇಳುಗರಿಗೆ ಶುಶ್ರೂಷೆಯ ವಿಚಾರವನ್ನು ಮನವರಿಕೆ ಮಾಡಿಕೊಟ್ಟಂತಾಗಿದೆ. ಮದ್ದನ್ನು ಕಟ್ಟುವ ರೀತಿ, ಅದನ್ನು ಬಿಚ್ಚುವ ರೀತಿ, ಅಷ್ಟೇ ತೂಕದಲ್ಲಿ ಕಟ್ಟುವ ವಿಧಾನವು ವಾಸ್ತವದ ಅನುಭವವನ್ನು ತೋರಿಸಿಕೊಡುತ್ತದೆ. ಮುಖ್ಯವಾಗಿ ಇಲ್ಲಿನ ಸ್ತ್ರೀಯ ಮನೋಧರ್ಮ, ಅವಳ ಸಹನೆ ಮುಂತಾದ ಗುಣಗಳು ವ್ಯಕ್ತವಾಗಿದ್ದು ಕಾಣುತ್ತದೆ.

ಇನ್ನೊಂದು ಪ್ರಸಂಗಃ ಕಾಂಭೋಜರಾಜನ ಹಿರಿಯ ಆರು ಜನ ರಾಣಿಯರು ತಮ್ಮ ಆರು ಜನ ಪುತ್ರರಿಗೆ ತಾವೇ ವಿಷವನ್ನು ಹಣ್ಣಿನಲ್ಲಿ ಬೆರೆಸಿ ಕೊಟ್ಟಿರುತ್ತಾರೆ. ಆದರೆ ಕಿರಿಯ ರಾಣಿ ಸಿರಿದೇವಿ ಮೇಲೆ

ಆಪಾದನೆ ಹೊರಿಸಿ, ಶಿಕ್ಷೆ ವಿಧಿಸಲು ಕಾರಣಕರ್ತರಾಗುತ್ತಾರೆ. ವಿಷವನ್ನು ತಿಂದ ಮಕ್ಕಳು ಪ್ರಜ್ಞೆ ತಪ್ಪಿರುತ್ತಾರೆ. ರಾಜನಿಗೆ ದೂರು ಕೊಟ್ಟು ತಮ್ಮ ಮಕ್ಕಳನ್ನು ತಮ್ಮ ಅರಮನೆಗೆ ಕರೆದುಕೊಂಡು ಹೋಗುತ್ತಾರೆ. ರಾಜನು ಮದ್ದು ಕೊಡುವ ವೈದ್ಯರನ್ನು ಕರೆಯಿಸಿ ವೈದ್ಯ ಉಪಚಾರ ಮಾಡಿಸುತ್ತಾನೆ. ರಾಜನು ವೈದ್ಯರನ್ನು ಮಕ್ಕಳನ್ನು ಬದುಕಿಸಿದರೆ ಕಾಣಿಕೆಗಳನ್ನು ಕೊಡುತ್ತೇನೆಂದು ಹೇಳುತ್ತಾನೆ. ಆಗ ಕೇಳಿಸಿಕೊಂಡ ವೈದ್ಯರು ಅರಮನೆಗೆ ಬರುತ್ತಾರೆ. ಬಂದು ಮಕ್ಕಳ ಕೈ ಹಿಡಿದು ನೋಡುತ್ತಾರೆ. ಮಕ್ಕಳಿಗೆ ರೋಗ ಇಲ್ಲ. ರುಜಿನ ಇಲ್ಲ ಅವರ ಹೊಟ್ಟೆಯೊಳಗೆ ವಿಷ ಸೇರಿದೆ. ಮಕ್ಕಳಿಗೆ ಪ್ರಜ್ಞೆ ತಪ್ಪಿದೆ, ಅವರಿಗೆ ನಾವು ಔಷಧಿಯನ್ನು ಹಾಕುತ್ತೇವೆಂದು ಹೇಳುತ್ತಾರೆ.

ಒಂದು ಬಿಳಿ ಉಳ್ಳಗಡ್ಡಿ ತಂದರೆ  
ಒಂದು ತಾಮ್ರ ದುಡ್ಡು ತಂದರೆ  
ಎಮ್ಮಿಯ ಮಜ್ಜಿಗೆ ತಂದರೆ  
ಉಳ್ಳಗಡ್ಡಿ ತಾಮ್ರ ದುಡ್ಡು ಅರಿದು  
ಮಜ್ಜಿಗೆಯೊಳಗೆ ಕಲಸಿ  
ಮಕ್ಕಳಿಗೆ ಒಂದೊಂದು ಗ್ಲಾಸು ಕುಡಿಸ್ಯಾರ  
ಮಕ್ಕಳಿಗೆ ಒಂದು ಘಳಿಗೆ ಹೊತ್ತಿನಲ್ಲಿ  
ಮಚ್ಚೆಲ್ಲ ಇಳಿದು ಹೋಗಿದೆ

ಹೀಗೆ ಮದ್ದು ಹಾಕುವ ವೈದ್ಯರು ಉಪಚಾರ ಮಾಡುತ್ತಾರೆ. ಇಲ್ಲಿ ವೈದ್ಯಕೀಯ ವಿಧಾನವು ಹಳ್ಳಿಯ ಜನರು ವಿಷವನ್ನು ಕುಡಿದ ಸಂದರ್ಭದಲ್ಲಿ ಪ್ರಾಥಮಿಕವಾಗಿ ಅವರಿಗೆ ವಿಷ ಹೊರಗೆ ಬರಲು ಈ ವಿಧಾನವನ್ನು ಅನುಸರಿಸಿ ವಾಂತಿ ಮಾಡುವಂತೆ ಮಾಡುತ್ತಾರೆ. ಗ್ರಾಮೀಣ ಜನರ ಮನೆಮದ್ದು ವಿಚಾರ, ನಾಟಿ ವೈದ್ಯ ಪದ್ಧತಿಯು ಇಲ್ಲಿ ವ್ಯಕ್ತವಾಗಿದೆ. ಬಿಳಿ ಉಳ್ಳಾಗಡ್ಡೆ, ತಾಮ್ರದ ದುಡ್ಡು, ಎಮ್ಮೆಯ ಮಜ್ಜಿಗೆ ಇವು ವಿಷವನ್ನು ಹೋಗಲಾಡಿಸುವ ವಸ್ತುಗಳಾಗಿವೆ. ಹೀಗಾಗಿ ಆ ಹಿನ್ನೆಲೆಯಲ್ಲಿ ಈ ಸನ್ನಿವೇಶವು ಅಭಿವ್ಯಕ್ತಗೊಂಡಿದೆ.

**ವರ್ಣನೆ**

ಕಾಂಭೋಜರಾಜ ಕಥನದಲ್ಲಿ ಬುರ್ರಕತೆಗಾರರು ಕತೆಯ ಸನ್ನಿವೇಶ ಸಂದರ್ಭ, ಪಾತ್ರಗಳಿಗೆ ಅನುಸಾರವಾಗಿ ಕಥಾತಂತ್ರವನ್ನು ಪರಿಣಾಮಕಾರಿಯಾಗಿ ಬಳಸಿಕೊಂಡಿದ್ದಾರೆ. ರಾಜನ ಹಿರಿಯ ರಾಣಿಯರ ಮಕ್ಕಳು ಜನಿಸುವ ಸಂದರ್ಭದ ವರ್ಣನೆ ಸೊಗಸಾಗಿ ಮೂಡಿ ಬಂದಿದೆ.

ಬಳೆ ಬಳೇ ಬಳರಾನು ಬಳನೋಡು  
ಅವರವರ ಎಡನ್ನ ಊರುಗದ್ದಲ ಮಾಡಿ

ಕೇರಿಗದ್ದಲ ಮಾಡಿ

ರವದೂಳು ಗಾಳಿನ್ನ

ಗಾಳಿನ್ನ ಎದ್ದದ

ಆ ಗುಡುಗು ಚಪ್ಪಳಿಗಿ ಗಡಗಡ ಅಂತದ

ಮುತ್ತಿನ ಮಳೀಯೋಗಿ

ಮೂರು ತಾಸೆನ್ನ ಹೊಡೆದದ

ಸೂಲಗಿತ್ತಿ ಸುಬ್ಬಮ್ಮ

ಆ ದಾದಿ ರಮಣಮ್ಮ

ಮಗುವು ಜನಿಸುವಾಗ ಇಡೀ ಪಟ್ಟಣವೇ ಅಲ್ಲೋಲ ಕಲ್ಲೋಲವಾಯಿತು ಎಂಬ ಭಾವ ಇಲ್ಲಿ ವ್ಯಕ್ತವಾಗಿದೆ. ಮಗುವು ಜನಿಸುವ ಸಮಯಕ್ಕೆ ಗದ್ದಲದ ವಾತಾವರಣ ಉಂಟಾಗಿದೆ. ನೈಸರ್ಗಿಕವಾಗಿ ಬದಲಾವಣೆ ಹೊಂದಿ ಗಾಳಿಯು ಸಹ ಅತ್ಯಂತ ವೇಗವಾಗಿ ಬೀಸುತ್ತದೆ. ಗಾಳಿ ಬೀಸಿ, ಗುಡುಗು ಮಿಂಚು ಅಬ್ಬರಿಸುತ್ತದೆ. ಗಾಳಿ ಗುಡುಗು ಸಿಡಿಲಿನ ಆರ್ಭಟದಲ್ಲಿ ಮಳೆ ಬರುತ್ತದೆ. ಅದು ಮುತ್ತಿನ ಮಳೆಯನ್ನೇ ಮೂರು ಗಂಟೆಯ ತನಕ ಸುರಿಸುತ್ತದೆ ಎಂದು ಆ ಸನ್ನಿವೇಶದ ವರ್ಣನೆ ಮಾಡಲಾಗಿದೆ. ಸೂಲಗಿತ್ತಿ ಸುಬ್ಬಮ್ಮ ದಾದಿಯಾದ ರಮಣಮ್ಮ ಇವರು ಸಹ ಆ ಮಗುವು ಜನಿಸುವ ಸಂದರ್ಭದಲ್ಲಿ ಹೊಸ ಅನುಭವದಿಂದ ದಿಗ್ಭ್ರಾಂತರಾಗುತ್ತಾರೆ ಎಂಬ ಕಥನಗಾರರ ಕಲ್ಪನೆಯಲ್ಲಿ ಅವರ ಪ್ರತಿಭೆಯನ್ನು ಕಾಣಬಹುದು.

ರಾಜನ ಕಿರಿಯ ರಾಣಿ ಸಿರಿದೇವಿ ತನ್ನ ಮಗನಾದ ಶರಬಂಧರಾಜಕುಮಾರನು ತಂದೆಯ ಬೆನ್ನಿನ ಹುಣ್ಣಿಗೆ ಮದ್ದನ್ನು ತರಲು ಹೋಗುವ ಸಂದರ್ಭದಲ್ಲಿ ತಾಯಿಯ ಪುತ್ರವಾತ್ಸಲ್ಯದ ವರ್ಣನೆ ನಿರೂಪಣೆ ಈ ರೀತಿ ಮೂಡಿದೆ.

ಹಡೆದಂತ ಸಿರಿದೇವಿ

ಹರಕೆಮಾಡಿ ಕೊಡ್ತಳ

ಬಂಗಾರ ಬಟ್ಲದೊಳಗೆ

ಹಾಲನ್ನು ಕುಡಿದು ಹೋಗು ಮಗನೆ

ಬೆಳ್ಳಿ ಬಟ್ಲದೊಳಗೆ

ಬೆಣ್ಣೆನ್ನ ತಿಂದು ಹೋಗು ಮಗನೆ

ಬಂಗಾರ ತೊಟ್ಲದೊಳಗೆ ಮಗನೆ

ಒಂದು ತಾಸೆನ್ನ ತೂಗೋಗು ಮಗನೆ

ಬಂಗಾರ ಪಟೆದ ವರುಸದ ಮ್ಯಾಲೆ

ಒಂದು ತಾಸನ್ನ ಮಲಗಿ ಹೋಗು ಮಗನೆ

ನೀ ಹೋಗುವಾಗ ತಣ್ಣಗೆ ಹೋಗು ಮಗನೆ

ನೀ ಬರುವಾಗ ತಣ್ಣಗೆ ಬಾ ಮಗನೆ

ನೀ ಹೋಗಂತ ದಾರಿಯಲ್ಲಿ ಮಗನೆ

ಕಬ್ಬಿನ ತೋಟ ಆಗಲಿ ಮಗನೆ

ನೀ ಹೋಗಂತ ದಾರಿಯೊಳಗೆ ಮಗನೆ

ಬಾಳೆ ತೋಟವಾಗಲಿ ಮಗನೆ

ಸಿರಿದೇವಿ ತನ್ನ ಮಗ ಶರಬಂಧರಾಜಕುಮಾರನು ತಂದೆಗೆ ಮದ್ದನ್ನು ತರಲು ಹೋಗುವಾಗ ತಾಯಿ ಹರಸುವ ರೀತಿ ತಾಯಿಯ ಪುತ್ರವಾತ್ಸಲ್ಯ, ಮಮತೆ ಕಾಣುತ್ತದೆ. ಮಗನನ್ನು ಅತ್ಯಂತ ಮುದ್ದಿನಿಂದ ಬೆಳೆಸಿದ್ದಾಳೆ. ಚಿಕ್ಕ ಮಗುವಾಗಿದ್ದಾಗ ಹಾಲುಣಿಸಿದ ನೆನಪಾಗಿ ಬಂಗಾರದ ಬಟ್ಟಲಲ್ಲೆ ಹಾಲು ಕುಡಿದು ಹೋಗು ಎನ್ನುತ್ತಾಳೆ. ಬೆಳ್ಳಿ ಬಟ್ಟಲಲ್ಲಿ ಬೆಣ್ಣೆಯಾದರೂ ತಿಂದು ಹೋಗಲು ಹೇಳುತ್ತಾಳೆ. ಬಂಗಾರ, ಬೆಳ್ಳಿ, ಹಾಲು ಮತ್ತು ಬೆಣ್ಣೆ ಶ್ರೀಮಂತ ಪ್ರೀತಿಯ ಸಂಕೇತಗಳಾಗಿವೆ. ಹಾಗೆ ತಾನು ಮಗುವನ್ನು ತೂಗಿದ ನೆನೆಪಿನಿಂದ ಒಂದು ತಾಸೆನ್ನ ತೂಗಿ ಹೋಗು' ಎಂದು ನೆನಪಿಸುತ್ತಾಳೆ. ಮನೆಯಲ್ಲಿ ಮಾಡಿಸಿದ ವಿಶೇಷ ಮಂಚದಲ್ಲಾದರೂ ಒಂದು ಗಂಟೆ ಮಲಗಿ ಹೋಗೆಂದು ತಿಳಿಸುತ್ತಾಳೆ. ಹೋಗುವಾಗ ಬರುವಾಗ ಯಾವುದೇ ಕೆಟ್ಟ ಪರಿಣಾಮ ಬೀರದೆ ಚೆನ್ನಾಗಿ ತಿರುಗಿ ಬರಲು ಹೇಳುತ್ತಾಳೆ. ಹೋಗುವ ದಾರಿಯಲ್ಲಿ ಕಬ್ಬಿನ ತೋಟ ಆಗಲೆಂದು ಹರಸುವ ರೀತಿ ತನ್ನ ಮಗನಿಗೆ ಇಷ್ಟು ದಿವಸ ಸಿಹಿಯನ್ನು ತಂದು ಕೊಟ್ಟಿದ್ದನ್ನು ನೆನಪಿಸುತ್ತಾಳೆ. ಹೀಗಾಗಿ ದಾರಿಯಲ್ಲಿ ಕಬ್ಬು ಸಿಹಿಯ ನೆನಪು, ಕಬ್ಬನ್ನು ತಿನ್ನುತ್ತ ನೋವನ್ನು ಮರೆಯಲೆಂಬ ಭಾವ ಕಾಣಿಸುತ್ತದೆ. ಹಾಗೆ ಬಾಳೆಯ ತೋಟ ಸಹ ದಾರಿಯಲ್ಲಿ ಸಿಗಲೆಂಬ ಹರಕೆಯು, ಹೋಗುವಾಗ ದಣಿವಾರಿಸಿಕೊಳ್ಳಲು ತಂಪು ನೆರಳಿಗಾಗಿ ಅಂತಹ ತೋಟ ಸಿಗಲೆಂದು ಹಾರೈಸುವಳು. ಸಿರಿದೇವಿಯು ತನ್ನ ಮಗನನ್ನು ಹರಸುವ ರೀತಿ ಕರುಣಾಜನಕವಾಗಿ ಕಂಡುಬರುತ್ತದೆ. ಈ ನಿರೂಪಣೆಯು ತಾಯಿ ಮಾತೃ ಹೃದಯದ ವಾಸ್ತವಿಕ ಬದುಕು, ಅವರ ನೋವು ಇಲ್ಲಿ ಕಾಣಬಹುದು. ಮಹಿಳೆಯು ತಾನು ಬಡವಿಯಾದರೂ, ಅನಾಥೆಯಾದರೂ, ಸಹ ಮಕ್ಕಳ ಮೇಲಿನ ಪ್ರೀತಿ, ಮಮತೆ ವಾತ್ಸಲ್ಯ ಹೇಗೆ ಇರುತ್ತದೆಂಬುದು ಸಿರಿದೇವಿ ಪಾತ್ರದಲ್ಲಿ ಅಭಿವ್ಯಕ್ತವಾಗಿದೆ.

ಆರು ಜನ ಹಿರಿಯ ರಾಜಕುಮಾರರಾದ ಚಿತ್ರಗುಪ್ಪಿಯರು ತಂದೆಗೆ ಮದ್ದನ್ನು ತರಲು ಹೋಗುತ್ತಾರೆ. ಅವರು ಬೇಜವಾಬ್ದಾರಿಯಿಂದ ತಮ್ಮ ವೈಯಕ್ತಿಕ ಹಿತಾಸಕ್ತಿಯಿಂದ ಸುಂದರಮ್ಮ ಪಟ್ಟಣದ ಸುಂದರಮ್ಮಳ ಮೇಲಿನ ಮೋಹದಿಂದ ಅವಳನ್ನು ಪಡೆಯುವ ಉದ್ದೇಶ ಇಟ್ಟುಕೊಂಡು ಹೋಗುತ್ತಾರೆ. ಆಗ ಅವಳ ನಾಟ್ಯ, ಅಲ್ಲಿ ಬರುವ ಪಾತ್ರದ ಪ್ರಾಣಿಗಳು, ಆ ಸನ್ನಿವೇಶದ ವರ್ಣನೆಯಲ್ಲಿ ಹಾಸ್ಯ ಪ್ರತಿಬಿಂಬಿಸುವಂತಿದೆ.

ಡ್ಯಾನ್ಸ್ ಮಾಡಿಕಂತ ತಂತಿ ಮ್ಯಾಲ ಬರ್ತಳ

ಸುಂದರಮ್ಮ!

ತಾಳಮೇಳ ತೈನಾತ ನಡಿದದ

ರಾಗ ದಾಟಿ ನಡೆದದ

ಹುಲಿ ಉಪ್ಪಂಗಿ ಊದುತದ

ಕರಡಿ ಮದಲಿ ಬಾರಿಸ್ತದ

ಬೆಕ್ಕು ತಲಿಮ್ಯಾಲ ದೀಪ ಇಟ್ಟದ

ಸುಂದರಮ್ಮ ಡ್ಯಾನ್ಸ್ ನಡೆದದ

ಆರು ಮಂದಿ ರಾಜರು ಬಾಯಿ ತೆರೆದರ

ಕಣ್ಣು ಮುಚ್ಯಾರ ಬಾಯಿ ತೆರದಾರ

ಪ್ರಾಣಿಗಳ ಪಾತ್ರಗಳ ಮೂಲಕ ರಂಜನೆಯನ್ನು ತಂದು ಕೇಳುಗರಿಗೆ ರಸದೌತಣವನ್ನು ನೀಡುತ್ತಾರೆ. ಸುಂದರಮ್ಮ ಹೆಸರಿಗೆ ತಕ್ಕಂತೆ ಅತ್ಯಂತ ಸುಂದರವಾಗಿದ್ದಾಳೆ. ತನ್ನನ್ನು ವರಿಸಲು ಬಂದವರಿಗೆ ಮೊದಲು ತನ್ನ ನಾಟ್ಯವನ್ನು ತೋರಿಸಿ, ಅವರನ್ನು ಸೋಲಿಸಿ ಬಂಧನದಲ್ಲಿ ಇಡುತ್ತಾಳೆ. ಹುಲಿ, ಕರಡಿ, ಬೆಕ್ಕು, ಪಾತ್ರಗಳಿಗೆ ತಕ್ಕಂತೆ ತಾಳ ಮೇಳದ ಜವಾಬ್ದಾರಿ ಕೊಟ್ಟಿದ್ದಾಳೆ. ಸುಂದರಮ್ಮಳ ನಾಟ್ಯಕ್ಕೆ ಚಿತ್ರಗುಪ್ಪಿ ರಾಜಕುಮಾರರು ಮರುಳಾಗುತ್ತಾರೆ. ಸುಂದರಮ್ಮಳ ನಾಟ್ಯ ಸಮಯದಲ್ಲಿ ಹುಲಿ, ಕರಡಿ, ಬೆಕ್ಕು ಇವುಗಳು ಬಾರಿಸುವ ವಾದ್ಯಗಳ ಚಿತ್ರಣವನ್ನು ಹಾಸ್ಯಭರಿತವಾಗಿ ವರ್ಣಿಸಲಾಗಿದೆ. ಕಥನಗಾರರು ಪ್ರಾಣಿಗಳನ್ನು ಇಂತಹ ಸನ್ನಿವೇಶದಲ್ಲಿ ತಂದು ಕಥನದ ಸೌಂದರ್ಯವನ್ನು ಹೆಚ್ಚಿಸಿದ್ದಾರೆ. ಇಂಥಹ ಸನ್ನಿವೇಶಗಳು ಕಥನದಲ್ಲಿ ಅಲ್ಲಲ್ಲಿ ಕಂಡುಬರುತ್ತದೆ.

ಸಿರಿದೇವಿಯು ಪೋಷಣೆ ಹೊತ್ತ ಆರು ಜನ ಮಕ್ಕಳಿಗೆ ವಸ್ತ್ರ ಒಡವೆಗಳನ್ನು ತೊಡಿಸಿ ಆನಂದ ಪರವಶಳಾಗುತ್ತಾಳೆ. ಮಕ್ಕಳಿಗೆ ಧರಿಸುವ ಆಭರಣಗಳ ವರ್ಣನೆಯು ಸೊಗಸಾಗಿ ಚಿತ್ರಿತಗೊಂಡಿದೆ.

ಆಡಂತ ಮಕ್ಕಳಿಗೆ ಶಿವನೆ

ಬೇಡಂತ ಒಡವೆಗಳು

ಕಂಟಿಚಂದ್ರಹಾರ ಕೊರಳಿಗೆ ಧರಿಸ್ಯಳ

ಓನಮಾಲ ಸರಗಳು

ಮಕ್ಕಳ ಕೊರಳಿಗೆ ಧರಿಸ್ಯಳ

ಚೇರು ಚೇರು ಬಂಗಾರದ ಕಡಗ

ಚೇರು ಚೇರು ಬಂಗಾರದ ಉಡುದಾರ

ಸಿರಿದೇವಿ ಮಾಡಿಸ್ಯಳ

ಮಕ್ಕಳ ಟೊಂಕಕ್ಕೆ ಹಾಕ್ಯಳ

ಸಿರಿದೇವಿ ಆರು ಜನ ಮಕ್ಕಳಿಗೆ ಆಭರಣಗಳನ್ನು ಧರಿಸಿ ಸಂತೋಷ ಪಡುತ್ತಾಳೆ. ಮಕ್ಕಳು ಕೇಳಿದ ವಸ್ತುಗಳನ್ನು ತಂದು ಕೊಡುವಳು. ಮಕ್ಕಳಿಗೆ ವಿಶೇಷವಾದ ಒಡವೆಗಳು ಕಂಟಿಚಂದ್ರಹಾರ, ಓನಮಾಲ ಸರಗಳನ್ನು ಕೊರಳಲ್ಲಿ ತೊಡಿಸಿದ್ದಾಳೆ, ಮಕ್ಕಳ ಕಾಲಿಗೆ ಅಂತಿಂಥ ಕಡಗಗಳನ್ನು ಧರಿಸಿಲ್ಲ, ಅವು ಬಂಗಾರದ ಕಡಗಗಳು, ಬಂಗಾರದ ಉಡುದಾರವನ್ನು ಧರಿಸಿದ್ದಾಳೆ. ರಾಜನ ಮಕ್ಕಳು ಹೇಗೆ ಇರಬೇಕು ಎಂಬುದನ್ನು ವರ್ಣಿಸಲಾಗಿದೆ. ಸಿರಿದೇವಿ ಮಕ್ಕಳನ್ನು ಅತ್ಯಂತ ಮುದ್ದಿನಿಂದ ಪೋಷಿಸುತ್ತಾಳೆಂಬ ಅರಿವು ಇಲ್ಲಿಯ ಭಾವವಾಗಿದೆ. ಕಥನಗಾರರ ಪ್ರತಿಭೆಯು ಇಲ್ಲಿಯ ವರ್ಣನೆಯಲ್ಲಿ ಅಭಿವ್ಯಕ್ತವಾಗಿದೆ.

**ಮತಧರ್ಮದ ವಿಚಾರಗಳು**

ಈ ಕಥನದಲ್ಲಿ ಶೈವ-ವೈಷ್ಣವ ಮತದ ಸಂಘರ್ಷವನ್ನು ಕಾಣಬಹುದು. ಗೊಲ್ಲ ಸಮುದಾಯದ ಕಾಂಭೋಜರಾಜ ವೈಷ್ಣವ ಮತದ ಅನುಯಾಯಿಯಾಗಿರುತ್ತಾನೆ. ಕಥನದಲ್ಲಿ ಕೆಂಪುಗೊಲ್ಲ, ಹಾಲುಗೊಲ್ಲ ಎಂದು ಹೇಳಲಾಗಿದೆ. ವೈಷ್ಣವ ಮತದಲ್ಲಿ ನಂಬಿಕೆ ಇಟ್ಟ ಕಾಂಭೋಜರಾಜ ಉದ್ದನಾಮ ಇಡುವ ತಾನು ಅನ್ಯ ಧರ್ಮವನ್ನು ಅನುಸರಿಸುವುದಿಲ್ಲ. ಅಡ್ಡನಾಮ ಧರಿಸುವ ಶೈವ ಜಂಗಮರಿಗೆ, ಭಿಕ್ಷೆ ನೀಡುವುದಿಲ್ಲ ಎಂದು ಖಡಾಖಂಡಿತವಾಗಿ ಹೇಳುತ್ತಾನೆ. ಪರಮಾತ್ಮನು ಜಂಗಮ ವೇಷದಲ್ಲಿ ಬಂದು ಕಥನದ ಹಲವು ಸನ್ನಿವೇಶಗಳಲ್ಲಿ ಕಾಂಭೋಜರಾಜನನ್ನು ಪರೀಕ್ಷೆಗೆ ಒಡ್ಡಿ ಕಾಡುವುದನ್ನು ಕಥನದಲ್ಲಿ ಕಾಣಬಹುದು. ಇಲ್ಲಿ ಶೈವ, ವೈಷ್ಣವ ಮತೀಯ ಸಂಘರ್ಷದ ಧಾಟಿಯನ್ನು ಕಾಣಬಹುದು. ಉದ್ದನಾಮದವರು ಅಡ್ಡನಾಮದವರಿಗೆ ಭಿಕ್ಷೆಯನ್ನು ನೀಡುವುದಿಲ್ಲ ಎಂದು ಹೇಳುವುದರ ಮೂಲಕ ಸಂಘರ್ಷಕ್ಕೆ ನಾಂದಿ ಹಾಡಲಾಗಿದೆ.

ಕಾಂಭೋಜರಾಜನಿಗೆ ಏಳು ಜನ ರಾಣಿಯರು ಇದ್ದರೂ ಕೂಡ ಮಕ್ಕಳ ಭಾಗ್ಯ ಇರುವುದಿಲ್ಲ. ಮಕ್ಕಳಿಗಾಗಿ ಯಾತ್ರೆ ಮಾಡಿದ್ದರೂ ಮಕ್ಕಳಾಗುವುದಿಲ್ಲ. ಇದರಿಂದ ನೊಂದ ರಾಜ ಜ್ಯೋತಿಷ್ಯರನ್ನು ಕರೆದು ತನಗೆ ಮಕ್ಕಳಾಗದಿದ್ದ ದೋಷದ ಬಗ್ಗೆ ಕೇಳುತ್ತಾನೆ. ಕಥನಗಾರರು ಆ ಜ್ಯೋತಿಷ್ಯರ ಮೂಲಕ ಕತೆಯನ್ನು ಹೇಳಿಸುವ ತಂತ್ರವನ್ನು ಕಾಣಬಹುದು. ಸೂಕ್ಷ್ಮವಾಗಿ ಅವಲೋಕಿಸಿದಾಗ ಮತ ಸಂಘರ್ಷ ಅಲ್ಲಿಂದಲೇ ಪ್ರಾರಂಭವಾಗುತ್ತದೆ.

ರಾಜ ತನ್ನ ರಾಣಿಯರ ಜೊತೆಯಲ್ಲಿ ವಿಷ ಕುಡಿದು ಸಾಯಲು ತಮ್ಮ ತೋಟಕ್ಕೆ ಬಂದಿರುತ್ತಾರೆ. ಪರಮಾತ್ಮನ ಅಪ್ಪಣೆ ಮೇರೆಗೆ ವಿಷ್ಣು, ವೀರಭದ್ರ, ವಿಘ್ನೇಶ್ವರ ಮೂವರು ದಾಸರ ವೇಷ ಧರಿಸಿ ಕೈಯಲ್ಲಿ ತಂಬೂರಿ ಹಿಡಿದು ರಾಜನ ತೋಟದಲ್ಲಿ ಹುಟ್ಟಿ ಬಂದು, ರಾಜರಾಣಿಯರು ವಿಷವನ್ನು ಕುಡಿಯಲು ತಯಾರಾದ ಸಂದರ್ಭದಲ್ಲಿ ಭಿಕ್ಷೆ ಕೇಳುತ್ತಾರೆ.

ಮೂವರು ತ್ರೈಮುರ್ತಿರು

ದಾಸರ ವಿಸೆ ಕಟ್ಟಿಕೊಂಡು

ಕೈಲಾಸ ಮಠದಲ್ಲಿ ಮಾಯವಾಗಿ

ಆ ತೋಟದೊಳಗೆ ಹ್ಯಾಂಗ ಹುಟ್ಟಿ ಬರ್‍ತರ

ತಂದಾನ ತಾನೋ ತಾನ ತಂದಾನ

ಮಲ್ಲಿಗೆ ಹೂವ ತೋಟದಗ

ಅವರು ಹುಟ್ಟಿ ಬಂದರ

ಗೋವಿಂದ ಗೋವಿಂದ ಅವರೇ ಅಂದರ

ಧರ್ಮವಾಯ್ನಲಿಂದ ನಾವು ಬಂದಿವಿ

ಏನಯ್ಯ ರಾಜೇಂದ್ರ ಕಾಂಭೋಜರಾಜ

ಧರ್ಮ ಕೊಡಬೇಕು

ನಾವಿನ್ನು ಒಯ್ಯಬೇಕು

ರಾಜ ಹಿಂದಕ್ಕೆ ಒಳ್ಳಿನೋಡ್ತ್ಯಾನ

ಪರಮಾತ್ಮನೇ ದಾಸರ ವೇಷಧಾರಿಗಳಾದ ವಿಷ್ಣು, ವೀರಭದ್ರ, ವಿಘ್ನೇಶ್ವರರನ್ನು ಕಳಿಸುತ್ತಾನೆ. ಕಾಂಭೋಜರಾಜನು ಏಳು ಜನ ರಾಣಿಯರ ಜೊತೆ ವಿಷ ಕುಡಿದು ಸಾಯಲು ತಯಾರಾಗಿರುತ್ತಾನೆ. ಅವನಲ್ಲಿ ಇರುವ ಅಹಂಕಾರ ಈಗ ಮುರಿದಿದೆ. ಅವರಿಗೆ ಆರು ಜನ ಹಿರಿಯ ರಾಣಿಯರಿಗೆ ಸಂತಾನ ಭಾಗ್ಯ ಕೊಟ್ಟು ಬರಲು ಹೇಳಿ ಕಳಿಸಿರುತ್ತಾನೆ. ದಾಸ ವೇಷಧಾರಿಗಳು 'ಗೋವಿಂದ ಗೋವಿಂದ' ಎಂದು ಭಿಕ್ಷೆ ಕೇಳುತ್ತಾರೆ. ಮೂವರು ದಾಸರ ವೇಷಧಾರಿಗಳ 'ಗೋವಿಂದ' ಎಂಬ ಪದ ವೈಷ್ಣವ ಮತವನ್ನು ಪ್ರತಿನಿಧಿಸುತ್ತದೆ. ಆದರೆ ವಿಷ್ಣುವನ್ನು ಸಹ ಅನುಗ್ರಹಿಸಲು ಕಳುಹಿಸುವವರು ಶಿವನೇ ಎಂಬ ಶಿವಪಾರಮ್ಯದ ಅಂಶವನ್ನು ಇಲ್ಲಿಯೂ ಗಮನಿಸಬಹುದು. ಎರಡು ಮತಗಳ ಮಧ್ಯದಲ್ಲಿ ಕಾಂಭೋಜರಾಜ ಕಷ್ಟವನ್ನು ಅನುಭವಿಸುತ್ತಾನೆ. 'ಕೊಡುವವನು ಅವನೇ ಕೊಳ್ಳುವವನು ಅವನೇ' ಎನ್ನುವ ಭಾವನೆ ಈ ಕಥನಗಾರರಲ್ಲಿ ಇದ್ದಿರಬಹುದು. ಪರಮಾತ್ಮನೇ ಸಿರಿದೇವಿಗೆ ಮಕ್ಕಳ ಭಾಗ್ಯವನ್ನು ತಾನೇ ಕೊಡುವುದರಿಂದ ಕಥನದಲ್ಲಿ ಶೈವ-ವೈಷ್ಣವ ಮತಗಳು ಒಟ್ಟೊಟ್ಟಿಗೆ ಸಾಗುತ್ತವೆ. ಆದರೆ ಗೊಲ್ಲ ಕಾಂಭೋಜರಾಜ ಮಾತ್ರ ತನ್ನ ಮತದ ಬಗ್ಗೆ ಅಭಿಮಾನ ಪಡುವುದು ಕಾಣುತ್ತದೆ. ಪುರಾಣಗಳಲ್ಲಿ ಬ್ರಹ್ಮ, ವಿಷ್ಣು, ಮಹೇಶ್ವರರೇ ತ್ರೀಮೂರ್ತಿಗಳಾದರೆ ಬುರ್‍ರಕತೆಯ ಪ್ರಕಾರ ವಿಷ್ಣು, ವೀರಭದ್ರ, ವಿಘ್ನೇಶ್ವರ ಅವರೇ ತ್ರಿಮೂರ್ತಿಗಳಾಗಿ ಪರಿಭಾವಿಸಲಾಗಿದೆ.

ರಾಜನ ಕಿರಿಯ ರಾಣಿ ಸಿರಿದೇವಿ ಮೇಲೆ ಆರು ಜನ ಹಿರಿಯ ರಾಣಿಯರು ಅಪಾದನೆ ಹೊರಿಸಿ ಸಿರಿದೇವಿಯನ್ನು ಸ್ಮಶಾನದ ಬಂದಿಖಾನೆಯಲ್ಲಿ ಇಡುವಂತೆ ಸಂಚನ್ನು ಹೂಡಿ ರಾಜನಿಗೆ ದೂರು ನೀಡುತ್ತಾರೆ.

ಆ ಸಂದರ್ಭದಲ್ಲಿ ಸ್ಮಶಾನದಲ್ಲಿ ಇದ್ದ ಸಿರಿದೇವಿಗೆ ಪರಮಾತ್ಮನೇ ಜಂಗಮ ವೇಷವನ್ನು ಧರಿಸಿಕೊಂಡು ಬಂದು ಮಕ್ಕಳ ಭಾಗ್ಯ ಕೊಡುತ್ತಾನೆ.

ಪರಮಾತ್ಮ ಮುಪ್ಪಾದ ಮುದುಕಾದ
ಮುಂಗೈಗೆ ಜೋಳಿಗಿ ಹಾಕೊಂಡು
ತ್ರಿಶೂಲ ಕೈಯಾಗ ಹಿಡಕೊಂಡು
ಕೈಲಾಸ ಮಠದಲ್ಲಿ ಮಾಯವಾಗಿ
ಆಯಮ್ಮ ಭಕ್ತಿ ಮೆಚ್ಚಿ
ಶರಬಂಧಿಖಾನದ ಬೆಲ್ಲಿ ಹುಟ್ಯಾನ
ಗಡಗಡ ಸ್ವಾಮಿ ಗಂಟೆ ಒಡೆದ
ದೇವತಾರ್ನ ಶಂಕು ಹಿಡ್ದನ.

ಶೈವ ಮತದ ಅನುಗುಣವಾಗಿ ಪರಮಾತ್ಮನೇ ಸಿರಿದೇವಿಯ ಕಷ್ಟವನ್ನು ಅರಿತು ಅವಳ ಭಕ್ತಿ, ಪತಿಧರ್ಮವನ್ನು ಮೆಚ್ಚಿ ಮುಪ್ಪಾದ ಮುದುಕನ ಜಂಗಮ ವೇಷವನ್ನೇ ಧರಿಸಿಕೊಂಡು ಸ್ಮಶಾನದಲ್ಲಿ ಹುಟ್ಟಿಬರುತ್ತಾನೆ. ಶೈವ ಜಂಗಮ ಸ್ವರೂಪಿಯಾಗಿ ಬಂದಿದ್ದಾನೆ. ಕೈಯಲ್ಲಿ ತ್ರಿಶೂಲ, ಕೈಯಲ್ಲಿ ಗಂಟೆ ಅದರ ನಾದ ಹಿಡಿದು ಸಿರಿದೇವಿಯಲ್ಲಿ ಭಿಕ್ಷೆ ಬೇಡುತ್ತಾನೆ. ಪರಮಾತ್ಮನು ಮೊದಲು ಪರೀಕ್ಷೆ ಮಾಡುತ್ತಾನೆ. ಇಲ್ಲಿ ವಾಸ್ತವವಾಗಿ ಜಂಗಮನ ಚಿತ್ರಣವನ್ನು ಕಾಣಬಹುದು. ಈ ತರಹ ಜಂಗಮನು ಮನೆಗೆ ಬಂದು ಗಂಟೆ ನಿನಾದವನ್ನು ಹೊರಡಿಸುವುದು ವಾಸ್ತವ ಇರಬಹುದು.

ಪರಮಾತ್ಮನು ಕಾಂಭೋಜರಾಜನ ಆಸ್ಥಾನಕ್ಕೆ ಜಂಗಮ ವೇಷ ಧರಿಸಿ ಬರುತ್ತಾನೆ. ರಾಜನ ಅಹಂಕಾರವನ್ನು ಕಂಡು ಬೆನ್ನಿನಲ್ಲಿ ಹುಣ್ಣನ್ನು ಹುಟ್ಟಿಸಿ ಕಷ್ಟವನ್ನು ಕೊಡುತ್ತಾನೆ. ಆ ಸಂದರ್ಭದ ಕಥನ ನಿರೂಪಣೆ ಇಲ್ಲಿ ಚಿತ್ರಿತಗೊಂಡಿದೆ.

ಗಣಗಣ ಗಂಟೆ ಭಾರಿಸ್ಯಾನ
ಪರಮಾತ್ಮ ಶಂಕು ಹಿಡಿದನ
ಕ್ರೋದಂಡ ಭಿಕ್ಷೆ ಅಂತ ನಿಂತನ
ಉದ್ದಂಡಧೀರ ಕಾಂಭೋಜರಾಜ
ಕಾಶಿಯಿಂದ ರಾಮೇಶ್ವರ ಹೊಂಟಿನಿ
ಧರ್ಮವಾಯ್ನಲಿಂದ ನಾ ಬಂದಿನಿ
ಕಚೇರಿದೊಳಗ ಕುಂತವನು

ಕುರ್ಚಿಮ್ಯಾಲಿಂದ ತಿರುಗಿ ನೋಡಿದ

ಏ ಐಗೋಳ ಮುತ್ತು

ಜಂಗಮರಿಗೆ ನಾವು ಧರ್ಮ ಕೊಡಲ್ಲ

ಅಚ್ಚಗಾರು ಬಿಚ್ಚಗಾರು ಯಾರನ್ನ ಬಂದರೆ

ಅಂಥವರಿಗೆ ದಾನ ಕೊಡ್ತೀವಿ

ಐಗೊಳಗೆ ಕೈಮುಟ್ಟಿ ಧರ್ಮ ಕೊಡೋದಿಲ್ಲ.

ಪರಮಾತ್ಮನೇ ಮುಪ್ಪಾದ ಮುದುಕನ ಜಂಗಮ ವೇಷ ಧರಿಸಿ ರಾಜನ ಆಸ್ಥಾನಕ್ಕೆ ಬಂದಿದ್ದಾನೆ. ಜಂಗಮ ಸ್ವರೂಪದಲ್ಲಿ ಬಂದಂತಹ ಪರಮಾತ್ಮನಿಗೆ ನಾವು ಜಂಗಮರಿಗೆ ಭಿಕ್ಷೆ ನೀಡುವುದಿಲ್ಲ ಎನ್ನುತ್ತಾನೆ. 'ಅಚ್ಚಗಾರ ಬಿಚ್ಚಗಾರ ಯಾರನ್ನ ಬಂದರೆ, ಅಂತಹವರಿಗೆ ದಾನ ಕೊಡ್ತಿವಿ' ಎನ್ನುವ ಭಾವ ಬೇಡಿಕೊಂಡು ತಿನ್ನುವ ಭಿಕ್ಷುಕರಿಗೆ ಭಿಕ್ಷೆ ನೀಡುತ್ತೇವೆ ಹೊರತು ನಿಮ್ಮಂತಹ ಜಂಗಮರಿಗೆ ಭಿಕ್ಷೆ ನೀಡುವುದಿಲ್ಲ ಎಂದು ತನ್ನ ವೈಷ್ಣವ ಸಂಪ್ರದಾಯವನ್ನು ಹೊರಹಾಕುತ್ತಾನೆ. ಶೈವ-ವೈಷ್ಣವ ಮತದ ಸಂಘರ್ಷ, ಮುಖ್ಯವಾಗಿ ಇಲ್ಲಿ ಎದ್ದು ಕಾಣುತ್ತದೆ. ಜಂಗಮ ಸ್ವರೂಪಿಯು ಭಿಕ್ಷೆ ನೀಡದಿದ್ದರೆ ಪರವಾಗಿಲ್ಲ ಹಣೆಗೆ ವಿಭೂತಿಯಾದರೂ ಹಚ್ಚಿಕೊಳ್ಳಿರೆಂದು ಕರೆಯುತ್ತಾನೆ. ನಾವು ಉದ್ದನಾಮ ಹಚ್ಚುವ ಮತದವರು, ನಿಮ್ಮ ಅಡ್ಡನಾಮದ ವಿಭೂತಿ ಹಣೆಗೆ ಹಚ್ಚಿಕೊಳ್ಳಿರೆಂದು ನೇರವಾಗಿ ಹೇಳುತ್ತಾನೆ. 'ಐಗೊಳಿಗೆ ಕೈ ಮುಟ್ಟಿ ಧರ್ಮ ಕೊಡೋದಿಲ್ಲ' ಎನ್ನುವುದು ಶೈವರಿಗೆ ವೈಷ್ಣವ ಸಂಪ್ರದಾಯದವರು ಭಿಕ್ಷೆ ನೀಡುವುದಿಲ್ಲ ಎಂಬ ಭಾವನೆ ಇಲ್ಲಿ ಕಾಣುತ್ತದೆ. ರಾಜನು ತನ್ನ ಹಣೆಗೆ ವಿಭೂತಿ ಹಚ್ಚಿಕೊಳ್ಳುವುದಿಲ್ಲ ಎಂದಾಗ, ಜಂಗಮ ಸ್ವರೂಪಿಯು ಮತ್ತೆ ವಿಭೂತಿ ಎಲ್ಲಿ ಹಚ್ಚಬೇಕೆಂದು ಮತ್ತೆ ಕೇಳುತ್ತಾನೆ. ರಾಜ ತನ್ನ ಬೆನ್ನನ್ನು ತಿರುಗುತ್ತಾನೆ. ಆಗ ಬೆನ್ನಿಗೆ ವಿಭೂತಿ ಹಚ್ಚಿದಾಗ ಬೆನ್ನಲ್ಲಿ ಹುಣ್ಣು ಹುಟ್ಟುತ್ತದೆ. ಪರಮಾತ್ಮನು ವಿಶ್ವಾಮಿತ್ರನಿಗೆ ಆ ಹುಣ್ಣಿನ ಮೇಲೆ ವಾಸ ಮಾಡಲು ಹೇಳುತ್ತಾ, ಆ ಮದಗರ್ವಿ ಕಾಂಭೋಜರಾಜನಿಗೆ ಕಾಡಿಸಿ, ತೊಂದರೆ ಕೊಡಬೇಕೆಂದು ಹೇಳಿ ಮಾಯವಾಗುತ್ತಾನೆ. ಹರಿಶ್ಚಂದ್ರನನ್ನು ವಿಶ್ವಾಮಿತ್ರನು ಕಾಡುವ ಕತೆಯು ಹಿನ್ನೆಲೆಯಲ್ಲಿ ವಿಶ್ವಾಮಿತ್ರನ ಪಾತ್ರವನ್ನು ಕಥನಗಾರರು ಸೃಷ್ಟಿಸಿರಬಹುದು.

'ವಿಶ್ವಾಮಿತ್ರ' ಪಾತ್ರ ಒಂದು ಪ್ರತಿಮೆಯಾಗಿಯೇ ಈ ಕತೆಯಲ್ಲಿ ಬಂದಿದೆ. ಹುಣ್ಣಿನ ಮೇಲೆ ವಾಸ ಮಾಡುವುದರ ಮೂಲಕ ಹಾಡುವುದು, ಕಥಾಂತ್ಯದಲ್ಲಿ ಕೈಲಾಸಗಾಮಿಯಾದ ಪೂವಿನ ರಥದಲ್ಲಿ ಕುಳಿತುಕೊಳ್ಳಲು ಮುಂದಾದ ಕಾಂಭೋಜರಾಜನನ್ನು ಹೊರದಬ್ಬುವುದು ಇತ್ಯಾದಿ ಸಂದರ್ಭಗಳಲ್ಲಿ ವಿಶ್ವಾಮಿತ್ರನ ಪ್ರತಿಮೆ ಪರಿಣಾಮಕಾರಿಯಾಗಿದೆ. ಶೈವ-ವೈಷ್ಣವ ಸಂಘರ್ಷದ ಕಾಲದಲ್ಲಿ ಈ ಕಥನವು ಹುಟ್ಟಿರಬಹುದಾದ್ದರಿಂದ ಆ ನೆಲೆಯಲ್ಲಿ ಕಾಂಭೋಜರಾಜನ ಕತೆಯನ್ನು ನಿರೂಪಿಸಿರುವುದು ಕಂಡುಬರುತ್ತದೆ. ಕಾಂಭೋಜರಾಜ ಕೊನೆಗೆ ತನ್ನ ಮಗನಿಗೆ ಪಟ್ಟಾಭಿಷೇಕ ಮಾಡುವಾಗ ನಾವು ಕೆಂಪುಗೊಲ್ಲರು ನಮ್ಮ ಮತಕ್ಕೆ ಅನುಗುಣವಾಗಿ

ರಾಜ್ಯವನ್ನು ಆಳಬೇಕು. ನಮ್ಮ ಜನರಿಗೆ ಒಳ್ಳೆಯದನ್ನು ಮಾಡಬೇಕೆಂದು ಹೇಳುವ ಆಶಯವು ಗೊಲ್ಲ ಬುಡಕಟ್ಟು ಸಮುದಾಯದ ಸಂಪ್ರದಾಯದ ಅವರ ವೈಷ್ಣವ ಮತದ ಬಗ್ಗೆ ಇದ್ದ ಕಾಳಜಿ, ಅಭಿಮಾನವು ವ್ಯಕ್ತವಾಗುತ್ತದೆ.

ಶೈವ-ವೈಷ್ಣವ ಮತದ ಸಂಘರ್ಷದಲ್ಲಿ ಶಿವಪಾರಮ್ಯವನ್ನು ಪ್ರಸ್ತುತ ಕತೆ ಮುಂದಿಡುತ್ತದೆ. ಸಾಂಕೇತಿಕವಾಗಿ ರಾಜನ ಬೆನ್ನು ಹುಣ್ಣು ಶಿವನ ದೋಷವಾಗಿ ವೈಷ್ಣವ ಮತಾವಲಂಬಿಗಳನ್ನು ಕಾಡುತ್ತದೆ. ಈ ದೋಷದ ನಂತರ ಹಾಗೂ ಬೆನ್ನು ಮೇಲೆ ದೋಷವನ್ನು ನೀಡುವ ಮೂಲಕ ಪ್ರಕಟವಾಗುತ್ತದೆ. ದೇಹದ ಪ್ರಮುಖ ಅಂಗವಾದ ಬೆನ್ನ ಭಾರ ಹೇರುವುದಕ್ಕೆ ಮುಖ್ಯ ಆಧಾರ. ಅಂತಹ ಬೆನ್ನಿನ ಮೇಲೆ ಹೊರೆಯಂತಿರುವ ಹುಣ್ಣು ಮನುಷ್ಯನನ್ನು ಅಸಹಾಯಕನನ್ನಾಗಿಸುತ್ತದೆ ಎಂಬ ಸೂಕ್ಷ್ಮ ಪ್ರಜ್ಞೆ ಇದೆ.

ಇಲ್ಲಿ ಮುಖ್ಯವಾಗಿ ಗಮನಿಸಬೇಕಾದ ಮತ್ತೊಂದು ಅಂಶವೆಂದರೆ ಶೈವ ದೋಷದ ಅಂತಿಮ ಪರಿಹಾರ ಪರಿಸರದ ಸಂರಕ್ಷಣೆಯಲ್ಲಿ ಇದೆ ಎಂಬುದು. ವ್ರತವನ್ನಾಚರಿಸಿ ಬಾವಿ ತೋಡಿಸಿ ಬೀಜ ಬಿತ್ತಿ ಹಣ್ಣುಗಳನ್ನು ಬೆಳೆದರೆ ದೋಷ ಪರಿಹಾರವಾಗುತ್ತದೆ. ಭೂಮಿಯನ್ನು ಹಸುರನ್ನಾಗಿಸುವುದು ಮತ್ತು ಹಣ್ಣಿನ ಗಿಡಗಳನ್ನು ನೆಟ್ಟು ಬೆಳೆಯುವುದು ಇತ್ಯಾದಿಗಳ ಮೂಲಕ ಪರಿಸರವನ್ನು ಪೋಷಿಸಬೇಕು. ಮನುಷ್ಯನಿಗೆ ಸಂತಾನ ಪ್ರಾಪ್ತಿ ಹೇಗೆ ಅನಿವಾರ್ಯವೋ ಹಾಗೆಯೇ ಹೊಲದಲ್ಲಿ ಫಲಗಳ ಉತ್ಪನ್ನ ಅಷ್ಟೇ ಮುಖ್ಯ ಎಂಬ ಸಂದೇಶ ಇಲ್ಲಿ ವ್ಯಕ್ತವಾಗುತ್ತದೆ.

**ಬಂಜೆತನದ ಅಳಲು**

ಜ್ಯೋತಿಷಿಗಳ ಹೇಳಿಕೆಯಂತೆ ರಾಜನ ಏಳು ಜನ ರಾಣಿಯರೂ ಕಷ್ಟಪಟ್ಟು ತೋಟದಲ್ಲಿ ದುಡಿಯುತ್ತಾರೆ. ಗಿಡಗಳಲ್ಲಿ ಹಣ್ಣುಗಳಾಗಿ ಅದರ ಸುವಾಸನೆ ದೂರದ ಪ್ರದೇಶಗಳಿಗೆ ಹರಡಿ ಅದರ ಸುವಾಸನೆಯನ್ನು ಹಿಡಿದುಕೊಂಡು ಗಿಳಿಗಳು ಪಕ್ಷಿಗಳು ಬಂದು ಹಣ್ಣು ತಿಂದು ಗೂಡು ಕಟ್ಟಿ ಮರಿಗಳನ್ನು ಮಾಡಿ ತಮ್ಮ ದೇಶಕ್ಕೆ ಹೊರಡಲು ಸಿದ್ಧವಾಗುತ್ತವೆ. ಆಗ ರಾಜ ಬಂದು ಮರಿಯನ್ನು ಕೊಟ್ಟು ಹೋಗಿರಮ್ಮ ಎಂದು ಗಿಳಿಗಳನ್ನು ಕೇಳುತ್ತಾನೆ. ಬಂಜೆಯರಿಗೆ ತಮ್ಮ ಮಕ್ಕಳನ್ನು ಕೊಡುವುದಿಲ್ಲ ಎಂದು ಗಿಳಿಗಳು ಹೇಳುತ್ತವೆ. ಇದರಿಂದ ದುಃಖವಾಗುತ್ತದೆ. ರಾಜನು ಗಿಳಿ ಮರಿಗಳನ್ನು ಕೇಳುವ ಕರುಣಾಜನಕದ ಸನ್ನಿವೇಶ ಇಲ್ಲಿ ಕಾಣುತ್ತೇವೆ.

ಅಮ್ಮ ಗಿಳಿಗಳೆ
ನಿಮಗೆ ಸಂತಾವೂ ಆಗಿದೆಯಮ್ಮ
ನನಗೆ ಸಂತಾನವೂ ಇಲ್ಲ
ಮುತ್ತಮ್ಮ ಉಡಿ ಚಾಚುತ್ತೇನೆ

ಈ ಮುತ್ತಿನ ಉಡಿಯಲ್ಲಿ

ಒಂದು ಗಿಳಿಮರಿ ಹಾಕಿ ಹೋಗಿರಮ್ಮ

ಅದೇ ಒಂದು ಮಗು ಎಂದು ಸಾಕ್ತಿವಿ

ಗಿಳಿಗಳಿಗೆ ಕೇಳುತನ

ಗಿಳಿಗಳು ನೋಡಿ ಏನಂತವ

ಓರೆರೆ! ಕಾಂಭೋಜರಾಜ

ಏನ್ರಗೊಲ್ಲ ಕಾಂಭೋಜರಾಜ

ಕಾಗೆ ಮರಿ ಕಾಗೆಗೆ ಮುದ್ದು

ಮನುಷ್ಯ ಮಗು ಮನುಷ್ಯನಿಗೆ ಮುದ್ದು

ತಿಳಿದು ತಿಳಿದು ನಿಮಗ್ಯಾಂಗ ಕೊಡಲಿ

ನಮ್ಮ ಪ್ರಾಣ ಹೋದರೂ ಮಕ್ಕಳನ್ನು ಕೊಡಲ್ಲ

ಯಾರ ಮರಿಗಳನ್ನು ಅವು

ರೆಕ್ಕೆಗಳ ಕೆಳಗೆ ಇಟ್ಟುಕೊಂಡವು

ತಮ್ಮ ದೇಶಕ್ಕೆ ಹೊರಟು ಹೋದವು

ರಾಜನಿಗೆ ಎಲ್ಲಿಲ್ಲದ ದುಃಖ ಬಂತು

ಕಾಂಭೋಜರಾಜನ ತೋಟಕ್ಕೆ ಗಿಳಿಗಳು ಬಂದು ಹಣ್ಣುಗಳನ್ನು ತಿಂದು ಮರಿಗಳನ್ನು ಮಾಡಿವೆ. ಆದರೆ ತನಗೆ ಮಕ್ಕಳಿಲ್ಲ ಎಂಬ ಕೊರಗಿನಿಂದ, ಗಿಳಿಗಳಿಗೆ ಒಂದು ಮರಿಯನ್ನು ಕೇಳುತ್ತಾನೆ. ಆದರೆ ಗಿಳಿಗಳು ಯಾರ ಮಕ್ಕಳು ಅವರಿಗೆ ಮುದ್ದು ಎನ್ನುತ್ತವೆ. ಮರಿಗಳನ್ನು ನಿಮಗೆ ಕೊಡುವುದಿಲ್ಲ ಎಂದು ಗಿಳಿಗಳು ರೆಕ್ಕೆಗಳ ಒಳಗೆ ಮರಿಗಳನ್ನು ಇಟ್ಟುಕೊಂಡು ಅವುಗಳ ದೇಶಕ್ಕೆ ಹೊರಟು ಹೋಗುತ್ತವೆ. ಆಗ ರಾಜನಿಗೆ ಎಲ್ಲಿಲ್ಲದ ದುಃಖವಾಗುತ್ತದೆ. ಬಂಜೆಯರು ಮಕ್ಕಳಿಗಾಗಿ ಹಂಬಲಿಸುವುದನ್ನು ಈ ಪದ್ಯಭಾಗದಲ್ಲಿ ಮಾರ್ಮಿಕವಾಗಿ ಅಭಿವ್ಯಕ್ತಿಸಲಾಗಿದೆ. 'ಮುತ್ತಿನಂತಹ ಉಡಿಯಲ್ಲಿ ಒಂದು ಗಿಳಿ ಮರಿ ಹಾಕಿ ಹೋಗಿರಮ್ಮ ಅದನ್ನೆ ಒಂದು ಮಗು ಎಂದು ಸಾಕುತ್ತೇನೆ' ಎನ್ನುವ ಕೋರಿಕೆಯಲ್ಲಿ ತಾಯ್ತನಕ್ಕಾಗಿ ಹಂಬಲಿಸುವ ಹೆಣ್ಣಿನ ಉತ್ಕಟ ಭಾವ ವ್ಯಕ್ತವಾಗಿದೆ. ಅದಕ್ಕೆ ಉತ್ತರಿಸುವ ಗಿಳಿಗಳ ಮಾತು ಅಷ್ಟೇ ಪರಿಣಾಮಕಾರಿಯಾಗಿದೆ. 'ಕಾಗೆ ಮರಿ ಕಾಗೆಗೆ ಮುದ್ದು ಮನುಷ್ಯನ ಮಗು ಮನುಷ್ಯನಿಗೆ ಮುದ್ದು' ಎಂದು ಗಿಳಿಗಳು ಹೇಳುವಲ್ಲಿ ಪಕ್ಷಿಗಳಾದರೂ ತಾಯ್ತನದ ಹಿರಿಮೆ ಮನುಷ್ಯರಂತೆ ಪ್ರಮುಖವಾದುದು. ತಾಯ್ತನದ ಹಿರಿಮೆ ಎಂಬುದು ಪ್ರಾಣಿ, ಪಕ್ಷಿ, ಮನುಷ್ಯರಿಗೆ ಎಲ್ಲರಿಗೂ ಇದೆ. ತಾನು ಹೆತ್ತ ಮಕ್ಕಳನ್ನು ಬಿಟ್ಟುಕೊಡಲು ಗಿಳಿಗಳು ಸಿದ್ಧವಾಗುವುದಿಲ್ಲ. ಅವುಗಳ ಮಾತಿನ ಮೂಲಕ ರಾಣಿಯರ ಬಂಜೆತನದ ನೋವನ್ನು ಇನ್ನಷ್ಟು ತೀವ್ರಗೊಳಿಸುತ್ತದೆ.

ಸರಳ ವಿಷಯಗಳ ಈ ನಿರೂಪಣೆ ಮಾರ್ಮಿಕವಾಗಿ ರೂಪುಗೊಂಡಿರುವುದನ್ನು ಹಾಗೂ ಇಲ್ಲಿನ ಕಾವ್ಯ ಸೌಂದರ್ಯವನ್ನು ಗಮನಿಸಬಹುದು.

**ಜೀವನ ಮೌಲ್ಯಗಳು**

ಈ ಕಥನದಲ್ಲಿ ಮಾನವೀಯ ಮೌಲ್ಯಗಳು ಸಂದರ್ಭಕ್ಕೆ ಅನುಸಾರವಾಗಿ ನಿರೂಪಿತವಾಗಿವೆ. ಸ್ತ್ರೀ ಧರ್ಮ, ಪತಿಭಕ್ತಿ, ಔದಾರ್ಯ ಮುಂತಾದ ಅಂಶಗಳು ಈ ಕಥನದಲ್ಲಿ ಹಾಸುಹೊಕ್ಕಾಗಿವೆ. ಸಾಮಾನ್ಯ ಜನರನ್ನು ಗುರಿಯಾಗಿಟ್ಟುಕೊಂಡು ಕಥನವನ್ನು ನಿರೂಪಿಸಿರುವುದರಿಂದ ಕೇಳುಗರಿಗೆ ಮಾನವೀಯ ಮೌಲ್ಯಗಳ ಸಂದೇಶವನ್ನು ಇವು ನೀಡುತ್ತವೆ. ಕಥನವು ಜನರಿಗೆ ಒಳ್ಳೆಯ ವಿಚಾರಗಳನ್ನು ಕೊಡುವುದರ ಜೊತೆಗೆ ಮನರಂಜನೆಯನ್ನು ಒದಗಿಸುತ್ತಾ ಈ ಮೂಲಕ ಸಮಾಜಕ್ಕೆ ಬುರ್ರಕತೆಗಾರರು ಅವರದೇ ಆದ ಕಾಣಿಕೆಯನ್ನು ನೀಡಿದ್ದಾರೆ.

ರಾಜನು ಮಕ್ಕಳ ಭಾಗ್ಯ ಪಡೆಯಲು ಜ್ಯೋತಿಷಿಗಳ ಹೇಳಿಕೆಯಂತೆ ತನ್ನ ಏಳು ಜನ ರಾಣಿಯರ ಜೊತೆಯಲ್ಲಿ ಹೊಲದಲ್ಲಿ, ತೋಟದಲ್ಲಿ, ಕೃಷಿಯನ್ನು ಮಾಡಿ ಶ್ರಮ ಪಡುವ ವಾಸ್ತವಿಕ ಬದುಕಿನ ಅಂಶವು ಕಂಡುಬಂದು ಮಾನವೀಯ ಮೌಲ್ಯಗಳು ಇಲ್ಲಿ ಎದ್ದು ಕಾಣುತ್ತವೆ. ರಾಜನು ತನ್ನ ಏಳು ಮಂದಿ ರಾಣಿಯರು ಏಳು ಕೊಡಗಳಿಂದ ಗಿಡಗಳಿಗೆ ನೀರನ್ನು ಹಾಕುತ್ತಾರೆ. ರಾಜನು ಸಲಿಕೆ ತೆಗೆದುಕೊಂಡು ಗಿಡಗಳಿಗೆ ನೀರು ತಿರುವುತ್ತಾನೆ. ಆಗ ಕಿರಿಯ ರಾಣಿ ಸಿರಿದೇವಿ ತನ್ನ ಗಂಡನಿಗೆ 'ಏನಯ್ಯ ರಾಜ ನನ್ನ ತಲಿಮ್ಯಾಲ ನೆರಳು, ನನ್ನ ಬುಜಬಲ ಭೀಮ' ಎನ್ನುವ ಸಾಲುಗಳಲ್ಲಿ ಕಿರಿಯ ರಾಣಿಯ ಪತಿಭಕ್ತಿ ಕಂಡುಬರುತ್ತದೆ. 'ನನ್ನ ತಲಿಮ್ಯಾಲ ನೆರಳು' ಎಂದರೆ ನಿನ್ನ ನೆರಳಲ್ಲಿ ನಾನು ಇದ್ದೇನೆ ನೀನಿಲ್ಲದಿದ್ದರೆ ನಾನೆಲ್ಲಿ ಎಂದು ಹೇಳುತ್ತಾಳೆ. ನನ್ನ ಭುಜಬಲ ಭೀಮ' ಎನ್ನುವುದು ನನ್ನ ಶಕ್ತಿಗೆ ನೀನೇ ಸ್ಫೂರ್ತಿ ಅದಕ್ಕಾಗಿ ನೀನು ಈ ಕೆಲಸವನ್ನು ಮಾಡಬೇಡ ಎಂದು ಗಂಡನ ಕೈಯಿಂದ ಸಲಿಕೆ, ಗುದ್ದಲಿ ಕಸಿದುಕೊಂಡು ಆ ಕೆಲಸವನ್ನು ತಾನೇ ಮಾಡುತ್ತಾಳೆ.

ನೀ ಸಲಕಿ ಗುದ್ದಲಿ ಕೈಯಾಗ ಹಿಡಕೊಂಡು  
ನೀ ಬಗ್ಗಿ ನೀರು ತಿರುಗಬ್ಯಾಡ  
ನಿನ್ನ ಟೊಂಕ ನೊಯ್ಯುತಾವ  
ನಿನ್ನ ಕೈಲಿ ಆಗದಿಲ್ಲ  
ಸಲಕಿ ಗುದ್ದಲಿ ನಾ ಹಿಡಕೊಂಡು  
ಗಿಡಗಿಡಕ ನೀರು ನಾ ತಿರುವಿತಿನಿ

ಎಂದು ಸಿರಿದೇವಿ ತನ್ನ ಗಂಡ ಕಾಂಭೋಜರಾಜನಿಗೆ ಹೇಳುತ್ತಾಳೆ. 'ನೀ ಬಗ್ಗಿ ನೀರು ತಿರುಗಬ್ಯಾಡ, ನಿನ್ನ ಟೊಂಕ ನೊಯ್ಯುತಾವ' ಎಂದು ಹೇಳುವ ಸಿರಿದೇವಿಯು ತಾನು ಇದ್ದಲ್ಲಿ ಗಂಡನು ಅಂತಹ ಕೆಲಸ

ಮಾಡಬಾರದೆಂಬ ಭಾವವು ವ್ಯಕ್ತವಾಗಿದೆ. ಸಾಮಾನ್ಯ ಮಹಿಳೆಯರು ತಮ್ಮ ಗಂಡನ ಮೇಲಿನ ಪ್ರೀತಿಯಿಂದ ಗಂಡನ ಕೆಲಸವನ್ನು ಅವರೇ ಮಾಡುತ್ತಾರೆ. ಇಲ್ಲಿ ಸಿರಿದೇವಿ ಪತಿಯ ಮೇಲಿನ ಭಕ್ತಿ ಭಾವದಿಂದ ಗಂಡನ ಕೆಲಸವನ್ನು ತಾನೇ ಮಾಡುವಳು. ಆದರ್ಶ ಸ್ತ್ರೀಯ ಗುಣವು ಸಿರಿದೇವಿ ಪಾತ್ರದಲ್ಲಿ ಕಾಣುತ್ತದೆ. ಇಂತಹ ಮೌಲ್ಯಗಳು ಮಾನವೀಯ ಸಂದೇಶವನ್ನು ನೀಡಿ ಪ್ರತಿಯೊಬ್ಬರು ಅಂತಹ ಗುಣಗಳನ್ನು ಕಲಿಯಬೇಕೆಂಬ ಆಶಾಭಾವನೆ ಕಥನಗಾರರಲ್ಲಿ ಕಾಣುತ್ತದೆ. ವಾಸ್ತವ ಬದುಕಿನ ಮೌಲ್ಯಗಳನ್ನು ಈ ಸನ್ನಿವೇಶವು ಪ್ರತಿಪಾದಿಸುತ್ತದೆ. ಸಿರಿದೇವಿಯಲ್ಲಿ ಸಂಪ್ರದಾಯ, ಪತಿಭಕ್ತಿ ಭಾವ, ಆದರ್ಶಗುಣ, ಸ್ತ್ರೀ ಧರ್ಮ ಮುಂತಾದ ಅಂಶಗಳು ಎದ್ದು ಕಾಣಿಸುತ್ತವೆ.

ಸಿರಿದೇವಿ ಮಕ್ಕಳಿಗೆ ವಿಷ ಕೊಟ್ಟಿದ್ದಾಳೆಂಬ ಅಪವಾದದಿಂದ ರಾಜನು ಶಿಕ್ಷೆ ಕೊಟ್ಟು ಸ್ಮಶಾನದ ಬಂದಿಖಾನೆಯಲ್ಲಿ ಇಡುತ್ತಾನೆ. ಅನೇಕ ಕಷ್ಟವನ್ನು ಕೊಟ್ಟಿರುತ್ತಾನೆ. ಆ ನೋವಿನಲ್ಲೇ ಪರಮಾತ್ಮನ ಧ್ಯಾನ ಮಾಡುತ್ತಾಳೆ. ಪರಮಾತ್ಮ ಇವಳ ಭಕ್ತಿಗೆ ಮೆಚ್ಚಿ ವರವನ್ನು ನೀಡಿ, ನಿನಗೆ ಕೊಟ್ಟ ಕಷ್ಟವನ್ನು ನಿನಗಿಂತ ಹತ್ತುಪಟ್ಟು ಹೆಚ್ಚು ನಿನ್ನ ಗಂಡನಿಗೆ ಕೊಡುತ್ತೇನೆಂದು ಹೇಳುತ್ತಾನೆ. ಆದರೆ ಆ ನೋವಿನಲ್ಲೇ ಸಿರಿದೇವಿ ಆ ನೋವು, ಕಷ್ಟವನ್ನು ನನಗೆ ಕೊಡು, ನನ್ನ ಗಂಡನಿಗೆ ಬೇಡವೆಂದು ಹೇಳುವ ಅವಳ ಮಾತು, ಪತಿಯ ಮೇಲೆ ಇಟ್ಟ ಭಕ್ತಿ ಭಾವನೆಯನ್ನು ಅವಳು ಪ್ರಕಟಿಸುವ ರೀತಿ ಅನನ್ಯವಾಗಿದೆ. ಗಂಡನಿಗೆ ಹೆಂಡತಿ ವಿಧೇಯವಾಗಿರಬೇಕೆಂಬ ಸಂದೇಶ ಇಲ್ಲಿದೆ. 'ನಿನ್ನನ್ನು ಬಂದಿಖಾನೆಯಲ್ಲಿ ಇಟ್ಟಿದ್ದಾನೆ. ಅವನಿಗೆ ನಾನು ವನವಾಸ ಪಡುವಂತೆ ಮಾಡುತ್ತೇನೆ. ಅಲ್ಲದೆ ಅವನಿಗೆ ಬೇತಾಳ ಹುಣ್ಣು ಹುಟ್ಟಿಸಿ, ನಾನು ಕೈಲಾಸ ಮಠಕ್ಕೆ ಹೋಗುತ್ತೇನೆ ಎಂದು ಪರಮಾತ್ಮನು ಹೇಳುವನು. ಆಗ ಸಿರಿದೇವಿ:

ಬ್ಯಾಡ ಬ್ಯಾಡ ಪರಮಾತ್ಮ ಬ್ಯಾಡ  
ಆತನಿಗೆ ಹುಟ್ಟಿಸುವ ಹುಣ್ಣು  
ನನ್ನ ಬೆನ್ನಿನ ಮ್ಯಾಲೆ ಹುಟ್ಟಿಸು ತಂದೆ  
ಎಂದು ಹೇಳಿ  
ಎರಡು ಪಾದಗಟ್ಟಿ ಹಿಡಿದಾಳ ಸಿರಿದೇವಿ  
ಹೋಗುವದು ನ್ಯಾಯವಲ್ಲ ತಂದಿ  
ಹೋಗೋದು ಧರ್ಮವಲ್ಲ ತಂದಿ  
ಬ್ಯಾಡಪ್ಪ ಪರಮಾತ್ಮ  
ಗಟ್ಟಿಗ ಪಾದ ಹಿಡಕೊಂಡಳ

ಹೀಗೆ ಸಿರಿದೇವಿ ಗಂಡನ ಮೇಲಿನ ಪ್ರೀತಿಯಿಂದ 'ಹೋಗೋದು ನ್ಯಾಯವಲ್ಲ ಹೋಗೋದು ಧರ್ಮವಲ್ಲ' ಎಂದು ಹೇಳುತ್ತಾಳೆ. ನ್ಯಾಯಯುತವಾಗಿ ಕಷ್ಟ ಕೊಡುವುದು ತಪ್ಪು. ಧರ್ಮವಾಗಿ ಅದು

ತಪ್ಪೆಂದು ಹೇಳಿ, ಪರಮಾತ್ಮನಲ್ಲಿ ಗಂಡನಿಗೆ ಕಷ್ಟ ಕೊಡಬೇಡ ಎಂದು ಪತಿಭಿಕ್ಷೆ ಕೇಳುತ್ತಾಳೆ. ಗಂಡನ ಹತ್ತಿರ ಹೋಗಬೇಡವೆಂದು ಪರಮಾತ್ಮನ ಪಾದಗಳನ್ನು ಗಟ್ಟಿಯಾಗಿ ಹಿಡಿದುಕೊಂಡಿದ್ದಾಳೆ. ಹೆಂಡತಿಯಾದವಳು ತನ್ನ ಗಂಡನಿಗೆ ಹೇಗೆ ವಿಧೇಯಳಾಗಿರಬೇಕು. ಗಂಡನ ಜೊತೆ ಹೇಗೆ ಇರಬೇಕೆಂಬ ಆದರ್ಶದ ವಿಚಾರಗಳು ಈ ಪಾತ್ರದ ಮೂಲಕ ಅಭಿವ್ಯಕ್ತಗೊಂಡಿದೆ. 'ಮುಖ್ಯವಾಗಿ ಗಂಡ-ಹೆಂಡತಿ ಮಧ್ಯದಲ್ಲಿ ವಿರಸ ಬಂದರೂ, ಕಷ್ಟ ಬಂದರೂ ಕೂಡ ಅನ್ಯೋನ್ಯವಾಗಿರಬೇಕೆಂಬ ಸಂದೇಶ ವ್ಯಕ್ತವಾಗಿದೆ. ಹಾಗೆ ಹೆಣ್ಣು ತನ್ನ ಗಂಡನ ಮೇಲೆ ಹೆಚ್ಚಿನ ಮುತುವರ್ಜಿಯನ್ನು ತೋರಿಸಬೇಕೆಂಬ ಭಾವ ಈ ಕಥನದಲ್ಲಿ ಮುಖ್ಯವಾಗಿದೆ. ಪುರುಷ ನಿರ್ಮಿತ ಒಪ್ಪಿತ ಸಾಂಪ್ರದಾಯಕ ಸಮಾಜವೊಂದನ್ನು ಬುರ್ರಕತೆಗಾರರೂ ಸಹ ಇಲ್ಲಿ ವ್ಯಾಖ್ಯಾನಿಸುವುದನ್ನು ಕಾಣಬಹುದು.

**ಶಾಪ**

ಜನಪದ ಕತೆಗಳಲ್ಲಿ ಬರುವಂತೆ ಕಾಂಭೋಜರಾಜನ ಕತೆಯಲ್ಲಿ ಸಹ ಕೆಲವು ಶಾಪದ ಸನ್ನಿವೇಶಗಳು ಬರುತ್ತವೆ. ಜನಪದ ಕಥನಗಳಲ್ಲಿ ಅಲ್ಲದೆ ಪುರಾಣಗಳಲ್ಲಿ, ರಾಮಾಯಣ, ಮಹಾಭಾರತ ಮಹಾಕಾವ್ಯಗಳಲ್ಲಿ ಅಲ್ಲದೆ, ಋಷಿಗಳು, ದೇವತೆಗಳು, ಪ್ರಾಣಿಗಳು ಮುಂತಾದವು ಶಾಪ ಕೊಡುವ ಸನ್ನಿವೇಶಗಳನ್ನು ಇಲ್ಲಿ ನೆನಪಿಸಿಕೊಳ್ಳಬಹುದು. ಈ ಕಥನದಲ್ಲಿ ಗಂಗಿಮ್ಮೆಲ ಆಕಳು ಶಮರಾಜನಿಗೆ ಶಾಪ ಕೊಡುವುದು ಚಿತ್ರಿತ ಗೊಂಡಿದೆ.

ಪರಮಾತ್ಮನು ಸಲುಹಿದ ಗಂಗಿಮ್ಮೆಲ ಆಕಳು ಶಮರಾಜನ ತೋಟಕ್ಕೆ ಬಂದು ಹುವ್ವುಗಳನ್ನು ಮೇಯ್ದು ಮಲಗಿದಾಗ, ಅದನ್ನು ನೋಡಿದ ರಾಜ ತೋಟವನ್ನು ಭದ್ರ ಮಾಡಿದ್ದರೂ ತೋಟ ಹಾಳು ಮಾಡಿದೆಯೆಂದು, ರಾಜನಿಗೆ ಸಿಟ್ಟು ಬಂದು ತನ್ನ ಬಂದೂಕಿನಿಂದ ಬಾರ್ ಮಾಡಿ ಆಕಳಿಗೆ ಹೊಡೆಯುತ್ತಾನೆ.

ಆಕಳು ಜನ್ಮ ಹೋಗ ಮುಂದಗಡಿಗಿ
ಏನಂತ ಶ್ರಾಪೇಣ ಕೊಡುತದ
ಏನಯ್ಯ ಶಮರಾಜ ನಿನ್ನ ಹೊಟ್ಟೆಯೊಳಗ
ಹತ್ತು ಮಂದಿ ಮಕ್ಕಳಿಲ್ಲ
ಒಬ್ಬನೇ ಉದ್ದಂಡಧೀರ ಕಾಂಭೋಜರಾಜ
ಹುಟ್ಟು ಗೊಡ್ಡವನಾಗಿ
ಮರ್ತ್ಯಲೋಕದಗ ಅಂಗೆ ಇರಲಿ
ಶ್ರಾಪೇಣ ಕೊಟ್ಟು ಆಕಳ ಜನ್ಮ ಕೊಟ್ಟದ

ಈ ಶಾಪದಿಂದ ಶಮರಾಜನು ಮನೆಗೆ ಬಂದ ಕೂಡಲೇ ಸ್ವರ್ಗಸ್ಥನಾಗುತ್ತಾನೆ. ಆ ಗೋಹತ್ಯೆಯಿಂದ ತನ್ನ ವಂಶಕ್ಕೆ ಶಾಪ ಹತ್ತುತ್ತದೆ. 'ಗೋಹತ್ಯೆ ಮಹಾಪಾಪ ಅದರ ಮುಕ್ತಿಗಾಗಿ ಹರಸಾಹಸ ಪಡಬೇಕಾಗುತ್ತದೆ.

ಹೀಗಾಗಿ ತಂದೆ ಮಾಡಿದ ಫಲವಾಗಿ ಕಾಂಭೋಜರಾಜನು ತನ್ನ ಇಡೀ ಜೀವನವನ್ನು ಕಷ್ಟದಲ್ಲೇ ಅನುಭವಿಸುತ್ತಾನೆ. ಗೋಹತ್ಯೆ ಮಹಾಪಾಪ ಎಂಬ ಪುರಾಣ ಕಲ್ಪನೆಯನ್ನು ಪ್ರಸ್ತುತ ಕತೆಯಲ್ಲಿ ಪ್ರಸ್ತಾಪಿಸಿರುವುದನ್ನು ಕಾಣಬಹುದು. ಅದರಲ್ಲೂ ಗರ್ಭಿಣಿಯಾದ ಹಸುವಿನ ಶಾಪದ ತೀವ್ರತೆಯನ್ನು ಪ್ರಸ್ತುತಪಡಿಸಲಾಗಿದೆ.

ಸಿರಿದೇವಿ ತೋಟದಲ್ಲಿ ಕಷ್ಟಪಟ್ಟು ದುಡಿದಿರುತ್ತಾಳೆ. ಮಕ್ಕಳ ಭಾಗ್ಯಕ್ಕಾಗಿಯೇ ಇಷ್ಟೆಲ್ಲ ಕಷ್ಟ ಪಟ್ಟೆವು, ಮಕ್ಕಳಾಗಲಿಲ್ಲ. ಹಿರಿಯ ಅಕ್ಕಂದಿರಿಗೂ ಸಹ ಮಕ್ಕಳಾಗಲಿಲ್ಲ ಎಂದು ದುಃಖಪಡುತ್ತಾಳೆ. ರಾಜನು ಸಹ ನೊಂದು ತನ್ನ ಏಳು ಜನ ರಾಣಿಯರನ್ನು ವಿಷ ಕುಡಿದು ಸಾಯಲು ತೋಟಕ್ಕೆ ಕರೆದುಕೊಂಡು ಬರುತ್ತಾನೆ. ವಿಷದ ಬಟ್ಟಲುಗಳನ್ನು ಕೈಯಲ್ಲಿ ಹಿಡಿದುಕೊಂಡು ನಿಂತಿರುತ್ತಾರೆ. ಆದರೆ ಸಿರಿದೇವಿ ದೇವರಲ್ಲಿ ಭಕ್ತಿ ಕಾಯಕದಲ್ಲಿ ನಿಷ್ಠೆ ಹೊಂದಿದವಳಾಗಿದ್ದು ವಿಷ ಕುಡಿಯುವ ಸಮಯದಲ್ಲಿ ವಿಷದ ಬಟ್ಟಲು ಕೈಯಲ್ಲಿ ಹಿಡಿದುಕೊಂಡು ತನ್ನ ಜನ್ಮ ಪಡೆಯಲು ಕಾರಣಕರ್ತನಾದ ಪರಮಾತ್ಮನಿಗೆ ಶಪಿಸುವ ಮಟ್ಟಕ್ಕೆ ಹೋಗುತ್ತಾಳೆ.

ಏನಯ್ಯ ಜಗದೀಶ
ನಿನ್ನ ಉರಿಗಣ್ಣು ಉಚ್ಚಿಬೀಳಲಿ
ಗಜಶೂಲ ಮುರಿದು ಬೀಳಲಿ
ಎಡಕ ವೀರಭದ್ರ ಸಾಯಲಿ
ಬಲಕೆ ಗಣೇಶ ಸಾಯಲಿ
ತೊಡಿ ಮ್ಯಾಲ ಪಾರ್ವತಿ ಬಳಿ ಒತ್ತಲಿ
ಜಡಿಯೊಳಗೆ ಗಂಗೆ ಉರಿದು ಬೀಳಲಿ
ಬೆಳ್ಳಿ ಮಠಕೆ ಬೆಂಕಿ ಹಚ್ಚಲೇನು
ಬಂಗಾರಿ ಮಠಕೆ ಮಣ್ಣು ಸುರುವಲೇನು
ನನ್ನ ಕಣ್ಣೀರು ನಿನಗೆ ಹತ್ತಲಿ
ನನ್ನ ಎಲಿ ಹರಿಬಾರದೇನ
ಇಂತ ಕಷ್ಟ ಯಾಕ ಇಟ್ಟೆ ಜಗದೀಶ
ಬಳ್ಳ ಬಳ್ಳ ಶ್ರಾಪೇಣ ಕೊಟ್ಟಳಮ್ಮ

ಜೀವನದಲ್ಲಿ ಕಷ್ಟಪಟ್ಟು ದುಡಿದರೂ ಮಕ್ಕಳಭಾಗ್ಯ ದೇವರು ಕೊಡಲಿಲ್ಲ ಎಂಬ ಕಾರಣಕ್ಕೆ ಸಿರಿದೇವಿಯು ಪರಮಾತ್ಮನನ್ನೇ ಶಪಿಸುವಲ್ಲಿ ಸಾಮಾನ್ಯ ಮಹಿಳೆಯ ಅಳಲು ವ್ಯಕ್ತವಾಗುತ್ತದೆ. ಜಗತ್ತಿಗೆ ಈಶ್ವರನಾದ ನಿನ್ನ ಉರಿಗಣ್ಣು ಉಚ್ಚಬೀಳಲಿ' ಎಂದು ಸಿರಿದೇವಿ ತನ್ನ ಆಕ್ರೋಶವನ್ನು ವ್ಯಕ್ತಪಡಿಸುತ್ತಾಳೆ. 'ಉರಿಗಣ್ಣು' ಇನ್ನೊಬ್ಬರನ್ನು ದುಷ್ಟರನ್ನು ಸುಡಲು ಇದ್ದಂತಹದು. ಅದನ್ನೇ ಉಚ್ಚಿಬೀಳಲೆಂದು ಹೇಳುವ ಮಟ್ಟಕ್ಕೆ ಹೋಗುತ್ತಾಳೆ. ದುಷ್ಟರನ್ನು ಶಿಕ್ಷಿಸುವ ಗಜಶೂಲ ನಿನ್ನ ಕೈಯಲ್ಲಿ ಇರಬಾರದು, ಭಕ್ತರ ನೋವಿಗೆ

ಸ್ಪಂದಿಸದೇ ಇರುವಾಗ ಆ ಗಜಶೂಲ ಇನ್ನೇಕೆ, ಅದು ಮುರಿದು ಹೋಗಲಿ ಎಂದು ಸಿಟ್ಟನ್ನು ವ್ಯಕ್ತಪಡಿಸುತ್ತಾಳೆ. ಹಾಗೆ ಪರಮಾತ್ಮನ ಎಡಬಲದಲ್ಲಿ ಸದಾ ಕಾಯ್ದುಕೊಂಡು ಇರುವ ವೀರಭದ್ರ, ವಿಘ್ನೇಶ್ವರರು ಸಾಯಲಿ, ಆಗ ಕಷ್ಟ ಏನೆಂಬುದು ನಿನಗೆ ತಿಳಿಯುತ್ತದೆಂಬ ಭಾವವನ್ನು ಅಭಿವ್ಯಕ್ತಿಸಿದ್ದಾಳೆ. 'ತೊಡಿಮ್ಯಾಲ ಪಾರ್ವತಿ ಬಳಿ ಒತ್ತಲಿ' ಎಂದರೆ ವಂಶ ನಾಶವಾಗಲಿ ಎಂದೇ ಅರ್ಥ. ಪರಮಾತ್ಮನನ್ನೇ ಸಾಯಲಿ ಎಂದು ಹೇಳುವ ಮಟ್ಟಕ್ಕೆ ಇಳಿದಿದ್ದಾಳೆ. 'ಜಡಿಯೊಳಗೆ ಗಂಗೆ ಉರಿದು ಹೋಗಲಿ' ಜಡೆಯಲ್ಲಿ ಇರುವ ಗಂಗೆ ಮಳೆಯನ್ನು ತರುವಂತಹಳು. ಗಂಗೆಯೇ ಸುಟ್ಟು ಹೋಗಲಿ ಎಂದು ಶಪಿಸುತ್ತಾಳೆ. ಪರಮಾತ್ಮ ವಾಸಿಸುವ ಕೈಲಾಸವೇ ಬೆಂಕಿ ಹತ್ತಿ ಹೋಗಲಿ, ಅದಕ್ಕೆ ಮಣ್ಣನ್ನು ಸುರುವಲಿ ಎಂದು ಹೇಳುತ್ತಾಳೆ. ಅಂದರೆ ಕೈಲಾಸಕ್ಕೆ ಬೆಂಕಿ ಹತ್ತಿ ಸುಟ್ಟು ಹೋದ ಮೇಲೆ ಅದರ ಮೇಲೆ ಮಣ್ಣು ಹಾಕಿ ಮುಚ್ಚಲಿ ಎನ್ನುವ ಮಾತಿನಲ್ಲಿ ರೋಷದ ತೀವ್ರತೆ ವ್ಯಕ್ತವಾಗುತ್ತದೆ. ಇಷ್ಟೆಲ್ಲ ಶಪಿಸಿದ್ದರೂ ಕೊನೆಗೆ 'ನನ್ನ ಕಣ್ಣೀರು ನಿನಗೆ ಹತ್ತಲಿ' ನನ್ನ ಕಷ್ಟವನ್ನು ನನ್ನ ನೋವು, ದುಃಖ ನಿನಗೆ ಬರಲಿ ಎನ್ನುವಳು. 'ನನ್ನ ಎಲಿಯ ನಿನಗ ಸಿಕ್ಕಿಲ್ಲೇನು' ನನ್ನ ಜೀವ ನಿನಗೆ ಇನ್ನೂ ಸಿಕ್ಕಿಲ್ಲೇನು, ಕೊಡುವವನು ನೀನೆ, ಕೊಳ್ಳುವವನು ನೀನೆ, ನನ್ನ ಜೀವವನ್ನು ತೆಗೆದುಕೊಂಡು ಹೋಗಬಾರದ ಎಂದು ತನ್ನ ದುಃಖ ವ್ಯಕ್ತಪಡಿಸುತ್ತಾಳೆ. ಇಂತಹ ಕಷ್ಟವನ್ನು ಇನ್ನು ಮೇಲೆ ಕೊಡಬೇಡ ಎಂದು ಶಪಿಸುತ್ತಾಳೆ. ಸಾಮಾನ್ಯ ಹೆಣ್ಣೊಬ್ಬಳ ಅತ್ಯಂತ ದುಃಖದ ಸಂದರ್ಭದಲ್ಲಿ ಪರಮಾತ್ಮನನ್ನು ಶಪಿಸುವ ಸಾಮಾನ್ಯ ಪದಗಳನ್ನು ಇಲ್ಲಿ ಗಮನಿಸಿದಾಗ, ಸಿರಿದೇವಿ ಪಾತ್ರದಲ್ಲಿ ವಾಸ್ತವ ಬದುಕಿನ ದುಃಖದ ಸನ್ನಿವೇಶ ಕಾಣುತ್ತದೆ. ಸ್ತ್ರೀಯು ನೋವು-ದುಃಖವನ್ನು ತನ್ನ ಸಿಟ್ಟನ್ನು ಈ ರೀತಿಯಾಗಿ ತೀರಿಸಿಕೊಳ್ಳುವ ಮನೋಭಾವನೆಯು ಮೂಡಿಬಂದಿದೆ. ಈ ಕಥನದಲ್ಲಿ ಇಂತಹ ಶಾಪದ ಸನ್ನಿವೇಶಗಳು ಹಲವೆಡೆ ಕಂಡುಬರುತ್ತದೆ.

### ಮತ್ಸರ

ಈ ಕಥನದ ಸ್ತ್ರೀ ಪಾತ್ರಗಳಲ್ಲಿ ಮುಖ್ಯವಾಗಿ ಹೊಟ್ಟೆಕಿಚ್ಚು ಪ್ರಸಂಗ ಬರುತ್ತದೆ. ರಾಜನ ಕಿರಿಯ ರಾಣಿ ಸಿರಿದೇವಿ ಮೇಲೆ ಹಿರಿಯ ರಾಣಿಯರಿಗೆ ಮತ್ಸರ ಉಂಟಾಗುವ ಸಂದರ್ಭಗಳು ಕೆಲವಿವೆ. ಸಿರಿದೇವಿಗೆ ಶಿಕ್ಷೆ ಕೊಡುವಂತೆ ಮಾಡುವ ಹಿರಿಯ ರಾಣಿಯರ ಕುತಂತ್ರ ಹಾಗೂ ತಮ್ಮ ಪುತ್ರ ಜೊತೆಗೂಡಿ ಸಿರಿದೇವಿ ಹಾಗೂ ಮಗ ಶರಬಂಧ ರಾಜಕುಮಾರನು ಇದ್ದ ಅರಮನೆಗೆ ಬೆಂಕಿ ಹಚ್ಚುವ ಮಟ್ಟಕ್ಕೆ ಹೋಗುವುದು ಕಂಡುಬರುತ್ತದೆ. ಹಾಗೆಯೇ ಆರು ಜನ ಹಿರಿಯ ರಾಣಿಯರ ಪುತ್ರರು ಶರಬಂಧ ರಾಜನನ್ನು ಮತ್ಸರದಿಂದ ಕೊಲ್ಲುವ ಪ್ರಸಂಗಗಳು ಈ ಕಥನದಲ್ಲಿ ಕಾಣುತ್ತದೆ.

ಮಕ್ಕಳ ಓದಿನ ಕಾಳಜಿಯಿಂದ ಸವತಿ ಮತ್ಸರ ಉಂಟಾಗಿ ತಮ್ಮ ಮಕ್ಕಳಿಗೆ ತಾವೇ ವಿಷವನ್ನು ಬೆರೆಸುವ ಕುತಂತ್ರಗಳನ್ನು ಹಿರಿಯ ರಾಣಿಯರಲ್ಲಿ ಕಾಣಬಹುದು. ಹಿರಿಯ ಪುತ್ರರು ದಿನಾಲು ಶಾಲೆಗೆ ಹೋಗುತ್ತಾರೆ. ಅಭ್ಯಾಸ ಮಾಡಿ ಸಿರಿದೇವಿ ಮನೆಗೆ ಬರುತ್ತಿರುತ್ತಾರೆ. ಅದೇ ವೇಳೆಯಲ್ಲಿ 'ಆರು ಜನ ಹಡೆದಂತ ತಾಯಿಯವರು' ಮಕ್ಕಳನ್ನು ನೋಡಿ ಸಿರಿದೇವಿ ಮೇಲೆ ಮತ್ಸರವನ್ನು ಪಟ್ಟುಕೊಳ್ಳುತ್ತಾರೆ.

ಓಯಮ್ಮ ನಾವು ಹಡೆದು ಗೊಡ್ಡವರು ಆಗಿವಿ

ಹಡೆಯಲಾರದ ಗೊಡ್ಡು ಸೂಳಿ

ಮಕ್ಕಳ ಮೋಚಾರ ನೋಡ್ತಳ

ಈ ಮಕ್ಕಳು ನಮ್ಮ ಕೈಗೆ

ಹ್ಯಂಗ ವಶ ಆಗಬೇಕು

ಮಕ್ಕಳು ಮನೆಗೆ ಎಂದು ಬರಬೇಕು

ಎಂದು ಆರು ಮಂದಿ ಹಿರಿಯ ರಾಣಿಯರು ಮಾತನಾಡಿಕೊಳ್ಳುತ್ತಾರೆ. ಮಕ್ಕಳನ್ನು ನಾವು ಹಡೆದು 'ಹಡೆಯಲಾರದ ಗೊಡ್ಡು ಸೂಳಿ'ಯು ಮಕ್ಕಳಿಲ್ಲದ ಬಂಜೆಯವಳು, ಮಕ್ಕಳ ಮುದ್ದನ್ನು ನೋಡುತ್ತಾಳೆ, ಆ ಮಕ್ಕಳು ನಮ್ಮ ಕೈಗೆ ಬರುವಂತೆ, ನಮ್ಮ ಕಡೆಗೆ ಒಲವು ಬರುವಂತೆ ಒಂದು ಉಪಾಯವನ್ನು ಮಾಡ ಬೇಕೆಂದು ಮಾತನಾಡಿಕೊಳ್ಳುವಲ್ಲಿ ಸವತಿ ಮತ್ಸರವನ್ನು ಕಾಣಬಹುದು.

ಹಿರಿಯ ರಾಣಿಯರು ತಮ್ಮ ಪುತ್ರರಿಗೆ ವಿಷವನ್ನು ಕೊಡುವ ಪ್ರಸಂಗವು ಕೊಲೆ ಸಂಚು ಮಾಡಿ ಸಿರಿದೇವಿಯನ್ನು ಅಪರಾಧಿ ಸ್ಥಾನದಲ್ಲಿ ನಿಲ್ಲುವಂತೆ ಮಾಡುವ ಆಶಯ ಹೊಂದಿದೆ.

ಆರು ಮಂದಿ ತಾಯಿದವರು

ಹಿಂಗಾದರೆ ಮಕ್ಕಳು ನಮ್ಮ ಕೈಗೆ ವಶ ಆಗುವುದಿಲ್ಲ

ಹಣ್ಣುಗಳು ಉಡ್ಯಾಗ ಇಟಕೊಂಡು

ಬಜಾರಕ ಹೊಂಟು ಹೋಗಿ

ದುಖಾನದಗ ಒಂದೊಂದು ತೊಲೆ ಆಪು ತಗೊಂಡು

ಮಾವಿನ ಹಣ್ಣು ತೂಮ್ರ ತೆಗೆದು

ಒಂದೊಂದು ತೊಲಿ ಹಣ್ಣನಗ ತುಂಬಿ

ಉಡ್ಯಾಗ ಇಟಕೊಂಡು ತಂಗಿ ಮನೆಗೆ ಬಂದರ

ಆರು ಜನ ಹಿರಿಯ ರಾಣಿಯರು ತಮ್ಮ ಪುತ್ರರು ತಮ್ಮ ಕೈಗೆ ಸಿಗುವುದಿಲ್ಲ ಎಂದು ಬಗೆದು, ಸಿರಿದೇವಿಯ ಮೇಲೆ ಪ್ರೀತಿ ಇಟ್ಟಿದ ಆ ಮಕ್ಕಳಿಗೆ ವಿಷ ಕೊಡಲು ಬಜಾರಕ್ಕೆ ಹೋಗಿ ಹಣ್ಣುಗಳನ್ನು ತೆಗೆದುಕೊಂಡು, ಅಂಗಡಿಯಲ್ಲಿ ಆರು ತೊಲೆ 'ವಿಷ' ತೆಗೆದುಕೊಂಡು ಮನೆಗೆ ಬಂದು ತಂದಂತಹ 'ಮಾವಿನ ಹಣ್ಣನ ತೂಮ್ರ ತೆಗೆದು' ಅಂದರೆ ಮಾವಿನ ಹಣ್ಣಿನ ತೊಗಟೆ ತೆಗೆದು ಅದರಲ್ಲಿ ವಿಷವನ್ನು ಒಂದೊಂದು ಹಣ್ಣಿನಲ್ಲಿ ಒಂದೊಂದು ತೊಲೆಯಿಟ್ಟು ವಿಷವನ್ನು ಬೆರೆಸಿ ತಮ್ಮ ಉಡಿಯಲ್ಲಿ ಇಟ್ಟುಕೊಂಡು ತಂಗಿ ಸಿರಿದೇವಿ ಮನೆಗೆ ಬರುತ್ತಾರೆ. ಸಿರಿದೇವಿಯಿಂದ ಮಕ್ಕಳನ್ನು ದೂರ ಮಾಡಿ ತಮ್ಮ ಕಡೆಗೆ ಆ

ಮಕ್ಕಳನ್ನು ಸೆಳೆದುಕೊಳ್ಳಬೇಕೆಂಬ ಬಯಕೆಯಿಂದ ವಿಷವನ್ನು ಬೆರೆಸಿದ ಹಣ್ಣುಗಳನ್ನು ತಂಗಿಯಿಂದ ಮಕ್ಕಳಿಗೆ ಕೊಡಿಸಿ ಶಿಕ್ಷೆ ವಿಧಿಸುವಂತೆ ಮಾಡುತ್ತಾರೆ. ಸಿರಿದೇವಿಯ ಮೇಲಿನ ಹೊಟ್ಟೆಕಿಚ್ಚಿನಿಂದ ಇಂತಹ ದುಷ್ಕೃತ್ಯಕ್ಕೆ ಕೈ ಹಾಕುತ್ತಾರೆ.

ಹಾಗೆಯೇ ಅಣ್ಣತಮ್ಮಂದಿರ ಮತ್ಸರವು ಸಹ ಈ ಕಥನದಲ್ಲಿ ಕಾಣುತ್ತದೆ. ತಾಯಿಯಂತೆ ಮಕ್ಕಳು ಎನ್ನುವ ಹಾಗೆ ಹಿರಿಯ ರಾಣಿಯರ ದುಷ್ಟಬುದ್ಧಿಯಂತೆ ಅವರ ಮಕ್ಕಳು ಸಹ ಅಂತಹ ಬುದ್ಧಿಯನ್ನು ಕಲಿತಿರುತ್ತಾರೆ. ಇಂತಹ ಬುದ್ಧಿಯನ್ನು ಹಿರಿಯ ಆರು ಜನ ರಾಜಕುಮಾರರು ತಮ್ಮ ಶರಬಂಧರಾಜನ ಮೇಲೆ ಹೊಟ್ಟೆಕಿಚ್ಚಿನಿಂದ ತಮ್ಮನನ್ನು ಕೊಲ್ಲುವ ಹೇಯ ದುಸ್ಸಾಹಸಕ್ಕೆ ಮನಸ್ಸು ಮಾಡುತ್ತಾರೆ. ಆರು ಮಂದಿಯ ಹಿರಿಯ ಅಣ್ಣಂದಿರು ತಮ್ಮ ಶರಬಂಧರಾಜಕುಮಾರನು ಏಳು ಜನ ಕೂಡಿಕೊಂಡು 'ಸಮುದ್ರಕ್ಕೆ ಜಳಕ ಮಾಡಲು ಹೊರಟು ಬರುತ್ತಾರೆ. ತಂದೆ ಕಾಂಭೋಜರಾಜನಿಗೆ ಮದ್ದನ್ನು ತರಲು ಹೋಗಿ ಆರು ಜನ ಹಿರಿಯ ಅಣ್ಣಂದಿರು ಹೆಣ್ಣಿನ ಮೋಹಕ್ಕೆ ಬಲಿಯಾಗುತ್ತಾರೆ. ಶರಬಂಧ ರಾಜಕುಮಾರನು ತಾಯಿ ಸಿರಿದೇವಿಯಂತೆ ನಿಷ್ಠೆಯುಳ್ಳವನು, ತಂದೆಯಲ್ಲಿ ಭಕ್ತಿಯುಳ್ಳವನು. ತಂದೆಗೆ 'ಬಳಿಬುಡ್ಡಿಯ'ಲ್ಲಿ ಮದ್ದನ್ನು ಪಡೆದುಕೊಂಡಿರುತ್ತಾನೆ. 'ಬಳಿಬುಡ್ಡಿ'ಯಲ್ಲಿರುವ ಔಷಧಿಯನ್ನು ಪಡೆದು, ಅದರ ಒಡತಿಯನ್ನು ಮದುವೆಯಾಗುತ್ತಾನೆ. ಇನ್ನುಳಿದ ನಾಲ್ಕು ಜನ ಹೆಣ್ಣುಮಕ್ಕಳನ್ನು ತನ್ನ ಚತುರ ಬುದ್ಧಿಯಿಂದ ಅವರ ಮನಸ್ಸನ್ನು ಗೆದ್ದು ಮದುವೆಯಾಗುತ್ತಾನೆ. ಆಗ ಇವರೆಲ್ಲರೂ ಹಿರಿಯ ರಾಜಕುಮಾರರ ಜೊತೆಗೆ ಇದ್ದಾಗ ಸಮುದ್ರದಲ್ಲಿ ಸ್ನಾನ ಮಾಡಲು ಏಳು ಜನ ಅಣ್ಣತಮ್ಮಂದಿರು ಹೋಗಿರುತ್ತಾರೆ. ಅಂತಹ ಸಂದರ್ಭದಲ್ಲಿ ಆರು ಮಂದಿ ಅಣ್ಣಂದಿರು ತಮ್ಮನನ್ನು ಕೊಲ್ಲುವ ಉಪಾಯವನ್ನು ಮಾಡುತ್ತಾರೆ.

ಏಳು ಮಂದಿ ಕಲ್ತು ಸಮುದ್ರಕ ಹೊಂಟು ಬಂದ್ರು
ಸಮುದ್ರದೊಳಗ
ಏಳು ಮಂದಿ ಅಣ್ಣತಮ್ಮರು
ಜಳಕ ಮಾಡುವ ಮುಂದುಗಳಿಗಿ
ಆರು ಮಂದಿ ಅಣ್ಣರಿಗೆ ಹೊಟ್ಟೆಬ್ಯಾನಿ ಎದ್ದದ
ಸುಡುಗಾಡು ಗಡ್ಡಿಯೊಳಗ ಹುಟ್ಟಿದವನು ಶರಬಂಧರಾಜ
ಅಪ್ಪಗೆ ಔಷಧ ಒಯ್ಯುಕತ್ತಿದ
ಈ ಸಮುದ್ರದೊಳಗೆ ಇವನ ಕಡಿದು
ನಾವು ಹೊಂಟು ಹೋಗಿ
ಐದು ಮಂದಿ ಹೆಂಡರನ್ನ
ಐದು ಮಂದಿ ಮದುವೆ ಆಗೋಣ

ಎಂದು ನಿರ್ಧರಿಸುತ್ತಾರೆ. ಏಳು ಜನ ಕೂಡಿ ಸಮುದ್ರದಲ್ಲಿ ಜಳಕ ಮಾಡಲು ಹೋದಾಗ, ಆರು ಜನ ಹಿರಿಯ ಅಣ್ಣಂದಿರು ತಮ್ಮನ ಮೇಲೆ ಹೊಟ್ಟೆಕಿಚ್ಚುಪಟ್ಟುಕೊಂಡು 'ಸುಡುಗಾಡು ಗಡ್ಡಿಯೊಳಗ ಹುಟ್ಟಿದವನು 'ಅಂದರೆ ಸ್ಮಶಾನದಲ್ಲಿ ಹುಟ್ಟಿದವನು ತಂದೆಗೆ ಮದ್ದನ್ನು ಒಯ್ಯುತ್ತಾನೆ. ಈ ಸಮುದ್ರದಲ್ಲಿ ಅವನನ್ನು ಕೊಂದು, ಅವನು ಗೆದ್ದು ತಂದ ಐದು ಜನ ಹೆಂಡತಿಯರನ್ನು ಮದುವೆ ಆಗೋಣ ಎಂದು ಮಾತನಾಡಿಕೊಂಡು ತಮ್ಮನ ಮೇಲಿನ ದ್ವೇಷ ಸಾಧಿಸುತ್ತಾರೆ. ತಂದೆ ಅವನನ್ನು ಮೆಚ್ಚುವನು. ರಾಜ್ಯದ ಅಧಿಕಾರ ಅವನಿಗೆ ಸಿಗುತ್ತದೆಂಬ ಭಯದಿಂದ ಅವನನ್ನು ಕೊಲ್ಲುವುದೇ ಮುಖ್ಯವೆಂದು ತಿಳಿದು ಕೊಲ್ಲುತ್ತಾರೆ. ಹಿರಿಯ ರಾಜಕುಮಾರರು ರಾಜ್ಯದ ಅಧಿಕಾರದ ಆಶೆಯಿಂದ, ತಂದೆಯನ್ನು ಮೆಚ್ಚಿಸುವ ಉದ್ದೇಶದಿಂದ ಮದ್ದನ್ನು ತಾವೇ ತಂದೆವೆಂದು ಹೇಳುವ ದೃಷ್ಟಿಯಿಂದ ತಮ್ಮನನ್ನು ಕೊಲ್ಲುವ ಉಪಾಯ ಕಂಡುಕೊಳ್ಳುತ್ತಾರೆ.

> ಬಳಿ ಬುಡ್ಡಿಂಯೊಳಗಿನ ಔಷಧ ಒಯ್ದು
> ನಮ್ಮಪ್ಪನ ಬೆನ್ನಿಗೆ ಹುಟ್ಟಿದ ಬೇತಾಳ ಹುಣ್ಣು
> ಔಷಧಿ ನಾವು ಹಾಕಿ
> ಹುಣ್ಣು ಚಲೋ ಮಾಡಮು
> ಬಂಗಾರು ಕಚೇರಿ ಪಟ್ಟ ಸಿಗ್ತದ

ಎಂದು ಆರು ಮಂದಿ ಹಿರಿಯ ಅಣ್ಣಂದಿರು ಮಾತನಾಡಿಕೊಂಡರು. ಶರಬಂಧ ರಾಜಕುಮಾರನು ತಂದಿದ್ದ ಮದ್ದನ್ನು ನಾವೇ ತೆಗೆದುಕೊಂಡು ಹೋಗಿ ತಂದೆಯ ಬೆನ್ನಿನ ಬೇತಾಳ ಹುಣ್ಣಿಗೆ ಔಷಧಿ ಹಾಕಿ, ವಾಸಿ ಮಾಡಿದರೆ ತಂದೆಯ ರಾಜ್ಯ ಅಧಿಕಾರ, ಅಂತಸ್ತು, ಆಸ್ಥಾನ ಸಿಗುವುದೆಂಬ ಬಯಕೆಗಳನ್ನು ಹೊರ ಹೊಮ್ಮಿಸುತ್ತಾರೆ.

> ಶರಬಂಧ ಜಳಕ ಮಾಡುವ ಮುಂದಗಿಡಗಿ
> ಆರುಮಂದಿ ಬಂಗಾರ ಚಂದ್ರಾಯುದ
> ಕೈಯಾಗ ಹಿಡಿದುಕೊಂಡು
> ತಮ್ಮನ ರುಂಡ ಕಡ್ದರ
> ರುಂಡ ಕಡಿದು ಸಮುದ್ರ ದಂಡಿಗಿ ಹಾಕ್ಕರ
> ತಮ್ಮನ ಅಲ್ಲೇ ಬಿಟಾಕಿದರಲ್ಲ.

ಇಲ್ಲಿ ರಾಜ್ಯಕ್ಕಾಗಿ, ಅಧಿಕಾರಕ್ಕಾಗಿ ತಮ್ಮನ ಮೇಲಿನ ದ್ವೇಷ ಹುಟ್ಟಿ ತಮ್ಮನನ್ನು ಕೊಲ್ಲುವ ಪ್ರಸಂಗವಿದೆ.

**ವಿಡಂಬನೆ, ಹಾಸ್ಯ**

ಕಥನದಲ್ಲಿ ಕಥನಗಾರರು ಅಲಲ್ಲಿ ವಿಡಂಬನಾತ್ಮಕವಾಗಿ ನಿರೂಪಣೆ ಮಾಡಿದ್ದಾರೆ. ಕಾಂಭೋಜರಾಜನ

ಹಿರಿಯ ರಾಣಿಯರು ಮೈಗಳ್ಳರು ಹಾಗೆಯೇ ಸೋಮಾರಿಗಳಾಗಿರುತ್ತಾರೆ. ಆದರೆ ಕಿರಿಯ ರಾಣಿ ಸಿರಿದೇವಿ ನಿಷ್ಠೆಯಿಂದ, ಪತಿಯೇ ದೇವರೆಂದು ಗಂಡನಿಗೆ ಅಧೀನಳಾಗಿ ಗಂಡನ ಮಾತುಗಳನ್ನು ಚಾಚೂ ತಪ್ಪದೆ ಪಾಲಿಸುತ್ತಾಳೆ. ಸಿರಿದೇವಿಯ ಭಕ್ತಿ, ದೇವರಲ್ಲಿ ನಂಬಿಕೆ, ಪತಿ ಧರ್ಮವನ್ನು ನೋಡಿದ ಪರಮಾತ್ಮನು ವಿಷ್ಣು, ವೀರಭದ್ರ, ವಿಘ್ನೇಶ್ವರ ಮೂವರನ್ನು ದಾಸರ ವೇಷಗಳನ್ನು ಹಾಕಿಸಿ ಮಕ್ಕಳ ಸಂತಾನವನ್ನು ಕೊಟ್ಟು ಬರಲು ಕಳಿಸಿರುತ್ತಾನೆ. ದಾಸವೇಷಧಾರಿಗಳು ಮಕ್ಕಳ ಭಾಗ್ಯವನ್ನು ಕೊಡುವ ಸಂದರ್ಭದಲ್ಲಿ ಆರು ಜನ ಹಿರಿಯ ರಾಣಿಯರು ಓಡಿ ಬಂದು ಸಂತಾನ ಭಾಗ್ಯವನ್ನು ಕೇಳಿ ಪಡೆದುಕೊಂಡು ಅರಮನೆಗೆ ಬಂದಾಗ ದಾಸಿಯರಿಗೆ ಹೇಳುವ ಸನ್ನಿವೇಶವು ವಿಡಂಬನಾತ್ಮಕವಾಗಿ ಮೂಡಿದೆ.

ಅರಮನೆಯೊಳಗೆ ದೊಡ್ಡ ಹೆಂಡತಿಯರು
ಬಹಳ ಪುಣ್ಯ ಮಾಡಿದವರು
ಪುಣ್ಯ ಮಾಡಿದವರು ಇದ್ದದಕ
ನಮ್ಮ ಭಕ್ತಿ ಮೆಚ್ಚಿ ಸಂತಾನ ಕೊಟ್ಟಾನ
ಹನ್ನೆರಡು ಮಂದಿ ದಾದಿ ಮಕ್ಕಳು
ತಂದಿರೇನಮ್ಮ ಫಲಸಂತಾನ
ತಂದೀವಮ್ಮ ಫಲಸಂತಾನ ಪಡಕೊಂಡು

'ಅರಮನೆಯೊಳಗೆ ದೊಡ್ಡ ಹೆಂಡತಿಯರು ಬಹಳ ಪುಣ್ಯ ಮಾಡಿದವರು ಎಂದು ನಿರೂಪಿಸುವುದರ ಮೂಲಕ ಅವರು ಸೋಮಾರಿಗಳೆಂಬ ಅಂಶವು ವಿಡಂಬನೆಯ ಮೂಲಕ ಕಥನಗಾರರು ಅಭಿವ್ಯಕ್ತ ಮಾಡಿದ್ದಾರೆ. ನಿಜವಾಗಿ ಹಿರಿಯ ರಾಣಿಯರು ಯಾವುದೇ ಕೆಲಸವನ್ನು ನಿಷ್ಠೆಯಿಂದ, ಭಕ್ತಿಯಿಂದ ಮಾಡುವ ವರಲ್ಲ, ಇವರಲ್ಲಿ ಭಕ್ತಿಭಾವ ಇಲ್ಲದೆ ಅಹಂಭಾವ ಇರುತ್ತದೆ. ಅರಮನೆಗೆ ಬಂದ ಕೂಡಲೇ ಇವರ ಕೈ ಕೆಳಗಿನ ಹನ್ನೆರಡು ಮಂದಿ ಸಹಾಯಕಿಯರು ಮಕ್ಕಳ ಸಂತಾನವನ್ನು ಪಡೆದುಕೊಂಡು ಬಂದಿದ್ದೀರಾ ತಾಯಿಯರೆ ಎಂದು ಕೇಳುತ್ತಾರೆ. ಆಗ ಆರು ಮಂದಿ ರಾಣಿಯರು 'ನಮ್ಮ ಭಕ್ತಿ ಮೆಚ್ಚಿ ಸಂತಾನ ಫಲವನ್ನು ದೇವರಿಂದ ಪಡೆದುಕೊಂಡು ಬಂದಿದ್ದೇವೆ' ಎಂದು ಹೇಳುವುದರ ಮೂಲಕ, ಸಿರಿದೇವಿಗೆ ದೇವರು ಮಕ್ಕಳ ಭಾಗ್ಯ ಕೊಡಲಿಲ್ಲ, ನಾವು ಅವಳಿಗಿಂತ ಶ್ರೇಷ್ಠರು ಹೀಗಾಗಿ ನಮ್ಮಲ್ಲಿರುವ ಭಕ್ತಿಭಾವ ಕಂಡು ದೇವರು ಸಂತಾನ ಭಾಗ್ಯ ನಮಗೆ ಕೊಟ್ಟಿದ್ದಾರೆ ಎಂದು ತಮ್ಮ ಅಹಂಭಾವವನ್ನು ವ್ಯಕ್ತಪಡಿಸುತ್ತಾರೆ. ಇಲ್ಲಿ ಮುಖ್ಯವಾಗಿ ನಮ್ಮ ಭಕ್ತಿ ಮೆಚ್ಚಿ ಫಲಸಂತಾನ ಕೊಟ್ಟವ ಎನ್ನುವಲ್ಲಿ ವ್ಯಂಗ್ಯದ ಧ್ವನಿ ಇದೆ.

ಶರಬಂಧ ರಾಜಕುಮಾರನು ಸುಂದರಮ್ಮ ಪಟ್ಟಣಕ್ಕೆ ಬಂದು ಸುಂದರಮ್ಮಳನ್ನು ಗೆಲ್ಲುವ ಉಪಾಯವನ್ನು ಅದೇ ಪಟ್ಟಣದ ಬಡಿಗೇರ ಮೋನಯ್ಯನಿಂದ ತಿಳಿದುಕೊಳ್ಳುತ್ತಾನೆ. ಅಂತಹ ಒಂದು ಹಾಸ್ಯದ ಪ್ರಸಂಗ

ಇಲ್ಲಿ ಅಭಿವ್ಯಕ್ತಿಗೊಂಡಿದ್ದು ಕಾಣುತ್ತೇವೆ. ಯಾರು ಬಂದು ಇದುವರೆಗೂ ನನ್ನನ್ನು ಕೇಳಿಲ್ಲ. ನೀನು ಬಂದು ಕೇಳುತ್ತಿದ್ದಿ ಎಂದು ನಿನಗೆ ಸುಂದರಮ್ಮಳನ್ನು ಗೆಲ್ಲುವ ಉಪಾಯವನ್ನು ಹೇಳಿ ಕೊಡುತ್ತೇನೆಂದು, ಬಡಿಗೇರ ಮೋನಯ್ಯ, ಶರಬಂಧರಾಜ ಕುಮಾರನಿಗೆ ಹೇಳುತ್ತಾನೆ.

ಕೇಳಪ್ಪ ಮಗನೆ

ಹುಲಿ ಉಪ್ಪಂಗಿ ಊದುತಾದ

ಆ ಹುಲಿಗೆ ದೊಡ್ಡ ಗೋಸ್ತ ಒಯ್ಯಬೇಕು

ಕರಡಿ ಮದ್ದಲಿ ಬಾರಿಸ್ತದ

ಕರಡಿಗೆ ಕಡಬು ಗುಗ್ಗರಿ ಒಯ್ಯಬೇಕು

ನರಿಯು ರಾಗ ತೆಗಿತದ

ನರಿಗೆ ಬಾರಿ ಹಣ್ಣು ಒಯ್ಯಬೇಕು

ಕೋತಿಗೆ ಬೆಲ್ಲ ಪುಟಾಣಿ

ಬೆಕ್ಕಿಗೆ ಸಣ್ಣ ಇಚ್ಚಬತ್ತು

ಒಯ್ಯಬೇಕು ಶರಬಂಧರಾಜ

ಎಂದು ಶರಬಂಧರಾಜನಿಗೆ ಉಪಾಯವನ್ನು ಬಡಿಗೇರ ಮೋನಯ್ಯ ಹೇಳಿರುತ್ತಾರೆ. ಆದರೆ ಪಟ್ಟಣದ ಸುಂದರಮ್ಮ ತನ್ನ ಪಟ್ಟಣಕ್ಕೆ ಬಂದಂತಹ ರಾಜರುಗಳನ್ನು ಜಟ್ಟಿಗಳನ್ನು ತನ್ನ ತಂತ್ರದಿಂದ ತನ್ನ ಬೆಂಕಿಯ ಹುಂಡಿಯಲ್ಲಿ ಹಾಕುತ್ತಿದ್ದಳು. ಇಲ್ಲಿ ಚಾಣಾಕ್ಷನಾದ ಶರಬಂಧ ರಾಜಕುಮಾರನು ಸುಂದರಮ್ಮಳನ್ನು ಹೇಗೆ ಗೆಲ್ಲುವುದು ಎಂದು ವಿಚಾರ ಮಾಡಿ, ಪಟ್ಟಣದ ಬಡಿಗೆತನ ಕೆಲಸವನ್ನು ಮಾಡುವ ಬಡಿಗೇರ ಮೋನಯ್ಯನಿಂದ ಉಪಾಯವನ್ನು ತಿಳಿದುಕೊಳ್ಳುತ್ತಾನೆ. ಸುಂದರಮ್ಮಳ ನಾಟ್ಯಕ್ಕೆ ಹುಲಿ, ಕರಡಿ, ಕೋತಿ, ಬೆಕ್ಕು ಹಿಮ್ಮೇಳ ಸಿದ್ಧಪಡಿಸುತ್ತವೆ. ಅದಕ್ಕಾಗಿ ಅವುಗಳನ್ನು ಗೆಲ್ಲುವ ವಿಧಾನವನ್ನು ಬಡಿಗೇರ ಮೋನಯ್ಯನಿಂದ ರಾಜಕುಮಾರನು ತಿಳಿದುಕೊಂಡು ಹುಲಿಗೆ ಎತ್ತಿನ ಮಾಂಸ, ಕರಡಿಗೆ ಕಡಬು ಗುಗ್ಗರಿಯನ್ನು, ನರಿಗೆ ಬಾರೆಹಣ್ಣನ್ನು, ಕೋತಿಗೆ ಪುಟಾಣಿ ಬೆಲ್ಲವನ್ನು, ಬೆಕ್ಕಿಗೆ ಚಿಕ್ಕ ಇಲಿ, ಇವುಗಳನ್ನು ತೆಗೆದುಕೊಂಡು ಹೋಗುತ್ತಾನೆ. ಸುಂದರಮ್ಮಳ ನಾಟ್ಯ ಪ್ರಾರಂಭಿಸಿದಾಗ ಆ ಪ್ರಾಣಿಗಳ ಮುಂದೆ ತೆಗೆದುಕೊಂಡು ಹೋದ ವಸ್ತುಗಳನ್ನು ಹಾಕುತ್ತಾನೆ. ಆ ಪ್ರಾಣಿಗಳು ಸಂಗೀತದ ಹಿಮ್ಮೇಳ ನುಡಿಸುವುದನ್ನು ಬಿಟ್ಟು ತಂದ ವಸ್ತುಗಳನ್ನು ತಿನ್ನುತ್ತ ಕೂಡುತ್ತವೆ. ಬೆಕ್ಕು ಇಲಿ ಬೆನ್ನು ಹತ್ತಿ ಓಡುತ್ತದೆ. ಇಲಿ ಓಡಿ ಹೋಗಿ ಸುಂದರಮ್ಮಳ ಎದೆಯ ಮೇಲೆ ಹಾಕಿಕೊಂಡ ಮುಸುಕಿನಲ್ಲಿ ಸೇರುತ್ತದೆ. ಆಗ ಸುಂದರಮ್ಮ ಕುಣಿಯುವುದನ್ನು ಬಿಟ್ಟು ಠಣಠಣ ಎಗರಾಡುವ ಸನ್ನಿವೇಶವಂತೂ ಕೇಳುಗರನ್ನು ಇನ್ನಷ್ಟು ನಗೆಗೀಡು ಮಾಡುತ್ತದೆ. ಈ ರೀತಿ ಕಥನವು ಸುಲಲಿತವಾಗಿ ಸಾಗಲು ಕೇಳುಗರಿಗೆ ಬೇಸರವನ್ನು ದೂರ ಮಾಡಲು ಇಂತಹ ಪ್ರಸಂಗವನ್ನು ಕಥನಕ್ಕೆ

ಪೂರಕವಾಗಿ ಅಭಿವ್ಯಕ್ತಿ ಮಾಡಿರುತ್ತಾರೆ. ಅಲ್ಲದೆ ಕೆಲವು ಸನ್ನಿವೇಶಗಳಲ್ಲಿ ಪಾತ್ರಗಳ ಹೆಸರುಗಳ ಮೂಲಕ, ಮಾತಿನ ಸಂಭಾಷಣೆಯ ಮೂಲಕ ಸಂದರ್ಭಕ್ಕೆ ಅನುಗುಣವಾಗಿ ಹಾಸ್ಯ ಪ್ರಜ್ಞೆಯನ್ನು ಕಥನಗಾರರು ಅಭಿವ್ಯಕ್ತಿ ಮಾಡುವುದೂ ಇದೆ.

**ಶೋಕ**

ಕಥನದ ಕೆಲವು ಪ್ರಸಂಗಗಳಲ್ಲಿ ಶೋಕದ ಸನ್ನಿವೇಶ ವ್ಯಕ್ತವಾಗುತ್ತದೆ. ಈ ಕಥನದಲ್ಲಿ ಸಿರಿದೇವಿಯ ಶೋಕವು ಕರುಣಾಜನಕವಾಗಿ ಮೂಡಿಬಂದಿದೆ. ಆರು ಜನ ಹಿರಿಯ ಅಣ್ಣಂದಿರು ತಮ್ಮ ಶರಬಂಧ ರಾಜಕುಮಾರರನ್ನು ಕೊಂದಿರುತ್ತಾರೆ. ಆಗ ಸಿರಿದೇವಿಯ ಮನೆಯ ಮುಂದೆ ಇಟ್ಟಿದ್ದ ತುಳಸಿ ಗಿಡವು ಒಣಗಿದ್ದನ್ನು ಕಂಡು, ತನ್ನ ಮಗ ಸತ್ತನೆಂದು ಬಗೆದು ಶೋಕತಪ್ತಳಾಗುತ್ತಾಳೆ.

ಎಲ್ಲಿ ಸತ್ಯಪ್ಪ ನನ್ನ ಮಗನೆ  
ನನ್ನ ಪಾಪಿ ಮಾಡಿ ಹೋದೆ  
ಪರದೇಶಿ ಮಾಡಿ ಹೋದೆ  
ಅರಣ್ಯದೊಳಗೆ ಮಗನೆ  
ತಾಯಿ ತಂದೆ ಇಲ್ಲ ಮಗನೆ  
ಬಂದು ಇಲ್ಲ ಬಳಗ ಇಲ್ಲ ಮಗನೆ  
ನನ್ನ ಏಗಿ ಜೋಗಿ ಮಾಡಿ ಹೋದೆ ಮಗನೆ  
ನನ್ನ ದುಃಖ ಕಾಗಿ ಸೋಗ  
ನನ್ನ ದುಃಖ ನವಿಲು ಸೋಗ  
ಆರ್‍ಯಾಡಿ ದುಃಖ ಮಾಡ್ತಳ

ಸಿರಿದೇವಿ ತುಳಸಿಗಿಡ ಒಣಗಿದ ಸಂಕೇತವನ್ನು ಅರಿತುಕೊಂಡು ಮಗನ ಸಾವಿನ ಸಂಕೇತವನ್ನು ತಿಳಿದು ದುಃಖದಲ್ಲಿ ಮುಳುಗುತ್ತಾಳೆ. 'ಅರಣ್ಯದಲ್ಲಿ ಎಲ್ಲಿ ಸತ್ತು ಹೋದೆ, ಮತ್ತೆ ಬರುತ್ತೇನೆಂದು ಹೋಗಿ ಸತ್ತು ಬಿಟ್ಟೆಯಲ್ಲ, ನನ್ನನ್ನು ಪರದೇಶಿ ಮಾಡಿ ಹೋದೆ ಎಂದು ನನ್ನನ್ನು ದಿಕ್ಕಿಲ್ಲದವಳಾಗಿ ಮಾಡಿ ಹೋದೆ' ಎಂದು ಪರಿತಪಿಸುತ್ತಾಳೆ. ನನ್ನ ದುಃಖವನ್ನು ನಿನ್ನಿಂದ ಮರೆತಿದ್ದೆ ಆದರೆ ನೀನು ಸತ್ತು ಇನ್ನಷ್ಟು ದುಃಖವನ್ನು ತಂದಿಟ್ಟೆ, ಅಡವಿಯಲ್ಲಿ 'ತಾಯಿತಂದೆ ಇಲ್ಲದ' ಅನಾಥನಾಗಿ ಬಿದ್ದಿದಿಯಲ್ಲ ಎಂದು ಅಳುತ್ತಾಳೆ. 'ನನ್ನ ದುಃಖ ಕಾಗಿ ಸೋಗ' ಎಂದು ಹೇಳಿಕೊಳ್ಳುತ್ತಾಳೆ. ಇಲ್ಲಿ ಕಾಗೆಗಳ ಬಂಧುತ್ವ, ಅವುಗಳ ಹೃದಯಶೀಲತೆಯ ಭಾವ ಇದೆ. ನನ್ನ ದುಃಖ ನವಿಲು ಸೋಗ ಎನ್ನುವುದು ಸಹ ಜೊತೆಗಾರವನ್ನು ಕಳೆದುಕೊಂಡಾಗ ಅದು ಕೂಗುವ ಧ್ವನಿಯಂತೆ ಅವಳ ದುಃಖವೆಂದು ತಿಳಿಯುತ್ತದೆ. ಸಿರಿದೇವಿಯ ದುಃಖವೂ ಕಾಗೆ ಮತ್ತು ನವಿಲಿನ ಶೋಕದಂತೆ ಇತ್ತೆಂಬುದನ್ನು ಅವುಗಳಿಗೆ ಹೋಲಿಸಿ, ಕಥನಗಾರರು

ಅಭಿವ್ಯಕ್ತಿಸಿದ್ದಾರೆ. ಇಲ್ಲಿ ವಾಸ್ತವ ಬದುಕಿನಲ್ಲಿ ದುಃಖ ಹೇಗೆ ಅಭಿವ್ಯಕ್ತಪಡಿಸುತ್ತಾರೆಂಬುದು ಈ ಪಾತ್ರದಲ್ಲಿ ಚಿತ್ರಿತಗೊಂಡಿದೆ.

ಕಾಂಭೋಜರಾಜನು ಸಿರಿದೇವಿಯನ್ನು ಸ್ಮಶಾನದ ಬಂದಿಖಾನೆಯಲ್ಲಿ ಇಟ್ಟು ಬಂದು, ಅವಳ ಸ್ವಾಮಿ ನಿಷ್ಠೆಯನ್ನು ಜ್ಞಾಪಿಸಿಕೊಂಡು ಸಿರಿದೇವಿಯನ್ನು ನೆನೆದು ದುಃಖಪಡುವ ಸನ್ನಿವೇಶವು ಸಹ ರಾಜನ ಶೋಕ ವ್ಯಕ್ತವಾಗಿದೆ.

ತಾಯಿಗಿ ಏನಂತ ದುಃಖ ಮಾಡ್ತನ
ಭಾಮ ಸಿರಿದೇವಿ
ಆರು ಮಂದಿ ಮನಿಗಿ ನಾ ಹೋಗುತ್ತಿದ್ದಿಲ್ಲ
ನಿನ್ನ ಮನಿಗೆ ನಾ ಬರುತ್ತಿದ್ದೆ
ನೀನೆ ನನ್ನ ಜೋಪಾನ ಮಾಡುತ್ತಿದ್ದೆ
ಇವತ್ತು ದಿನದೊಳಗ
ಅಡವಿ ಪಾಲು ಮಾಡಿ ಹೋಗುತ್ತೀನಿ
ಯಾರ ಮನೆಗೆ ಹೋಗಲಿ ನಾನು
ಎಲ್ಲಿ ನಿದ್ದೆ ಮಾಡಲಿ
ರಾಜ ದುಃಖ ಮಾಡ್ತನ

ಹಿರಿಯ ರಾಣಿಯರ ಕುತಂತ್ರದ ಸಿಟ್ಟಿನಿಂದ ಸಿರಿದೇವಿಯನ್ನು ಸ್ಮಶಾನದಲ್ಲಿ ಇಟ್ಟು ಭರುವಾಗ, ಅವಳ ಕಾಯಕ ನಿಷ್ಠೆಯ ಭಾವವು ಕಾಂಭೋಜರಾಜನ ದುಃಖದಲ್ಲಿ ವ್ಯಕ್ತವಾಗಿದೆ. ಸಿರಿದೇವಿ ಕಾಂಭೋಜನು ಒಬ್ಬರನ್ನು ಬಿಟ್ಟು ಒಬ್ಬರು ಇರುತ್ತಿದ್ದಿಲ್ಲ. ಅಷ್ಟು ಗಾಢವಾದ ಪ್ರೀತಿ ಇಬ್ಬರಲ್ಲಿ ಇತ್ತು. ಆದರೆ ಹಿರಿಯ ರಾಣಿಯರ ಕುತಂತ್ರದಿಂದ ಅವಳಿಗೆ ಶಿಕ್ಷೆ ವಿಧಿಸಿದ್ದಾನೆ. ಆದರೂ ಸಹ ಅವಳನ್ನೇ ನೆನೆಯುತ್ತಾನೆ. ನಿನ್ನ ಮನಿಗೆ ನಾ ಬರುತ್ತಿದ್ದೆ, ಇಂದು ನಾನು ಯಾರ ಮನೆಗೆ ಹೋಗಲಿ ಎಂದು ದುಃಖಿಸುತ್ತಾನೆ. ನೀನೆ ನನ್ನ ಜೋಪಾನ ಮಾಡುತ್ತಿದ್ದೆ ಎನ್ನುವ ಭಾವವು ನನ್ನನ್ನು ಅತ್ಯಂತ ಪ್ರೀತಿಯಿಂದ ನನ್ನ ಕಷ್ಟ ಸುಖದಲ್ಲಿ ಭಾಗಿಯಾಗುತ್ತಿದ್ದೆ ಅಂಥವಳನ್ನು ಇಂದು ನಾನು ಅಡವಿ ಪಾಲು ಮಾಡಿ ನಾನು ಹೋಗಿದ್ದೇನೆ. 'ಸ್ಮಶಾನದಲ್ಲಿ ಇಟ್ಟು ಬಂದಿದ್ದೇನೆ' ಎಂದು ತನ್ನ ತಪ್ಪಿನ ಅರಿವನ್ನು ವ್ಯಕ್ತಪಡಿಸುತ್ತಾನೆ. 'ಯಾರ ಮನೆಗೆ ಹೋಗಲಿ ನಾನು ಎಲ್ಲಿ ನಿದ್ದೆ ಮಾಡಲಿ ಎನ್ನುವ ಆತನ ಅಳಲು ಸಿರಿದೇವಿ ಮೇಲೆ ಇಟ್ಟ ಪ್ರೀತಿ, ವಿಶ್ವಾಸ ತೋರುತ್ತದೆ. ರಾಜನ ಒಳಗಿನ ಅಂತರಾಳವು ಸಿರಿದೇವಿಯನ್ನು ನೆನೆಸುತ್ತದೆ. ಹೀಗೆ ರಾಜನು ತನ್ನ ಕಿರಿಯ ರಾಣಿಯ ಮೇಲೆ ಇದ್ದ ವಿಶ್ವಾಸ ಪ್ರೀತಿಯು ಶೋಕದಲ್ಲಿ ವ್ಯಕ್ತವಾಗಿದೆ.

## ಸಮಕಾಲೀನ ವಿಚಾರಗಳು

ಕಥನದಲ್ಲಿ ಆಧುನಿಕ ವಿಚಾರಗಳನ್ನು ಕೆಲವು ಸನ್ನಿವೇಶಗಳಲ್ಲಿ ಕಥನಗಾರರು ಸಂದರ್ಭಾನುಸಾರ ನಿರೂಪಿಸಿದ್ದಾರೆ. ಪಾತ್ರಗಳ ಹೆಸರುಗಳು, ಕೆಲವು ಸನ್ನಿವೇಶಗಳು ಕಂಡುಬರುತ್ತವೆ. ಅಂತಹ ಸಂದರ್ಭವು ಶರಬಂಧರಾಜನು ವೈರಾಮ ಜೋಗಿ ವೇಷ ಧರಿಸಿಕೊಂಡು ಶಂಕಿಣಿ ಚಿತ್ತಿಣಿ ಓಣಿಗೆ ಮೊದಲು ಮದ್ದು ಮಾರಲು ಬಂದಾಗ ಹನ್ನೆರಡು ಮಂದಿ ಹೆಣ್ಣುಮಕ್ಕಳು ಶರಬಂಧ ರಾಜಕುಮಾರನ ಸೌಂದರ್ಯಕ್ಕೆ ಮರುಳಾಗಿ ಹಿಂದೆ ಬೀಳುತ್ತಾರೆ. ಅವರನ್ನು ತನ್ನ ತಂತ್ರದಿಂದ ಕೆಳಗೆ ಬೀಳಿಸುತ್ತಾನೆ. ಆಗ ಎಲ್ಲರೂ ಒಂದೊಂದು ದೇಹದ ಅಂಗಗಳನ್ನು ಕಳೆದುಕೊಂಡಿರುತ್ತಾರೆ. ಮನೆಗೆ ಹೋಗಿ ತಮ್ಮ ಗಂಡಂದಿರಿಗೆ ಈ ವಿಷಯವನ್ನು ಮರೆಮಾಚಲು ಏನಾದರೂ ಉಪಾಯ ಹೇಳಬೇಕೆಂದು ಹನ್ನೆರಡು ಮಂದಿ ಮಾತನಾಡಿ ಕೊಳ್ಳುವುದನ್ನು ವಾಲಿಕಾರ ರಾಮಣ್ಣ ಕೇಳಿಸಿಕೊಳ್ಳುತ್ತಾನೆ. ಆ ಸಂದರ್ಭದಲ್ಲಿ ವಾಲಿಕಾರ ರಾಮಣ್ಣನ ಪಾತ್ರದಲ್ಲಿ ಬರುವ ಆಧುನಿಕ ವಿಚಾರಗಳು ಇಲ್ಲಿ ವ್ಯಕ್ತವಾಗಿದೆ.

ಹನ್ನೆರಡು ಮಂದಿ ಹೆಣ್ಣುಮಕ್ಕಳು ಜೊತೆಗೂಡಿ ಗಂಡಂದಿರಿಂದ ತಪ್ಪಿಸಿಕೊಳ್ಳಲು ತಮ್ಮ ತಪ್ಪುಗಳನ್ನು ಮುಚ್ಚಿಕೊಳ್ಳಲು ಒಬ್ಬೊಬ್ಬರು ಒಂದೊಂದು ಉಪಾಯವನ್ನು ಹುಡುಕಿಕೊಂಡು ಮಾತನಾಡಿಕೊಳ್ಳುವ ಸಂದರ್ಭದಲ್ಲಿ ಅವರ ಮಾತುಗಳ ವಿವರಗಳನ್ನು ವಾಲಿಕಾರ ರಾಮಣ್ಣ ಕೇಳಿಸಿಕೊಳ್ಳುತ್ತಾನೆ. ಆತ ಚಾಡಿ ಹೇಳುವ ಸ್ವಭಾವನಾಗಿದ್ದರಿಂದ ಆತ ಅವರೊಡನೆ

> ಏನಮ್ಮ ಹೆಣ್ಣುಮಕ್ಕಳೇ
> ನೀವೆಲ್ಲ ತಪ್ಪಿಸಿಕೊಂಡು ಹೋಗ್ಲಕತ್ತಿರಿ
> ಇದು ತಪ್ಪುವುದಿಲ್ಲ
> ನಿಮ್ಮ ಗಂಡದೋರು ಬಂದ ಮೇಲೆ
> ಇದ್ದ ಮಾತ ಇದ್ದಂಗ ಹೇಳ್ತೀನಿ

ಎಂದು ಆ ಹೆಣ್ಣುಮಕ್ಕಳಿಗೆ ಭಯವನ್ನು ಹುಟ್ಟಿಸುತ್ತಾನೆ. ಆಗ ಹೆಣ್ಣುಮಕ್ಕಳು ಬ್ಯಾಡಪ್ಪ ಆ ಮಾತನಾಡಬ್ಯಾಡ ಎಂದು ಹೇಳಿ ಅವನಿಗೆ ಆಸೆ ಆಮಿಷಗಳ ಭರವಸೆ ಕೊಡಲು ಮುಂದಾಗಿ

> ನಿಮಗೆ ಸಿಂದಿ ಕೊಡುಸ್ತೀನಿ
> ಸಿಂದಿ ಬೇಕಾಗಿಲ್ಲ
> ಕೋಟ್ರ ಕುಡಿಸ್ತೀನಿ
> ಕೊಟ್ಟರು ಬೇಕಾಗಿಲ್ಲ
> ಬೀರ್ ಬ್ರ್ಯಾಂಡಿ ಕುಡಿಸ್ತೀವಿ
> ನನಗೆ ಯಾವುದೂ ಬೇಕಾಗಿಲ್ಲ

ಇನ್ನೇನು ಬೇಕಪ್ಪ ಎಂದನಲ್ಲ

ಒಂದು ದಿನ ನಮ್ಮ ಮನಿಗೆ ಬರಬೇಕು

ಎಂದು ಸಮಯ ಸಾಧಕತನವನ್ನು ವ್ಯಕ್ತಪಡಿಸುತ್ತಾನೆ. ಕಥನಗಾರರು ಕಥನಕ್ಕೆ ಯಾವುದೇ ಕುಂದುಬಾರದಂತೆ ಸನ್ನಿವೇಶಕ್ಕೆ ತಕ್ಕಂತೆ ಆಧುನಿಕ ವಿಚಾರಗಳನ್ನು ಪಾತ್ರಗಳಿಗೆ ತಕ್ಕಂತೆ ನಿರೂಪಿಸಲು ಪ್ರಯತ್ನಿಸಿದ್ದಾರೆ. ಕಥನವು ವಿಸ್ತಾರವಾಗಿ, ಸರಳವಾಗಿ ಸಾಗಲು ಈ ಸನ್ನಿವೇಶವನ್ನು ಸಂದರ್ಭಾನುಸಾರವಾಗಿ ಸೃಷ್ಟಿಸಿ ವಾಸ್ತವ ವಿಚಾರಗಳನ್ನು ಅಭಿವ್ಯಕ್ತಪಡಿಸಿದ್ದಾರೆ. ಇಲ್ಲಿ ಸೃಷ್ಟಿಸಿರುವ ಪಾತ್ರಗಳು ಹಾಗೂ ಹೆಸರುಗಳು ವಾಸ್ತವ ಬದುಕನ್ನು ಪ್ರತಿಬಿಂಬಿಸುತ್ತದೆ. ಇಲ್ಲಿ ಬಂದಿರುವರು ಬೀರು, ಬ್ರ್ಯಾಂಡಿ ಇತ್ಯಾದಿ ಆಧುನಿಕ ಮದ್ಯದ ಹೆಸರುಗಳು ಕಥನದಲ್ಲಿ ಬಳಸಿರುವುದು ವಿಶೇಷ. ಕತೆಯ ಪಾತ್ರಗಳ ವ್ಯವಹಾರಕ್ಕೆ ಆಧುನಿಕ ಮದ್ಯಗಳಿಗೆ ಕಾಲದ ದೃಷ್ಟಿಯಿಂದ ಸಂಬಂಧ ಇಲ್ಲದೆಯೇ ಇರಬಹುದು. ಆದರೆ ಕಥನಗಾರರಿಗೆ ಸಮಕಾಲೀನ ವಾಸ್ತವ ಬದುಕಿನಲ್ಲಿ ಮದ್ಯವು ಪರಿಚಯವಿದೆ. ಹೀಗಾಗಿ ಕತೆಯ ಪಾತ್ರಗಳಲ್ಲಿ ಸಮಕಾಲೀನ ವಿಚಾರಗಳ ಭಾಗವಾಗಿ ಇಂತಹ ಸನ್ನಿವೇಶಗಳು ನಿರ್ಮಾಣಗೊಂಡಿದೆ. ಲಂಚದ ಆಸೆ, ಆಮಿಷಗಳನ್ನೊಡ್ಡುವ ಪರಿ, ಸಮಯಸಾಧಕ ಪ್ರವೃತ್ತಿ ಇವೆಲ್ಲ ಸಮಕಾಲೀನ ಆಶಯಗಳ ನೆಲೆಯಲ್ಲಿ ಕತೆಯೊಳಗೆ ಅರ್ಥವತ್ತಾಗುತ್ತವೆ. ಇದು ಕತೆಯನ್ನು ಹಾಡುವವರನ್ನು ಕೇಳುವವರನ್ನು ಏಕಕಾಲಕ್ಕೆ ಸುಲಭವಾಗಿ ಸಂವಹನಗೊಳ್ಳುವ ಸಂಗತಿಯಾಗಿದೆ. ಈ ನಿರೂಪಣೆಯಲ್ಲಿರುವ ನಾಟಕೀಯ ಸಂಭಾಷಣೆಯನ್ನು ಸಹ ಇಲ್ಲಿ ಗಮನಿಸಬಹುದು.

## ೩.೨. ಬಾಲಗಿರಿರಾಜಕತೆ

ಜನಪದ ಕಾವ್ಯಗಳಲ್ಲಿ ಬರುವ ರಮ್ಯಕತೆಗಳು ಬಹಳಷ್ಟು ಕಥಾವಸ್ತುಗಳು ಕಾಲ್ಪನಿಕಗಳಾಗಿರುತ್ತವೆ. ಆದರೆ ಕಥನಗಳಲ್ಲಿ ಬರುವ ಪಾತ್ರಗಳು ವಾಸ್ತವಿಕ ಬದುಕಿನ ನೆಲೆಗಟ್ಟಿನ ಮೇಲೆ ರೂಪುಗೊಂಡಿರುತ್ತವೆ. ಅದರಲ್ಲಿ ಬರುವ ಪಾತ್ರಗಳ ಸೃಷ್ಟಿ ಅದ್ಭುತವಾದುದು. ಆ ಪಾತ್ರಗಳ ಸನ್ನಿವೇಶಗಳು, ಧೈರ್ಯ, ಶೌರ್ಯ, ಸಾಹಸ ಅನೇಕ ಪರೀಕ್ಷೆಗಳಲ್ಲಿ ಗೆಲುವು, ಅತಿಮಾನುಷ ಶಕ್ತಿಗಳು ಮಾನವರೊಡನೆ ಸಹಜ ಸಂಪರ್ಕ, ಮಂತ್ರ-ಮಾಟ, ದೇವಕನ್ನೆಯರು, ಹಾಸ್ಯಮಯ ಪಾತ್ರಗಳು ಮುಂತಾದವುಗಳ ಸೃಷ್ಟಿ ಸೊಗಸಾಗಿ ಮೂಡಿರುವುದನ್ನು ಕಾಣುತ್ತೇವೆ. ವೃತ್ತಿಕಾಯಕರಾದ ಅಲೆಮಾರಿ ಬುಡ್ಗಜಂಗಮರು ಹಾಡಿದ 'ಬಾಲಗಿರಿರಾಜಕತೆ' ಸಹ ಇಂತಹ ಅದ್ಭುತ ರಮ್ಯಕತೆಗಳಲ್ಲಿ ಒಂದು. ಇಲ್ಲಿ ಕಥಾನಾಯಕ 'ಬಾಲಗಿರಿರಾಜ'ನು ಧೈರ್ಯ, ಸಾಹಸ, ಕ್ಷಮಾಗುಣಗಳಿಂದ ಸುಂದರ ಹೆಣ್ಣನ್ನು ಗೆಲ್ಲುವ ಚಿತ್ರಣ ಇದೆ ಹಾಗೂ 'ಪದ್ಮಾವತಿ'ಯ ಸ್ತ್ರೀ ಪಾತ್ರದಲ್ಲಿ ಆದರ್ಶಸ್ತ್ರೀ ಗುಣ ಪತಿವ್ರತ ಧರ್ಮ ಎದ್ದು ಕಾಣುತ್ತದೆ. ತನ್ನ ತಂದೆ ಮಹಿಭೂತರಾಜನ ಕ್ರೂರತನವನ್ನು ಖಂಡಿಸಿ ಸತ್ತ ಗಂಡನನ್ನೇ ಬುಟ್ಟಿಯಲ್ಲಿ ಇಟ್ಟು ತಲೆಮೇಲೆ ಹೊತ್ತುಕೊಂಡು ಗಂಡನ ನಾಡನ್ನು ಹುಡುಕಿಕೊಂಡು ಹೋಗುವ ಸನ್ನಿವೇಶವು ಕರುಣಾಮಯವಾಗಿ ಕಂಡುಬರುತ್ತದೆ. ಹಾಗೆಯೇ ಈ ಕಥನವು ಹಾಸ್ಯ ಪಾತ್ರಗಳ ಮೂಲಕ ಸುಲಲಿತವಾಗಿ ಸಾಗಿದೆ. ಕನ್ನಡ ಮತ್ತು ತೆಲುಗು ಎರಡೂ

ಭಾಷೆಗಳ ಬಾಲಗಿರಿರಾಜಕತೆಯ ಪಠ್ಯವನ್ನು ನೋಡಿದಾಗ ಒಬ್ಬರೇ ಹಾಡಿದ ಎರಡು ಪಠ್ಯಗಳಲ್ಲಿ ಕಥಾವಸ್ತು ಅದರ ನಿರೂಪಣೆ, ಸನ್ನಿವೇಶ ಯಾವುದೇ ವ್ಯತ್ಯಾಸವಿಲ್ಲದೆ ಕಥಾವಸ್ತು ಒಂದೇ ತೆರನಾಗಿ ಬಂದಿದೆ.

ಯಮನಂದಗಿರಿ ಪಟ್ಟಣದ ರಾಜ ಯಮನಂದಗಿರಿ. ಹೆಂಡತಿ ಕೃಷ್ಣ ನೀಲವೇಣಿ. ಇವರಿಗೆ ಸಂತಾನ ಇರಲಿಲ್ಲ. ರಾಜನು ಮಕ್ಕಳು ಭಾಗ್ಯಕ್ಕಾಗಿ ಯಾತ್ರೆ ಕೈಗೊಂಡು ವರ ಪಡೆಯದೆ ಹಿಂತಿರುಗುತ್ತಾನೆ. ಆಗ ಹೆಂಡತಿಯೇ ಯಾತ್ರೆ ಕೈಗೊಂಡು ವರ ಪಡೆಯುತ್ತಾಳೆ. ವರದಿಂದ ಹುಟ್ಟಿದ ಮಗನಿಗೆ 'ಬಾಲಗಿರಿರಾಜ' ಎಂದು ಹೆಸರಿಟ್ಟರು. ರಾಜನು ತನ್ನ ಮಗನಿಗೆ 'ಗುರ್ರಣ್ಣ' ಗುರುಗಳ ಹತ್ತಿರ ವಿದ್ಯೆಯನ್ನು ಕಲಿಸುತ್ತಾನೆ. ಹುಡುಗ ಕೆಲವೇ ದಿನಗಳಲ್ಲಿ ಗುರುಗಳ ಹತ್ತಿರ ರಾಮಾಯಣ, ಜೈಮಿನಿ ಭಾರತ ಪುಸ್ತಕಗಳನ್ನು ತರಿಸಿಕೊಂಡು ಭೀಮ್‌ಪ್ಲಸ್ ರಾಗದಲ್ಲಿ ಹಾಡುತ್ತಾನೆ. ನಂತರ ತಂದೆಯಿಂದ ಗುರುಗಳಿಗೆ ಕಾಣಿಕೆಗಳನ್ನು ಕೊಡಿಸುತ್ತಾನೆ.

ಅತ್ತ ಬಾಲಟೀಜುಲ ಪಟ್ಟಣದ ಮಾರು ಮರಾಠಿ ಮಹಿಭೂತರಾಜ. ಹೆಂಡತಿ ಸೂರ್ಯವತಿ. ಇವರಿಗೆ ದೇವರ ವರ ಪ್ರಸಾದದಿಂದ ನಾಗಮಲ್ಲಿಗೆ ತೋಟದಲ್ಲಿ 'ಐದು ನಾಗ ಮಲ್ಲಿಗೆ' ತೂಕದ ಸುಂದರವಾದ 'ಪದ್ಮರಾಣಿ'ಯು ಜನಿಸುತ್ತಾಳೆ. ಮಗಳು ವಯಸ್ಸಿಗೆ ಬಂದ ಮೇಲೆ ರಾಜನು ತನ್ನ ಸುತ್ತಮುತ್ತಲಿನ ರಾಜರಿಗೆ ಪತ್ರ ಬರೆದು, ತಾನು ಆಹ್ವಾನಿಸಿದ ಪಂಥಗಳನ್ನು ಗೆದ್ದರೆ ಮಗಳನ್ನು ಕೊಡುತ್ತೇನೆ ಎಂದು ತಿಳಿಸುತ್ತಾನೆ. ಅನೇಕ ರಾಜರು, ಜಟ್ಟಿಗಳು ಬಂದು ರಾಜನ ಪಂಥಗಳನ್ನು ನೋಡಿ ಹೆದರಿ ಹಿಂತಿರುಗಿ ಹೋಗುತ್ತಾರೆ. ಆದರೆ ಅದೇ ಪತ್ರ ಯಮನಂದಗಿರಿ ಪಟ್ಟಣ ತಲುಪಿರುತ್ತದೆ. ಆ ಪತ್ರವು ಬಾಲಗಿರಿರಾಜ ಕುಮಾರನ ಕೈಗೆ ಸಿಗುತ್ತದೆ. ಪತ್ರವನ್ನು ಓದಿದ ಬಾಲಗಿರಿರಾಜಕುಮಾರನು ಅದರಲ್ಲಿದ್ದ ಪದ್ಮರಾಣಿಯ ಭಾವಚಿತ್ರವನ್ನು ಕಂಡು, ಅವಳ ಸೌಂದರ್ಯಕ್ಕೆ ಮನಸೋತು, ಅವಳನ್ನು ಪಡೆಯಬೇಕೆಂಬ ಛಲ ಹುಟ್ಟುತ್ತದೆ. ತಾಯಿ ತಂದೆ ಬೇಡವೆಂದರೂ ಹೆಣ್ಣನ್ನು ಗೆದ್ದು ತರುತ್ತೇನೆಂದು ಹೇಳಿ ಹೊರಡುತ್ತಾನೆ. ಬೆಟ್ಟಗುಡ್ಡಗಳನ್ನು ದಾಟಿ ಹೋದ ಬಾಲಗಿರಿರಾಜ ಭೂಪತಿಪಟ್ಟಣದ ಹೊರಗೆ ವಾಸಿಸುವ ಜೀರ್ಲನಾಗಮ್ಮ ಕುಡ್ಡಿ ಈರಣ್ಣ ಗುಡಿಸಲನ್ನು ತಲುಪುತ್ತಾನೆ. ಅಜ್ಜಿಯಿಂದ ಭೂಪತಿ ಪಟ್ಟಣದ ವಿವರಗಳನ್ನು ತಿಳಿಯುತ್ತಾನೆ. ಅಲ್ಲಿಂದ ನೇರವಾಗಿ ಮಹಿಭೂತರಾಜನ ಆಸ್ಥಾನಕ್ಕೆ ಹಾರಿ ಮಗಳನ್ನು ಕೊಡು ಮಾವ ಎನ್ನುತ್ತಾನೆ. ರಾಜನು ತಾನು ಆಹ್ವಾನಿಸಿದ ಪಂಥಗಳನ್ನು ಗೆದ್ದರೆ ಮಗಳನ್ನು ಕೊಡುತ್ತೇನೆಂದು ಹೇಳಿದನು. ಮಹಿಭೂತ ರಾಜನು ಹೇಳಿದ ಏಳು ಸಾವಿರ ಕುದುರೆ, ಏಳು ಸಾವಿರ ಒಂಟೆ, ಏಳುಸಾವಿರ ಆನೆ, ಏಳು ಸಾವಿರ ಹಣ್ಣಿನ ತೋಟವನ್ನು ಸಂಹಾರ ಮಾಡಿದರು ಮಗಳನ್ನು ಕೊಡುವುದಿಲ್ಲ. ಮಹಿಭೂತರಾಜ ಕೊನೆಗೆ ತನ್ನ ತಮ್ಮಂದಿರಿಗೆ ಹೇಳಿ ಕಳಿಸಿ ಏಳು ಸಾವಿರ ದಂಡು, ತನ್ನ ಏಳು ಸಾವಿರ ದಂಡಿನ ಜೊತೆ ಸೇರಿ ಬಾಲಗಿರಿರಾಜ ನನ್ನು ಸೋಲಿಸಬೇಕೆಂದು ಹೇಳಿದನು. ಬಾಲಗಿರಿರಾಜ ಇಲ್ಲಿಯೂ ಸಹ ಎಲ್ಲರನ್ನು ಹತ ಮಾಡುತ್ತಾನೆ. ಮಹಾಭೂತರಾಜನು ತನ್ನ ತಮ್ಮಂದಿರನ್ನು ತನ್ನ ದಂಡನ್ನು ಕೊಲ್ಲುವುದನ್ನು ಕಂಡು ಮಗಳನ್ನು ಕೊಡದಿದ್ದರೆ ನನ್ನನ್ನೂ ಕೊಲ್ಲುತ್ತಾನೆಂದು ಅರಮನೆಯ ಅಡುಗೆಕೋಣೆಯಲ್ಲಿ 'ರಾಜರಾಣಿ'ಯು ಅಡಗಿಕೊಳ್ಳುತ್ತಾರೆ.

ಬಾಲಗಿರಿರಾಜಕುಮಾರನು ಮಹಿಭೂತರಾಜನ ಆಸ್ಥಾನದಲ್ಲಿ ಒಂದು ವಾರದವರೆಗೆ ಮಾವ ಬರುತ್ತಾನೆಂದು ಕಾಯುತ್ತಾನೆ. ಊರಿನ ಹೆಣ್ಣುಮಕ್ಕಳು ಬಾಲಗಿರಿರಾಜನ ಪರಿಸ್ಥಿತಿಯನ್ನು ಕಂಡು ಕನಿಕರದಿಂದ 'ಅವನು ಕೊಡಲಾರದ ಶೆಟ್ಟಿ, ನೀನು ಬಿಡಲಾರದ ಜೆಟ್ಟಿ' ಎಂದು ಹೇಳಿ, ಸಮಾಧಾನಪಡಿಸಿ ನಿಮ್ಮಾವ ಬರುವುದಿಲ್ಲವೆಂದು ಹೇಳಿದರು. ನಿಮ್ಮ ನಾಡಿಗೆ ಹೋಗೆಂದು ಸನ್ಮಾನಿಸಿ ಕಳಿಸಿದರು. ಬಾಲಗಿರಿರಾಜನು ಪಟ್ಟಣ ಬಿಟ್ಟು ತುಸು ದೂರ ಹೋದ ಮೇಲೆ ಚಿಂತಿಸುತ್ತಾ, ಇಲ್ಲಿಗೆ ಬಂದು ಹನ್ನೆರಡು ವರ್ಷಗಳಾದುವು. ಬರಿಗೈಯಲ್ಲಿ ಹೋದರೆ ತಂದೆ ನನ್ನನ್ನು ಕೊಲ್ಲುತ್ತಾನೆಂದು, ಅಲ್ಲೇ ಇದ್ದ ಬಸಿರುಗಿಡವನ್ನು ಹತ್ತಿ ಚಿಕ್ಕ ಗುಡಿಸಲು ಕಟ್ಟಿಕೊಂಡು ಇರುತ್ತಾನೆ.

ಮಹಿಭೂತರಾಜನು ಅಡುಗೆ ಮನೆಯಲ್ಲಿ ಅವಿತುಕೊಂಡು ಆರು ತಿಂಗಳಾಗಿರುತ್ತದೆ. ಊಟ ಮಾಡಲು ಪತ್ರೋಳಿ ಮುಗಿದಿರುತ್ತವೆ. ಜೀರ್ಲನಾಗಮ್ಮಗೆ ಪತ್ರೋಳಿ ತರಲು ಹೇಳುತ್ತಾನೆ. ಜೀರ್ಲ ನಾಗಮ್ಮ ಅಡವಿಗೆ ಮುತ್ತುಗದ ಎಲೆಗಳನ್ನು ತರಲು ಹೋಗುತ್ತಾಳೆ. ನೇರವಾಗಿ ಬಾಲಗಿರಿರಾಜ ವಾಸವಾಗಿದ್ದ ಮರಕ್ಕೆ ಬಂದು ಎಲೆಗಳನ್ನು ಕಿತ್ತು ಕುಂಚಿಗೆಯಲ್ಲಿ ಹಾಕಿಕೊಳ್ಳುತ್ತಾಳೆ. ಬಾಲಗಿರಿರಾಜ ಅಜ್ಜಿಯನ್ನು ಗುರುತು ಹಿಡಿದು ಗಿಡದ ಮೇಲಿಂದ ಎಲೆಗಳನ್ನು ಕೆಳಗೆ ಹಾಕುತ್ತಾನೆ. ಎಲೆಗಳು ಗಾಳಿಗೆ ಬಿದ್ದಿವೆ ಎಂದು ಆರಿಸಿಕೊಂಡು ಕುಂಚಿಗೆಯಲ್ಲಿ ಹಾಕಿ ಗಂಟು ಕಟ್ಟಿ ತಲೆ ಮೇಲೆ ಹೊತ್ತು ಹೋಗುವಾಗ 'ನಾಗಮ್ಮ ನಾ ಬರ್‍ತಿನಿ' ಎಂದು ಬಾಲಗಿರಿರಾಜ ಹೇಳುತ್ತಾನೆ. ನಾಗಮ್ಮ ದೆವ್ವ ಇದೆ ಎಂದು ಕುಂಚಿಗೆ ಕೆಳಗೆ ಹಾಕಿ ಎಲೆಗಳನ್ನು ಹೊಡೆದು ಹೊಡೆದು ದೆವ್ವ ಹೋದೆಯಾ ಎನ್ನುತ್ತಾಳೆ. ಬಾಲಗಿರಿರಾಜನೇ ತನ್ನನ್ನು ಕೂಗಿದ್ದು ಎಂದು ಗೊತ್ತಾಗಿ, ಎಲೆಗಳಲ್ಲಿ ಬಾಲಗಿರಿರಾಜನನ್ನು ಕೂಡಿಸಿಕೊಂಡು ಮನೆಗೆ ಹೋಗುತ್ತಾಳೆ. ಅಲ್ಲಿಂದ ಮಹಿಭೂತರಾಜನ ಅರಮನೆಗೆ ಹೋಗುವಾಗ ಬಾಲಗಿರಿರಾಜ ಪದ್ಮರಾಣಿ ಇದ್ದ ಅರಮನೆಗೆ ಹಾರಿ ಹೋಗುತ್ತಾನೆ. ಪದ್ಮರಾಣಿ ಅರಮನೆ ಬಿಲ್ಲು ಆಯುಧಗಳಿಂದ ಕೂಡಿರುತ್ತದೆ. ಅವಳನ್ನು ಕಾಣಲು ಹೋದಾಗ, ಬಾಲಗಿರಿರಾಜನ ಒಂದೊಂದು ಅಂಗವು ಕತ್ತರಿಸಿ ಹೋಗುತ್ತವೆ. ರುಂಡವು ಪದ್ಮರಾಣಿಯ ಎದೆಯ ಮೇಲೆ ಬಿದ್ದಾಗ ಅವಳಿಗೆ ಎಚ್ಚರವಾಗುತ್ತದೆ. ತನ್ನ ತಂದೆ ಕೈಮುಟ್ಟಿ ಮದುವೆ ಮಾಡಲಿಲ್ಲ ಎಂದು ಸತ್ತ ಗಂಡನ ದೇಹದ ತುಂಡುಗಳನ್ನು ಹುಡಿಯಲ್ಲಿ ಕಟ್ಟಿಕೊಂಡು ಬಂದು ತಂದೆಗೆ ಸತ್ತ ಗಂಡನ ಜೊತೆ ಮದುವೆ ಮಾಡೆಂದು ಕೇಳುತ್ತಾಳೆ. ತಂದೆ ಮಹಿಭೂತರಾಜ ಒಪ್ಪದಿದ್ದಾಗ, ಆತನ ಕ್ರೂರತನವನ್ನು ಜರಿದು ಗಂಡನ ದೇಹವನ್ನು ಹೊತ್ತುಕೊಂಡು, ಗಂಡನ ನಾಡನ್ನು ಹುಡುಕುತ್ತ ಹೊರಡುತ್ತಾಳೆ. ಪದ್ಮರಾಣಿ ಬಾವಿಯಲ್ಲಿ ನೀರು ಕುಡಿಯಲು ಹೋಗುತ್ತಾಳೆ. ಆಗ ಅವಳ ಪತಿಭಕ್ತಿ ಕಂಡು ಪರಮಾತ್ಮನು ಬಾಲಗಿರಿರಾಜನನ್ನು ಬದುಕಿಸಿ ಹೋಗುತ್ತಾನೆ. ಬದುಕಿದವನು ಬಾಲಗಿರಿರಾಜನೆಂದು ತಿಳಿಯದೆ ಪದ್ಮರಾಣಿ ಜಗಳವಾಡುತ್ತಾಳೆ. ಆಗ ಪಾರ್ವತಿಯೇ ಬಂದು ನಿಜಸ್ಥಿತಿಯನ್ನು ತಿಳಿಸಿ, ದೇವತೆಗಳನ್ನು ಆಹ್ವಾನಿಸಿ ಮದುವೆ ಮಾಡಿ ಹೋಗುತ್ತಾಳೆ.

ಯಮನಂದಗಿರಿ ಪಟ್ಟಣಕ್ಕೆ ಹತ್ತಿರ ಬಂದಾಗ ಬಾಲಗಿರಿರಾಜನಿಗೆ ನೀರಡಿಕೆಯಾಗುತ್ತದೆ. ಪದ್ಮರಾಣಿ ಗಂಡನಿಗೆ ನೀರು ತರಲು ಬಾವಿಗೆ ಹೋಗುತ್ತಾಳೆ. ಬಟ್ಟೆ ಒಗೆಯುತ್ತಿದ್ದ ಪೋಲವ್ವ ಪದ್ಮರಾಣಿಯನ್ನು ಮೋಸ ಮಾಡಿ ಬಾವಿಗೆ ತಳ್ಳಿ, ಅವಳ ಬಟ್ಟೆಗಳನ್ನು ಧರಿಸಿ, ನನ್ನ ರೂಪ ದೆವ್ವ ತೆಗೆದುಕೊಂಡಿತು ಎಂದು ಬಾಲಗಿರಿರಾಜನಿಗೆ ಹೇಳುತ್ತಾಳೆ. ಇವಳನ್ನು ಮನೆಗೆ ಕರೆದುಕೊಂಡು ಹೋದರೆ ತಂದೆ ಬಂದೂಕಿನಿಂದ ಸಾಯಿಸುತ್ತಾನೆಂದು ಪಟ್ಟಣದ ಹೊರಗೆ ತೋಟದಲ್ಲಿ ಮನೆಯನ್ನು ಕಟ್ಟಿ ಇಡುತ್ತಾನೆ. ಬಾವಿಯಲ್ಲಿ ಬಿದ್ದ ಪದ್ಮರಾಣಿ 'ದೇವರ ಕಮಲ' ಹೂವಾಗಿ ತಿರುಗುತ್ತಿರುತ್ತಾಳೆ. ಲಚಮಣ್ಣ ತೋಟಕ್ಕೆ ಬಾವಿಯಿಂದ ನೀರನ್ನು ಮೋಟೆ (ಎತ್ತುಗಳನ್ನು ಕಟ್ಟಿ ಬಾವಿಯಿಂದ ನೀರನ್ನು ಹೊರಗೆ ತೆಗೆಯುವ ವಿಧಾನ) ಹೊಡೆಯುವಾಗ ನೀರಿನಲ್ಲಿಂದ ಬಂದು ಹೊರಗೆ ಬಿದ್ದು ಪದ್ಮರಾಣಿಯಾಗಿ ಕಾಣುತ್ತಾಳೆ. ಪದ್ಮರಾಣಿ ಲಚಮಣ ಅಣ್ಣ ತಂಗಿಯಾಗಿ ತೋಟದಲ್ಲಿ ಮಲ್ಲಿಗೆ ಹೂವನ್ನು ಬೆಳೆಯುತ್ತಾರೆ.

ಬಾಲಗಿರಿರಾಜ ಪದ್ಮರಾಣಿ ವೇಷದ ಪೋಲವ್ವಗೆ 'ಹೂವ' ಮುಡಿಯಲು ದಾಸಿಯರಿಂದ ದಿನಾಲು ತರಿಸುತ್ತಾನೆ. ಅಂದು ಹೂವನ್ನು ಮುಡಿದ ಪೋಲವ್ವಳ ತುರುಬನ್ನು ವಿಶ್ವಮಿತ್ರ ಇಲಿಯಾಗಿ ಬಂದು ತುಂಡಾಗಿಸುತ್ತಾನೆ. ಇದನ್ನು ಅರಿತು ಪೋಲವ್ವ ಗಂಡನಿಗೆ ಲಚಮಣ್ಣ ತೋಟದಲ್ಲಿ ದೆವ್ವ ಇದೆ. ಅದು 'ನಿನ್ನ ನುಂಗುತಿನಿ, ನಿನ್ನ ಗಂಡನ ನುಂಗುತಿನಿ, ನಿನ್ನ ಮಾವನ ನುಂಗುತಿನಿ' ಎಂದು ಕನಸಿನಲ್ಲಿ ಹೇಳಿದೆ ಎಂದು ಸುಳ್ಳು ಹೇಳುತ್ತಾಳೆ. ಲಚಮಣ್ಣ ತೋಟದಲ್ಲಿದ್ದ ದೆವ್ವವನ್ನು (ಪದ್ಮರಾಣಿ) ಕಟುಕರಿಗೆ ಕೊಲ್ಲುವಂತೆ ಗಂಡನಿಗೆ ಹೇಳುತ್ತಾಳೆ. ಅದರಂತೆ ಬಾಲಗಿರಿರಾಜ ಕಟುಕರಿಂದ ಪದ್ಮರಾಣಿಯನ್ನು ಕೊಲ್ಲಿಸುತ್ತಾನೆ. ಆಗ ಪದ್ಮರಾಣಿಯ ರುಂಡ ವೀರಭದ್ರಗುಡಿ, ಹೊಟ್ಟೆ ಬಂಗಾರದ ಬಾವಿ, ರಕ್ತ ಬಾವಿಯಲ್ಲಿ ನೀರು, ದೇಹವು ಹಣ್ಣಿನ ತೋಟ ಮತ್ತು ಅವಳ ಜೀವ ಎರಡು ಗಿಳಿಗಳಾಗಿ ಹುಟ್ಟುತ್ತವೆ. ಅಂದು ರಾತ್ರಿ ಬಾಲಗಿರಿರಾಜ ಸಿರಿದೇವಿಯನ್ನು ನೆನೆದು ಮಲಗಿದಾಗ, ಪದ್ಮರಾಣಿ ಕನಸಿನಲ್ಲಿ ಬರುತ್ತಾಳೆ. ಅವಳು ಕನಸಿನಲ್ಲಿ ಹೇಳಿದಂತೆ ಪದ್ಮರಾಣಿ ಅರಣ್ಯದಲ್ಲಿ ಸಿಗಬಹುದೆಂದು ಬೇಟೆಗೆ ಹೋಗುತ್ತಾನೆ. ಅರಣ್ಯದಲ್ಲಿ ಒಂದೂ ಬೇಟೆ ಸಿಗದೆ ಅಲ್ಲೇ ಇದ್ದ ತೋಟದಲ್ಲಿ ತನ್ನ ದಂಡಿನ ಜೊತೆ ವಿಶ್ರಾಂತಿಯನ್ನು ಪಡೆಯುತ್ತಾನೆ. ಬಂಟರು ಅಲ್ಲಿದ್ದ ಬಾಳೆ ಹಣ್ಣನ್ನು ತಿನ್ನಲು ರಾಜಕುಮಾರನಿಗೆ ಕೊಟ್ಟರೆ, ಅದನ್ನು ತಿನ್ನಬೇಡ ಅವು ನಿನ್ನ ಮಕ್ಕಳು ಎಂಬ ವಾಣಿ ಕೇಳಿಸುತ್ತದೆ. ನೀರು ಕುಡಿಯಲು ಹೋದರೆ ರಕ್ತವಾಗುತ್ತದೆ. ಬೇಸತ್ತ ರಾಜಕುಮಾರ ಮರದ ಕೆಳಗೆ ಮಲಗಿಕೊಳ್ಳುತ್ತಾನೆ. ಮರದ ಮೇಲಿದ್ದ ಎರಡು ಅಕ್ಕತಂಗಿ ಗಿಳಿಗಳು ಮಾತನಾಡುತ್ತಾ ಅಕ್ಕ ಗಿಳಿ ತಂಗಿ ಗಿಳಿಗೆ ಕತೆ ಹೇಳುತ್ತಾಳೆ. ಅದು ಹೀಗಿದೆಃ ಬಾಲಗಿರಿರಾಜಕುಮಾರ ಪದ್ಮರಾಣಿಯನ್ನು ಗೆಲ್ಲಲು ಮಹಿಭೂತ ಪಟ್ಟಣಕ್ಕೆ ಹೋಗಿದ್ದನು. ರಾಜಕುಮಾರ ಮಹಿಭೂತರಾಜ ಆಹ್ವಾನಿಸಿದ ಪಂಥಗಳಲ್ಲಿ ಗೆಲ್ಲುತ್ತಾನೆ. ಮಹಿಭೂತರಾಜ ಪದ್ಮರಾಣಿಯನ್ನು ಮದುವೆ ಮಾಡಿ ಕೊಡದಿದ್ದಾಗ ಅವರನ್ನು ಪಡೆಯಲು ಹೋಗಿ, ಅವಳ ಅರಮನೆಯ ಬಿಲ್ಲು ಆಯುಧಗಾರದಲ್ಲಿ ಸಾಯುತ್ತಾನೆ. ಪದ್ಮರಾಣಿ ಸತ್ತ ಗಂಡನ ದೇಹದ ತುಂಡುಗಳನ್ನು ಹೊತ್ತು ಗಂಡನ ನಾಡನ್ನು ಹುಡುಕುತ್ತ ಹೋದಳು. ಪದ್ಮರಾಣಿಯು ಪೋಲವ್ವಳ

ಕುತಂತ್ರದಿಂದ ಲಚಮಣ್ಣ ಬಾವಿಯಲ್ಲಿ ಬೀಳುತ್ತಾಳೆ. ಆಗ ಅವಳನ್ನು ಲಚಮಣ್ಣ ಸಾಕುತ್ತಾನೆ. ಪೋಲವ್ವಳ ದುಷ್ಕೃತನವನ್ನು ಅರಿಯದ ಬಾಲಗಿರಿರಾಜ, ಪದ್ಮರಾಣಿಯನ್ನು ಕಟುಕರಿಂದ ಕೊಲ್ಲಿಸುತ್ತಾನೆ. ಅವಳ ದೇಹ ವೀರಭದ್ರಗುಡಿ, ಬಾವಿ, ಹಣ್ಣಿನ ತೋಟ, ಜೀವ ಎರಡು ಗಿಳಿಗಳಾಗಿ ಹುಟ್ಟಿದನ್ನು ಹೇಳುತ್ತದೆ. ಅಕ್ಕ ಗಿಳಿ ತಂಗಿ ಗಿಳಿಗೆ ಇಷ್ಟೆಲ್ಲ ಕತೆ ಹೇಳಿದ ಮೇಲೆ ಇದು ನಮ್ಮದೆ ಕತೆ, ಮರದ ಕೆಳಗೆ ಮಲಗಿದವ ನಮ್ಮಾವ ಎಂದು ಹೇಳುತ್ತದೆ. ಆ ಕತೆಯನ್ನು ಕೇಳಿಸಿಕೊಂಡ ಬಾಲಗಿರಿರಾಜಕುಮಾರನು ಅದು ತನ್ನ ಕತೆ ಎಂದು ತಿಳಿಯುತ್ತಾನೆ. ಬಾಲಗಿರಿರಾಜ ಆಗ ಗಿಳಿಗಳಿಗೆ ಪದ್ಮರಾಣಿ ಎಲ್ಲಿ ಸಿಗುತ್ತಾಳೆಂದು ಕೇಳುತ್ತಾನೆ. ಅವು ತಮ್ಮನ್ನು ಹಿಡಿದುಕೊಂಡು ಹೋಗಿ ಹೊಸ ಗಡಿಗೆಯಲ್ಲಿ ಹಾಕಿ ಜೀರ್ಲೋರನಾಗಮ್ಮ ಮನೆಯಲ್ಲಿ ಇಡಬೇಕು. ಪೋಲವ್ವಳನ್ನು ಕರೆದುಕೊಂಡು ಹೋಗಿ ನಿಮ್ಮ ತಂದೆಯ ಎದುರಿಗೆ ನಿಲ್ಲಿಸಬೇಕು. ಅವಳು ಐದು ನಾಗಮಲ್ಲಿಗೆ ಹೂವಿನ ತೂಕ ಇರುವುದಿಲ್ಲ. ಆಗ ನಿನ್ನನ್ನು ಕಡಿಯಲು ನಿಮ್ಮ ತಂದೆ ಬಂದಾಗ, ಯಾರನ್ನು ನೆನೆಯದೆ ಪದ್ಮರಾಣಿಯನ್ನು ನೆನೆದರೆ ಅವಳು ಪ್ರತ್ಯಕ್ಷಳಾಗುತ್ತಾಳೆಂದು ಗಿಳಿಗಳು ಹೇಳುತ್ತವೆ. ಬಾಲಗಿರಿರಾಜ ಅದರಂತೆ ಮಾಡುತ್ತಾನೆ. ಯಮನಂದಗಿರಿರಾಜನು ಪೋಲವ್ವಳನ್ನು ನೋಡಿ ಮಗ ಬಾಲಗಿರಿರಾಜನನ್ನು ಕಡಿಯಲು ಮುಂದಾದಾಗ, ಪದ್ಮರಾಣಿ ಪ್ರತ್ಯಕ್ಷವಾಗಿ ಗಂಡನನ್ನು ಬೆನ್ನಿಗೆ ಹಾಕಿಕೊಂಡು ನಿಲ್ಲುತ್ತಾಳೆ. ಯಮನಂದಗಿರಿರಾಜನು ಪೋಲವ್ವಳ ನಿಜಸ್ಥಿತಿಯನ್ನು ಅರಿತ ಮೇಲೆ ಅವಳ ತಲೆಬೋಳಿಸಿ ಮೆರವಣಿಗೆ ಮಾಡಿ ಕುದಿಯುವ ಸುಣ್ಣದ ಬಟ್ಟಿಯಲ್ಲಿ ಹಾಕಿಸುತ್ತಾನೆ. ಪದ್ಮರಾಣಿಯ ಜೊತೆಗೆ ಬಾಲಗಿರಿ ರಾಜಕುಮಾರನ ಮದುವೆಯನ್ನು ಅದ್ದೂರಿಯಾಗಿ ಮಾಡುತ್ತಾನೆ.

ಪದ್ಮರಾಣಿ ಗರ್ಭಿಣಿಯಾದ ವಿಷಯ ತಂದೆ ಮಹಿಭೂತರಾಜನಿಗೆ ತಿಳಿಯುತ್ತದೆ. ಯಮನಂದಗಿರಿ ಪಟ್ಟಣಕ್ಕೆ ಯುದ್ಧ ಮಾಡಲು ಬರುತ್ತಾನೆ. ಆಗ ಪದ್ಮರಾಣಿ ಗಂಡನ ವೇಷ ತೊಟ್ಟು ತಂದೆಯ ವಿರುದ್ಧ ಕಾಳಗ ಮಾಡುತ್ತಾಳೆ. ಕಾಳಗದಲ್ಲೇ ಮಗನನ್ನು ಹೆತ್ತಾಗ ಮಗನಿಂದಲೇ ತಾತನಾದ ಮಹಿಭೂತರಾಜನ ರುಂಡವನ್ನು ಕಡಿಸುತ್ತಾಳೆ. ಪದ್ಮರಾಣಿ ಕಾಳಗದಲ್ಲಿ ಜಯಿಸಿದ ಮೇಲೆ ಅರಮನೆಗೆ ಹೋಗುತ್ತಾಳೆ. ಯುದ್ಧದಲ್ಲಿ ಜನಿಸಿದ ಮಗನ ಹೆಸರನ್ನು 'ರಕ್ತಸುರ' ಎಂದು ಕರೆಯುತ್ತಾಳೆ. ಯಮನಂದಗಿರಿರಾಜ ತನ್ನ ಅಧಿಕಾರವನ್ನು ಮಗನಿಗೆ ಒಪ್ಪಿಸಿ, ಹೆಂಡತಿ ಕೃಷ್ಣನೀಲವೇಣಿ ಜೊತೆಗೂಡಿ ಮೇಘರಥದಲ್ಲಿ ಕೈಲಾಸಕ್ಕೆ ಹೋಗುತ್ತಾರೆ.

**ವಿಶ್ಲೇಷಣೆ**

ಬಾಲಗಿರಿರಾಜನ ಕಥನದ ಪಠ್ಯವನ್ನು ಅವಲೋಕಿಸಿದಾಗ ಕಥನದಲ್ಲಿ ಬರುವ ಪಾತ್ರಗಳು, ಕಥನದ ನಿರೂಪಣೆ, ಕಥನತಂತ್ರವು ವಡ್ಡಾರಾಧನೆಯ ಕಥಾತಂತ್ರವನ್ನು ನೆನಪಿಸುತ್ತದೆ. ಹೆಣ್ಣಿಗಾಗಿ ಪಡುವ ಶ್ರಮ, ಆತನ ಶೌರ್ಯ ಸಾಹಸವನ್ನು ಈ ಕಥನದ ಬಾಲಗಿರಿರಾಜ ಪಾತ್ರದಲ್ಲಿ ಕಾಣುತ್ತೇವೆ. ಹಾಗೆಯೇ ಪದ್ಮರಾಣಿಯ ಪತಿಭಕ್ತಿಯು ಸತಿ ಸಾವಿತ್ರಿಯನ್ನು ನೆನಪಿಸುತ್ತದೆ. ಸ್ತ್ರೀ ಧರ್ಮ ಸಂಪ್ರದಾಯದ ಪ್ರಾಮುಖ್ಯತೆ

ಮುಖ್ಯವಾಗಿ ಕಂಡುಬರುತ್ತದೆ. ಕತೆಯಲ್ಲೇ ಕತೆ ಹುಟ್ಟಿಸಿ ಗಿಳಿಗಳ ಮೂಲಕ ಕತೆ ಹೇಳಿಸುವ ತಂತ್ರ ಮನೋಜ್ಞವಾಗಿದೆ. 'ಮಲಯಾಳಂನ ಹದಿನಾರನೆಯ ಶತಮಾನದ ಕವಿ ತುಂಜತ್ತು ಎಳುತ್ತಚ್ಚನ್ ತನ್ನ ಮಹಾಭಾರತವನ್ನು ಗಿಳಿಗಳ ಬಾಯಿಂದ ಹೇಳಿಸುವ ತಂತ್ರವನ್ನು ಅನುಸರಿಸಿದ್ದಾನೆ. ಇದನ್ನು 'ಕಿಳಿಪಾಟ್ಟ್' ಎಂಬ ಕಾವ್ಯಪ್ರಕಾರವಾಗಿ ಗುರುತಿಸಲಾಗುತ್ತದೆ"(ಮೋಹನ ಕುಂಟಾರ್, ೨೦೦೬: ೧೮೬) ಎಂಬುದನ್ನು ನೆನಪಿಸಿಕೊಳ್ಳಬಹುದು. ಪಕ್ಷಿಗಳು ಈ ಕಥನದಲ್ಲಿ ಪ್ರಮುಖ ಪಾತ್ರ ವಹಿಸುತ್ತವೆ. ಮಹಿಭೂತರಾಜನ ಕ್ರೂರತನವನ್ನು ಸ್ವಂತ ಮಗಳಾದ ಪದ್ಮರಾಣಿಯೇ ಮೆಟ್ಟಿ ನಿಲ್ಲುತ್ತಾಳೆ. ಅವಳ ಪ್ರತಿಭಟನೆಯ ಮನೋಭಾವನೆ ಸ್ತ್ರೀಕುಲದ ಸ್ವಾತಂತ್ರ್ಯವನ್ನು ಪ್ರತಿಪಾದಿಸುತ್ತದೆ. ಬಾಲಗಿರಿರಾಜನನ್ನು ಕೊಲ್ಲಲು ಬಂದ ಮಹಿಭೂತರಾಜನನ್ನು ಮಗಳು ತುಂಬು ಗರ್ಭಿಣಿ ಇದ್ದರೂ ತಂದೆಯ ಜೊತೆ ಹೋರಾಡುತ್ತಾಳೆ. ಸಾಮಾನ್ಯವಾಗಿ ಜನಪದ ಕತೆಗಳಲ್ಲಿ ಬರುವಂತೆ ಹುಟ್ಟಿದ ಕೂಡಲೆ ಸಾಹಸ ಕೆಲಸ ಮಾಡುತ್ತಾನೆ. ಇಲ್ಲಿಯೂ ಸಹ ಪದ್ಮರಾಣಿಯ ಮಗ ಮಹಿಭೂತರಾಜನ ಸೈನ್ಯವನ್ನು ಹಾಗೂ ರಾಜನನ್ನು ಸಂಹಾರ ಮಾಡುತ್ತಾನೆ. ಇಲ್ಲಿ ತಂದೆಯನ್ನು ಮಗಳು ಕೊಲ್ಲುವುದಿಲ್ಲ. ಮೊಮ್ಮಗನಿಂದ ಕೊಲ್ಲಿಸುವ ತಂತ್ರವನ್ನು ಕಾಣಬಹುದು. ಇನ್ನು ಈ ಕಥನದಲ್ಲಿ ಬರುವ ಕುಡ್ಡಿ ಪೋಲವ್ವಳ ಪಾತ್ರವು ಕತೆ ಕೇಳುಗ ಜನರ ನಗೆಗೆ ಆಸ್ಪದ ಮಾಡಿಕೊಡುತ್ತದೆ. ಹೀಗೆ ಈ ಕಥನದಲ್ಲಿ ಬಾಲಗಿರಿರಾಜನ ಸಾಹಸಮಯ ಚಿತ್ರಣ, ಆತನ ಔದಾರ್ಯ ಹಾಗೂ ಪದ್ಮರಾಣಿಯ ಆದರ್ಶ ಸ್ತ್ರೀ ಗುಣ, ಪತಿಧರ್ಮವು ಇತ್ಯಾದಿ ಆಶಯವನ್ನು ತಿಳಿಸುತ್ತದೆ.

**ಪ್ರಾದೇಶಿಕತೆ**

ಶಂಕ್ರಮ್ಮ ಅವರಿಂದ ಸಂಗ್ರಹಿಸಿದ ಈ ಕಥನದಲ್ಲಿ ಕತೆಗಾರರ ಪರಿಸರದ ಪ್ರಾದೇಶಿಕತೆಯನ್ನು ಅಭಿವ್ಯಕ್ತಪಡಿಸಿದ್ದಾರೆ. ಪ್ರಾದೇಶಿಕ ಪದಗಳು, ತನ್ನ·ಸುತ್ತಮುತ್ತಲಿನಲ್ಲಿ ಬೆಳೆಯುವ ಕಾಳುಗಳು, ಪಕ್ಷಿಗಳು, ಹಾಸ್ಯ, ಪಾತ್ರಗಳ ಹೆಸರುಗಳು, ಕಾಲ್ಪನಿಕ ಪಟ್ಟಣಗಳೂ ಮುಂತಾದ ಸಂದರ್ಭದಲ್ಲಿ ಪ್ರಾದೇಶಿಕತೆಯ ನಿರೂಪಣೆ ಕಾಣಬಹುದು.

ಕೃಷ್ಣನೀಲವೇಣಿಯ ತಪಸ್ಸನ್ನು ಮೆಚ್ಚಿ ಪರಮಾತ್ಮನು ಮಕ್ಕಳ ಸಂತಾನದ ಫಲವನ್ನು ಕೊಡುತ್ತಾನೆ. ಫಲವನ್ನು ಸ್ವೀಕರಿಸಿದ ಮೇಲೆ ಗರ್ಭಿಣಿಯಾಗುತ್ತಾಳೆ. ಆ ಸಂದರ್ಭದಲ್ಲಿ ಅವಳ ಬಯಕೆಗಳನ್ನು ಹೇಗೆ ವ್ಯಕ್ತಪಡಿಸುತ್ತಾಳೆಂಬುದನ್ನು ಬುರ್ರಕತೆಗಾರರು ಪ್ರಾದೇಶಿಕತೆ ಹಿನ್ನೆಲೆಯಲ್ಲಿ ಕೃಷ್ಣನೀಲವೇಣಿ ಪಾತ್ರದಲ್ಲಿ ಅಭಿವ್ಯಕ್ತಿಸಿದ್ದಾರೆ. ಇಲ್ಲಿ ಸಾಮಾನ್ಯ ಗರ್ಭಿಣಿ ಹೆಣ್ಣೊಬ್ಬಳ ಬಯಕೆಗಳು ವ್ಯಕ್ತವಾಗಿವೆ.

ಒಂದು ತಿಂಗಳ ಬಾಲೆ ಒಂದೇನು ಬಗದಳ
ಅಂಗಳದಲ್ಲಿ ಇರುವ ಎಳೆ ಬಿಸಿಲು ಒಂದೇನ ಬಗದಳ
ಎರಡು ತಿಂಗಳ ಬಾಲೆ ಎರಡೇನ ಬಗದಳ
ಎಡಗೈಯಾಗ ಉಪ್ಪು ಎಳೇ ಹುಣ್ಸೆಕಾಯಿ ಬಗದಳ

ಮೂರು ತಿಂಗಳ ಬಾಲೆ ಮೂರೇನ ಬಗದಳ

ಮುಗಿಲಗ ಇರುವುದು ಮಗಿ ಮಾವಿನ ಹಣ್ಣು ಬಗಿಸ್ಯಾಳ

ನಾಲ್ಕು ತಿಂಗಳ ಬಾಲೆ ನಾಲ್ಕೆನ ಬಗದಳ

ಈ ನಾಲ್ಕು ಮಲ್ಲಿಗಿ ಹೂವ್ವ ತುರುಬಿನಗ ಇಟ್ಟಳ

ಐದು ತಿಂಗಳ ಬಾಲೆ ಐದೇನ ಬಗದಳ

ಕೊಟ್ಟಂತ ಸಾಂಬಶಿವ ಆವಿಷೆ ತುಂಬ್ಯನ

ಆರು ತಿಂಗಳ ಬಾಲೆ ಆರೇನ ಬಗದಾಳ

ಆರ್ಕದ ಅನ್ನ ಕೆನೆಮೊಸರು ಬಗಿಸ್ಯಾಳ

ಏಳು ತಿಂಗಳ ನಾರಿ ಹೇಳೇನ ಕಳ್ಯಾಳ

ಎಂಟು ತಿಂಗಳ ನಾರಿ ಕಂಟದಲ್ಲಿ ಕರಿ ಬಂದು

ಒಂಬತ್ತು ತಿಂಗಳಿಗೆ ನವಮಾಸ ತುಂಬಿ

ಹೊಟ್ಯಾಗ ಪಿಂಡಾಂಡ ತಿರುಗ್ತದ

ಒಂಬತ್ತು ತಾಸಿನಗ

ಊರು ಗದ್ದಲ ಮಾಡಿ ಕೇರಿಗದ್ದಲ ಮಾಡಿ

ಮಗ ಹ್ಯಾಂಗ ಹುಡ್ತನ

ಸಾಮಾನ್ಯ ಹೆಣ್ಣೊಬ್ಬಳು ಗರ್ಭಿಣಿಯಾಗಿದ್ದಾಗ ಯಾವ ಯಾವ ಬಯಕೆಗಳನ್ನು ಇಟ್ಟುಕೊಂಡಿರುತ್ತಾಳೆಂಬುದು ಕೃಷ್ಣನೀಲವೇಣಿ ಪಾತ್ರದ ಮೂಲಕ ಚಿತ್ರಿಸಲಾಗಿದೆ. ಬುರ್ರಕತೆಗಾರರ ಪ್ರಾದೇಶಿಕ ಪರಿಸರದ ವಿವರಗಳು ಇಲ್ಲಿ ಸೇರಿವೆ. ಸಾಮಾನ್ಯವಾಗಿ ಹೆಣ್ಣು ಗರ್ಭಿಣಿಯಾದ ಪ್ರಾರಂಭದ ದಿನಗಳಲ್ಲಿ ಬಯಕೆಗಳು ಹುಟ್ಟುತ್ತವೆ. ಮೊದಲ ತಿಂಗಳಲ್ಲಿ ಬಾಲಸೂರ್ಯನ ಬಿಸಿಲನ್ನು ಬಯಸುತ್ತಾಳೆ. ಎರಡನೇ ತಿಂಗಳಿನಲ್ಲಿ ಉಪ್ಪು ಜೊತೆಗೆ ಎಳೆ ಹುಣಸೆಕಾಯಿಯ ಹುಳಿಯನ್ನು ಬಯಸಿರುತ್ತಾಳೆ. ಮೂರನೇ ತಿಂಗಳಿನಲ್ಲಿ ಸಹ ಮಾವಿನ ಹಣ್ಣಿನ ರುಚಿಯನ್ನು ಬಯಸಿರುತ್ತಾಳೆ. ಹಾಗೆಯೇ ಹೂವುಗಳನ್ನು ಬಯಸುವುದು ಮುಂತಾದ ಬಯಕೆಗಳು ಇಲ್ಲಿ ಅಭಿವ್ಯಕ್ತವಾಗಿವೆ. 'ಆರ್ಕದ ಅನ್ನ ಕೆನೆ ಮೊಸರು ಬಗಿಸ್ಯಾಳ' ಎನ್ನುವ ಅಂಶವು 'ಆರ್ಕ' ಎನ್ನುವ ಕಾಳು ಕಥನಗಾರಳ ಪ್ರದೇಶದಲ್ಲಿ ಬೆಳೆಯುತ್ತಾರೆ. ಆ ಕಾಳು ಗರ್ಭಿಣಿಯರಿಗೆ ಕೊಡುವ ವಿಶೇಷ ಅಕ್ಕಿ ಆಗಿರುತ್ತದೆ. ಆ ಅಕ್ಕಿಯು ಅತ್ಯಂತ ರುಚಿಯಾದ ಅನ್ನವನ್ನು ನೀಡುತ್ತದೆ. ಅದರ ಜೊತೆಗೆ ಕೆನೆ ಮೊಸರು ಕೂಡಿಸಿದರೆ ಇನ್ನಷ್ಟು ರುಚಿಯನ್ನು ಕೊಡುತ್ತದೆ. ರೋಗನಿರೋಧಕ ಶಕ್ತಿ ಆ ಅಕ್ಕಿಯಲ್ಲಿ ಇರುತ್ತದೆ. ಅಂತಹ ಅಕ್ಕಿಯನ್ನು ಆರನೇ ತಿಂಗಳಿನಲ್ಲಿ ಬಯಸುತ್ತಾಳೆ. ಆ ಅಕ್ಕಿ ಗುಲಬರ್ಗಾದ ಸುತ್ತಮುತ್ತಲಿನ ಪ್ರದೇಶದಲ್ಲಿ ಬೆಳೆಯುತ್ತಾರೆ.

ಪದ್ಮರಾಣಿ ತನ್ನ ಆಯುಧಾಗಾರದೊಳಗೆ ಬಿದ್ದು ಸತ್ತ ಗಂಡನನ್ನು ಬುಟ್ಟಿಯಲ್ಲಿ ಹಾಕಿ ತಲೆ ಮೇಲೆ ಹೊತ್ತುಕೊಂಡು ಗಂಡನ ದೇಶವನ್ನು ಹುಡುಕಿಕೊಂಡು ಹೋಗುತ್ತಾಳೆ. ಅವಳ ಪತಿಭಕ್ತಿ ಮೆಚ್ಚಿ ಪರಮಾತ್ಮನು ಸತ್ತ ಗಂಡನನ್ನು ಬದುಕಿಸಲು ಬರುತ್ತಾನೆ. ಆದರೆ ಪದ್ಮರಾಣಿ ತಲೆ ಮೇಲೆ ಬುಟ್ಟಿಯಲ್ಲಿ ಇಟ್ಟುಕೊಂಡ ದೇಹದ ತುಂಡುಗಳನ್ನು ಬರೀ ಎಲುಬುಗಳಾಗಿ ಹೋಗಿರುತ್ತದೆ. ಅವಳಿಗೆ ಪರಮಾತ್ಮನು ನೀರಡಿಕೆ ಹುಟ್ಟಿಸುತ್ತಾನೆ. ಪದ್ಮರಾಣಿ ನೀರನ್ನು ಕುಡಿಯಲು ಬಾವಿಯ ಒಳಗೆ ಇಳಿದಾಗ, ಪರಮಾತ್ಮನು ಬಾಲಗಿರಿ ರಾಜನನ್ನು ಬದುಕಿಸುತ್ತಾನೆ. ನಂತರ ಪದ್ಮರಾಣಿ ಬಾಲಗಿರಿರಾಜನ ಮಧ್ಯ ಜಗಳ ಉಂಟಾದಾಗ, ಪಾರ್ವತಿ ಬಂದು ಒಟ್ಟುಗೂಡಿಸಿ ನಿಜಸ್ಥಿತಿಯನ್ನು ತಿಳಿಸುತ್ತಾಳೆ. ಪದ್ಮರಾಣಿ ಬಾಲಗಿರಿರಾಜನ ಮದುವೆಯನ್ನು ದೇವತೆಗಳೇ ಮಾಡುತ್ತಾರೆ. ಈ ಸನ್ನಿವೇಶ ಪ್ರಾದೇಶಿಕ ಹಿನ್ನೆಲೆಯಲ್ಲಿ ಚಿತ್ರಿತವಾಗಿದೆ.

ಸೋಬಾನ ಎನ್ನಿರೇ ಸೋಬಾನ ಎನ್ನಿರೇ
ಸೋಬಾನ ಎನ್ನಿ ಶಿವ ಬನ್ನಿರಿ
ಬಾಲಗಿರಿರಾಜ ಪದ್ಮರಾಣಿಯ ಶುಭಲಗ್ನ ಮಾಡ್ತರ
ಡಾಕಲೇ ಹೊಡೆದಾರವ್ವ ದಡಿಗಳು ಕಟ್ಟ್ಯಾರ
ನಿಂಬೆಯು ಹೊಡೆದು ನೆರಳಾಕ್ಯರ
ಹದಿನಾರು ಗುಂಜಗಳು ಹಂದಿರಿ ಹಾಕ್ಯಾರ
ಐರೋಣ ಕೊಡಗಳು ಅವರು ಹೊಂದಿಸೆ ಇಟ್ಯಾರ
ಸುಲಿಗಿ ಸುತ್ತ್ಯಾರ ನೀರು ಬೆರಸ್ಯಾರ
ಎಡಗಂಟು ಬಲಗಂಟು ನಡಿತಾದ ಸುಳಿಯ ಗಂಟು
ಬಡದ ಗುಡಿಯೊಳಗ ಸರಳ ದೀಪವು ಕಂಡೆ
ಆಡ್ಯಾಡಿ ಆರತಿ ಬೆಳಗಿರವ್ವ
ಗಂಗಾಸ್ನಾನಕ್ಕೆ ಹೋಗಿ ಲಿಂಗಪೂಜವ ಮಾಡಿ
ಜಂಗಮನ ಕರೆದು ಹುಣಸಿರವ್ವ
ಪಾರ್ವತಿ ಬಂದಳಲ್ಲ ಕಳಸ್ಯಾವ ಬೆಳಗ್ಯಾಳ
ವಿಷ್ಣು ಬಂದು ವಿಭೂತಿ ಹಚ್ಯಾನ
ಪರಮಾತ್ಮ ಬಂದು ಮಂಗಳ ಸೂತ್ರ ಕೊಟ್ಟನ
ಬ್ರಹ್ಮ ಬಂದು ಬ್ರಹ್ಮಗಂಟು ಹಾಕ್ಯಾನ
ಮಗನ ಕೈಯಿಂದ ಮಂಗಳ ಸೂತ್ರ ಕಟ್ಟಿಸ್ಯಾರ
ಮೂರು ದಿನ ಮಾಡ್ಯಾರ ಈ ಮುದ್ದು ಲಗ್ನ

ಮುತ್ತುಗಳ ಸ್ಯಾಸೆಮ್ಮ ವಜ್ರಗಳ ಸ್ಯಾಸೆಮ್ಮ

ನಾಲ್ಕು ದಿನಕ್ಕೆ ನಾಗೋಲಿ ಇಳಿಸ್ಯಾರ

ಹದಿನಾರು ದಿನದಗ ಹಂದರ ಇಳಿಸ್ಯಾರ

ಪಾರ್ವತಿ ಪರಮಾತ್ಮ

ಶುಭಂತಹ ಶುಭಲಗ್ನ ಮಾಡಿ

ಬಾಲಗಿರಿರಾಜ ಪದ್ಮರಾಣಿಯ ಮದುವೆಯನ್ನು ದೇವತೆಗಳೇ ಮಾಡುತ್ತಾರೆ. ಮದುವೆಯನ್ನು ದೇವತೆಗಳು ಮಾಡಿದ್ದರೂ ಕೂಡ ಮದುವೆಯ ಸಂಪ್ರದಾಯವು ಪ್ರಾದೇಶಿಕತೆಯನ್ನು ಪಡೆದುಕೊಂಡಿದೆ. ಮದುವೆಯ ಮೊದಲು ಹಂದರವನ್ನು ಹಾಕುವುದು, ಐರೋಣ ಕೊಡಗಳು ಅವರು ಹೊಂದಿಸಿ ಇಟ್ಟು, ಸುಲಿಗಿ ಸುತ್ತಿ ನೀರು ಹಾಕುವುದು ಗುಲಬರ್ಗಾ ಸುತ್ತಮುತ್ತಲಿನ ಜನರ ಸಂಪ್ರದಾಯವಾಗಿದೆ. ಐರೋಣ ಕೊಡಗಳು ಎನ್ನುವುದು ಬಾವಿಯಿಂದ ಐದು ಕೊಡಗಳಲ್ಲಿ ನೀರನ್ನು ತಂದು ಐದು ಸಣ್ಣ ಮಗಿಗಳಲ್ಲಿ ನೀರು ಹಾಕಿ ದಾರವನ್ನು ಸುತ್ತುವರು. ಒಳಗೆ ಸ್ಯಾಸೆಯನ್ನು ಬಿಡಿಸುವರು. ಮದುಮಕ್ಕಳು ಅದರ ಸುತ್ತ ತಿರುಗಿ ಮಧ್ಯದಲ್ಲಿ ಕುಳಿತ ಮೇಲೆ ಅಲ್ಲೇ ಅವರಿಗೆ ನೀರನ್ನು ಹಾಕುವ ಸಂಪ್ರದಾಯ ಇದೆ. ನಂತರ ಬಾವಿಗೆ ಹೋಗಿ ಗಂಗೆಯ ಪೂಜೆ ಮಾಡುವುದು, ಜಂಗಮರನ್ನು ಕರೆಯುವ ವಾಡಿಕೆಯೂ ಇದೆ. ಇಲ್ಲಿ ದೇವತೆಗಳೇ ಮದುವೆಯನ್ನು ಮಾಡುವುದರಿಂದ ಪಾರ್ವತಿ ಕಳಸವನ್ನು ಬೆಳಗುತ್ತಾಳೆ. ವಿಷ್ಣು ಎಲ್ಲರಿಗೆ ವಿಭೂತಿಯನ್ನು ಹಚ್ಚುವನು. ಪರಮಾತ್ಮನು ಮಂಗಳಸೂತ್ರ ಹಿಡಿದು ಗುರು ಹಿರಿಯರಿಗೆ ತೋರಿಸಿ ಕೊಡುತ್ತಾನೆ. ಬ್ರಹ್ಮನು ಬಂದು ಮದುಮಗನಿಗೆ ತಾಳಿಯನ್ನು ಕಟ್ಟಿಸುತ್ತಾನೆ. ಬ್ರಹ್ಮವಿಷ್ಣು ಶಿವ ಮೂವರ ಹೆಸರಿನಲ್ಲಿ ಮದುಮಗಳಿಗೆ ಈ ಮೂಲಕ ಸಾಕ್ಷಿಯಾಗಿ ತಾಳಿಯ ದಾರವನ್ನು ಮೂರು ಗಂಟಾಗಿ ಮದುಮಗನ ಕೈಯಿಂದ ಕಟ್ಟಿಸುತ್ತಾರೆ. 'ಮೂರು ದಿನ ಮಾಡ್ಯಾರ ಈ ಮುದ್ದು ಲಗ್ನ' ಎನ್ನುವುದು ಸಾಂಪ್ರದಾಯಕವಾಗಿ ಮೂರು ದಿನ ಕಾರ್ಯಕ್ರಮವನ್ನು ಮಾಡುತ್ತಿದ್ದರು. ಆ ಹಿನ್ನೆಲೆಯಲ್ಲಿ ಈ ಮದುವೆ ಮೂರು ದಿನ ನಡೆಯುತ್ತದೆ. ಇಲ್ಲಿ ಅಕ್ಕಿ ಕಾಳುಗಳ ಸ್ಯಾಸೆಯನ್ನು ಮಾಡುತ್ತಿಲ್ಲ. ಮುತ್ತು, ಮಾಣಿಕ್ಯಗಳನ್ನು ಸ್ಯಾಸೆಯನ್ನು ಇಡುವುದು, ಮುಂತಾದ ಸನ್ನಿವೇಶಗಳು ಪ್ರಾದೇಶಿಕ ವಿವರಗಳನ್ನು ತಿಳಿಸುತ್ತವೆ. 'ನಾಲ್ಕು ದಿವಸಕ್ಕೆ ನಾಗೋಲಿ' ಇಳಿಸೋದು ಮತ್ತು ಹದಿನಾರು ದಿನಕ್ಕೆ ಹಾಕಿದ ಹಂದರವನ್ನು ಬಿಚ್ಚುವುದು ಮುಂತಾದ ವಿವರಗಳು ಶುದ್ಧ ಗ್ರಾಮೀಣ ಪ್ರದೇಶದಲ್ಲಿ ಪ್ರಚಲಿತವಿರುವ ವಿವರಗಳೇ ಇಲ್ಲಿ ಅಭಿವ್ಯಕ್ತಗೊಂಡಿವೆ. ಮೂವತ್ತು-ನಲವತ್ತು ವರ್ಷದ ಹಿಂದೆ ಒಂದು ತಿಂಗಳತನಕ ನಡೆಯುವ ಸಾಂಪ್ರದಾಯಕ ಮದುವೆಯಲ್ಲಿ ದಿನಕ್ಕೊಂದು ಕಾರ್ಯಕ್ರಮವು ನಡೆಯುತ್ತಿತ್ತು. ಈ ವಿವರಗಳ ಹಿನ್ನೆಲೆಯಲ್ಲಿ ಮದುವೆಯ ಪ್ರಸಂಗವನ್ನು ಬುರ್ರಕಥನಗಾರರು ನಿರೂಪಿಸಿದ್ದನ್ನು ಕಾಣಬಹುದು.

ಕೆಲವು ಪಂಥಗಳನ್ನು ಗೆದ್ದರೆ ಮಗಳನ್ನು ಕೊಡುತ್ತೇನೆಂದು ಆಹ್ವಾನಿಸಿರುತ್ತಾನೆ. ಪದ್ಮರಾಣಿಯನ್ನು ಪಡೆಯಲು ಬಾಲಗಿರಿರಾಜನು ಮಾಡುವ ಯುದ್ಧದ ವರ್ಣನೆ:

ಬಳೆ ಬಳೇ ಬಳಲೇನು ಬಳರಾನು ತಾನಿ ತಂದನಿ ತಾನ....
ಕುದುರೆ ದಂಡಿನ್ಯಾಗ ಮಗ ಎಂಗ ಎಗರ್‍ಯಾನ
ಕುದುರೆ ಬಾಲ ಹಿಡಿತಾನ
ಗಿರಗಿರ ತಿರುಗುತನ
ನೆಲಕೆ ಹಾಕಿ ಬಡಿತನ
ಒಂದರ ಮೇಲೊಂದು ಹಾಕಿ
ಎದಿಮ್ಯಾಲ ಕಾಲಿಟ್ಟು
ರುಂಡಗಳು ಕೊಯ್ತನ ಚಂಡಾಡಿ ಬಿಡ್ತನ
ಬಲಕಡಿಗೆ ಕಡಿದರೆ ಎಡಕೇನ ಬರ್ತವ
ಎಡಕೇನ ಕಡಿದರೆ ಬಲಕೇನ ಬರ್ತವ
ಒಂಬತ್ತು ತಾಸಿನಗ ಒಂಬತ್ತು ಗಳಿಗಿನಗ
ಏಳು ಸಾವಿರ ದಂಡು ನಿಕಾಲ್ ಮಾಡ್ಯಾನ
ಆ ರಕ್ತದೊಳಗೇನ ಈಸಾಡಿ ಬರ್ತನ

ಬಾಲಗಿರಿ ರಾಜಕುಮಾರನು ಹೆಣ್ಣಿಗಾಗಿ ಯುದ್ಧದಲ್ಲಿ ಕಾದಾಡುತ್ತಾನೆ. ಇಲ್ಲಿ ಬಾಲಗಿರಿ ರಾಜಕುಮಾರನ ಶೌರ್ಯ, ಸಾಹಸಗಳು ಕಂಡುಬರುತ್ತವೆ. ಏಳು ಸಾವಿರ ಕುದುರೆಗಳನ್ನು ಒಬ್ಬನೇ ಕೊಲ್ಲುವ ಸನ್ನಿವೇಶವು ಅತ್ಯಂತ ಮನೋಜ್ಞವಾಗಿ ಚಿತ್ರಿತಗೊಂಡಿದೆ. ಹಿಂದೆ ರಾಜಮಹಾರಾಜರು ಮಗಳನ್ನು ಕೊಡಬೇಕಾದರೆ ಗಂಡಿನ ಶೌರ್ಯ ಸಾಹಸಗಳನ್ನು ನೋಡಿ ಕೊಡುತ್ತಿದ್ದರು. ಈ ಹಿನ್ನೆಲೆಯಲ್ಲಿ ಈ ಸನ್ನಿವೇಶ ನಿರೂಪಿತ ಗೊಂಡಿದೆ. ಆದರೆ ಇಲ್ಲಿ ಮಹಿಭೂತರಾಜನು ಬಾಲಗಿರಿರಾಜಕುಮಾರ ಎಷ್ಟೇ ಶೌರ್ಯ, ಸಾಹಸಗಳನ್ನು ತೋರಿಸಿದ್ದರೂ ತನ್ನ ಮಗಳನ್ನು ಕೊಡುವುದಿಲ್ಲ. ಇಲ್ಲಿ ಮಹಿಭೂತರಾಜನ ಕ್ರೂರ, ದುಷ್ಟತನವು ವ್ಯಕ್ತವಾಗುತ್ತದೆ.

ಮಹಿಭೂತರಾಜನು ತನ್ನ ಮಗಳ ಭದ್ರತೆಗಾಗಿ, ಅವಳ ರಕ್ಷಣೆಗಾಗಿ ಪತ್ಯೇಕವಾಗಿ ಮನೆಯನ್ನು, ವಿಶೇಷ ರೀತಿಯಲ್ಲಿ ಕಟ್ಟಿಸಿರುತ್ತಾನೆ.

ಆ ತಾಯಿ ಮನಿಹ್ಯಾಂಗ ಕಟ್ಯಾನ
ರೂಪಾಯಿ ಮೇಲೆ ರೂಪಾಯಿ ಇಟ್ಟು
ಬಿಚ್ಚು ಆಯುಧಗಳು

ಬಿಲ್ಲು ಆಯುಧಗಳು

ಆಯುಧಗಳಿಟ್ಟು ಮನಿ ಕಟ್ಯಾರ

ಏಳಂತಸ್ತು ಮಾಳಿಗಿ ಮನಿಯೊಳಗ

ಬಂಗಾರದ ಮುತ್ತಿನ ವರುಸ

ವರುಸದ ಮ್ಯಾಲೆ ಮಲ್ಲಿಗೆ ಹೂವಿನ ಹಾಸಿಗೆ

ಹಾಸಿಗೆ ಮ್ಯೇಲೆ ಚೆಂಗಿನ ಹೂವಿನ ಚಾಲು

ಮ್ಯಾಲೆ ವಚ್ಚಿಕೊಂಡು ತಾಯಿ ನಿದ್ದೆ ಮಾಡ್ತಾಳ

ರಾಜನು ತನ್ನ ಮಗಳಿಗಾಗಿ ಅರಮನೆಯನ್ನು ವಿಶಿಷ್ಟ ರೀತಿಯಲ್ಲಿ ಕಟ್ಟಿಸಿರುತ್ತಾನೆ. ಚಕ್ರವ್ಯೂಹದಂತೆ ಒಳಗೆ ಸೇರಿದರೆ ಹೊರಗೆ ಬಾರದಂತೆ ಒಳಗೆ ಪ್ರವೇಶವಾಗದಂತೆ ಸುಭದ್ರವಾಗಿ ಮನೆ ಕಟ್ಟಿಸಿರುತ್ತಾನೆ. ಬಿಲ್ಲು ಆಯುಧಗಳನ್ನು ದಾಟಿ ಒಳಗೆ ಪ್ರವೇಶ ಮಾಡಬೇಕಾದರೆ, ಆಯುಧಗಳು ಚಕ್ರಾಕಾರದಂತೆ ತಿರುಗುತ್ತದೆ. ಅವುಗಳ ಮಧ್ಯದಲ್ಲಿ ಪದ್ಮರಾಣಿ ಮಲಗಿರುತ್ತಾಳೆ. ಯಾರಾದರೂ ಒಳಗೆ ಅಪ್ಪಣೆ ಇಲ್ಲದೆ ಪ್ರವೇಶ ಮಾಡಲು ಪ್ರಯತ್ನಿಸಿದರೆ ಆಯುಧಗಳು ಕತ್ತರಿಸಿ ಹಾಕುತ್ತವೆ. ಅಂತಹ ಒಂದು ವಿಶಿಷ್ಟವಾದ ಮನೆಯನ್ನು ಮಗಳಿಗಾಗಿ ಕಟ್ಟಿಸಿರುತ್ತಾನೆ. ರಾಜನು ತನ್ನ ಮಗಳಿಗಾಗಿ ಕಟ್ಟಿಸಿರುವ ಮನೆ ಅವಳ ಭದ್ರತೆಯ ಅಂಶವನ್ನು ಪ್ರತಿನಿಧಿಸುತ್ತದೆ.

**ಶೋಕ**

ದನದ ಕಟುಕರ ಪದ್ಮರಾಣಿಯನ್ನು ಜೀರ್ಲನಾಗಮ್ಮ ಹೂವಿನ ತೋಟದಿಂದ ಎತ್ತಿಕೊಂಡು ಬಾಲಗಿರಿರಾಜನ ತೋಟದ ಮನೆಗೆ ಬರುತ್ತಿರುತ್ತಾರೆ. ಪೋಲವ್ವನ ಕುತಂತ್ರದಿಂದ ಬಾಲಗಿರಿರಾಜನು ಕಟುಕರಿಗೆ ಅವಳನ್ನು ಅಲ್ಲೇ ಕಡಿದು ಬರಲು ಹೇಳುತ್ತಾನೆ. ಆಗ ದನದ ಕಟುಕರು ದೆವ್ವದ ಕಲ್ಪನೆಯ ಪದ್ಮರಾಣಿಯನ್ನು ಬಾಲಗಿರಿರಾಜನ ಕಡೆಗೆ ಎತ್ತಿಕೊಂಡು ಹೋಗಿ ರಾಜನ ಅಪ್ಪಣೆಯ ಮೇರೆಗೆ ದನಗಳನ್ನು ಕಡಿಯುವ ಬಂಡೆಗೆ ಎತ್ತಿಕೊಂಡು ಹೋಗಿ ಕಡಿಯಲು ತಯಾರಾಗಿ 'ನೆನಸಮ್ಮ ನಿನ್ನ ತಾಯಿತಂದಿನ ಎನ್ನುತ್ತಾರೆ' ನೆನಸಮ್ಮ ನಿನ್ನ ದೇವರನ್ನ' ಎಂದು ಹೇಳುತ್ತಾರೆ. ಆಗ ಪದ್ಮರಾಣಿ 'ತಾಯಿಗೆ ನೆನಸಲಿಲ್ಲ ತಂದೆಗೆ ನೆನ್ಸಲಿಲ್ಲ' ಮತ್ತು 'ದೇವ್ರುಗೆ ನೆನಸಲಿಲ್ಲ' ಅವಳು ತನ್ನ ಗಂಡನಾದ ಬಾಲಗಿರಿರಾಜನನ್ನು ಮಾತ್ರ ನೆನೆಸಿ ದುಃಖಪಡುತ್ತಾಳೆ.

ಸಣ್ಣ ಬಾಲಗಿರಿರಾಜ

ದನದ ಕಟುಕರ ಕೈಗೆ ನನ್ನ ಕೊಟ್ಟೆ

ನಿನ್ನ ಮೊಕ್ಷ ನನಗೆ ಹೋಗಲಿಲ್ಲ

ನನ್ನ ಮೋಚಾರ ನಿನಗೆ ಹೋಗಲಿಲ್ಲ

ಅದ್ನು ಮುದ್ನು ಅಡವಿ ಪಾಲಾಯ್ತು

ನಿನಗ ನನಗೆ ಋಣಾನುಬಂಧ ಈಟೆ ಇದ್ದಿದಾದ

ಬಾಲಗಿರಿರಾಜನ ಧ್ಯಾನ ಮಾಡುತಾಳ

ಪದ್ಮರಾಣಿ ದುಃಖ ಮಾಡ್ತಳ

'ಪದ್ಮರಾಣಿ' ಎಂದು ತಿಳಿಯದೆ 'ದೆವ್ವ' ಎಂದು ತಿಳಿದುಕೊಂಡ ಬಾಲಗಿರಿರಾಜನು ಕುಡ್ಡಿ ಪೋಲವ್ವಳ ಹೇಳಿಕೆಯಂತೆ ಕಟುಕರಿಗೆ ಕೊಲ್ಲಲು ಹೇಳುತ್ತಾಳೆ. ಕಟುಕರು ಕಡಿಯುವ ವೇಳೆಯಲ್ಲಿ 'ತಾಯಿ ತಂದೆ' ದೇವರನ್ನು ನೆನೆಸು ಎಂದರೆ, ಪದ್ಮರಾಣಿಯು ತನ್ನ ಪತಿಭಕ್ತಿಯಿಂದ ತಾಯಿ ತಂದೆಯನ್ನು, ದೇವರನ್ನು ನೆನೆಯದೆ ತನ್ನ ಗಂಡ ಬಾಲಗಿರಿರಾಜನನ್ನು ನೆನೆಯುತ್ತಾಳೆ. ಅವಳ ಅಂತರಾಳದಲ್ಲಿ ದುಃಖವು ಮಡುಗಟ್ಟಿ ಶೋಕ ವ್ಯಕ್ತವಾಗುತ್ತದೆ. 'ನನ್ನನ್ನು ದನದ ಕಟುಕರ ಕೈಗೆ ಕೊಟ್ಟು ಕೊಲ್ಲಲು ಹೇಳಿದೆ'. ನನ್ನ ನಿನ್ನ ಪ್ರೀತಿ ಹೊಗಲಿಲ್ಲ, ನಮ್ಮ ಪ್ರೀತಿಯು ಅಡವಿ ಪಾಲಾಯ್ತು ಎಂದು ಹಲುಬುತ್ತಾಳೆ. ನಿನಗ ನನಗ ಇಷ್ಟೆ ಋಣಾನುಬಂಧ' ಎಂದು ಶೋಕ ತಪ್ತಳಾಗಿ ಅವಳು ಬಾಲಗಿರಿರಾಜನನ್ನು ನೆನೆದು ಅಳುತ್ತಾಳೆ. ಸ್ತ್ರೀಗೆ ಪತಿಯೇ ದೇವರು ತಾಯಿ-ತಂದೆ, ದೇವರು ಮುಖ್ಯವಲ್ಲ. ಪತಿಯಿಂದಲೇ ತನಗೆ ಮುಕ್ತಿ ಎಂಬ ಭಾವ ಈ ಸನ್ನಿವೇಶದಲ್ಲಿ ಕಂಡುಬರುತ್ತದೆ.

ಬಾಲಗಿರಿರಾಜನು ಸಹ ಅನೇಕ ಕಷ್ಟಗಳನ್ನು ಅನುಭವಿಸುತ್ತಾನೆ. ಯಮನಂದಗಿರಿ ಪಟ್ಟಣದ ಮುಂದೆ ತೋಟದಲ್ಲಿ ತಾನು ಕಟ್ಟಿಸಿದ ಹೊಸ ಮನೆಯ ಕೋಣೆಯಲ್ಲಿ ಪೋಲವ್ವಳನ್ನು ಬಿಟ್ಟು ಒಬ್ಬನೇ ಪ್ರತ್ಯೇಕ ವಾಗಿ ಇರುತ್ತಾನೆ. ಅಲ್ಲಿ ಪದ್ಮರಾಣಿಯನ್ನು ನೆನೆದು ದುಃಖಪಡುತ್ತಾನೆ.

ಬಾಲಗಿರಿರಾಜ

ಕಚೇರಿದೊಳಗ ಕುಂತಲ್ಲಿ

ಪದ್ಮರಾಣಿ ಧ್ಯಾನ ಮಾಡ್ತಾನ

ರಾಜಕುಮಾರ ದುಃಖ ಮಾಡ್ತಾನ

ಎಲ್ಲಿಗೋದಿ ಪದ್ಮರಾಣಿ

ನನ್ನ ಜೀವ ಹೋಗ್ತಾದ

ಪಾಂಡವರಂತ ವನವಾಸ

ಗಂಡಹೆಂಡತಿ ವನವಾಸ ಮಾಡುತಿವಲ್ಲ

ಇಂಥ ವನವಾಸ ನಮಗ ಇರಬಾರದು

ಪದ್ಮರಾಣಿ ಧ್ಯಾನ ಮಾಡಿ ದುಃಖ ಮಾಡ್ತಾನ

ಇಲ್ಲಿ ಬಾಲಗಿರಿರಾಜಕುಮಾರನು ಸಹ ತನ್ನ ಮನೆಯಲ್ಲಿ ಕುಳಿತುಕೊಂಡು ತನ್ನ ಹೆಂಡತಿ 'ಪದ್ಮರಾಣಿ'ಯನ್ನು ನೆನೆದು ದುಃಖ ಮಾಡುತ್ತಾನೆ. ಪುರುಷ ಪಾತ್ರದಲ್ಲಿ ಸಹ ಶೋಕದ ಭಾವ ವ್ಯಕ್ತವಾಗಿದೆ. ಗಂಡನು ಸಹ ತನ್ನ ಹೆಂಡತಿಯ ಮೇಲಿನ ಪ್ರೀತಿಯನ್ನು ತೋರಿಸುತ್ತಾನೆ. ಗಂಡ-ಹೆಂಡತಿಯರಲ್ಲಿ ಒಬ್ಬರ ಕಷ್ಟದಲ್ಲಿ ಇನ್ನೊಬ್ಬರು ಭಾಗಿಯೆಂಬುದು ತಿಳಿಯುತ್ತದೆ. ಗಂಡ-ಹೆಂಡತಿಯ ಅನನ್ಯತೆಯ ಜೀವನ ವಿಧಾನವು ಕಾಣಸುತ್ತದೆ. ಪದ್ಮರಾಣಿಯಂತೆ ಬಾಲಗಿರಿರಾಜನು ಸಹ ಹುಟ್ಟಿಸಿದ ತಾಯಿ-ತಂದೆಯನ್ನು ನೆನೆಯದೆ ದೇವರನ್ನು ನೆನೆಯದೆ ತನ್ನ ಹೆಂಡತಿ ಪದ್ಮರಾಣಿಯನ್ನು ನೆನೆದು ತನ್ನ ಕಷ್ಟ, ನೋವನ್ನು ಶೋಕದ ಮೂಲಕ ವ್ಯಕ್ತಪಡಿಸುತ್ತಾನೆ. ಇಂಥ ಶೋಕದ ಸನ್ನಿವೇಶವು ತನ್ನ ತಂದೆ ಯಮನಂದಗಿರಿರಾಜ ಬಂದೂಕಿನಿಂದ ಕೊಲ್ಲಲು ತಯಾರಾದಾಗ ಪದ್ಮರಾಣಿಯನ್ನೇ ನೆನೆಯುವುದನ್ನು ಕಾಣುತ್ತೇವೆ. ಮುಖ್ಯವಾಗಿ ಇಲ್ಲಿ 'ಸತಿ-ಪತಿ'ಯರ ಭಾವವು ವ್ಯಕ್ತವಾಗುತ್ತದೆ.

### ಮಾನವೀಯ ಮೌಲ್ಯಗಳು

ಜನಪದ ಸಾಹಿತ್ಯ ಅಥವಾ ಕಥನಗಳಲ್ಲಿ ಜನರ ಬದುಕಿನ ಚಿತ್ರಣವನ್ನು ಕಾಣಬಹುದು. ಬಾಲಗಿರಿರಾಜನ ಕತೆಯಲ್ಲಿ ಮಾನವರ ಬದುಕಿನ ಅನೇಕ ಆಶಯಗಳು ಕಾಣಸುತ್ತವೆ. ಕಥನಗಾರರು ಮುಖ್ಯವಾಗಿ ಸಾಮಾಜಿಕ ಮೌಲ್ಯವನ್ನು ಎತ್ತಿಹಿಡಿದು, ಸಾಮಾನ್ಯ ಜನರು ಒಪ್ಪಿಕೊಂಡ ವೈಯಕ್ತಿಕ ಹಾಗೂ ಸಾಮಾಜಿಕ ಮೌಲ್ಯಗಳನ್ನು ತಮ್ಮ ಹಾಡುಗಳಲ್ಲಿ ಅಭಿವ್ಯಕ್ತಿಸಿರುತ್ತಾರೆ. ವೈಯಕ್ತಿಕ ಮೌಲ್ಯ ತನ್ನ ಸ್ವಂತ ಕುಟುಂಬಕ್ಕೆ ಸಂಬಂಧಿಸಿದ್ದು ಸಾಮಾಜಿಕ ಮೌಲ್ಯವು ಸಾಮಾನ್ಯ ಜನರ ಸಂಪ್ರದಾಯ, ಆದರ್ಶಗಳಿಗೆ ಸಂಬಂಧಿಸಿದೆ. ಹೀಗಾಗಿ ಈ ಕಥನದಲ್ಲಿ ಸಾಮಾಜಿಕ ಮೌಲ್ಯದ ಆದರ್ಶಮಯ ಅಂಶವು ಬಾಲಗಿರಿರಾಜನ ಪಾತ್ರದಲ್ಲಿ ಕಂಡುಬರುತ್ತದೆ. ಹಾಗೆ ಸಾಮಾಜಿಕ ಮೌಲ್ಯಕ್ಕಾಗಿ ವೈಯಕ್ತಿಕ ಮೌಲ್ಯವನ್ನು ಬಲಿ ಕೊಡುವುದನ್ನು ಕಾಣುತ್ತೇವೆ. ಆದರೆ ಮಹಿಭೂತರಾಜನ ಪಾತ್ರದಲ್ಲಿ ಸಾಮಾಜಿಕ ಮೌಲ್ಯ ಬಲಿ ಕೊಟ್ಟು ವೈಯಕ್ತಿಕ ಮೌಲ್ಯಕ್ಕೆ ಮನ್ನಣೆ ನೀಡಿದ್ದನ್ನು ಕಾಣುತ್ತೇವೆ. ಪದ್ಮರಾಣಿ ಬಾಲಗಿರಿರಾಜನ ಪಾತ್ರಗಳಲ್ಲಿ ಸಾಮಾಜಿಕ ಮೌಲ್ಯಗಳು ಕಂಡುಬಂದರೆ, ಮಹಿಭೂತರಾಜನಲ್ಲಿ ವೈಯಕ್ತಿಕ ಮೌಲ್ಯವು ಕಂಡುಬರುತ್ತದೆ. ಪದ್ಮರಾಣಿಯ ಆದರ್ಶಗುಣ, ಪತಿವ್ರತಾ ಧರ್ಮ ಕಂಡುಬಂದು, ತಂದೆಯನ್ನು ಮೆಟ್ಟಿನಿಂತ ಸಾಮಾಜಿಕ ಮೌಲ್ಯವನ್ನು ಎತ್ತಿ ಹಿಡಿಯುವುದು ಮುಂತಾದ ಅಂಶಗಳು ಕಥನದಲ್ಲಿ ನಿರೂಪಣೆಗೊಂಡಿವೆ.

ಬಾಲಗಿರಿರಾಜನು ಮಹಿಭೂತರಾಜ ಒಡ್ಡಿದ ಎಲ್ಲಾ ಪಂಥಗಳನ್ನು ಗೆಲ್ಲುತ್ತಾನೆ. ಕೊನೆಗೆ ರಾಜನ ತಮ್ಮಂದಿರನ್ನು ಕೊಲ್ಲುತ್ತಾನೆ. ಆದರೂ ಸಹ ಮಹಿಭೂತರಾಜನು ತನ್ನ ಮಗಳನ್ನು ಮದುವೆ ಮಾಡಿಕೊಡದೆ, ತನ್ನ ವೈಯಕ್ತಿಕ ಹಿತಾಸಕ್ತಿಯಿಂದ, ತನ್ನ ವೈಯಕ್ತಿಕ ಮೌಲ್ಯವನ್ನು ಗೆಲ್ಲುವುದಕ್ಕಾಗಿ ಬಾಲಗಿರಿರಾಜನಿಗೆ ಅಂಜಿಕೊಂಡು ಅಡಿಗೆ ಮನೆಯಲ್ಲಿ ಅಡಗಿಕೊಳ್ಳುತ್ತಾನೆ. ಆರು ಮಂದಿ ತಮ್ಮಂದಿರನ್ನು ಕೊಲ್ಲುವುದನ್ನು ನೋಡಿದ ಮಹಿಭೂತರಾಜನ ತನ್ನ ಹೆಂಡತಿ ಸೂರ್ಯವತಿಗೆ ಹೇಳುತ್ತಾನೆ. ಬಾಲಗಿರಿರಾಜನು ಎಲ್ಲರನ್ನು

ಸಂಹಾರ ಮಾಡಿ ನಮ್ಮ ಹತ್ತಿರ ಬರಬಹುದು ಎಂದು ಹೇಳಿ ಅರಮನೆಯ ಅಡಿಗೆಯ ಕೋಣೆಯಲ್ಲಿ ಅಡಗಿಕೊಂಡು ಕುಳಿತುಕೊಳ್ಳುತ್ತಾನೆ.

ಭಾಮ ಸೂರ್ಯವತಿ
ಮಗ ಲಡಾಯಿ ಹೆಚ್ಚೆ ಮಾಡಿ ಬರ್‍ತಾನ
ಹೆಣ್ಣು ಕೊಡು ಮಾವ ಅಂತಾನ
ಕೊಡು ಅಂತ ನಾಲಗೆಗೆ ಬರಾದಿಲ್ಲ
ಇಂತ ಲಡಾಯಿಗಿ ಹೆಣ್ಣು ಕೊಡಲ್ಲ ಅಂತೀನಿ
ಆ ಸಿಟ್ಟಿನೊಳಗೆ ಸುಮ್ಮನಿರುವುದಿಲ್ಲ
ಇಬ್ಬರು ಗಂಡ ಹೆಣ್ತೇನ
ಒಂದೆಲ್ಲ ಹಾಕಿ ನಮ್ಮ ರುಂಡಗಳು ತೆಗಿತಾನ
ಮಗಳು ತಗೊಂಡು ಹೋಗ್ತಾನ
ಇದಕ ನಾವೇನು ಉಪಾಯ ಮಾಡಬೇಕು
ಗಂಡ ಹೆಂಡತಿ ಇಬ್ಬರು ಕೂಡಿಕೊಂಡು
ಏಳಂತಸ್ತಿನ ಮ್ಯಾಳಿಗಿ ಇಳಿದು
ಅಡಗಿಕೊಂಡು ಕೂಡೋಣ

ಎಂದು ತನ್ನ ಹೆಂಡತಿಗೆ ಮಹಿಭೂತರಾಜ ಹೇಳುತ್ತಾನೆ. ಇಲ್ಲಿ ಮೌಲ್ಯಗಳ ಸಂಘರ್ಷ ಕಾಣುತ್ತದೆ. ಒಂದು ಕಡೆ ವೈಯಕ್ತಿಕ ಮೌಲ್ಯವು ಪ್ರತಿನಿಧಿಸಿದರೆ, ಇನ್ನೊಂದು ಕಡೆ ಸಾಮಾಜಿಕ ಮೌಲ್ಯ ಪ್ರತಿನಿಧಿಸುತ್ತದೆ. ಮಹಿಭೂತರಾಜನು ಸ್ವಹಿತಕ್ಕಾಗಿ ವೈಯಕ್ತಿಕ ಹಿತಾಸಕ್ತಿಯಿಂದ, ತಾನು ಆಹ್ವಾನಿಸಿದ ಎಲ್ಲಾ ಯುದ್ಧಗಳಲ್ಲಿ ಬಾಲಗಿರಿರಾಜಕುಮಾರನು ಗೆದ್ದಿದ್ದರೂ ಕೂಡ ತನ್ನ ಮಗಳನ್ನು ಕೊಡದೆ ಹೆಂಡತಿ ಜೊತೆಗೂಡಿ ಅಡಿಗೆ ಮನೆಯಲ್ಲಿ ಅಡಗಿಕೊಳ್ಳುತ್ತಾರೆ. ಆದರೆ ಬಾಲಗಿರಿರಾಜಕುಮಾರನ ತಾಳ್ಮೆ, ಆದರ್ಶ ವ್ಯಕ್ತಿತ್ವವು ಕಂಡುಬಂದು ಆತನು ಕೊನೆಯ ತನಕ ಮಾನವೀಯ ಮೌಲ್ಯವನ್ನು ಪರಿಪಾಲಿಸುತ್ತಾನೆ.

ಬಾಲಗಿರಿರಾಜನು ತನ್ನ ಮಾವ ಅಡಿಗೆ ಮನೆಯಿಂದ ಹೊರಗೆ ಬರಲೆಂದು ಮಹಿಭೂತರಾಜನ ಆಸ್ಥಾನದಲ್ಲಿ ಕುಳಿತುಕೊಂಡು ಕಾಯುತ್ತಾನೆ. ಅವನು ಹೊರಗೆ ಬರುವುದೇ ಇಲ್ಲ. ಅಂತಹ ಸಂದರ್ಭದಲ್ಲಿ ಮಹಿಭೂತ ಪಟ್ಟಣದ ಸ್ತ್ರೀಯರು ಬಂದು, ಮಹಿಭೂತರಾಜನ ಕ್ರೂರತನವನ್ನು ಖಂಡಿಸಿ, ಬಾಲಗಿರಿರಾಜ ಕುಮಾರನಿಗೆ ಬುದ್ಧಿಮಾತುಗಳನ್ನು ಹೇಳಿ ತನ್ನ ನಾಡಿಗೆ ಹೋಗಲು ತಿಳಿಸಿಕೊಡುತ್ತಾರೆ. ಇಲ್ಲಿ ಸ್ತ್ರಿಯರು ಮಾನವೀಯತೆಯನ್ನು ಮೆರೆಯುತ್ತಾರೆ. ಪಟ್ಟಣದಲ್ಲಿ ಹೆಣ್ಣುಮಕ್ಕಳೆಲ್ಲ ನೋಡಿ, ಬಾಲಗಿರಿರಾಜನಿಗೆ, 'ನಿನ್ನ ಉಸುರು ಅವನಿಗೆ ಹತ್ತಲಿ' 'ನಿನ್ನ ಕಣ್ಣೀರು ಅವನಿಗೆ ಹತ್ತಲಿ' ಎಂದು ಹೇಳುತ್ತ, 'ನೀನು ಮಾಡಿದ

ಕಷ್ಟ ನಿನ್ನ ಕೈಗೆ ಹತ್ತಲಿಲ್ಲ' ಎಂದು ಹೆಣ್ಣುಮಕ್ಕಳು ಅಂತಃಕರಣದ ಭಾವವನ್ನು ತೋರಿಸುತ್ತಾರೆ. ಮುಂದುವರಿದು ಅವನು ಕೊಡಲಾರದ ಶೆಟ್ಟಿ, ನೀನ ಬಿಡಲಾರದ ಜಟ್ಟಿ' ಎಂದು

ಯಾಕ ಕುಂದುರ್ತಿ
ಬಂದುದ ದಾರಿ ಹಿಡಿದುಕೊಂಡು
ನಿಮ್ಮ ಪಟ್ನಕ ಹೊರಟು ಹೋಗು
ನಿನ್ನ ತಾಯಿ-ತಂದೆ ದಾರಿ ನೋಡ್ತಾರ
ನಿನ್ನ ಬಂದು ಬಳಗ ದಾರಿ ನೋಡ್ತಾರ
ಹೋಗಪ್ಪ ಮಗ ಅಂತ ಬುದ್ಧಿ ಹೇಳ್ತಾರ

ಬಾಲಗಿರಿರಾಜನು ಹೆಣ್ಣುಮಕ್ಕಳ ಮಾತನ್ನು ಕೇಳಿ ತನ್ನ ನಾಡಿಗೆ ಹೋಗಲು ಸಿದ್ಧನಾಗುತ್ತಾನೆ. ಪಟ್ಟಣದ ಹೆಣ್ಣುಮಕ್ಕಳು ಬಾಲಗಿರಿರಾಜನಕುಮಾರನ ಕಷ್ಟವನ್ನು ಕಂಡು, ಮಹಿಭೂತರಾಜನ ಅರಮನೆಯಿಂದ ಹೊರಗೆ ಬಾರದಿದ್ದನ್ನು ಕಂಡು ಶಪಿಸುತ್ತಾರೆ. ಇಲ್ಲಿ ಪಟ್ಟಣದ ಸ್ತ್ರಿಯರ ಅಂತಃಕರಣ, ವಾತ್ಸಲ್ಯ, ಮಾನವೀಯ ಗುಣಗಳು ಕಂಡುಬರುತ್ತವೆ. ಅದಕ್ಕಾಗಿ ಬಾಲಗಿರಿರಾಜನಿಗೆ, ಅವನು ಕೊಡಲಾರದ ಶೆಟ್ಟಿ, ನೀನು ಬಿಡಲಾರದ ಜಟ್ಟಿ, ಎಂದರೆ ಅವನು ಶೆಟ್ಟಿಯಂತೆ ಬೇರೆಯವರದನ್ನು ಪಡೆದುಕೊಳ್ಳುವನು, ತನ್ನದನ್ನು ಕೊಡಲಾರದವನು ಎಂದು ಹೇಳುತ್ತಾರೆ. ಹಾಗೆಯೇ ನೀನು ಅದನ್ನು ಪಡೆದೇ ತೀರುವೆ ಎಂಬ ಗುಣವನ್ನು ಹೊಂದಿದ ಜಟ್ಟಿಯಾಗಿದ್ದಿ ಎಂದು ಅವರ ಗುಣಗಳನ್ನು ವ್ಯಕ್ತಪಡಿಸುತ್ತಾರೆ. ತಾಯಿ-ತಂದೆ ಬಂಧುಬಳಗವು ನಿನ್ನ ದಾರಿಯನ್ನು ಕಾಯುತ್ತಾರೆ ಎಂದು ಅವರು ತಾಯಿ-ತಂದೆಯುರ ವಾತ್ಸಲ್ಯವನ್ನು ನೆನಪಿಸುತ್ತಾರೆ. ಹೀಗಾಗಿ ರಾಜಕುಮಾರನಿಗೆ ತನ್ನ ನಾಡಿಗೆ ಹೋಗಲು ಬುದ್ಧಿಮಾತುಗಳನ್ನು ಹೇಳುತ್ತಾರೆ. ಇಡೀ ಪಟ್ಟಣವೇ ಬಾಲಗಿರಿರಾಜಕುಮಾರನಲ್ಲಿ ಅಂತಃಕರಣ ಭಾವವನ್ನು ವ್ಯಕ್ತಪಡಿಸುತ್ತದೆ. ಇಲ್ಲಿ ಮಹಿಭೂತರಾಜನ ವೈಯಕ್ತಿಕ ಮೌಲ್ಯ, ಪುರಜನರ, ಮಹಿಳೆಯರ ಮಾನವೀಯ ಮೌಲ್ಯ, ಸಾಮಾಜಿಕ ಕಳಕಳಿ ಕಂಡುಬರುತ್ತದೆ. ಇಂತಹ ಮಾನವೀಯ ಮೌಲ್ಯಗಳು ಜೀರ್ಲನಾಗಮ್ಮ ಕುಡ್ಡಿ ಈರಣ್ಣನ ಪಾತ್ರಗಳಲ್ಲೂ ಕಂಡುಬರುತ್ತದೆ.

ಪದ್ಮರಾಣಿಯ ಪಾತ್ರದಲ್ಲಿ ಆಕೆಯ ಪತಿವ್ರತಾಧರ್ಮ, ಆದರ್ಶಗುಣ, ಸಂಪ್ರದಾಯ, ಸ್ತ್ರೀಧರ್ಮ, ಪ್ರೀತಿಸಿದವನಿಗಾಗಿ ತಂದೆಯ ವಿರುದ್ಧ ಬಂಡಾಯ ಮುಂತಾದ ಮೌಲ್ಯಗಳನ್ನು ಕಾಣುತ್ತೇವೆ. ಬಾಲಗಿರಿರಾಜ ತನ್ನ ಆಯುಧಗಾರದಲ್ಲಿ ಬಿದ್ದು ಜೀವ ಕೊಟ್ಟಾಗ, ಆತನ ದೇಹದ ಭಾಗಗಳನ್ನು ತನ್ನ ಉಡಿಯಲ್ಲಿ ಹಾಕಿಕೊಂಡು ಸತ್ತ ಬಾಲಗಿರಿರಾಜನ ಜೊತೆ ಮದುವೆ ಮಾಡಬೇಕೆಂದು ತಂದೆಯನ್ನು ಕೇಳುವ ಸನ್ನಿವೇಶ ಕಂಡರೆ, ಅವಳಲ್ಲಿ ಹುದುಗಿರುವ ಪತಿವ್ರತಾ ಧರ್ಮವು ಸತಿ ಅನುಸೂಯಳ ಪತಿಭಕ್ತಿಯನ್ನು ನೆನಪಿಸುತ್ತದೆ. ಪದ್ಮರಾಣಿ ಎದೆಯ ಮೇಲೆ ಬಾಲಗಿರಿರಾಜನ ರುಂಡವು ಕತ್ತರಿಸಿ ಬಿದ್ದಾಗ ಅವಳಿಗೆ ಎಚ್ಚರವಾಗಿ ಎದ್ದು ರಾಜಕುಮಾರನ ದೇಹದ ಭಾಗಗಳನ್ನು ಕಾಣುತ್ತಾಳೆ.

ರುಂಡ ಡಿಂಭ ಕಾಲು ಕೈ

ಎಲ್ಲ ಆರಿಸಿ ಮುಂದ ಇಟಕೊಂಡು

ಏನಂತ ದುಃಖ ಮಾಡ್ತಾಳ

ಏನಯ್ಯ ರಾಜ

ನಿನ್ನ ತಾಯಿತಂದೆ ಎಷ್ಟು ದುಃಖ ಮಾಡ್ತಾರ

ನನ್ನ ಊರಿಗೆ ಬಂದು ಹನ್ನೆರಡು ವರ್ಷವಾಯ್ತು

ಲಡಾಯಿ ಹೆಚ್ಚೆ ಮಾಡಿದರೆ

ನಮ್ಮಪ್ಪ ಕೈ ಮುಟ್ಟಿ ಕೊಡಲಿಲ್ಲ

ಲಗ್ನ ಮಾಡಲಿಲ್ಲ

ಲಾಸ್ಟಿಗೆ ನನ್ನ ಆಯುಧದೊಳಗೆ ಬಿದ್ದು ಸತ್ತಿದಲ್ಲ

ನಮ್ಮ ಮೋಚಾರ ಹೋಗಲಿಲ್ಲ

ನಮ್ಮ ಅದುಮುದ್ದು ಅಡವಿ ಪಾಲಾಯ್ತು

ಗಂಡನ ಹುಡ್ಯಾಗ ಕಟ್ಟಿಕೊಂಡು

ಏಳಂತಸ್ತು ಮಾಳಿಗಿ ಇಳಿದು

ತಂದಿಯ ಕಚೇರಿಗೆ ಬಂದು

ತಂದೆಗೆ ನಮಸ್ಕಾರ ಮಾಡೆಳಲ್ಲ

ಪದ್ಮರಾಣಿ ಬಾಲಗಿರಿರಾಜನ ದೇಹದ ಭಾಗಗಳನ್ನು ಉಡಿಯಲ್ಲಿ ಕಟ್ಟಿಕೊಂಡು ತಂದೆಯ ಆಸ್ಥಾನಕ್ಕೆ ಬಂದು ನಮಸ್ಕಾರ ಮಾಡುತ್ತಾಳೆ. ಸತ್ತ ಬಾಲಗಿರಿರಾಜಕುಮಾರನ ಜೊತೆ ಮದುವೆ ಮಾಡಿ ಕಳುಹಿಸಬೇಕೆಂದು ಕೇಳಿಕೊಳ್ಳುತ್ತಾಳೆ. ಪದ್ಮರಾಣಿ ಮೊದಲು ಸತ್ತ ಬಾಲಗಿರಿರಾಜನ ದೇಹದ ತುಂಡುಭಾಗಗಳನ್ನು ಆರಿಸಿಕೊಂಡು ಅದನ್ನು ನೋಡಿ ತನ್ನ ದುಃಖವನ್ನು ವ್ಯಕ್ತಪಡಿಸುತ್ತಾಳೆ. ನಿನ್ನ ತಾಯಿ ತಂದೆ ಎಷ್ಟು ದುಃಖ ಮಾಡ್ತಾರ ಎನ್ನುವ ಅವಳ ಮಾತಿನಲ್ಲಿ ಮಾನವೀಯ ಗುಣಗಳು ಅಭಿವ್ಯಕ್ತಗೊಂಡಿದೆ. ಪದ್ಮರಾಣಿಯು ಬಾಲಗಿರಿರಾಜ ಕುಮಾರನ ಮೇಲೆ ಪ್ರೀತಿ, ವಿಶ್ವಾಸ, ಪತಿವ್ರತ ಧರ್ಮ, ಇದ್ದುದರಿಂದ ತನ್ನ ತಂದೆಯ ಕ್ರೂರತನವನ್ನು ಖಂಡಿಸುತ್ತಾಳೆ. ಹಾಗೆ ಸತ್ತ ಬಾಲಗಿರಿರಾಜಕುಮಾರನ ಜೊತೆ ಮದುವೆ ಮಾಡಬೇಕೆಂದು ಕೇಳಿಕೊಳ್ಳುತ್ತಾಳೆ. ತಂದೆ ಬೇಡ ಎಂದು ತಿರಸ್ಕರಿಸಿದರೂ ಕೂಡ ತಂದೆಯ ಮಾತುಗಳನ್ನು ಪ್ರತಿಭಟಿಸಿ ಗಂಡನ ದೇಹವನ್ನು ಬುಟ್ಟಿಯಲ್ಲಿ ಹಾಕಿ ಹೊತ್ತುಕೊಂಡು ಅರಮನೆಯನ್ನೇ ಬಿಟ್ಟು ಹೊರಡುವ ಸನ್ನಿವೇಶವು ಅವಳ ಸಾಮಾಜಿಕ ಮೌಲ್ಯವು ಇಲ್ಲಿ ಅಭಿವ್ಯಕ್ತಗೊಂಡಿದ್ದನ್ನು ಕಾಣಬಹುದು. ಮುಖ್ಯವಾಗಿ ಭಾರತಿಯ ಸಂಪ್ರದಾಯ ಸ್ತ್ರೀಯ ಆದರ್ಶಗುಣಗಳು, ಸಹನೆ, ತಾಳ್ಮೆ ಪತಿವ್ರತಾಧರ್ಮ ಮುಂತಾದ ಅಂಶಗಳು ಇಲ್ಲಿ ಕಾಣಸುತ್ತವೆ.

**ಹಾಸ್ಯ**

ಜನಪದ ಕತೆಗಳಲ್ಲಿ ಕಥನವು ದೀರ್ಘವಾಗಿ ಸಾಗಲು, ಕೇಳುಗರನ್ನು ಎಚ್ಚರವಾಗಿಸಲು, ಇಡೀ ರಾತ್ರಿ ಹಾಡಬೇಕಾಗಿರುವುದರಿಂದ ಕಥನದ ಮಧ್ಯದಲ್ಲಿ ಹಾಸ್ಯವನ್ನೋ, ವ್ಯಂಗ್ಯವನ್ನೋ ತರುತ್ತಾರೆ. ಹಾಸ್ಯ ಪಾತ್ರವನ್ನು ನಿರೂಪಿಸುವಾಗ ಕಥನಕ್ಕೆ ದೋಷ ಬರದ ಹಾಗೆ ಎಚ್ಚರವಹಿಸಿ ಅಭಿವ್ಯಕ್ತಿ ಮಾಡುತ್ತಾರೆ. ಪಾತ್ರಗಳಿಗೆ ತಕ್ಕಂತೆ ಸನ್ನಿವೇಶಕ್ಕೆ ಅನುಗುಣವಾಗಿ ಹಾಸ್ಯ ಬಂದಿರುವುದು ಕಂಡುಬರುತ್ತದೆ.

ಪದ್ಮರಾಣಿ ವೇಷದ ಕುಡ್ಡಿ ಪೋಲವ್ವಗೆ ಹೂವುಗಳನ್ನು ದಾಸಿಯರು ಪ್ರತಿದಿನ ತಂದು ಮುಡಿಸುತ್ತಾರೆ. ಪೋಲವ್ವಳ ಪಾತ್ರವು ಕೇಳುಗರನ್ನು ನಗೆಗಡಲಲ್ಲಿ ತೇಲಿಸುತ್ತದೆ. ಇಬ್ಬರು ದಾಸಿಯರು ಪೋಲವ್ವಳನ್ನು 'ಅಮ್ಮ ಪದ್ಮರಾಣಿ' ಜಳಕ ಮಾಡಲು ಎದ್ದೇಳಮ್ಮ ಎಂದು ಇಬ್ಬರು ಆ ಕಡೆ ಒಬ್ಬರು ಈ ಕಡೆ ಒಬ್ಬರು ಕೈ ಹಿಡಿದು ಸ್ನಾನಕ್ಕೆ ಕೋಣೆಗೆ ಕರೆದುಕೊಂಡು ಬರುತ್ತಾರೆ.

ಜಳಕ ಮಾಡಿಸಿದರಲ್ಲ
ಬಟ್ಟೆ ಭೂಷಣ ಹುಟಕೊಂಡು
ಮೈತುಂಬ ವಸ್ತ್ರ ಇಟಕೊಂಡು
ಹುವ್ವ ಪೋಣಿಸಿದರು
ಉಳ್ಳಗಡ್ಡಿ ತಲಿ ಬಳ್ಳೊಳ್ಳಿ ತುರುಬಿಗಿ
ಹುವ್ವ ಕಟ್ಟಿದರು

ಪದ್ಮರಾಣಿ ವೇಷದ ಪೋಲವ್ವಳಿಗೆ ಇಬ್ಬರು ದಾಸಿಯರನ್ನು ಅವಳ ಉಪಚಾರಕ್ಕೆ ಬಾಲಗಿರಿರಾಜನು ಇಟ್ಟಿರುತ್ತಾನೆ. ಜಳಕ ಮಾಡಿಸಬೇಕಾದರೆ ಇಬ್ಬರು ಹಿಡಿದುಕೊಂಡು ಹೋಗುವರು. ಮಲಗಿಸಬೇಕಾದರೆ ಇಬ್ಬರು ಹಿಡಿದುಕೊಂಡು ಮಲಗಿಸುತ್ತಾರೆ. ಪೋಲವ್ವಳ ತಲೆ ಹೇಗೆ ಇದೆ, ಇನ್ನು ಅವಳ ತುರುಬು ಯಾವ ರೀತಿ ಇದೆ ಎಂಬುದನ್ನು ಹಾಸ್ಯವಾಗಿ ನಿರೂಪಿಸಲಾಗಿದೆ. ಅವಳ ತಲೆಯು ಉಳ್ಳಗಡ್ಡೆಯಂತೆ ಅಂಕುಡೊಂಕಾಗಿ ಉಬ್ಬಿದಂತೆ ಇದೆ. ಅವಳ ತುರುಬು ಬಳ್ಳೊಳ್ಳಿಯಂತೆ ಚಿಕ್ಕದಾಗಿ ಇದೆ ಎಂಬ ಭಾವ ಇಲ್ಲಿ ವ್ಯಕ್ತವಾಗಿದೆ. ಕೂದಲು ಇಲ್ಲದ ತುರುಬಿಗೆ ಹೂವು ಮುಡಿಸುವುದನ್ನು ಹಾಸ್ಯ ಪ್ರಜ್ಞೆಯಿಂದ ಚಿತ್ರಿಸಿದ್ದಾರೆ. ಇವಳ ಪಾತ್ರದ ಇನ್ನೂ ಕೆಲವು ಸನ್ನಿವೇಶಗಳಲ್ಲೂ ಹಾಸ್ಯವು ಕಂಡುಬರುತ್ತದೆ.

ಇನ್ನು ಜೀರ್ಲನಾಗಮ್ಮನ ಗಂಡ ಕುಡ್ಡ ಈರಣ್ಣನ ಪಾತ್ರಗಳಲ್ಲೂ ಸಹ ಹಾಸ್ಯವನ್ನು ಅಭಿವ್ಯಕ್ತಿಸಿದ್ದಾರೆ. ಬಾಲಗಿರಿರಾಜನು ಜೀರ್ಲನಾಗಮ್ಮಳ ಗುಡಿಸಲಿನ ಮುಂದೆ ಜಳಕ ಮಾಡುವಾಗ ಬಾಲಗಿರಿರಾಜನ ತೇಜಸ್ಸು ಸೂರ್ಯನಂತೆ ಮಹಿಭೂತರಾಜನಿಗೆ ಕಾಣಿಸುತ್ತದೆ. ಆಗ ಕೈಕೆಳಗಿನ ಬಂಟರನ್ನು ಅಲ್ಲಿಗೆ ಹೋಗಿ ಬಾಲಗಿರಿರಾಜಕುಮಾರನನ್ನು ನೋಡಿ ಕರೆದುಕೊಂಡು ಬರಬೇಕೆಂದು ಕಳಿಸಿರುತ್ತಾನೆ. ಬಂದ ಬಂಟರಿಗೆ ಜೀರ್ಲನಾಗಮ್ಮ 'ಏ ಮಕ್ಕಳೆ ನಿಮ್ಮ ಮ್ಯಾಲೆ ಮಣ್ಣು ಸುರುವಲಿ' ನನ್ನ ಬೆಲ್ಲಿ ಬಾಲಗಿರಿರಾಜನು ಎಲ್ಲಿ

ಇದ್ದಾನೆ. ಈ 'ಕುಡ್ಡನ ಕಣ್ಣಿಗಿ ಕಟ್ಟಿಗಿ ಚುಚ್ಚಲಿ' ಗುಡಿಸಲಲ್ಲಿ ದೀಪ ಹಚ್ಚಲಿಕ್ಕೆ ಹೋಗಿ ನನ್ನ ಸೀರೆಯನ್ನು ಸುಟ್ಟಿದ್ದಾನೆ. ಅದರ ಬೆಳಕು ರಾಜನಿಗೆ ಬಿದ್ದಿರಬಹುದು ಎಂದು ಅವರ ಎದುರಿನಲ್ಲಿ ಗಂಡನನ್ನು ಬಯ್ದು ಬಂದ ಬಂಟರನ್ನು ಸಮಾಧಾನ ಮಾಡಿ ಕಳಿಸುತ್ತಾಳೆ. ಆಗ ಮುದುಕಿಗೆ ಸಿಟ್ಟು ಬಂದು

ಮುದುಕನ ಜುಟ್ಟ ಕೈಯಾಗ ಹಿಡಕೊಂಡು
ಮುದುಕನ ಬಗ್ಗಿಸಿ ಮೂರೇಟು ಗುದ್ದತಾಳ
ಮುದುಕಿಯ ತುರುಬು ಮುದೇನ ಕೈಯಾಗ
ಮುದುಕಿನ ಬಗ್ಗಿಸಿ ಮೂರೇಟು ಗುದ್ದುತಾನ
ಗಂಡಹೆಂಡತಿ ಜಗಳ ನಡೆದದ

ಜೀರ್ಣನಾಗಮ್ಮ ಬಾಲಗಿರಿರಾಜನನ್ನು ಉಳಿಸಲು ಉಪಾಯವನ್ನು ಕಂಡುಕೊಂಡು ಬಂದಂತಹ ರಾಜನ ಬಂಟರನ್ನು ಸಮಾಧಾನಪಡಿಸಿ ಕಳುಹಿಸುತ್ತಾಳೆ. ಇಲ್ಲಿ ಮುದುಕ ಮುದುಕಿ ಇಬ್ಬರು ಬೇಕೆಂತಲೇ ಜಗಳ ಮಾಡಿಕೊಂಡಿರುತ್ತಾರೆ. ಒಬ್ಬರಿಗೊಬ್ಬರು ಹೊಡೆದುಕೊಳ್ಳುತ್ತಾರೆ. 'ಮುದುಕನ ಜುಟ್ಟು ಮುದುಕಿಯ ಕೈಯಲ್ಲಿ, ಮುದುಕಿಯ ತುರುಬು ಮುದುಕನ ಕೈಯಾಗ' ಹಿಡಿದುಕೊಂಡು ಗುದ್ದಾಡುತ್ತಾರೆ. ಇಲ್ಲಿ ಮುದುಕನ ಜುಟ್ಟು ಮುದುಕಿಯ ತುರುಬು ಹಾಸ್ಯವಾಗಿ ಬಂದು ಕೇಳುಗರನ್ನು ನಗೆಗೀಡು ಮಾಡುತ್ತದೆ.

**ಸಮಕಾಲೀನ ವಿಚಾರಗಳು**

ಕಥನಕ್ಕೆ ವಾಸ್ತವ ಬದುಕಿನ ಹಿನ್ನೆಲೆಯನ್ನು ಸನ್ನಿವೇಶಕ್ಕೆ ಅನುಗುಣವಾಗಿ ಅಲ್ಲಲ್ಲಿ ಸಮಕಾಲೀನ ವಿಚಾರಗಳನ್ನು ತಂದಿದ್ದಾರೆ. ಸಂದರ್ಭಾನುಸಾರ ಕಥನದ ಮೆರಗನ್ನು ಹೆಚ್ಚಿಸಲು ಇಂತಹ ಸನ್ನಿವೇಶಗಳನ್ನು ನಿರೂಪಿಸಿರುವುದು ಕಂಡುಬರುತ್ತದೆ.

ಬಾಲಗಿರಿರಾಜನು ಎಲ್ಲಾ ಯುದ್ಧಗಳಲ್ಲಿ ಗೆದ್ದ ಮೇಲೆ, ಮಹಿಭೂತರಾಜನು ತನ್ನ ಆರು ಜನ ತಮ್ಮಂದಿರನ್ನು ಏಳುಸಾವಿರ ದಂಡಿನ ಜೊತೆ ಬಂದು ಬಾಲಗಿರಿರಾಜನನ್ನು ಯುದ್ಧದಲ್ಲಿ ಕೊಂದು ಹೋಗಬೇಕೆಂದು ತಿಳಿಸಿರುತ್ತಾನೆ. ಅಣ್ಣನ ಅಪ್ಪಣೆಯ ಮೇರೆಗೆ ತಮ್ಮಂದಿರು ತಮ್ಮ ದಂಡಿನ ಸಮೇತ ಬಂದಿರುತ್ತಾರೆ. ಬಂದಂತಹ ದಂಡಿಗೆ ಊಟೋಪಚಾರವನ್ನು ಒದಗಿಸುವ ಸನ್ನಿವೇಶ ಸಮಕಾಲೀನ ಸ್ಥಿತಿಯನ್ನು ನೆನಪಿಸುತ್ತದೆ.

ಏಳೇಳು ಹದಿನಾಲ್ಕು ಸಾವಿರ ದಂಡು
ಮನುಷ್ಯರ ದಂಡು
ಲಡಾಯಿಗೆ ಬಂದ ನಿಂತಾದ
ಕೋಳಿ ಕೊಯ್ಯುವವರ ಯಾರೋ

ಬ್ಯಾಟಿ ಕೊಯ್ಯುವವರು ಯಾರೋ

ಸಿಂದಿ ಕುಡಿತಾರಲ್ಲ

ಬೀರ್ ಬ್ರ್ಯಾಂಡಿ ಕುಡಿತಾರಲ್ಲ

ಅವರ ಜಲ್ಸ ಅವರಿಗೆ ನಡ್ದಾದಲ್ಲ

ಮಹಿಭೂತರಾಜ ತನ್ನ ಏಳುಸಾವಿರ ದಂಡು ತಮ್ಮಂದಿರು ಹಾಗೂ ಅವರ ಏಳುಸಾವಿರ ದಂಡು ಬಾಲಗಿರಿರಾಜಕುಮಾರನ ಜೊತೆ ಯುದ್ಧ ಮಾಡಲು ಬಂದಿರುತ್ತದೆ. ಬಂದಂತಹ ಸೈನ್ಯಕ್ಕೆ ಮೊದಲು ಊಟದ ವ್ಯವಸ್ಥೆ ಕಲ್ಪಿಸಬೇಕಾಗಿರುತ್ತದೆ. ಅಂತಹ ಸಂದರ್ಭವು ವಾಸ್ತವ ಬದುಕಿನ ಸ್ಥಿತಿಯನ್ನು ವ್ಯಕ್ತಪಡಿಸಿದ್ದಾರೆ. ಸೇಂದಿ, ಬೀರ್, ಬ್ರ್ಯಾಂಡಿ, ಕೋಳಿ, ಬ್ಯಾಟಿ ಮುಂತಾದ ಪದಗಳು ಆ ಸನ್ನಿವೇಶದ ವಾಸ್ತವವನ್ನು ಪ್ರತಿಬಿಂಬಿಸುತ್ತವೆ. 'ಯಾರದೋ ದುಡ್ಡು ಎಲ್ಲಮ್ಮನ ಜಾತ್ರೆ' ಎನ್ನುವ ಹಾಗೆ ಸಂದರ್ಭಕ್ಕೆ ತಕ್ಕಂತೆ ಜನರು ಹೇಗೆ ತಮ್ಮ ಬೇಳೆಯನ್ನು ಬೇಯಿಸಿಕೊಳ್ಳುತ್ತಾರೆಂಬುದು ಇಲ್ಲಿಯ ಸನ್ನಿವೇಶದಿಂದ ಗೊತ್ತಾಗುತ್ತದೆ. ಅಂತಹ ಸಂದರ್ಭದಲ್ಲಿ ಯಾರ್‍ಯಾರೋ ಏನೇನೊ ತಿನ್ನುತ್ತಾರೆಂಬುದು ಆ ಸನ್ನಿವೇಶದಲ್ಲಿ ಕಾಣುತ್ತದೆ.

ಇಂತಹ ಸನ್ನಿವೇಶಗಳು ಅಲ್ಲಲ್ಲಿ ಕಂಡುಬರುತ್ತದೆ. ಕುಡ್ಡಿ ಪೋಲವ್ವಳ ಪಾತ್ರದಲ್ಲಿ ಅವಳಿಗೆ ಬೇಕಾಗುವ ವಸ್ತುಗಳು ಪೌಡರ್, ಅತ್ತರೆಣ್ಣೆ, ಮಲ್ಲಿಗೆ ಹೂ ಮುಂತಾದ ವಿಷಯಗಳು ಪಾತ್ರಗಳಿಗೆ ತಕ್ಕಂತೆ ವಾಸ್ತವವನ್ನು ಅಭಿವ್ಯಕ್ತಿಸಿದ್ದುದು ಕಾಣಬಹುದು.

### ೩.೩. ಭೂಲಕ್ಷ್ಮಿ ಕತೆ

ಸ್ತ್ರೀ ಪ್ರಧಾನವಾದ ಜನಪದ ರಮ್ಯ ಕಥನ ಕಾವ್ಯಗಳಲ್ಲಿ ಭೂಲಕ್ಷ್ಮಿಕತೆಯು ಒಂದು. ಭೂಚಕ್ರ ಪಟ್ಟಣವನ್ನು ನವಭೋಜರಾಜ ಆಳುತ್ತಿದ್ದನು. ರಾಜನ ಹೆಂಡತಿ ಭೂಲಕ್ಷ್ಮಿ. ಇವರಿಗೆ ಸಿರಿಸಂಪತ್ತು ಅಧಿಕಾರ ಇದ್ದರೂ ಮಕ್ಕಳ ಕೊರಗು ಮಾತ್ರ ಇರುತ್ತದೆ. ರಾಜನು ಮಕ್ಕಳ ಭಾಗ್ಯಕ್ಕಾಗಿ ಕಾಶಿ ಯಾತ್ರೆ ಹೋದರು ದೇವರಿಂದ ವರ ಪಡೆಯದೆ ಬರಿಗೈಯಲ್ಲಿ ಹಿಂದಿರುಗುತ್ತಾನೆ. ಆಗ ಹೆಂಡತಿ ಭೂಲಕ್ಷ್ಮಿ ಸಂತಾನ ಭಾಗ್ಯ ಪಡೆಯಲು ತಾನೇ ಯಾತ್ರೆಗೆ ತೆರಳುತ್ತಾಳೆ. ಬೆಟ್ಟ ಗುಡ್ಡಗಾಡುಗಳನ್ನು ದಾಟಿ, ಅರಣ್ಯ ಸೇರಿದಾಗ ಬಸವಣ್ಣನ ಗುಡಿಯನ್ನು ಕಾಣುತ್ತಾಳೆ. ಅಲ್ಲೇ ಎದುರಿಗೆ ಇದ್ದ ಗರುಡಸ್ತಂಭ ಹತ್ತಿ ತಪಸ್ಸು ಮಾಡುತ್ತಾಳೆ. ಭೂಲಕ್ಷ್ಮಿಯು ತಪಸ್ಸನ್ನು ಮೆಚ್ಚಿದ ಪರಮಾತ್ಮ ಜಂಗಮರೂಪ ಧರಿಸಿ ಬಂದು 'ಕ್ರೊದಾಂಡ ಭಿಕ್ಷೆ' ಎಂದು ಕೇಳುತ್ತಾನೆ. ಭೂಲಕ್ಷ್ಮಿಯು ಗರುಡಸ್ತಂಭ ಹತ್ತಿ ತನ್ನ ಒಡವೆಗಳನ್ನು ತೆಗೆದುಕೊಂಡು ಹೋಗಲು ತಿಳಿಸುತ್ತಾಳೆ. ಪರಮಾತ್ಮ ಭೂಲಕ್ಷ್ಮಿಯ ಭಕ್ತಿಗೆ ಮೆಚ್ಚಿ ಷರತ್ತಿನ ಮೇಲೆ ವರವನ್ನು ಕೊಡುತ್ತಾನೆ. ಆ ವರವನ್ನು ತನ್ನ ಕೈಯಿಂದ ಕೊಡದೆ ತೋಟದಲ್ಲಿ ಏಳು 'ಮಲ್ಲಿಗೆ' ಹೂವುಗಳನ್ನು ಕಿತ್ತು ಪಡೆಯಲು ಹೇಳುತ್ತಾನೆ. ಮಕ್ಕಳು ಹುಟ್ಟಿದ ಏಳು ದಿವಸಕ್ಕೆ 'ನಾಗರಹಾವಾಗಿ' ಬಂದು ಕಚ್ಚಿ ಜೀವ ಪಡೆದು ಹೋಗುತ್ತೇನೆಂದು ಹೇಳಿ ಮಾಯವಾದನು. ಈ ವಿಷಯ ಗಂಡ ನವಭೋಜರಾಜನಿಗೆ ತಿಳಿಸಿರುತ್ತಾಳೆ.

ಭೂಲಕ್ಷ್ಮಿಗೆ ಈರಸಂಗಮ್ಮ, ಗಿರಿದೇವಿ, ರತ್ನಾಚಿದೇವಿ, ಮಲ್ಲಿಗೆದೇವಿ, ಮೂಡಲದೇವಿ, ಅಕ್ಕನಾಗಮ್ಮ ಮತ್ತು ಬಾಲನಾಗಮ್ಮ ಏಳು ಜನ ಹೆಣ್ಣುಮಕ್ಕಳು ಜನಿಸುತ್ತಾರೆ. ರಾಜ ಪರಮಾತ್ಮನ ಷರತ್ತನ್ನು ನೆನೆಸಿಕೊಂಡು ಅರಮನೆಯೊಳಗೆ ಒಂದು ಇರುವೆ ಹೋಗದಂತೆ ಅರಮನೆಯ ಸುತ್ತ ಬೆಂಕಿಯ ಗುಂಡವನ್ನು ಹಾಕಿಸುತ್ತಾನೆ. ಆದರೆ ನಾಗರಹಾವು ಮಲ್ಲಿಗೆ ಹೂವುಗಳಲ್ಲಿ ಬಂದು ಭೂಲಕ್ಷ್ಮಿಯನ್ನು ಕಚ್ಚಿ ಸಾಯಿಸುತ್ತದೆ.

ರಾಜನು ತಮ್ಮ ಮಕ್ಕಳನ್ನು ದಾದಿಯರಿಗೆ ಪೋಷಣೆ ಮಾಡಲು ಹೇಳಿ ಆಸ್ಥಾನದಲ್ಲಿ ಚಿಂತಿತನಾಗಿ ಕುಳಿತುಕೊಳ್ಳುತ್ತಾನೆ. ಇದನ್ನು ಕಂಡ ಪುರಜನರು ಹಿಮಾಮಹೇಶ ಪಟ್ಟಣದ ಚಂದ್ರವತಿರಾಜ. ಹೆಂಡತಿ ಗಿರಿಜಾವತಿ. ಇವರ ಮಗಳು ಮಾಣಿಕ್ಯಲದೇವಿಯನ್ನು ತಂದು ಮದುವೆ ಮಾಡುತ್ತಾರೆ. ಮಾಣಿಕ್ಯಲದೇವಿಗೆ ಮಕ್ಕಳ ಮೇಲೆ ಮತ್ಸರ ಉಂಟಾಗುತ್ತದೆ. ತನ್ನ ಮೇಲೆ ಗಂಡನ ಪ್ರೀತಿ ಉಂಟಾಗಲು ತಾಯಿಯಿಂದ 'ಮರಳು ಮಾತಂಗಿ' ಗಿಡವನ್ನು ತರಿಸಿಕೊಂಡು ಗಂಡನಿಗೆ ತಿನಿಸುತ್ತಾಳೆ. ಆದರೂ ಸಹ ನವಭೋಜರಾಜನು ಮಕ್ಕಳ ಮೇಲೆ ಪ್ರೀತಿ ಇದ್ದುದನ್ನು ಕಂಡು, ಮಕ್ಕಳಿಗೆ ವಿಷಕೊಟ್ಟು ಸಾಯಿಸಿ ಬಾವಿಯಲ್ಲಿ ಹಾಕುತ್ತಾಳೆ. ನವಭೋಜರಾಜ ಮಕ್ಕಳನ್ನು ಹುಡುಕುತ್ತ ಪಟ್ಟಣವೆಲ್ಲ ಸುತ್ತಾಡುತ್ತಾನೆ. ಭೂಲಕ್ಷ್ಮಿ ಸತ್ತು ಕೈಲಾಸದಲ್ಲಿ ದೇವತೆಯಾಗಿರುತ್ತಾಳೆ. ತನ್ನ ಮಕ್ಕಳು ಸತ್ತು ಹೋಗಿದ್ದನ್ನು ಕಂಡು ಭೂಲೋಕಕ್ಕೆ ಬಂದು ಮಕ್ಕಳನ್ನು ಬದುಕಿಸುತ್ತಾಳೆ. ಮಕ್ಕಳು ತಿಂದ ವಿಷವು ತೊಲಗಲು ಆಕಳಾಗಿ ನಿಂತು ಹಾಲುಣಿಸುತ್ತಾಳೆ. ನಂತರ ಮಕ್ಕಳನ್ನು ತೆಕ್ಕೆಗೆ ಹಾಕಿಕೊಂಡು ದುಃಖ ಮಾಡುತ್ತಾಳೆ. ಮಕ್ಕಳು ತನ್ನಿಂದ ಬರುತ್ತೇವೆಂದು ಹೇಳಿದಾಗ, ಮಕ್ಕಳನ್ನು ಮುಂದೆ ಹೋಗಲು ಹೇಳಿ ಮಾಯವಾಗುತ್ತಾಳೆ. ಆಗ ಮಕ್ಕಳು ನಿಜಸ್ಥಿತಿಯನ್ನು ತಂದೆಗೆ ಹೇಳಿದರೆ ಮಲತಾಯಿ ಮಾಣಿಕ್ಯಲದೇವಿಯನ್ನು ಹೊಡೆಯುತ್ತಾನೆ. ತಂದೆಯ ಸಂಸಾರ ಹಾಳಾಗುತ್ತದೆಂದು ಮಾತನಾಡಿಕೊಂಡು ರಾಮಲಿಂಗ ಜಾತ್ರೆಗೆ ಹೋಗಿದ್ದೇವೆಂದು ತಂದೆಯ ಮುಂದೆ ಸುಳ್ಳು ಹೇಳುತ್ತಾರೆ.

ಮಾಣಿಕ್ಯಲದೇವಿಗೆ ಮಕ್ಕಳ ಮೇಲೆ ಇನ್ನೂ ಮತ್ಸರ ಇರುತ್ತದೆ. ಈ ಮಕ್ಕಳು ಸತ್ತು ಮತ್ತೆ ಬದುಕಿದ್ದಾರೆ. ತನ್ನ ಗಂಡನಿಂದ ದೂರ ಮಾಡಬೇಕೆಂದು ಉಪಾಯವನ್ನು ಹುಡುಕುತ್ತಾಳೆ. ಮಕ್ಕಳನ್ನು ಅರಣ್ಯದಲ್ಲಿ ಬಿಟ್ಟು ಬಂದರೆ ಅರಮನೆಯಲ್ಲಿ ಇರುತ್ತೇನೆ. ಇಲ್ಲದಿದ್ದರೆ ತವರು ಮನೆಗೆ ಹೋಗುತ್ತೇನೆಂದು ಗಂಡನಿಗೆ ಬೆದರಿಕೆ ಹಾಕುತ್ತಾಳೆ. ನವಭೋಜರಾಜ ಹೆಂಡತಿ ಹೇಳಿದಂತೆ ಮಕ್ಕಳಿಗೆ ಮೋಸ ಮಾಡಿ ಜಾತ್ರೆಗೆ ಹೋಗಬೇಕೆಂದು ಅರಣ್ಯಕ್ಕೆ ಕರೆದುಕೊಂಡು ಹೋಗುತ್ತಾನೆ. ಮಕ್ಕಳನ್ನು ರಾತ್ರಿ ಅಲ್ಲೇ ಬಿಟ್ಟು ಭೂಚಕ್ರಪಟ್ಟಣ ಸೇರುತ್ತಾನೆ. ಮಕ್ಕಳು ಬೆಳಗಾದ ಕೂಡಲೇ ನೋಡಿದಾಗ ತಂದೆ ಜಾಲಿ ಮರದ ತುಂಡಾಗಿದ್ದನೆಂದು ತಿಳಿದು ಪಕ್ಕದಲ್ಲಿದ್ದ ಆ ತುಂಡಿಗೆ ಬೆಂಕಿ ಹಚ್ಚಿ ಸುಟ್ಟು ತಾಯಿತಂದೆಯನ್ನು ಕಳೆದು ಕೊಂಡೆವೆಂದು ಅರಣ್ಯದಲ್ಲಿ ಅಲೆದಾಡುತ್ತಾ ಹೋಗುತ್ತಾರೆ.

ಏಳು ಜನ ಮಕ್ಕಳು ಅರಣ್ಯದಾರಿ ಹಿಡಿದುಕೊಂಡು ಹೋದಾಗ ಒಂದು ಪಟ್ಟಣ ಕಂಡು ಅಲ್ಲಿಗೆ ಹೋಗುತ್ತಾರೆ. ಪಟ್ಟಣದ ಹೊರಗೆ ದೂರದಲ್ಲಿ ಅನ್ನಲಕ್ಕವ್ವ ಗಂಡ ಹುಲಿರಾಜ ತೋಟದಲ್ಲಿ ಮನೆ ಕಟ್ಟಿಕೊಂಡು ವಾಸವಾಗಿರುತ್ತಾರೆ. ಹುಲಿರಾಜ ರಾತ್ರಿ ಆದ ಕೂಡಲೆ ಹುಲಿಯಾಗಿ ಬೇಟೆಯಾಡುತ್ತಾನೆ.

ಈ ಮಕ್ಕಳು ಅಲ್ಲಿಗೆ ಬರುತ್ತಾರೆ. ಮಕ್ಕಳು ತಮ್ಮ ಕಷ್ಟವನ್ನು ಅನ್ನಲಕ್ಕವ್ವಗೆ ಹೇಳುತ್ತಾರೆ. ತಮ್ಮ ಪರಿಚಯ ಹೇಳಿದಾಗ, ತನ್ನ ಅಕ್ಕನ ಮಕ್ಕಳೆಂದು ತಿಳಿದುಕೊಂಡು, ನಾನು ನಿಮ್ಮ ತಾಯಿಯೆಂದು ಹೇಳುತ್ತಾಳೆ. ಏಳು ಜನ ಮಕ್ಕಳನ್ನು ತನ್ನ ಮನೆಯಲ್ಲೇ ಇಟ್ಟುಕೊಳ್ಳುತ್ತಾಳೆ. ಹುಲಿಯು ಮನೆಗೆ ಬಂದ ಕೂಡಲೇ ಐದು ಹರಳನ್ನು ಮಂತ್ರಿಸಿ ಒಗೆದಾಗ 'ಹುಲಿರಾಜ'ನಾಗುತ್ತಾನೆ. ಮನೆಯಲ್ಲಿದ್ದ ಮಕ್ಕಳನ್ನು ಪರಿಚಯಿಸುತ್ತಾಳೆ. ಆಗ ಹುಲಿರಾಜನು ತಾನು ಸಮಯ ಬಿಟ್ಟು ಸಮಯದಲ್ಲಿ ಮನೆಗೆ ಬರುತ್ತೇನೆ. ಮಕ್ಕಳನ್ನು ಹೊರಗೆ ಬಿಡಬಾರದೆಂದು ಹೆಂಡತಿಗೆ ಹೇಳುತ್ತಾನೆ. ಐದಾರು ತಿಂಗಳತನಕ ಮಕ್ಕಳು ಅಲ್ಲೇ ಇರುತ್ತಾರೆ.

ಅತ್ತ ಪಾನಗಲ್ ಪಟ್ಟಣದ ರಾಜ ಉದಿಒದ್ದಿರಾಜ. ಹೆಂಡತಿ ಪಾಂದೇವಿ. ಇವರಿಗೆ ಏಳು ಜನ ಗಂಡು ಮಕ್ಕಳು ಇರುತ್ತಾರೆ. ಭೀಮೊದ್ದಿರಾಜ, ರಾಮೊದ್ದಿರಾಜ, ಚಂದ್ರೊದ್ದಿರಾಜ, ಚಕ್ರವರ್ತಿರಾಜ, ರಕ್ತೊದ್ದಿರಾಜ, ರತ್ನಾಕಿರಾಜ ಮತ್ತು ಚಂದ್ರವತಿರಾಜ. ಈ ಏಳು ಮಂದಿ ಮಕ್ಕಳಿಗೆ ಒಂದೇ ಹೊಟ್ಟೆಯಲ್ಲಿ ಹುಟ್ಟಿದ್ದ ಏಳು ಜನ ಅಕ್ಕತಂಗಿಯರ ಜೊತೆ ಮದುವೆ ಮಾಡಬೇಕೆಂದು ಜ್ಯೋತಿಷಿಗಳು ಹೇಳಿರುತ್ತಾರೆ. ಅಲ್ಲದೆ ಊರಿಗೊಂದು ಹೆಣ್ಣನ್ನು ತೆಗೆದು ಮದುವೆ ಮಾಡಿದರೆ ಮಕ್ಕಳು ಸಾಯುತ್ತಾರೆಂದು ಹೇಳಿರುತ್ತಾರೆ. ಉದಿಒದ್ದಿರಾಜ ದೇಶ, ಪಟ್ಟಣಗಳೆಲ್ಲ ಹುಡುಕಾಡಿದರು ಒಂದೇ ಹೊಟ್ಟೆಯಲ್ಲಿ ಹುಟ್ಟಿದ ಏಳು ಜನ ಹೆಣ್ಣುಮಕ್ಕಳು ಸಿಗುವುದಿಲ್ಲ. ಆದರೆ ಒಂದು ದಿವಸ ಏಳು ಜನ ಅಣ್ಣತಮ್ಮಂದಿರು ತಮ್ಮ ಏಳು ಸಾವಿರ ದಂಡಿನ ಜೊತೆ ಬೇಟೆಯಾಡಲು ಅರಣ್ಯಕ್ಕೆ ಹೋಗುತ್ತಾರೆ. ಒಂದೂ ಬೇಟೆ ಸಿಗದೆ ಅನ್ನಲಕ್ಕಮ್ಮ ತೋಟಕ್ಕೆ ಬಂದು ಆಯಾಸ ನೀಗಿಕೊಳ್ಳುತ್ತಾರೆ. ಏಳು ಜನ ರಾಜಕುಮಾರರು ಅನ್ನಲಕ್ಕಮ್ಮ ಮನೆಯ ಮೇಲೆ ಏಳು ಜನ ಕನ್ಯೆಯರನ್ನು ಕಾಣುತ್ತಾರೆ. ಆಗ ರಾಜಕುಮಾರರು ತಮ್ಮ ಬಂಟರನ್ನು ಆ ಕನ್ಯೆಯರ ಬಗ್ಗೆ ವಿಚಾರಿಸಿಕೊಂಡು ಬರಲು ಕಳಿಸುತ್ತಾರೆ. ಏಳು ಜನ ಕನ್ಯೆಯರು ಅಕ್ಕತಂಗಿಯರೆಂದು ತಿಳಿದುಕೊಂಡು ಬಂದು ಹೇಳುತ್ತಾರೆ. ರಾಜಕುಮಾರರು ಅನ್ನಲಕ್ಕಮ್ಮಳಿಗೆ ಆ ಕನ್ಯೆಯರನ್ನು ಮದುವೆ ಮಾಡಿಕೊಳ್ಳುತ್ತೇವೆಂದು ಕೇಳುತ್ತಾರೆ. ಆಗ ಅನ್ನಲಕ್ಕಮ್ಮ ಒಪ್ಪಿಕೊಂಡಳು. ನಿಮ್ಮ ಪಟ್ಟಣದಲ್ಲಿ ಮದುವೆ ಮಾಡಿಕೊಳ್ಳಿರೆಂದು ಏಳು ಜನ ರಾಜಕುಮಾರರ ಹಿಂದೆ ಮಕ್ಕಳನ್ನು ಕಳಿಸುತ್ತಾಳೆ. ಉದಿಒದ್ದಿರಾಜ ತನ್ನ ಮಕ್ಕಳ ಮದುವೆಯನ್ನು ಅತ್ಯಂತ ವಿಜೃಂಭಣೆಯಾಗಿ ಮಾಡುತ್ತಾನೆ.

ಇನ್ನು ಭೂಚಕ್ರ ಪಟ್ಟಣದ ನವಭೋಜರಾಜ ಹೆಂಡತಿ ಮಾಣಿಕ್ಯಲದೇವಿಯ ಸಿರಿಸಂಪತ್ತು ಕಳ್ಳರ ಪಾಲಾಗಿರುತ್ತದೆ. ಅಧಿಕಾರವನ್ನು ಕಳೆದುಕೊಂಡು ಒಂದೊಪ್ಪತ್ತು ಊಟವಿಲ್ಲದೆ ಗಂಡ ಹೆಂಡತಿ ಕಟ್ಟಿಗೆ ಮಾರಿ ಜೀವನ ಸಾಗಿಸುತ್ತಾರೆ. ಅಂದು ಗಂಡ ಹೆಂಡತಿ ಕಟ್ಟಿಗೆ ಹೊತ್ತುಕೊಂಡು ಪಾನಗಲ್ ಪಟ್ಟಣದಲ್ಲಿ ಮದುವೆ ಇದೆ ಎಂದು ಅಲ್ಲಿಗೆ ಬರುತ್ತಾರೆ. ಇಲ್ಲಿ ಏಳು ಜನ ಅಣ್ಣತಮ್ಮಂದಿರ ಜೊತೆ, ಏಳು ಜನ ಅಕ್ಕತಂಗಿಯರ ಮದುವೆ ನಡೆಯುತ್ತಿರುತ್ತದೆ. ಚಿಕ್ಕವಳಾದ ಬಾಲನಾಗಮ್ಮ ತಂದೆಯು ಕಟ್ಟಿಗೆ ಹೊತ್ತುಕೊಂಡು

ಬರುವುದನ್ನು ಗುರುತು ಹಿಡಿದು ಓಡಿಹೋಗಿ ತಂದೆಯನ್ನು ತೆಕ್ಕೆಗೆ ಹಾಕಿಕೊಂಡು ದುಃಖಮಾಡುತ್ತಾಳೆ. ಇದನ್ನು ಕಂಡು ಮಲತಾಯಿ ಮಾಣಿಕ್ಯಲದೇವಿಗೆ ಇನ್ನಷ್ಟು ಮತ್ಸರ ಉಂಟಾಗುತ್ತದೆ. ನವಭೋಜರಾಜನಿಗೆ ತನ್ನ ಹೆಂಡತಿ ಮಾಣಿಕ್ಯಲದೇವಿಯ ದುಷ್ಟಗುಣವನ್ನು ಅರಿತು ಇವಳ ಗುಣವು ಇನ್ನೊಬ್ಬರು ಕಲಿಯಬಾರದೆಂದು ಅದೇ ಪಟ್ಟಣದಲ್ಲಿ ಅವಳ ತಲೆ ಬೋಳಿಸಿ ಕತ್ತೆಯ ಮೇಲೆ ಮೆರವಣಿಗೆ ಮಾಡಿಸಿದನು. ಕೊನೆಗೆ ಸುಣ್ಣದ ಬಟ್ಟಿಯಲ್ಲಿ ಹಾಕಿದಾಗ ಸುಟ್ಟು ಬೂದಿಯಾಗಿ ಹೋಗುತ್ತಾಳೆ. ನಂತರ ಬಾಲನಾಗಮ್ಮ ಪಾನಗಲ್ ಪಟ್ಟಣದಲ್ಲಿ ಹೆಣ್ಣನ್ನು ನೋಡಿ ತಂದೆಯ ಲಗ್ನ ಮಾಡಿ ಭೂಚಕ್ರ ಪಟ್ಟಣಕ್ಕೆ ಕಳಿಸುತ್ತಾಳೆ. ಮಗಳ ವಚನದಂತೆ ತಂದೆಯ ಆಸ್ತಿ ಅಧಿಕಾರ ಮತ್ತೆ ಮೊದಲು ಇದ್ದಂತೆ ಆಗುತ್ತದೆ.

**ವಿಶ್ಲೇಷಣೆ**

ಸ್ತ್ರೀ ಪಾತ್ರ ಪ್ರಧಾನವಾದ ಜನಪದ ರಮ್ಯಕಾವ್ಯಗಳಂತೆ ಅಲೆಮಾರಿ ವೃತ್ತಿಗಾಯಕರಾದ ಬುಡ್ಗಜಂಗಮರು ಹಾಡಿದ ಭೂಲಕ್ಷ್ಮಿಕತೆಯು ಒಂದು. ತಾಯಿಯಾಗುವ ಹಂಬಲ ಪ್ರತಿಯೊಬ್ಬ ಸ್ತ್ರೀಗೆ ಇರುತ್ತದೆ. ವಿವಾಹವಾಗಿ ತುಂಬ ದಿನಗಳಿಂದ ಮಕ್ಕಳ ಭಾಗ್ಯ ಕಾಣದೇ ಇರದ ಸಂದರ್ಭದಲ್ಲಿ ಬಂಜೆತನದ ನೋವನ್ನು ಅನುಭವಿಸುತ್ತಾರೆ. ಭಾರತೀಯ ಸಮಾಜದಲ್ಲಿ ಬಂಜೆತನವನ್ನು ಅತ್ಯಂತ ಕೀಳುದೃಷ್ಟಿಯಿಂದ ಕಾಣಲಾಗುತ್ತದೆ. ಅಂತಹ ಸಂದರ್ಭದಲ್ಲಿ ಮಕ್ಕಳಾಗದೆ ಹೋದಾಗ ಸ್ತ್ರೀಯ ಅಳಲು ಮುಗಿಲು ಮುಟ್ಟುತ್ತದೆ. ಪ್ರತಿಯೊಬ್ಬ ಸ್ತ್ರೀ ಮಕ್ಕಳ ಭಾಗ್ಯಕ್ಕಾಗಿ ಹಂಬಲಿಸುತ್ತಾಳೆ. ಹಾಗೆಯೇ ಭೂಲಕ್ಷ್ಮಿ ಕಥನದಲ್ಲಿ ಭೂಲಕ್ಷ್ಮಿಗೆ ತುಂಬ ದಿನಗಳಿಂದ ಮಕ್ಕಳಾಗುವುದಿಲ್ಲ. ಗಂಡ ನವಭೋಜರಾಜ ದೇಶ, ನಾಡು ತೀರ್ಥಯಾತ್ರೆ ಹೋಗಿ ಬಂದರೂ ಮಕ್ಕಳ ಫಲ ಬಂದಿರುವುದಿಲ್ಲ. ಭೂಲಕ್ಷ್ಮಿ ಕಥನದ ಆರಂಭದಲ್ಲಿಯೇ ಭೂಲಕ್ಷ್ಮಿಯ ಬಂಜೆತನದ ಬಾಳಿನ ನೋವನ್ನು ಕಥನಗಾರರು ಪರಿಣಾಮಕಾರಿಯಾಗಿ ಚಿತ್ರಿಸಿದ್ದಾರೆ.

ನೀ ಕೊಟ್ಟಿದ್ದು ಬದುಕು ಮನಾರ ಆದ
ಆನಿ ಕುದುರೆ ಬೆಳ್ಳಿಬಂಗಾರ ವಸ್ತು ಆದ
ಏನಿದ್ದರೆ ಏನು ಮಾಡಬೇಕು
ಹೊಟ್ಟೆಯೊಳಗೆ ಮಕ್ಕಳಿಲ್ಲ
ಮತ್ರ ಸಂತಾನ ಇಲ್ಲದ್ದಕ್ಕೆ ನಿನ್ನ ಸ್ಥಳಕ್ಕೆ ಬಂದೀನಿ
ನೀ ಸಂತಾನ ಕೊಡಬೇಕು ನಾ ಹೋಗಬೇಕು

ಭೂಲಕ್ಷ್ಮೀ ಮಕ್ಕಳ ಭಾಗ್ಯಕ್ಕಾಗಿ ಅಲೆದು ಅರಣ್ಯದಲ್ಲಿ ತಪಸ್ಸಿಗೆ ನಿಂತಾಗ ಪ್ರತ್ಯಕ್ಷವಾದ ಪರಮಾತ್ಮನಿಗೆ ಈ ಮೇಲಿನಂತೆ ಹೇಳುತ್ತಾಳೆ. ಸ್ತ್ರೀ ಪ್ರಧಾನವಾದ ಈ ಕಥನವು ಹೃದಯ ಕಲಕುವ ವರ್ಣನೆಗಳಿಂದ ಕೂಡಿದೆ. ದೇವರ ವರದಿಂದ ಮಕ್ಕಳ ಭಾಗ್ಯ ಪಡೆದಿದ್ದರೂ, ಮಕ್ಕಳ ಪೋಷಣೆಯ ಜವಾಬ್ದಾರಿ ಹಾಗೂ ಮಕ್ಕಳ ಮಮತೆಯನ್ನು ಕಾಣದೆ ಸ್ವರ್ಗಸ್ಥಳಾಗುತ್ತಾಳೆ. ಭೂಲಕ್ಷ್ಮಿ ಪಾತ್ರವು ಕೊನೆಗೊಂಡರೂ, ಸವತಿ

ಮಾಣೆಕ್ಕಲದೇವಿ ಕಥನದುದ್ದಕ್ಕೂ ಸ್ತ್ರೀಯ ಸವತಿ ಮತ್ಸರ, ಮಲಮಕ್ಕಳ ಮೇಲೆ ಮತ್ಸರ ಕಠಿಣ ಹೃದಯವು ಈ ಪಾತ್ರದಲ್ಲಿ ಚಿತ್ರಿತವಾಗಿದೆ. ಕಥನದುದ್ದಕ್ಕೂ ಸ್ತ್ರೀ ಪಾತ್ರಗಳೇ ಮುಖ್ಯವಾಗಿ ಕಾಣುತ್ತವೆ. ಭೂಲಕ್ಷ್ಮೀಯ ಏಳು ಜನ ಹೆಣ್ಣುಮಕ್ಕಳು, ಭೂಲಕ್ಷ್ಮೀ ತಂಗಿ ಅನ್ನಲಕ್ಕಮ್ಮ ಪಾತ್ರಗಳು ಸಹ ಪ್ರಮುಖವಾಗಿವೆ. ಭೂಲಕ್ಷ್ಮೀ ಕಥನವನ್ನು ಬೇರೆ ಬೇರೆ ವೃತ್ತಿ ಗಾಯಕರು ಈ ಕಥನವನ್ನು ಅವರವರ ಮನೋಭಾವನೆಯ ಅನುಭವದಲ್ಲಿ ನಿರೂಪಣೆ ಮಾಡಿದ್ದಾರೆ. ಹಾಗೆಯೇ ಇಲ್ಲಿ ಬುಡ್ಗಜಂಗಮರು ಅವರದೇ ಆದ ನೆಲೆಯಲ್ಲಿ ಈ ಕಥನವನ್ನು ಅಭಿವ್ಯಕ್ತಿ ಮಾಡಿದ್ದಾರೆ.

**ಭೌಗೋಳಿಕ ವ್ಯಾಪ್ತಿ**

ಭೂಲಕ್ಷ್ಮೀ ಕಥನದಲ್ಲಿ ಬುರ್ರಕಥನಗಾರರು ಅವರ ಕಾಲ್ಪನಿಕ ಪಟ್ಟಣಗಳನ್ನು ಚಿತ್ರಿಸಿದ್ದಾರೆ. ಇವರು ಹೆಚ್ಚಿನ ಕಥನಗಳಲ್ಲಿ ಕತೆಯನ್ನು ಪ್ರಾರಂಭ ಮಾಡುವಾಗ ಪಟ್ಟಣದ ಹೆಸರಿನ ಜೊತೆಗೆ ರಾಜನ ಹೆಸರನ್ನು ಸಹ ಅದೇ ಪಟ್ಟಣದ ಹೆಸರಿನಿಂದ ನಿರೂಪಿಸುತ್ತಾರೆ. ಬಹುತೇಕ ಕಥನಗಳನ್ನು ಹೀಗೆಯೇ ಅಭಿವ್ಯಕ್ತಿ ಮಾಡುತ್ತಾರೆ. ಕಥನದ ಕಥಾವಸ್ತುವಿಗೆ ಅನುಸಾರವಾಗಿ ಪಟ್ಟಣಗಳ ಹಾಗೂ ಪಾತ್ರಗಳ ಹೆಸರುಗಳನ್ನು ಉಲ್ಲೇಖಿಸುತ್ತಾರೆ. ಹಾಗೆ ಉಲ್ಲೇಖಿಸುವಾಗ ಕಥನಗಾರರು ವಾಸಿಸುವ ತನ್ನ ಸುತ್ತಮುತ್ತಲಿನ ಪ್ರದೇಶದ ಕೆಲವು ಸನ್ನಿವೇಶ, ಪಟ್ಟಣ, ಪಾತ್ರ ಮತ್ತು ಗುಡಿಗೋಪುರಗಳ ಹೆಸರುಗಳನ್ನು ಅಭಿವ್ಯಕ್ತಿಸಿರುತ್ತಾರೆ.

ಭೂಲಕ್ಷ್ಮೀ ಕಥನದಲ್ಲಿ ಕಥನಗಾರರ ಅನುಭವದ ಜೊತೆಗೆ ಅವರ ಕಾಲ್ಪನಿಕ ಭೌಗೋಳಿಕ ವ್ಯಾಪ್ತಿ ಕಂಡುಬರುತ್ತದೆ. ಕಥನದ ಪ್ರಾರಂಭದಲ್ಲಿ ಅಂತಹ ನಿರೂಪಣೆಯನ್ನು ಗಮನಿಸಬಹುದು.

ಮೇಲುಗಡೆ ದೇಶದೊಳಗೆ ಗುರುವೆ
ಅಕ್ಕಡಿ ಯಾವುದು ಪಟ್ಟಣ ಇದ್ದದಲ್ಲ
ಭೂಚಕ್ರ ಪಟ್ನ ಇದ್ದದಲ್ಲ
ರಾಜ ನವಭೋಜ ಮಹರಾಜ
ರಾಜನ ಹೆಂಡತಿಯಾರು ಇದ್ದಳಲ್ಲ
ನನ್ನ ತಾಯಿ ಭೂಲಕ್ಷ್ಮೀ ಇದ್ದಳಲ್ಲ

ಕಥನಗಾರರ ಪ್ರಾರಂಭದ ನಿರೂಪಣೆಯಲ್ಲಿ 'ಭೂಚಕ್ರ ಪಟ್ಟಣ' ಹಾಗೂ ನವಭೋಜರಾಜ ರಾಜನ ಹೆಂಡತಿ ಭೂಲಕ್ಷ್ಮೀ ಈ ಹೆಸರುಗಳು ಕಥನದ ಕಾಲ್ಪನಿಕ ಹೆಸರುಗಳಾಗಿ ಕಂಡುಬಂದರೂ ಪ್ರಸ್ತುತತೆಯನ್ನು ಧ್ವನಿಸುತ್ತವೆ. ಹಾಗೆಯೇ ದರೋಜಿ ಬುರ್ರಕಥಾ ಈರಮ್ಮ ಅವರು ಇದೇ ಕಥನದ ಅವರ ಕಾಲ್ಪನಿಕ ಹೆಸರುಗಳು ಮಂಡಲಗೇರಿ ಪಟ್ಟಣದ ರಾಜ ನೌಭೋಜರಾಜ, ರಾಜನ ಹೆಂಡತಿ ಭೂದೇವಿ ಎಂದು ನಿರೂಪಿಸಿದ್ದಾಳೆ. ಮುಖ್ಯವಾಗಿ ಕಥಾ ವಸ್ತು ಒಂದೇ ಇದ್ದರೂ, ಕಥನಗಾರರ ಕಾಲ್ಪನಿಕ ಹೆಸರುಗಳು

ಅವರವರ ಕಥನಕ್ಕೆ ಪ್ರಸ್ತುತತೆಯನ್ನು ನೀಡುತ್ತದೆ. ಕಥನಗಾರರ ಅನುಭವದ ಹಿನ್ನೆಲೆಯಲ್ಲಿ ಪಾತ್ರಗಳ ಹೆಸರುಗಳು, ಪಟ್ಟಣಗಳ ಹೆಸರುಗಳು ಭಿನ್ನವಾಗಿ ಮೂಡಿಬಂದಿದ್ದನ್ನು ಕಾಣಬಹುದು.

ನವಭೋಜರಾಜನ ಹೆಂಡತಿ ಭೂಲಕ್ಷ್ಮೀಗೆ ಪರಮಾತ್ಮನು ಅವಳ ಭಕ್ತಿ ಮೆಚ್ಚಿ ಮಕ್ಕಳ ಭಾಗ್ಯವನ್ನು ಕೊಡುವಾಗ, ಷರತ್ತು ವಿಧಿಸಿ, ತನ್ನ ವಚನದಂತೆ, ನಾಗರಹಾವಾಗಿ ಬಂದು ಕಚ್ಚಿ ಸತ್ತು ಹೋಗಿದ್ದರಿಂದ ರಾಜನು ತನ್ನ ಆಸ್ಥಾನದಲ್ಲಿ ಕುಳಿತುಕೊಂಡು ಹೆಂಡತಿಯ ಸಾವಿನ ಬಗ್ಗೆ ಚಿಂತಿಸುತ್ತಾನೆ. ತನ್ನ ಏಳು ಮಕ್ಕಳ ಬಗ್ಗೆ ಚಿಂತಿಸುತ್ತ, ಮಾನಸಿಕವಾಗಿ ನೊಂದಿರುತ್ತಾನೆ. ಇದನ್ನು ಅರಿತ ರಾಜನ ಕೈ ಕೆಳಗಿನ ಬಂಟರು, ಪಟ್ಟಣದ ಹಿರಿಯರು ರಾಜನಿಗೆ ಸಮಾಧಾನ ಹೇಳಿ ಇನ್ನೊಂದು ಮದುವೆಗೆ ಒಪ್ಪಿಸಿ ಮದುವೆ ಮಾಡಲು ತಯಾರು ಮಾಡುತ್ತಾರೆ.

ಹಿಮಾ ಮಹೇಶಲ ಪಟ್ನದಗ
ರಾಜ ಚಂದ್ರವತಿ ರಾಜ ಇದ್ದನಲ್ಲ
ಹೆಂಡತಿ ಗಿರಿಜಾವತಿ ಇದ್ದಳಲ್ಲ
ಮಗಳು ಮಾಣಿಕ್ಯಲದೇವಿ ಇದ್ದಳಲ್ಲ
ಅದೇ ಪಟ್ನಕ್ಕ ಹೋದರಲ್ಲ
ಚಂದ್ರವತಿರಾಜನ ಮಗಳನ್ನ ತೆಗೆದರಲ್ಲ
ನಿನಗೆ ಲಗ್ನ ಮಾಡ್ತೀವಿ ರಾಜ ಎಂದರಲ್ಲ

ಈ ಸನ್ನಿವೇಶದಲ್ಲೂ ಸಹ ಇಲ್ಲಿ ನಿರೂಪಿಸಿದ ಪಟ್ಟಣ ಹಾಗೂ ಪಾತ್ರಗಳು ಕಥನಕ್ಕೆ ಭೌಗೋಳಿಕ ವ್ಯಾಪ್ತಿಯನ್ನು ಒದಗಿಸುತ್ತದೆ. ಈ ಹೆಸರುಗಳು ಕಾಲ್ಪನಿಕವಾಗಿದ್ದರೂ ಅವು ಐತಿಹಾಸಿಕ ಹೆಸರುಗಳಾಗಿ ಕೇಳುಗರ ಕಣ್ಣು ಮುಂದೆ ನಿಲ್ಲುತ್ತವೆ. ಹೀಗೆ ಮೌಖಿಕ ಕಥನಗಳಾಗಲಿ, ಜನಪದ ಕತೆಗಳನ್ನಾಗಲಿ ಕಥನಗಾರರು ಅಭಿವ್ಯಕ್ತಿಸಿದ್ದ ಎಷ್ಟೋ ಕಥನಗಳು ಐತಿಹಾಸಿಕವಾಗಿಯೂ ಮಹತ್ವದ್ದಾಗಿದ್ದುವು ಎಂಬುದು ಸೂಕ್ಷ್ಮವಾಗಿ ಗಮನಿಸಿದಾಗ ತಿಳಿದುಬರುತ್ತದೆ.

ಮಾಣಿಕ್ಯಲದೇವಿ ತನ್ನ ಸವತಿ ಭೂಲಕ್ಷ್ಮೀ ಮಕ್ಕಳ ಮೇಲಿನ ಮತ್ಸರದಿಂದ ಏಳು ಜನ ಹೆಣ್ಣುಮಕ್ಕಳನ್ನು, ತನ್ನ ಗಂಡ ನವಭೋಜರಾಜನಿಗೆ ಬಿಟ್ಟು ಬರಲು ಹೇಳಿರುತ್ತಾಳೆ. ಹೆಂಡತಿಯ ದಾಸನಾಗಿ ಚಿಕ್ಕ ಮಕ್ಕಳನ್ನು ಅಡವಿಯಲ್ಲಿ ಬಿಟ್ಟು ಬರುತ್ತಾನೆ. ಮಕ್ಕಳಿಗೆ ಮೋಸ ಮಾಡಿ ಹಿಂತಿರುಗುತ್ತಾನೆ. ತನ್ನ ತಂದೆಯು ಸತ್ತನೆಂದು ತಿಳಿದು ಮಕ್ಕಳು ಅಡವಿಯಲ್ಲಿ ತಿರುಗುತ್ತ ಇರುವಾಗ ಒಂದು ಮನೆ ಕಾಣಿಸುತ್ತದೆ. ಅಲ್ಲಿ ಅನ್ನಲಕ್ಕಮ್ಮ ತನ್ನ ಗಂಡ ಹುಲಿರಾಜನ ಜೊತೆ ಸಂಸಾರ ಮಾಡುತ್ತಿರುತ್ತಾಳೆ. ಗಂಡ ರಾತ್ರಿ ಹೊತ್ತಿನಲ್ಲಿ ಹುಲಿಯಾಗಿ ಬೇಟೆಗೆ ಹೋಗುವುದರಿಂದ ಪಟ್ಟಣ ಬಿಟ್ಟು ಅಡವಿಯಲ್ಲಿ ಇರುತ್ತಾರೆ. ಏಳು ಜನ

ಹೆಣ್ಣುಮಕ್ಕಳು ಆ ಮನೆಯ ಹತ್ತಿರ ಬರುತ್ತಾರೆ. ಅನ್ನಲಕ್ಕಮ್ಮ ಆ ಮಕ್ಕಳನ್ನು ವಿಚಾರಿಸಿದಾಗ ತನ್ನ ಅಕ್ಕ ಭೂಲಕ್ಷ್ಮೀ ಮಕ್ಕಳೆಂದು ತಿಳಿದುಕೊಂಡು ಮನೆಯಲ್ಲಿ ಇಟ್ಟುಕೊಳ್ಳುತ್ತಾಳೆ. ಅದೇ ಸಮಯಕ್ಕೆ ಪಾನಗಲ್ ಪಟ್ಟಣದ ಏಳು ಜನ ರಾಜಕುಮಾರರು ಬೇಟೆಗೆಂದು ಬಂದು ಅನ್ನಲಕ್ಕಮ್ಮ ತೋಟದಲ್ಲಿ ಆಯಾಸ ನೀಗಿಸಿಕೊಳ್ಳುತ್ತಿರುತ್ತಾರೆ.

ಮೇಲುಗಡೆ ದೇಶದೊಳಗ
ಪಾನಗಲ್ ಪಟ್ನ ಇದ್ದದಲ್ಲ
ರಾಜ ಉದಿಒದ್ದಿರಾಜ ಇದ್ದವಲ್ಲ
ರಾಜನ ಹೆಂಡತಿ ಪಾಂದೇವಿ ಇದ್ದಳಲ್ಲ
ರಾಜನ ಏಳು ಮಂದಿ ಗಂಡಸು ಮಕ್ಕಳಲ್ಲ

ಇದೇ ಕಥನವನ್ನು ಬೇರೆ ವಕ್ತೃವಿನಿಂದ ಹಾಡಿಸಿದಾಗ ಪಾತ್ರಗಳ ಹಾಗೂ ಪಟ್ಟಣಗಳ ಹೆಸರುಗಳನ್ನು ಭಿನ್ನವಾಗಿ ನಿರೂಪಿಸುತ್ತಾರೆ. ಆದರೆ ಕಥಾ ವಸ್ತುವಿನಲ್ಲಿ ಬದಲಾವಣೆ ಕಂಡುಬರುವುದಿಲ್ಲ.

**ಪ್ರಾದೇಶಿಕತೆ**

ಶಂಕ್ರಮ್ಮ ಅವರು ಹಾಡಿದ ಈ ಕಥನದಲ್ಲಿ ಪ್ರಾದೇಶಿಕ ಸೊಗಡು ಕಾಣುತ್ತದೆ. ಇವರು ವಾಸಿಸುವ ಗುಲಬರ್ಗಾ ಜಿಲ್ಲೆ ಹಾಗೂ ಯಾದಗಿರಿ ಜಿಲ್ಲೆಯ ಪರಿಸರವನ್ನು ತನ್ನ ಕಥನದಲ್ಲಿ ನಿರೂಪಿಸಿದ್ದನ್ನು ಕಾಣಬಹುದು. ಕಥನದಲ್ಲಿ ಆಡುನುಡಿ, ಗ್ರಾಮೀಣ ಭಾಷೆ, ಉರ್ದು ಮಿಶ್ರಿತ ಪದಗಳು, ಸರಳವಾದ ಪದಗಳನ್ನು ಅಭಿವ್ಯಕ್ತಿ ಮಾಡಿದ್ದಾರೆ.

ಮಾಣಿಕ್ಯಲದೇವಿ ಸತ್ತಂತ ಸವತಿ ಭೂಲಕ್ಷ್ಮೀ ಮಕ್ಕಳ ಮೇಲಿನ ದ್ವೇಷದಿಂದ ಆ ಮಕ್ಕಳನ್ನು ಅರಣ್ಯಕ್ಕೆ ಬಿಟ್ಟು ಬರಲು ಗಂಡನಿಗೆ ಹೇಳುತ್ತಾಳೆ. ಇದರಿಂದ ಗಂಡ ಹೆಂಡತಿ ಅರಮನೆಯಲ್ಲಿ ಸುಖವಾಗಿ ಇರಬಹುದೆಂಬ ಕುತಂತ್ರವನ್ನು ಹುಡುಕುತ್ತಾಳೆ. ಮತ್ತೆ ಗಂಡನಿಗೆ ಮಕ್ಕಳನ್ನು ಅರಣ್ಯದಲ್ಲಿ ಬಿಟ್ಟು ಬರದೇ ಹೋದರೆ ತವರ ಮನೆಗೆ ಹೋಗುತ್ತೇನೆಂಬ ಭಯವನ್ನು ಹುಟ್ಟಿಸುತ್ತಾಳೆ. ಇದರಿಂದ ಗಂಡನು ಹೆಂಡತಿಯ ಆಶೆಯನ್ನು ಈಡೇರಿಸುತ್ತಾನೆ.

ಗಂಡಗ ಏನು ಬುತ್ತಿ ಕಟ್ಟ್ಯಾಳ
ಗಿದ್ದನ ಅಕ್ಕಿ ತಂದು
ಹಾಲು ಅನ್ನ ಚಲೋ ಹೊತ್ತಿನಗ ಅನ್ನ ಮಾಡಿ
ಒಂದು ಮಾವಿನ ಕಾಯೋಟು ಗಂಡಗ ಬುತ್ತಿ ಕಟ್ಟ್ಯಾಳ
ಬುತ್ತಿ ಕಟ್ಟಿ ರೆಡಿ ಮಾಡಿ ಇಟ್ಟ್ಯಾಳ
ಹೊತ್ತು ಮುಳುಗಿತ್ತು ಕತ್ತಲಾಗಿತ್ತು

ಮಾಣಿಕ್ಯಲದೇವಿ ಗಂಡನಿಗೆ ಮಕ್ಕಳಿಗೆ ಬೇರೆ ಬೇರೆ ಬುತ್ತಿ ಕಟ್ಟಿ ತನ್ನ ಮತ್ಸರವನ್ನು ಹೊರಹಾಕಿದ್ದಾಳೆ. ಮಕ್ಕಳಿಗೆ ಸಗಣಿ ಸುಣ್ಣ ಕಲಿಸಿ ಬುತ್ತಿ ಕಟ್ಟಿದ್ದರೆ, ಗಂಡನಿಗೆ ಒಳ್ಳೇ ಅಕ್ಕಿಯಿಂದ ಅನ್ನ ಮಾಡಿ ಕಟ್ಟಿದ್ದಾಳೆ. ಸರಳ ಸುಂದರವಾಗಿ ಅಭಿವ್ಯಕ್ತಿ ಇದ್ದು ಇಲ್ಲಿ 'ಗಿದ್ದನ' ಎಂಬುದು 'ಅಳತೆ' ಮಾಡುವ ಮಾಪನವಾಗಿದೆ. ಇದರಲ್ಲಿ ಗಿದ್ದನ, ಚಲೋ(ಚೆನ್ನಾಗಿ) ಬುತ್ತಿ, ಮುಂತಾದ ಪದಗಳು ಪ್ರಾದೇಶಿಕ ಪದಗಳಾಗಿವೆ. ಕಥನದುದ್ದಕ್ಕೂ ಇಂತಹ ಪ್ರಾದೇಶಿಕ ಪದಗಳನ್ನು ಕಾಣಬಹುದು.

**ಸವತಿ ಮತ್ಸರ**

ಈ ಕಥನದಲ್ಲಿ ಮಾಣಿಕ್ಯಲದೇವಿಯ ಸವತಿ ಮಕ್ಕಳ ಮತ್ಸರವನ್ನು ಕಾಣಬಹುದು. ಇಲ್ಲಿ ಸ್ತ್ರೀಯು ವಾಸ್ತವ ಬದುಕಿನಲ್ಲಿ ಕಾಣುವ ಮನೋಭಾವವು ಮೂಡಿಬಂದಿದೆ. ಮಕ್ಕಳು ಇದ್ದ ತಂದೆ ಮತ್ತೊಂದು ಮದುವೆಯಾದಾಗ ಎಂತಹ ಪರಿಸ್ಥಿತಿಯನ್ನು ಎದುರಿಸಬೇಕಾಗುತ್ತದೆಂಬುದು ಮನೋಜ್ಞವಾಗಿ ಚಿತ್ರಿತವಾಗಿದೆ. ಮಲತಾಯಿಯು ತನ್ನ ಮಕ್ಕಳೆಂದು ತಿಳಿಯದೆ ಆ ಮಕ್ಕಳನ್ನು ಪ್ರೀತಿಯಿಂದ ಕಾಣದೆ ಸವತಿ ಮಕ್ಕಳ ಮತ್ಸರದಿಂದ, ಮಕ್ಕಳಿಗೆ ತೊಂದರೆ ಕೊಡುವುದು, ಸಾಯಿಸುವ ಉಪಾಯವನ್ನು ಹುಡುಕುವುದು ಮುಂತಾದ ವಿಚಾರಗಳನ್ನು ಮಾಡುತ್ತಾಳೆ. ಸಾಮಾನ್ಯ ಜನರ ಬದುಕಿನಲ್ಲಿ ಇಂತಹ ಪ್ರಸಂಗವನ್ನು ಕಾಣಬಹುದು. ಇಲ್ಲಿ ಮಾಣಿಕ್ಯಲದೇವಿಯ ಪಾತ್ರದಲ್ಲಿ ಅಂತಹ ಮತ್ಸರ ಮನೋಭಾವದ ಸನ್ನಿವೇಶವನ್ನು ಕಾಣುತ್ತೇವೆ. ಹೆಣ್ಣಿಗೆ ಹೆಣ್ಣೆ ಶತ್ರು ಎಂಬಂತೆ ತಾನು ಹೆಣ್ಣಾಗಿ ಇದ್ದು ಹೆಣ್ಣನ್ನೇ ದ್ವೇಷಿಸುವ, ಸವತಿಯರ ಮತ್ಸರವನ್ನು ಕಾಣಬಹುದು. ಇಲ್ಲಿ ಭೂಲಕ್ಷ್ಮೀ ಕಥನದಲ್ಲಿ ಸವತಿ ಮಕ್ಕಳಿಗೆ ಕಷ್ಟ ಕೊಟ್ಟು ಆ ಮಕ್ಕಳನ್ನು ಅನಾಥರನ್ನಾಗಿ ಮಾಡಿ, ಗಂಡನನ್ನು ತನ್ನ ಹತೋಟಿಯಲ್ಲಿ ಇಟ್ಟುಕೊಂಡು, ಗಂಡನಿಂದಲೇ ಸವತಿ ಮಕ್ಕಳನ್ನು ದೂರತಳ್ಳುವಂತೆ ಮಾಡುವ ತಂತ್ರವು, ಮತ್ಸರ, ಮನೋಭಾವವು ಮಾಣಿಕ್ಯಲದೇವಿ ಪಾತ್ರದಲ್ಲಿ ಚಿತ್ರಿತಗೊಂಡಿದೆ.

ನವಭೋಜರಾಜನು ಮಕ್ಕಳ ಮೇಲೆ ತುಂಬ ಪ್ರೀತಿ ಇಟ್ಟಿದ್ದನ್ನು ಕಂಡು ಹೆಂಡತಿ ಮಾಣಿಕ್ಯಲದೇವಿ ತನ್ನ ಗಂಡನನ್ನು ತನ್ನ ವಶ ಮಾಡಿಕೊಳ್ಳಬೇಕೆಂಬ ಹಂಬಲದಿಂದ ಮರುಳು ಮಾತಂಗಿ ಗಿಡವನ್ನು ಕೊಟ್ಟು ಕಳಿಸಲು ತಾಯಿ ತಂದೆಗೆ ಹೇಳಿ ಕಳಿಸುತ್ತಾಳೆ. ಮಕ್ಕಳ ಮೇಲಿನ ಮತ್ಸರದಿಂದ ಈ ತಂತ್ರವನ್ನು ಉಪಯೋಗಿಸುತ್ತಾಳೆ.

ನಮ್ಮ ತಾಯಿಗೆ ನಾ ಹೇಳಿ ಕಳಿಸ್ತಿನಿ
ಹಡೆದಂತ ತಾಯಿ ಗಿರಿಜಾವತಿ
ಮಕ್ಕಳ ಮೇಲೆ ಬಹಳ ಜೀವ ಆನ
ನನ್ನ ಮೇಲೆ ಜೀವ ಇಲ್ಲ
ಮರುಳು ಮಾತಂಗಿ ಗಿಡ ನೀ ಕೊಟ್ಟು ಕಳಿಸಬೇಕು
ಗಿಡ ಕೊಟ್ಟು ಕಳಿಸಿದರೆ ಗಿಡ ಸಣ್ಣಗೆ ಅರಿದು

ಕೊಬ್ಬರಿ ಎಣ್ಣ್ಯಾಗ ಕಲಿಸಿ ರಾಜನ ತಲೆಗೆ ಹಚ್ಚಿದರ

ಮಕ್ಕಳ ಮ್ಯಾಲೆ ಜೀವ ಕಡಿಮೆ ಆಗ್ತದ

ನನ್ನ ಮ್ಯಾಲೆ ಜೀವ ಆಗ್ತನ

ಇಲ್ಲಿ ಗಂಡನನ್ನು ಒಲಿಸಿಕೊಳ್ಳುವ ತಂತ್ರವು ವ್ಯಕ್ತವಾಗಿದೆ. ಮಾಣಿಕ್ಯಲದೇವಿ ಸವತಿ ಮಕ್ಕಳ ಮೇಲಿನ ಹೊಟ್ಟೆಕಿಚ್ಚಿನಿಂದ ಈ ತಂತ್ರವನ್ನು ಉಪಯೋಗಿಸುತ್ತಾಳೆ. ಹೆಣ್ಣು ತನ್ನ ಗಂಡ ತನ್ನ ಮೇಲೆಯೇ ಪ್ರೀತಿ ಇರಬೇಕು ಇನ್ನೊಬ್ಬರ ಮೇಲೆ ಪ್ರೀತಿ ಇರಬಾರದೆಂಬ ಹಂಬಲ ಇರುವುದರಿಂದ, ಗಂಡನನ್ನು ತನ್ನ ಹತೋಟಿಯಲ್ಲಿ ಇಟ್ಟುಕೊಳ್ಳಲು 'ಮರುಳು ಮಾತಂಗಿ ಗಿಡ'ವನ್ನು ತವರು ಮನೆಯಿಂದ ತರಿಸಿಕೊಡುತ್ತಾಳೆ. ಗಂಡ ವಶವಾಗುವ ಗಿಡವನ್ನು ಕೊಬ್ಬರಿ ಎಣ್ಣೆಯಲ್ಲಿ ಹಾಕಿ ತಲೆಗೆ ಹಚ್ಚಿದರೆ ಬೇಗ ವಶವಾಗುವನೆಂಬ ಭಾವ ವ್ಯಕ್ತವಾಗಿದೆ. ಇದು ವಾಸ್ತವ ಬದುಕಿನ ಪ್ರತಿಬಿಂಬವಾಗಿ ಕಾಣಿಸುತ್ತದೆ. ಇಂತಹ ವ್ಯವಸ್ಥೆಗೆ ಹಳ್ಳಿಗಳಲ್ಲಿ ನಾಟಿಪದ್ಧತಿಯ ಔಷಧಿಯನ್ನು ಉಪಯೋಗಿಸುವುದು ಕಂಡುಬರುತ್ತದೆ. ಮುಖ್ಯವಾಗಿ ಈ ಕಥನದಲ್ಲಿ ಹೆಣ್ಣು ಒಲಿಸಿಕೊಳ್ಳುವ ವಿಧಾನ, ರೀತಿ, ಪರ ಹೆಣ್ಣುಮಕ್ಕಳ ಮೇಲೆ ಹಗೆತನ, ದ್ವೇಷ, ಅಸೂಯೆ ಮುಂತಾದ ಭಾವಗಳು ಮಾಣಿಕ್ಯಲದೇವಿ ಪಾತ್ರದಲ್ಲಿ ಅಭಿವ್ಯಕ್ತಗೊಂಡಿದೆ.

ನವಭೋಜರಾಜನು ಇನ್ನೂ ಮಕ್ಕಳ ಮೇಲಿನ ಪ್ರೀತಿ ಇದ್ದುದನ್ನು ಕಂಡು ಹೆಂಡತಿ ಮಾಣಿಕ್ಯಲದೇವಿ ಸವತಿ ಮಕ್ಕಳನ್ನು ಕೊಲ್ಲುವ ಹೇಯ ಪ್ರವೃತ್ತಿಗೆ ಕೈಹಾಕಲು ಉಪಾಯವನ್ನು ಕಂಡುಕೊಳ್ಳುತ್ತಾಳೆ. ಈ ಸವತಿ ಮಕ್ಕಳನ್ನು ಸಲಹುವವರು ಯಾರು? ಎಂದು ತಿಳಿದು ಅವರು ದೊಡ್ಡವರಾದ ಮೇಲೆ ನನಗೆ ಮೂಲ (ವೈರಿ) ಆಗುತ್ತಾರೆಂದು ಬಗೆಯುತ್ತಾಳೆ. ಹೀಗಾಗಿ ಚಿಕ್ಕಮಕ್ಕಳು ಇದ್ದಾಗಲೇ ವಿಷಕೊಟ್ಟು ಕೊಲೆ ಮಾಡಬೇಕೆಂದು ಯೋಚಿಸುತ್ತಾಳೆ. ಏಳು ಜನ ಮಕ್ಕಳಿದ್ದರಿಂದ ಬುಟ್ಟಿ ತುಂಬ ರೊಟ್ಟಿಯನ್ನು ಮಾಡಿದರೂ ಸಾಲುವುದಿಲ್ಲ. ಇವರಿಗೆ ಅಡಿಗೆ ಮಾಡಿ ಸಾಕಾಗಿದೆ. ಇದರಿಂದ ಪಾರಾಗಲು ಮಕ್ಕಳಿಗೆ ವಿಷಕೊಟ್ಟು ಮಾಯ ಮಾಡುತ್ತೇನೆಂದು ಉಪಾಯವನ್ನು ಹೂಡುತ್ತಾಳೆ.

ಮಲತಾಯಿ ಏನೇನು ಇಸ ತಂದಳ

ಗಾಜಿನ ಬಳಿ ಒಡೆದು ಅರಿದು ಹಾಕಿ

ತುಪ್ಪಂತ ಕ್ಯಾರೆಳ್ಳು ಎಣ್ಣೆ ತಂದು

ಮಸುರಂತ ವಸುಸುಣ್ಣ ತಂದು

ನಾಗರ ಹಾವು ವಿಷ ತಂದು

ಹೊಸ ಗಡಿಗಿದಾಗ ಅಡಿಗಿ ಮಾಡಿ

ಬಾಜರದೊಳಗ ಆಡಂತ ಮಕಳ್ನ ಹೆಂಗ ಕರಿತಾಳ

ಬರೆಮ್ಮ ಸಣ್ಣ ಮಕ್ಕಳೆ

ಹಾಲು ಹಾಕಿ ಅನ್ನ ಮಾಡಿನಿ

ಬೆಲ್ಲ ಹಾಕಿ ಸಜ್ಜಕ ಮಾಡಿನಿ

ಉಂಡು ತಿಂದು ಆಡಲಕ ಹೋಗಿರಮ್ಮ

ಬರೆಮ್ಮ ಮಕ್ಕಳೆಂದು ಕರೆದಳಲ್ಲ

ಮಲತಾಯಿಯ ಕ್ರೂರತನ ಏನು ಅರಿಯದ ಮುಗ್ಧ ಮಕ್ಕಳು ಅವಳ ಕುತಂತ್ರಕ್ಕೆ ಬಲಿಯಾಗುವ ಸನ್ನಿವೇಶವು ಕರುಣಾಜನಕವಾಗಿದೆ. ಮಲತಾಯಿಯು ಎಂದಿಲ್ಲದೆ ಇಂದು ಸಂತೋಷದಿಂದ ಬಜಾರದಲ್ಲಿ ಆಡುವ ಮಕ್ಕಳನ್ನು ಕರೆಯುವುದರಲ್ಲಿ ಕುತಂತ್ರವು ಅಡಗಿದೆ. ಮುಗ್ಧ ಮಕ್ಕಳ ಮೇಲೆ ಹೊಟ್ಟೆ ಕಿಚ್ಚಿನಿಂದ ಬಳೆಗಳ ಚೂರು, ಕ್ಯಾರೆಳ್ಳಿನ ಎಣ್ಣೆ, ಸುಣ್ಣ ಇವೆಲ್ಲವನ್ನು ಬೆರೆಸಿ, ಕತ್ತಲ ಕೋಣೆಯಲ್ಲಿ ಮಕ್ಕಳನ್ನು ಕೂಡಿಸಿ ಊಟಕ್ಕೆ ಬಡಿಸುತ್ತಾಳೆ. ಏನರಿಯದ ಮಕ್ಕಳು ತಿಂದು ಹುಳಗಳಂತೆ ವಿಲಿ ವಿಲಿ ಒದ್ದಾಡಿದರೂ ಕಟುಕರ ಹೃದಯದ ಮಲತಾಯಿ ಕಣ್ಣಿಂದ ನೋಡಿ ಮಕ್ಕಳ ಪೀಡೆ ಇಲ್ಲಿಗೆ ಮುಗಿಯಿತು ಎಂದು ಸಂತೋಷಗೊಳ್ಳುತ್ತಾಳೆ. ಹೆಣ್ಣು ತನ್ನ ವೈಯಕ್ತಿಕ ಹಿತಾಸಕ್ತಿಗಾಗಿ ಎಂತಹ ಹೇಯ ಕೃತ್ಯಕ್ಕೂ ಹಿಂಜರಿಯುವುದಿಲ್ಲ ಎಂಬುದು ಇಲ್ಲಿ ತಿಳಿಯುತ್ತದೆ. ಸ್ತ್ರೀ ಪ್ರಧಾನವಾದ ವಸ್ತು ಒಳಗೊಂಡ ಈ ಕಥನದಲ್ಲಿ ಕ್ರೂರ ಸ್ತ್ರೀಯ ಮುಖವಾಡವು ಅಭಿವ್ಯಕ್ತಗೊಂಡಿದೆ. ವಾಸ್ತವ ಜೀವನದ ಬದುಕಿನ ಅಂಶವು ಇಲ್ಲಿ ವ್ಯಕ್ತವಾಗಿದೆ. ಸ್ತ್ರೀಯು ತನ್ನ ಸಹನೆ, ಸಹಬಾಳ್ವೆ, ತಾಳ್ಮೆ, ಮಮತೆ ಮುಂತಾದ ಗುಣಗಳಿಂದ ಹೆಸರುವಾಸಿಯಾಗುವವಳು. ಆದರೆ ಕೆಲವು ಸಂದರ್ಭದಲ್ಲಿ ಅದೇ ಹೆಣ್ಣು ಎಂತಹ ಹೇಯ ಕೃತ್ಯಕ್ಕೆ ಇಳಿಯುತ್ತಾಳೆಂಬ ಅಂಶವು ಇಲ್ಲಿ ಕಾಣಬಹುದು. 'ಉಂಡು ತಿಂದು ಆಡಲಿಕ್ಕೆ ಹೋಗಿರಮ್ಮ' ಎಂಬ ಸಾಲಿನಲ್ಲಿ ಅವಳ ಪ್ರೀತಿಯ ಹಿಂದೆ ಅವಳ ವ್ಯಂಗ್ಯ ಮಾತಿನ ಒಳಗಡೆ ದ್ವೇಷ ಎಂಬ ಮುಖವಾಡ ಹೇಗೆ ಅಡಗಿದೆ ಎಂಬುದನ್ನು ಇಲ್ಲಿ ಕಾಣಬಹುದಾಗಿದೆ.

**ಮಮತೆ**

'ಹೆತ್ತವ್ವಗೆ ಹೆಗ್ಗಣ ಮುದ್ದು' ಎನ್ನುವ ಹಾಗೆ ಮಕ್ಕಳು ಹೇಗೆಯೇ ಇರಲಿ ತಂದೆತಾಯಿಗೆ ಮುದ್ದು ತಾಯಿಯಲ್ಲಿ ಸಹನೆ, ಕರುಣೆ, ವಾತ್ಸಲ್ಯ ಮುಂತಾದ ಗುಣಗಳು ಅಡಗಿರುತ್ತವೆ. ಹಾಗೆ ಈ ಕಥನದಲ್ಲಿ ಭೂಲಕ್ಷ್ಮೀ ತಾನು ಸತ್ತು ಸ್ವರ್ಗಸ್ಥಳಾಗಿದ್ದರೂ, ಮಕ್ಕಳ ಮೇಲಿನ ಪ್ರೀತಿ, ಕರುಣೆಯಿಂದ ಮಕ್ಕಳ ಕಷ್ಟವನ್ನು ನೋಡಿ ಆಕಳ ರೂಪದಲ್ಲಿ ಬರುವುದಾಗಿದೆ. ನವಭೋಜರಾಜನ ಮಕ್ಕಳ ಮೇಲಿನ ಮಮತೆ ಈ ಕಥನದಲ್ಲಿ ವ್ಯಕ್ತವಾಗಿದೆ. ಹಾಗೆಯೇ ಮಕ್ಕಳೂ ಸಹ ತಂದೆಯ ಮೇಲೆ ಅಷ್ಟೇ ಪ್ರೀತಿ ವಿಶ್ವಾಸವನ್ನು ಇಟ್ಟು, ತಂದೆಯ ಹಿತವನ್ನೇ ಬಯಸಿರುತ್ತಾರೆ.

ಭೂಲಕ್ಷ್ಮೀ ಏಳು ಜನ ಮಕ್ಕಳಿಗೆ ಸವತಿ ಮಾಣಿಕ್ಯಲದೇವಿ ಅನ್ನದಲ್ಲಿ ವಿಷ ಹಾಕಿ ಸಾಯಿಸಿ, ಹಾಳು ಬಾವಿಯಲ್ಲಿ ಹಾಕಿರುತ್ತಾಳೆ. ಭೂಲಕ್ಷ್ಮೀ ಸತ್ತರೂ ಮಕ್ಕಳ ಮೇಲಿನ ವಾತ್ಸಲ್ಯದಿಂದ ಸ್ವರ್ಗದಿಂದ ಬಂದು

ಸತ್ತ ಮಕ್ಕಳನ್ನು ಮತ್ತೆ ಬದುಕಿಸುತ್ತಾಳೆ. ಮಕ್ಕಳು ವಿಷದಿಂದ ಚಡಪಡಿಸುವಾಗ ಆಕಳಾಗಿ ನಿಂತು ಹಾಲುಣಿಸುವುದನ್ನು ಕಂಡರೆ, ತಾಯಿ ಮಕ್ಕಳ ಕರುಳಿನ ಸಂಬಂಧ, ವಾತ್ಸಲ್ಯ ಎದ್ದು ಕಾಣುತ್ತದೆ. ಭೂಲಕ್ಷ್ಮೀ ಏಳು ಜನ ಹೆಣ್ಣುಮಕ್ಕಳನ್ನು ಬಾವಿಯಿಂದ ಹೊರಗೆ ತೆಗೆದು ಮಕ್ಕಳ ಬಾಯಲ್ಲಿ ಶಂಕುತೀರ್ಥ ಹಾಕಿ, ಜೀವಾಳ ಕಟ್ಟಿ ಹೊರಿಸಿದಾಗ ಮಕ್ಕಳು ಎದ್ದು ಕುಳಿತುಕೊಳ್ಳುತ್ತಾರೆ. ಆಗ ಮಕ್ಕಳು ಮಲತಾಯಿ ಮಾಣಿಕ್ಯಲದೇವಿಯನ್ನು ಬಯ್ಯುತ್ತ ನೀರು ಕೊಡು ಎಂದು ಅಂಗಲಾಚುತ್ತಾರೆ. ಇದನ್ನು ಗಮನಿಸಿದ ಭೂಲಕ್ಷ್ಮೀ ಕಣ್ಣಿಂದ ನೋಡುತ್ತಾಳೆ.

> ಹಡೆದಂತೆ ತಾಯಿ ಕಣ್ಣೀಲೆ ನೋಡಿ
> ಮಕ್ಕಳ ಹೊಟ್ಯಾಗ ಇಸಗೋಳು ಕರಗಿಲ್ಲ
> ಈ ಮಕ್ಕಳಿಗೆ ಆಕಳಾಗಿ ನಾ ನಿಂದ್ರುತಿನಿ
> ತಾಯಿಯ ಮಲಿಹಾಲು ಮಕ್ಕಳು ಕುಡಿದರೆ
> ಇಸ ಕರುಗುತ್ತವೆಂದು ತಾಯಿ ಮಾಯ ರೂಪದಲ್ಲಿಂದ
> ಗಂಗಿ ಆಕಳಾಗಿ ನಿಂತಾಳ
> ಏಳು ಮಂದಿ ಮಕ್ಕಳು ತಾಯಿಯ ಮಲಿ ಹಾಲನ್ನ
> ಒಬ್ಬರು ಕುಡಿದ ಮೇಲೆ ಒಬ್ಬರು ಕುಡೀತಾರ

ತಾಯಿಯು ಮಕ್ಕಳ ಮೇಲಿನ ವಾತ್ಸಲ್ಯದಿಂದ ಸತ್ತ ಮನುಷ್ಯ ದೇವರಾಗುವ ಆಶಯ ಇಲ್ಲಿ ವ್ಯಕ್ತವಾಗಿದೆ. ಮಾನವನು ತಾನು ಮಾಡಿದ ಒಳ್ಳೆಯ ವ್ಯಕ್ತಿತ್ವದಿಂದ ದೇವರಾಗುತ್ತಾನೆ. ಭಾರತೀಯ ಸಂಪ್ರದಾಯದಲ್ಲಿ ಇಂತಹ ಸಂದರ್ಭ ಕಾಣಬಹುದು. ಮಕ್ಕಳ ಮೇಲಿನ ಪ್ರೀತಿಯಿಂದ ಅವಳು ದೇವತೆಯಾಗಿದ್ದರೂ ಸಹ ಮಕ್ಕಳಿಗೆ ತಿಳಿಯದಂತೆ, ಬಂದು ಉಪಚರಿಸುವ ರೀತಿ ಇಲ್ಲಿದೆ. ಭಾರತಿಯರು ಆಕಳಿಗೆ ದೇವರ ಸ್ಥಾನವನ್ನು ಕೊಟ್ಟಿದ್ದಾರೆ. ಈ ಹಿನ್ನೆಲೆಯಲ್ಲಿ ತನ್ನ ಮಕ್ಕಳ ಮುಂದೆ ಮಕ್ಕಳ ಹೊಟ್ಟೆಯಲ್ಲಿ ವಿಷವು ಕರಗಲು ಆಕಳಾಗಿ ನಿಲ್ಲುತ್ತಾಳೆ. ತನ್ನ ನಿಜರೂಪ ತಿಳಿಯುತ್ತದೆಂಬ ಉದ್ದೇಶದಿಂದ ಆಕಳಾಗಿ ನಿಂತು ಹಾಲುಣಿಸುವುದು ಕಂಡರೆ ತಾಯಿಯ ಕರುಣೆ, ಮಮತೆ, ವಾತ್ಸಲ್ಯ ಭಾವವು ಇಲ್ಲಿ ವ್ಯಕ್ತಗೊಂಡಿದೆ. ಗೋವಿಗೆ ಪೂಜನೀಯ ಸ್ಥಾನವನ್ನು ಜನಪದರು ನೀಡುತ್ತಾರೆ. ಈ ಹಿನ್ನೆಲೆಯಲ್ಲಿ ಗೋವನ್ನು ಕತೆಯಲ್ಲಿ ಅಭಿವ್ಯಕ್ತಿ ಮಾಡಿದ್ದಾರೆ. ಭೂಲಕ್ಷ್ಮೀಯ ಆಕಳ ರೂಪದಲ್ಲಿ ಮಕ್ಕಳಿಗೆ ಹಾಲನ್ನು ಕೊಡುವುದನ್ನು ಚಿತ್ರಿಸುವ ಮೂಲಕ ಹೈನುಗಾರಿಕೆಯ ಮಹತ್ವವನ್ನು ಹೇಳಲಾಗಿದೆ.

ಏಳು ಜನ ಹೆಣ್ಣುಮಕ್ಕಳು ತಾಯಿ ಭೂಲಕ್ಷ್ಮೀ ಸತ್ತು ದೇವರಾಗಿದ್ದಾಳೆಂಬುದನ್ನು ಅರ್ಥ ಮಾಡಿಕೊಂಡು, ಅವಳು ನಮ್ಮ ಕೈಗೆ ಸಿಗುವುದಿಲ್ಲ ಎಂದು ಬಗೆದು ತಂದೆಯನ್ನು ಹುಡುಕಿಕೊಂಡು ಬರುತ್ತಾರೆ. ಈ ಮಕ್ಕಳು ತಂದೆಯ ಮೇಲಿನ ಪ್ರೀತಿಯಿಂದ ತಂದೆಯ ಸಂಸಾರ ಹಾಳಾಗಬಾರದೆಂಬ ಉದ್ದೇಶದಿಂದ, ತನ್ನ

ಮಲತಾಯಿ ಕುತಂತ್ರ, ವಿಷ ಬೆರೆಸಿದ ಅನ್ನ ಕೊಟ್ಟು ಸಾಯಿಸಿದ ವಿಷಯವನ್ನು ತಂದೆಗೆ ಹೇಳಬಾರದೆಂದು ಏಳು ಜನ ಮಕ್ಕಳು ಮಾತನಾಡಿಕೊಂಡು ಬರುತ್ತಾರೆ. ಏಳು ಮಕ್ಕಳಲ್ಲಿ ಹಿರಿಯವಳು ಈರ ಸಂಗಮ್ಮ ಆರು ಮಂದಿ ತಂಗಿಯರಿಗೆ ಈ ರೀತಿ ಹೇಳುತ್ತಾಳೆ. ಏನಮ್ಮ ತಂಗಿಯರೆ, ಅಪ್ಪನ ಹತ್ತಿರ ನಾವು ಹೋಗುತ್ತೇವೆ. ಇಲ್ಲಿಗೆ ಮೂರು ದಿನ ಕಳೆದವು. ಅಪ್ಪ ಎಲ್ಲಿಗೆ ಹೋಗಿದ್ದಿರಿ ಎಂದು ಕೇಳಿದರೆ, ಮಲತಾಯಿ ಮಾಣಿಕ್ಯಲದೇವಿ ವಿಷಕೊಟ್ಟು ಕೊಂದಿದ್ದಳು, ನಮ್ಮನ್ನು ಬಾವಿಯಲ್ಲಿ ಹಾಕಿದ್ದಳೆಂದು ಅಪ್ಪನ ಮುಂದೆ ಈ ಮಾತುಗಳನ್ನು ಆಡಬೇಡಿರಿ ಎಂದು ಹೇಳುತ್ತಾಳೆ. ನಾವು ರಾಮಲಿಂಗ ಜಾತ್ರೆಗೆ ಹೋಗಿದ್ದೆವು ಸೋದರ ಮಾವನವರು ಜಾತ್ರ ಮಾಡಿ ಕಳುಹಿಸಿದ್ದರೆಂದು ಅಪ್ಪನ ಮುಂದೆ ಹೇಳಬೇಕೆಂದು ತಿಳಿಸುತ್ತಾಳೆ. ಈ ಮಕ್ಕಳು ಉದಾರ ಮನೋಭಾವದಿಂದ ಆದರ್ಶ ಗುಣಗಳಿಂದ ಇದ್ದುದು ಇದ್ದಂಗೆ ಹೇಳಿದರೆ ತಂದೆಯ ಸಂಸಾರ ಕೆಡುತ್ತದೆಂದು ಭಾವಿಸಿಕೊಂಡು ಮಲತಾಯಿ ಮಾಣಿಕ್ಯಲದೇವಿಯ ಕುತಂತ್ರವನ್ನು ಅರುಹುವುದಿಲ್ಲ. ಇಲ್ಲಿ ಮಕ್ಕಳಲ್ಲಿ ತಂದೆಯ ಮೇಲಿನ ಮಮತೆಯು ವ್ಯಕ್ತವಾಗುತ್ತದೆ.

ಅಂತ ಮಾತು ಹೇಳಿದರೆ
ಅಪ್ಪ ಸಿಟ್ಟಲೆ ಮನಿಗಿ ಹೋಗಿ
ಮಲತಾಯಿ ಮಾಣಿಕ್ಯಲದೇವಿಗೆ
ಸಿಟ್ಟು ಬಂದು ಹೊಡಿತನ
ಸೀರಿ ಕುಬಸು ಕೊಂಕಳದಗ ಇಟ್ಟುಕೊಂಡು
ತವರು ಮನಿಗಿ ಹೋಗ್ತಳ
ಯಾರ ಸಂಸಾರ ಹಾಳಾಗ್ತದ
ಅಪ್ಪನ ಸಂಸಾರ ಹಾಳಾಗ್ತದ
ಆ ಮಾತು ಹೇಳ ಬೇಡಿರಿ

ಎಂದು ಈರಸಂಗಮ್ಮ ತಂಗಿಯರಿಗೆ ಹೇಳುತ್ತಾಳೆ. ತಂಗಿಯರಾದ ಗಿರಿದೇವಿ, ರತ್ನಾಚಿದೇವಿ, ಮಲ್ಲಿಗೆದೇವಿ, ಮೂಡಲದೇವಿ, ಅಕ್ಕನಾಗಮ್ಮ ಎಲ್ಲರಿಗಿಂತ ಕಿರಿಯವಳಾದ ಬಾಲನಾಗಮ್ಮ ಅಕ್ಕನ ಮಾತನ್ನು ಒಪ್ಪುತ್ತಾರೆ. ಇವರು ತಂದೆಯ ಮೇಲಿನ ಪ್ರೀತಿಯಿಂದ ತಾವು ಕಷ್ಟವನ್ನು, ನೋವನ್ನು ಪಡೆದರೂ ಸಹ ಆ ನೋವನ್ನು ನುಂಗಿಕೊಂಡು ತಂದೆಯ ಸಂಸಾರ ಹಾಳಾಗಬಾರದೆಂಬ ಉದ್ದೇಶದಿಂದ, ಮಲತಾಯಿಯ ಕುತಂತ್ರವನ್ನು ಹೇಳದೆ ಮೂರು ದಿನಗಳಿಂದ ರಾಮಲಿಂಗ ಜಾತ್ರೆಗೆ ಹೋಗಿದ್ದೆವು ಎಂದು ಹೇಳುವ ಅವರ ಮಾತುಗಳಲ್ಲಿ ಕಿರಿಯರಲ್ಲಿ ಹಿರಿಯರ ಗುಣ ಕಾಣಿಸುತ್ತದೆ. ತಂದೆಯ ಮೇಲಿನ ಮಮತೆಯಿಂದ ಮಲತಾಯಿಯ ಕ್ರೂರತನವನ್ನು ಸಹಿಸಿಕೊಳ್ಳುವ ಕರುಣಾಮಯವಾದ ಸನ್ನಿವೇಶವು ಇಲ್ಲಿ ವ್ಯಕ್ತವಾಗಿದೆ.

ರಾಜ ನವಭೋಜರಾಜ ತನ್ನ ಏಳು ಜನ ಹೆಣ್ಣುಮಕ್ಕಳು ಇಂದು ಏಕೆ ಮನೆಯಲ್ಲಿ ಇಲ್ಲ ಎಂದು ಪರಿತಪಿಸುತ್ತಾನೆ. ತಂದೆಯನ್ನು ನೋಡಿದ ತಕ್ಷಣ ಓಡಿಬರುವ ಮಕ್ಕಳು ಇಂದು ಏಕೆ ಮನೆಯೆಲ್ಲ ಮೌನವಾಗಿದೆ. ಮಕ್ಕಳೆಲ್ಲಿ ಭಾಮ ಎಂದು ಮಾಣಿಕ್ಯಲದೇವಿಯನ್ನು ಪ್ರಶ್ನಿಸುತ್ತಾನೆ. ಅವಳು ನನಗೆ ಗೊತ್ತಿಲ್ಲ ಎನ್ನುವಳು. ಆಗ ನವಭೋಜರಾಜನಿಗೆ ಸಿಟ್ಟು ಬಂದು ಮನೆಯಲ್ಲಿ ಮಕ್ಕಳ ಪೋಷಣೆಯನ್ನು ಮಾಡುವುದು ಹೆಣ್ಣಿನ ಲಕ್ಷಣ ಇಲ್ಲವೆನ್ನುತ್ತೀಯಾ ಎಂದು ಮನಸೋ ಇಚ್ಛೆ ಬಡಿಯುತ್ತಾನೆ. ಗುಬ್ಬಿ ತನ್ನ ಮರಿಗಳು ಗೂಡಿನಲ್ಲಿ ಇಲ್ಲದ್ದನ್ನು ಕಂಡು ಚಿಂವ್‌ಗುಟ್ಟುತ್ತ ಪರಿತಪಿಸುವಂತೆ ಮಕ್ಕಳು ಎಲ್ಲಿ, ಮಕ್ಕಳು ಎಲ್ಲಿ ಎಂದು ಸಿಕ್ಕಿದ ಜನರೆಲ್ಲರನ್ನು ಕೇಳುತ್ತಾನೆ. ಇಲ್ಲಿ ತಂದೆಯ ಮಕ್ಕಳ ಮೇಲಿನ ಮಮತೆ ವ್ಯಕ್ತವಾಗಿದೆ.

ರಾಜನು ಇಳಿಯುವ ಬಾವಿಯನ್ನು ಇಳಿದು ನೋಡುತ್ತಾನೆ. ಸೇದುವ ಬಾವಿಯನ್ನು ಇಣಕಿ ನೋಡುತ್ತಾನೆ. ಬೆಟ್ಟ, ಗುಡ್ಡ ತಿರುಗುತ್ತಾನೆ. ಎಲ್ಲಿ ನೋಡಿದರೂ ಮಕ್ಕಳು ಕಾಣದ್ದನ್ನು ಕಂಡು ಕಂಗಾಲಾಗಿರುತ್ತಾನೆ.

ಮಕ್ಕಳೆ ನನ್ನ ಪರದೇಶಿ ಮಾಡಿ ಹೋದಿರಲ್ಲಮ್ಮ
ನನ್ನ ಏಗಿ ಜೋಗಿನ ಮಾಡಿ ಹೋದಿರಲ್ಲಮ್ಮ
ಮಕ್ಕಳು ಮಕ್ಕಳಂತ ರಾಜ ಕಣ್ಣೀರ ತೆಗೀತಾನ
ದುಃಖ ಮಾಡ್ತನಲ್ಲ
ಕಚೇರಿ ಒಳಗೆ ಅನ್ನ ಬಿಟ್ಟು ನೀರು ಬಿಟ್ಟು
ಮಕ್ಕಳು ಮಕ್ಕಳಂತ ಕಚೇರಿ ಒಳಗೆ ಬಿದ್ದನ

ರಾಜನು ತನ್ನ ಮಕ್ಕಳನ್ನು ಕುರಿತು ಪರಿತಪಿಸುವ ಸನ್ನಿವೇಶವು ಶೋಕಮಯವಾಗಿದೆ. ತನ್ನನ್ನು ಅನಾಥನನ್ನಾಗಿ ಮಾಡಿ ಹೋದಿರಲ್ಲ, ಮನೆ ಮನೆ ಸುತ್ತುವ ಜೋಗಿ ಮಾಡಿ ಹೋದಿರಲ್ಲ ಎಂದು ಶೋಕ ವ್ಯಕ್ತಪಡಿಸುತ್ತಾನೆ. ತನ್ನ ಆಸ್ಥಾನದಲ್ಲಿ ಮಕ್ಕಳ ಬಗ್ಗೆ ಚಿಂತಿಸುತ್ತ ಅನ್ನ ನೀರನ್ನು ಬಿಟ್ಟು ವಿಚಾರಮಗ್ನನಾಗಿ ಮುಳುಗಿ ಹೋಗಿದ್ದಾನೆ. ತಂದೆಯು ತಾನು ಸುಮ್ಮನೆ ಇರಬಹುದು, ತನ್ನ ಹೊರಮನಸ್ಸು ಸುಮ್ಮನೆ ಇರಬಹುದು, ಆದರೆ ತನ್ನೊಳಗಿನ ಮನಸ್ಸು ಅಂತರಂಗದ ಮನಸ್ಸು ಮುಖ್ಯ. ತನ್ನ ಕರುಳಿನ ಸಂಬಂಧ, ರಕ್ತ ಸಂಬಂಧವು ತನ್ನ ಮಕ್ಕಳನ್ನು ಅರಸುತ್ತದೆ. ಹೀಗೆ ತಂದೆ ಮಕ್ಕಳ ವಾತ್ಸಲ್ಯವು ಕರುಣಾಜನಕವಾಗಿ ಚಿತ್ರಿತಗೊಂಡಿದೆ.

**ಮಾನವೀಯ ಮೌಲ್ಯಗಳು**

ಭೂಲಕ್ಷ್ಮೀ ಕಥನದ ಕೆಲವು ಪಾತ್ರಗಳಲ್ಲಿ ಮಾನವೀಯ ಮೌಲ್ಯಗಳನ್ನು ಕಾಣಬಹುದು. ಭೂಲಕ್ಷ್ಮೀ ತಂಗಿ ಅನ್ನಲಕ್ಕಮ್ಮ ಆಕೆಯ ಗಂಡ ಹುಲಿರಾಜ. ರಾತ್ರಿಯಾದ ಕೂಡಲೇ ಹುಲಿಯಾಗಿ ಪರಿವರ್ತನೆ ಹೊಂದಿ ಬೇಟೆಗೆ ಹೊರಡುವುದರಿಂದ, ಪಟ್ಟಣ ಬಿಟ್ಟು ಅರಣ್ಯದಲ್ಲಿ ಮನೆ ಕಟ್ಟಿಕೊಂಡು ವಾಸ ಮಾಡುತ್ತಿರುತ್ತಾರೆ. ಆದರೆ ಭೂಲಕ್ಷ್ಮೀಯ ಏಳು ಜನ ಹೆಣ್ಣುಮಕ್ಕಳನ್ನು ನವಭೋಜರಾಜ ತನ್ನ ಕಿರಿಯ ಹೆಂಡತಿ ಮಾಣಿಕ್ಯಲದೇವಿ ಕುತಂತ್ರದಿಂದ ಹೆತ್ತ ಮಕ್ಕಳನ್ನು ಅಡವಿಯಲ್ಲಿ ಬಿಟ್ಟು ಬಂದಿರುತ್ತಾನೆ. ಆ

ಮಕ್ಕಳು ಅಡವಿಯಲ್ಲಿ ಅಲ್ಲಿ ಇಲ್ಲಿ ಹುಡುಕುತ್ತ ಅನ್ನಲಕ್ಕಮ್ಮ ಇದ್ದ ಸ್ಥಳಕ್ಕೆ ಬರುತ್ತಾರೆ. ಆ ಮಕ್ಕಳನ್ನು ವಿಚಾರಿಸಲಾಗಿ ತನ್ನ ಅಕ್ಕನ ಮಕ್ಕಳೆಂದು ತಿಳಿದು, ತನ್ನ ಮನೆಯಲ್ಲಿ ಇಟ್ಟುಕೊಂಡು ಮಾನವೀಯತೆಯನ್ನು ಮೆರೆಯುತ್ತಾಳೆ. ಅನ್ನಲಕ್ಕಮ್ಮ ತನ್ನ ಗಂಡ ಹುಲಿರಾಜ ಬರುತ್ತನೆಂದು ತಿಳಿದು ಮಕ್ಕಳನ್ನು ಒಂದು ಕೊಠಡಿಯಲ್ಲಿ ಇಟ್ಟು ರಕ್ಷಿಸುತ್ತಾಳೆ. ಹಾಗೆಯೇ ಹುಲಿರಾಜನು ಸಹ ತಾನು ಕ್ರೂರಿಯಾಗಿದ್ದರೂ ಮಾನವಿಯ ಗುಣಗಳನ್ನು ಹೊಂದಿರುತ್ತಾನೆ.

ಹುಲಿರಾಜನು ಹುಲಿಯಾಗಿ ಮನೆಗೆ ಬಂದ ಕೂಡಲೇ ಮನುಷ್ಯರ ವಾಸನೆ ಕಂಡುಹಿಡಿದು ಹೆಂಡತಿ ಅನ್ನಲಕ್ಕಮ್ಮನಿಗೆ ಕೇಳುತ್ತಾನೆ. ಕೂಡಲೇ ಅನ್ನಲಕ್ಕಮ್ಮ ಐದು ಹರಳನ್ನು ಮಂತ್ರಿಸಿ ಹುಲಿಯ ಮೇಲೆ ಒಗೆದಾಗ ಹುಲಿಯು ರಾಜನಾಗಿ ಪರಿವರ್ತಿತಗೊಳ್ಳುತ್ತದೆ. ಆಗ ಅನ್ನಲಕ್ಕಮ್ಮ ಏಳು ಜನ ಹೆಣ್ಣುಮಕ್ಕಳ ಕಷ್ಟವನ್ನು ವಿವರವಾಗಿ ತಿಳಿಸುತ್ತಾಳೆ. ಮಕ್ಕಳು ಎಲ್ಲಿ ಎಂದಾಗ, ಮನೆಯ ಬೀಗ ತೆರೆದು ಮಕ್ಕಳನ್ನು ಹೊರಗೆ ಬಿಡುತ್ತಾಳೆ.

ಹುಲಿರಾಜ ಮಕ್ಕಳ ಕಡೆ ನೋಡ್ಯಾನ
ಏಟು ಚಂದ ಮಕ್ಕಳಾರ ಸೂರ್ಜಗನ್ನ ಭಿನ್ನವಾದ
ಭಿನ್ನವಿಲ್ಲದ ಬಿಚಾರಿಚಾಲು ಮಕ್ಕಳು
ಇಂತಹ ಅಪರೂಪದ ಮಕ್ಕಳ್ನ ಅಡಿವ್ಯಾಗ ಬಿಟ್ಟು
ಪರದೇಶೀ ಮಾಡಿ ಹೋಗ್ಯನಲ್ಲ
ನಮ್ಮ ಹೊಟ್ಟೆಯೊಳಗೆ ಮಕ್ಕಳಿಲ್ಲ
ನೀವೇ ಒಂದು ಮಕ್ಕಳು
ಮಕ್ಕಳ್ನ ಟೆಕ್ಕಿಗೆ ಹಾಕಿಕೊಂಡು
ಹುಲಿರಾಜ ದುಃಖ ಮಾಡ್ತನ
ದುಃಖಮಾಡಿ ಅನ್ನಲಕ್ಕಮ್ಮಗ ಹೇಳುತಾನ
ಈ ಮಕ್ಕಳಿಗೆ ಟೇಮು ತಪ್ಪಿ ಟೇಮು
ನೀ ಹೊರಗೆ ಕಳಿಸಬ್ಯಾಡ
ನಾನು ಟೇಮು ತಪ್ಪಿ ಟೇಮು ಬರ್ತಿನಿ
ಚಲೋ ಹೊತ್ತಿನಗೆ ಮಕ್ಕಳ್ನ ಜೋಪಾನ ಮಾಡು

ಹುಲಿರಾಜನಲ್ಲಿ ಮೃಗತನವಿದ್ದರೂ ಇಲ್ಲಿ ಮಾನವೀಯತೆ ಕಾಣುತ್ತದೆ. ರಾತ್ರಿ ಹೊತ್ತಿನಲ್ಲಿ ಹುಲಿಯಾಗಿ ಪರಿವರ್ತನೆಗೊಂಡು ಬೇಟೆಯಾಡುತ್ತಾನೆ. ಆದರೆ ಮನೆಗೆ ಬಂದು ಏಳು ಜನ ಹೆಣ್ಣುಮಕ್ಕಳನ್ನು ಕಂಡು ಸಂತೋಷಗೊಳ್ಳುತ್ತಾನೆ. ಆ ಮಕ್ಕಳನ್ನು ಸೂರ್ಯನಿಗೆ ವರ್ಣಿಸುತ್ತಾನೆ. ಸೂರ್ಯನಿಗಿಂತ ತೇಜಸ್ಸನ್ನು ಆ

ಮಕ್ಕಳಲ್ಲಿ ಕಾಣುತ್ತಾನೆ. ಇಂತಹ ಮಕ್ಕಳನ್ನು ತಂದೆ ಅಡವಿಯಲ್ಲಿ ಬಿಟ್ಟು ಹೋಗಿದ್ದನ್ನು ಕಂಡು ಆಶ್ಚರ್ಯಚಕಿತನಾಗುತ್ತಾನೆ. ಇದರಿಂದ ನೊಂದ ಹುಲಿರಾಜ ಮಾನವೀಯತೆಯಿಂದ ಆ ಮಕ್ಕಳನ್ನು ತನ್ನ ತೆಕ್ಕೆಗೆ ಹಾಕಿಕೊಂಡು ಮಕ್ಕಳ ಪ್ರೀತಿಯನ್ನು ಕಾಣುತ್ತಾನೆ. ತಾನು ಕ್ರೂರಿಯಾದರೂ ಸಹ ತನ್ನಲ್ಲಿ ಮಾನವೀಯತೆ ಇದೆ ಎಂದು ತೋರಿಸುತ್ತಾನೆ. ಮಕ್ಕಳನ್ನು ಕಂಡು ದುಃಖ ಮಾಡುವುದನ್ನು ಕಂಡರೆ, ಹೊರಗೆ ಮಾತ್ರ ಮೃಗತ್ವ ಕಾಣಿಸುತ್ತದೆ ಹೊರತು ಅಂತರಂಗದಲ್ಲಿ ಮಾನವೀಯತೆ ಹುದುಗಿರುವುದು ಕಂಡುಬರುತ್ತದೆ. ಹೀಗಾಗಿ 'ಈ ಮಕ್ಕಳನ್ನು ಟೇಮು ತಪ್ಪಿ ಟೇಮು ಹೊರಗೆ ಕಳಿಸಬ್ಯಾಡ' ಎನ್ನುವ ಸಾಲಿನಲ್ಲಿ ಮಕ್ಕಳ ಮೇಲಿನ ವಾತ್ಸಲ್ಯವು ಕಾಣುತ್ತದೆ. 'ಚಲೋವೊತ್ತಿನಗ ಮಕ್ಕಳನ್ನು ಜೋಪಾನ ಮಾಡು' ಎನ್ನುವ ಸಾಲಿನಲ್ಲಿ ತನ್ನ ಹೆಂಡತಿ ಅನ್ನಲಕ್ಕಮ್ಮಗೆ ಬುದ್ಧಿವಾದವನ್ನು ಹೇಳುವುದನ್ನು ನೋಡಿದರೆ ಹುಲಿಯಾಗಿದ್ದರೂ ತನ್ನಲ್ಲಿ ಸಹ ಮನುಷ್ಯತ್ವ ಗುಣ ಇದೆ ಎಂಬುದನ್ನು ಸಾಬೀತು ಪಡಿಸುತ್ತಾನೆ.

ಕಿರಿಯ ಹೆಂಡತಿ ಮಾಣಿಕ್ಯಲದೇವಿ ಮಾತನ್ನು ನಂಬಿ ಏಳು ಜನ ಮಕ್ಕಳನ್ನು ಅಡವಿಯಲ್ಲಿ ಬಿಟ್ಟು ಬಂದ ಮೇಲೆ ರಾಜ ನವಭೋಜರಾಜ ಸಿರಿಸಂಪತ್ತನ್ನು ಕಳೆದುಕೊಂಡು ಬಡತನವನ್ನು ಅನುಭವಿಸುತ್ತಾನೆ. ತನ್ನ ರಾಜ್ಯದ ಆಡಳಿತವನ್ನು ಕಳೆದುಕೊಂಡು ನವಭೋಜರಾಜ ಸಾಮಾನ್ಯ ಜನರಂತೆ ಕಟ್ಟಿಗೆಗಳನ್ನು ಆರಿಸಿ ತಲೆ ಮೇಲೆ ಹೊತ್ತು ಗಂಡ-ಹೆಂಡತಿ ಜೀವನ ಸಾಗಿಸುತ್ತಾರೆ. ಆದರೆ ಅತ್ತ ಏಳು ಜನ ಹೆಣ್ಣುಮಕ್ಕಳನ್ನು ಪಾನಗಲ್ ಪಟ್ಟಣದ ಏಳುಜನ ರಾಜಕುಮಾರರು ವರಿಸಿ ಮದುವೆ ಮಾಡಿಕೊಳ್ಳಲು ತಯಾರಿ ನಡೆಸಿರುತ್ತಾರೆ. ಅಂತಹ ಸಂದರ್ಭದಲ್ಲಿ ಅದೇ ಪಟ್ಟಣಕ್ಕೆ ಕಟ್ಟಿಗೆ ಮಾರಲು ಹೆಂಡತಿ ಜೊತೆ ನವಭೋಜರಾಜ ಹೋಗುತ್ತಾನೆ.

ಸಣ್ಣಾಕಿ ಬಾಲನಾಗಮ್ಮ
ಕಟ್ಟಿಗಿ ಮಾರಿಕಂತ ಬಂದರಲ್ಲ
ಯಾರೋ ಹೊಸ ಮನುಷ್ಯರೆಂದು ಕಣ್ಣೇಲೆ ನೋಡ್ಯಾಳ
ನೋಡಿ ಕರಿತಾಳ ತಾಯಿ
ಕರೆದ ಗಳಿಗೆ ತಂದೆ ಕಡೆಗೆ ನೋಡಿ
ನಮ್ಮಪ್ಪಗೆ ಎಂತಹ ಪರಿಸ್ಥಿತಿ ಬಂದದ

ಎಂದು ಸಣ್ಣಾಕಿ ಬಾಲನಾಗಮ್ಮ ಮರುಕಪಡುತ್ತಾಳೆ. ಮಗಳು ತನ್ನ ತಂದೆ ಹಿಂದೆ ಅಡವಿಯಲ್ಲಿ ಬಿಟ್ಟು ಬಂದಿದ್ದುದು ಗೊತ್ತಿದ್ದು ತಂದೆಯ ಕರುಳು ಸಂಬಂಧದಿಂದ ಅದನ್ನು ಮರೆತು ತಂದೆಯನ್ನು ಗುರುತು ಹಿಡಿದು ಉಪಚಾರ ಮಾಡುತ್ತಾಳೆ. ಹೆತ್ತ ಮಕ್ಕಳಿಗೆ, ಮಲಮಕ್ಕಳಿಗೆ ಕಷ್ಟ ಕೊಟ್ಟರೆ ಯಾವ ಪರಿಸ್ಥಿತಿ ಉಂಟಾಗುತ್ತದೆಂಬುದು ಇಲ್ಲಿ ಚಿತ್ರಣಗೊಂಡಿದೆ. ಇಲ್ಲಿ ಅನ್ಯರಿಗೆ ಕೇಡು ಬಯಸಿದರೆ ಅದರ ಫಲವನ್ನು ತಾನೇ ಅನುಭವಿಸಬೇಕೆಂಬ ನೀತಿಯು ವ್ಯಕ್ತವಾಗಿದೆ. ಮಾಣಿಕ್ಯಲದೇವಿ ಸವತಿಮಕ್ಕಳ ಕೇಡನ್ನು ಬಯಸಿದ್ದಳು, ಮಕ್ಕಳಿಗೆ ಕೊಡಲಾರದ ಕಷ್ಟಗಳನ್ನು ತಾನು ಕೊಟ್ಟದಲ್ಲದೆ ಗಂಡ ನವಭೋಜರಾಜನ ಮುಖಾಂತರ ಕೊಡಿಸುತ್ತಾಳೆ. ಇದರ ಪ್ರತಿ ಫಲವಾಗಿ ಅದರ ಫಲವನ್ನು ಅವರೇ ಅನುಭವಿಸುತ್ತಾರೆ.

ಆದರೆ ಇಲ್ಲಿ ಮಕ್ಕಳ ಹಾಗೂ ತಂದೆಯ ಮಧ್ಯೆ ಕರುಳ ಸಂಬಂಧ ಎಂತಹದೆಂಬುದು ಮರೆಮಾಚಲಾಗದು. ಹೀಗಾಗಿ ಬಾಲನಾಗಮ್ಮ ತನ್ನ ತಂದೆಗೆ ಒದಗಿದ ಕಷ್ಟವನ್ನು ಕಂಡು ಮರುಗುತ್ತಾಳೆ. ಮಕ್ಕಳಲ್ಲಿ ಮಾನವೀಯತೆ ಆದರ್ಶ ಗುಣಗಳು ವ್ಯಕ್ತವಾಗಿದೆ.

**೪. ೪. ಶಿವಕುಮಾರಕತೆ**

ಧರ್ಮಸೇನ ಪಟ್ಟಣದ ಧರ್ಮಸೇನರಾಜ. ಹೆಂಡತಿ ಭಾಗೀರಥದೇವಿ. ಇವರಿಗೆ ಸಂತಾನ ಇದ್ದಿಲ್ಲ. ಬಂಜೆತನದಿಂದ ಮುಕ್ತರಾಗಲು ರಾಜನು ಅಡವಿಗೆ ಹೋದಾಗ ಶಂಭುಲಿಂಗ ಗುಡಿ ಕಾಣುತ್ತದೆ. ಅಲ್ಲೇ ತಪಸ್ಸು ಮಾಡುತ್ತಾನೆ. ಶಂಭುಲಿಂಗತಾತ ಪ್ರತ್ಯಕ್ಷವಾಗಿ ಷರತ್ತಿನ ಮೇಲೆ ವರವನ್ನು ಕೊಡುತ್ತಾನೆ. ಪಟ್ಟಣದ ಮುಂದೆ ಬಾವಿ ತೋಡಿಸಬೇಕು ಬ್ರಹ್ಮ, ವಿಷ್ಣು, ಮಹೇಶ್ವರ, ಪಾರ್ವತಿ ಬಂದು ನೀರು ಕುಡಿದು ಮೋಕ್ಷ ಕೊಟ್ಟು ಹೋಗುತ್ತಾರೆಂದು ಶಂಭುಲಿಂಗ ತಾತ ಹೇಳುತ್ತಾನೆ. ಅದಕ್ಕೆ ವಚನ ಕೊಡು ಎಂದು ಕೇಳಿದಾಗ, ರಾಜನು ನೀರಿನ ಸೆಲೆ ಸಿಗದಿದ್ದಾಗ ತನ್ನ ಸಿರವನ್ನು ಅರ್ಪಿಸುತ್ತೇನೆಂದು ಹೇಳುತ್ತಾನೆ.

ಶಂಭುಲಿಂಗ ತಾತ ಕೊಟ್ಟ ಪ್ರಸಾಧದಿಂದ ಭಾಗೀರಥದೇವಿಗೆ ಪುತ್ರ ಸಂತಾನವಾಗುತ್ತದೆ. ಮಗ ಹುಟ್ಟಿದರಿಂದ ಧರ್ಮಸೇನರಾಜನು ಜ್ಯೋತಿಷಿಗಳನ್ನು ಕರೆದು ಪಂಚಾಂಗ ನೋಡುತ್ತಾನೆ. ಶಂಭುಲಿಂಗತಾತ ಹೇಳಿದ ಮಾತನ್ನೇ ಜ್ಯೊತಿಷಿಗಳು ಹೇಳುತ್ತಾರೆ. ರಾಜನು ವಡ್ಡರು, ಉಪ್ಪಾರರನ್ನು ಕರೆಸಿ ಬಾವಿ ತೋಡಿಸಿದರೆ ಒಂದು ಹನಿ ನೀರನ್ನು ಕಾಣುವುದಿಲ್ಲ. ಇದರಿಂದ ರಾಜನು ಅಲ್ಲೇ ಕುಳಿತುಕೊಂಡಿರುತ್ತಾನೆ.

ಇತ್ತ ಭಾಗೀರಥಿದೇವಿ ಹುಟ್ಟಿದ ಮಗನನ್ನು ತೊಟ್ಟಿಲಲ್ಲಿ ಹಾಕಿ 'ಲವುತರಾಜ' ಎಂದು ನಾಮಕರಣ ಮಾಡುತ್ತಾಳೆ. ಧರ್ಮಸೇನರಾಜನು ಬಾವಿಯಲ್ಲಿ ನೀರಿನ ಸೆಲೆ ಕಾಣದಿದ್ದಾಗ, ಜ್ಯೋತಿಷಿಗಳ ಮೊರೆ ಹೋಗುತ್ತಾನೆ. .ಜ್ಯೋತಿಷಿಗಳು ಬಾವಿಗೆ ಆಹುತಿ ಕೊಡಲು ಹೇಳುತ್ತಾರೆ. ರಾಜನು ಬಾವಿಗೆ ಕೊಟ್ಟ ಆಹುತಿಗಳನ್ನು ಮಧ್ಯರಾತ್ರಿಯಲ್ಲಿ ಬ್ರಹ್ಮರಾಕ್ಷಸಿ ತಿಂದು ನೀರು ಕುಡಿದು ಹೋಗುತ್ತದೆ. ಏನೇ ಆಹುತಿ ಕೊಟ್ಟರು ಬ್ರಹ್ಮ ರಾಕ್ಷಸಿ ತಿಂದು ನೀರು ಕುಡಿದು ಹೋಗಿರುತ್ತದೆ. ಮತ್ತೆ ಜ್ಯೋತಿಷಿಗಳನ್ನು ಕೇಳಿದ. ರಾಜನಿಗೆ ನಿನ್ನ ಮಗನನ್ನು ಬಾವಿಗೆ ಆಹುತಿ ಕೊಡಬೇಕೆಂದು ಹೇಳುತ್ತಾರೆ.

ಭಾಗೀರಥಿದೇವಿ ಮಗನಿಗೆ ಹನ್ನೆರಡು ವರ್ಷವಾಗಿರುತ್ತದೆ. ಮಗನಿಗೆ ಸಕಲ ವಿದ್ಯೆಗಳನ್ನು ಕಲಿಸಿರುತ್ತಾಳೆ. ಗಂಡನಿಗೆ ಮಗನ ಮದುವೆಯ ಬಗ್ಗೆ ಪತ್ರ ಬರೆದರೆ ನೀನೆ ಮದುವೆ ಮಾಡು ಎಂದು ಉತ್ತರ ಪತ್ರ ಬರೆದಿರುತ್ತಾನೆ. ಆಗ ಭಾಗೀರಥಿದೇವಿ ಗಿರಿಯಾವತಿ ಪಟ್ಟಣದ ಗಿರಿಯಾವತಿರಾಜನ ಮಗಳು ಗಿರಿಯಾವತಿಯನ್ನು ತಂದು ಮದುವೆ ಮಾಡಿರುತ್ತಾಳೆ. ಧರ್ಮಸೇನರಾಜ ಮಗನನ್ನು ಬಾವಿಗೆ ಆಹುತಿ ಕೊಡಲು ಬಂಟರನ್ನು ಅರಮನೆಗೆ ಕಳಿಸಿದರೆ, ತಾಯಿ ಉಪಾಯದಿಂದ ತಪ್ಪಿಸುತ್ತಾಳೆ. ಸೊಸೆಯನ್ನಾದರೂ ಆಹುತಿ ಕೊಡಬೇಕೆಂದು ಬಂಟರನ್ನು ಕಳಿಸಿದರೆ, ಸೊಸೆಯನ್ನೂ ಸಹ ಆಹುತಿ ಕೊಡುವುದನ್ನು ತಪ್ಪಿಸುತ್ತಾಳೆ. ಮಗನನ್ನು ಬೇರೆ ನಾಡಿಗೆ ಕಳಿಸಿದ ತಾಯಿ, ಸೊಸೆಯನ್ನು ಸಹ ಗಂಡನನ್ನು ಹುಡುಕಿಕೊಂಡು ಹೋಗೆಂದು

ಕಳೆಸಿರುತ್ತಾಳೆ. ಅರಣ್ಯದಲ್ಲಿ ಲವುತರಾಜ ಗಿರಿಯಾವತಿ ಜೊತೆಯಾಗುತ್ತಾರೆ. ಗಿರಿಯಾವತಿ ತುಂಬು ಗರ್ಭಿಣಿ ಇರುತ್ತಾಳೆ. ಗಂಡ ಲವುತರಾಜ ಹೆಂಡತಿಗೆ ನೀರು ತರಲು ಹೋದಾಗ ಬ್ರಹ್ಮರಾಕ್ಷಸಿ ಬಾಯಿಗೆ ಆಹುತಿಯಾಗುತ್ತಾನೆ. ಗಿರಿಯಾವತಿಯು ಸತ್ತ ಗಂಡ ಇನ್ನೂ ಬರಲಿಲ್ಲ ಎಂದು ಹುಡುಕುತ್ತ ಹೊರಟಾಗ ಹಾವಿನ ಬಾಯಿಗೆ ತುತ್ತಾಗುತ್ತಾಳೆ. ಕೊರವರ ಎಲ್ಲಪ್ಪ ಆ ಹಾವಿನ ಬಾಯಿಂದ ಗಿರಿಯಾವತಿಯನ್ನು ಉಳಿಸುತ್ತಾನೆ. ಕೊರವರ ಎಲ್ಲಪ್ಪನ ದುರ್ಗುಣವನ್ನು ಅರಿತ ಗಿರಿಮಾವತಿ ಅಲ್ಲಿಂದ ತಪ್ಪಿಸಿಕೊಂಡು ಚೆಂಚು ಸಮುದಾಯದ ಏಳು ಜನ ಹೆಣ್ಣು ಮಕ್ಕಳ ಗುಂಪನ್ನು ಸೇರುತ್ತಾಳೆ. ಗಿರಿಯಾವತಿಗೆ ಪ್ರಸವ ವೇದನೆಯುಂಟಾಗಿ ಚೆಂಚು ಸಮುದಾಯದ ಹಟ್ಟಿಯಲ್ಲಿ ಮಗುವಿಗೆ ಜನ್ಮ ನೀಡುತ್ತಾಳೆ. 'ಶಿವರಾತ್ರಿ' ದಿವಸ ಮಗುವು ಜನಿಸಿದರಿಂದ ಆ ಮಗುವಿಗೆ 'ಶಿವಕುಮಾರ' ಎಂದು ನಾಮಕರಣ ಮಾಡುತ್ತಾರೆ. ಮಕ್ಕಳಿಲ್ಲದ ಚೆಂಚು ಹೆಣ್ಣು ಮಕ್ಕಳು ಮುದ್ದಿನ ಮಗನಾಗಿ ಆ ಮಗು ಬೆಳೆಯುತ್ತದೆ. ಚೆಂಚು ಹೆಣ್ಣು ಮಕ್ಕಳು ಬೇಟೆಗೆ ಹೋದಾಗ ಹಿಂದೆ ಎತ್ತಿಕೊಂಡು ಹೋದ ಶಿವಕುಮಾರನು ಹುಲಿಯನ್ನು ಕೊಲ್ಲುತ್ತಾನೆ. ಶಿವಕುಮಾರ ದೊಡ್ಡವನಾದ ಮೇಲೆ ಚೆಂಚು ತಾಯಂದಿರ ಹಿಂದೆ ಮತ್ತೆ ಬೇಟೆಗೆ ಹೋಗುತ್ತಾನೆ. ಅಲ್ಲೇ ಇದ್ದ ಬಾವಿಯಲ್ಲಿ ನೀರನ್ನು ಕುಡಿಯಲು ಹೋದ ಶಿವಕುಮಾರನನ್ನು ತಡೆಯುತ್ತಾರೆ. ಅಂದು ಮಧ್ಯರಾತ್ರಿಯಲ್ಲಿ ಮನೆಯಿಂದ ಆ ಬಾವಿಗೆ ಹೋಗುತ್ತಾನೆ. ಬಾವಿಯಲ್ಲಿದ್ದ ಬ್ರಹ್ಮರಾಕ್ಷಸಿ ಶಿವಕುಮಾರನನ್ನು ನೋಡಿ ಏಳಂತಸ್ತಿನ ಅರಮನೆಯನ್ನು ಮಾಯದಿಂದ ಮಾಡುತ್ತದೆ. ಆ ಮನೆಯನ್ನು ಕಂಡ ಶಿವಕುಮಾರನು ತಾಯಿಯನ್ನು ಕರೆತಂದು ಅಲ್ಲೇ ಇಡುತ್ತಾನೆ. ಆಗ ಬಾವಿಯಲ್ಲಿದ್ದ ಬ್ರಹ್ಮರಾಕ್ಷಸಿ ಲವುತರಾಜನ ರೂಪಧರಿಸಿ ಗಿರಿಯಾವತಿಯನ್ನು ಕೂಡುತ್ತದೆ. ಗಿರಿಯಾವತಿ ತನ್ನ ಗಂಡನೆಂದೇ ತಿಳಿಯುತ್ತದೆ. ಆ ರಾಕ್ಷಸಿ ಕುತಂತ್ರದಿಂದ ಗಿರಿಯಾವತಿಯು ಮಗನನ್ನು ಸಾಯಿಸಬೇಕೆಂದು ತನ್ನ ದಣಿವಿಗೆ ಹುಲಿ ಹಾಲು ಬೇಕೆಂದು ಮಗನಿಗೆ ಹೇಳುತ್ತಾಳೆ. ಶಿವಕುಮಾರ ಈ ವಿಷಯವನ್ನು ಚೆಂಚು ತಾಯಂದಿರಿಗೆ ಹೋಗಿ ಹೇಳಿದಾಗ, ತಾಯಿಯ ಕುಟೀಲತೆಯನ್ನು ಹೊರಗೆಡವುತ್ತಾರೆ. ಆದರೂ ಹುಲಿ ಹಾಲನ್ನು ತಂದು ತಾಯಿಗೆ ಕೊಡುತ್ತಾನೆ. ಮತ್ತೆ ತಾಯಿ ಗಿರಿಯಾವತಿಯು ದಣಿವಿಗೆ 'ಕುದಿಲಾರದ ಸುಣ್ಣ ಮಾತನಾಡುವ ಎಲೆ' ಬೇಕೆಂದು ಮಗನಿಗೆ ಹೇಳುತ್ತಾಳೆ. ಶಿವಕುಮಾರ ಚೆಂಚು ತಾಯಂದಿರ ಉಪಾಯದಿಂದ ಶಂಭುಲಿಂಗತಾತನನ್ನು ಪ್ರತ್ಯಕ್ಷ ಮಾಡಿಕೊಳ್ಳುತ್ತಾನೆ. ಶಂಭುಲಿಂಗತಾತ ತನ್ನ ತಂತ್ರದಿಂದ ದೇವಕನ್ಯೆಯನ್ನು ಶಿವಕುಮಾರನಿಗೆ ವಶ ಮಾಡಿ, ಮದುವೆ ಮಾಡಿಸುತ್ತಾನೆ. ಇನ್ನು ತನ್ನ ಕಾರ್ಯ ಸಾಧಿಸಲು ಕಳಿಸಿ ಕೊಡುತ್ತಾನೆ. ದೇವಕನ್ಯೆಯ ತಂತ್ರದಿಂದ ತನ್ನ ತಾಯಿಯಾದ ಗಿರಿಯಾವತಿಯನ್ನು ಬಂಧನದಿಂದ ಬಿಡಿಸಿಕೊಂಡು ಬ್ರಹ್ಮರಾಕ್ಷಸಿಯನ್ನು ಶಿವಕುಮಾರ ಕೊಲ್ಲುತ್ತಾನೆ. ಅದರ ಹೊಟ್ಟೆಯಲ್ಲಿ ಬಂಗಾರದ ಕಳಸೆ ಆಗಿದ್ದ 'ಲವುತರಾಜ'ನನ್ನು ದೇವಕನ್ಯೆಯು ಉಪಾಯದಿಂದ ಬದುಕಿಸುತ್ತಾಳೆ. ಏಳು ಜನ ಚೆಂಚು ಪುರುಷರನ್ನು ಸಹ ಬದುಕಿಸುತ್ತಾಳೆ. ಅಲ್ಲಿಂದ ಗರುಡಪಕ್ಷಿ ರಥದಲ್ಲಿ ಲವುತರಾಜ ಗಿರಿಯಾವತಿ, ಶಿವಕುಮಾರ, ದೇವಕನ್ಯೆ ಕುಳಿತುಕೊಂಡು ನೇರವಾಗಿ

ಧರ್ಮಸೇನರಾಜ ಇದ್ದ ಬಾವಿಗೆ ಬರುತ್ತಾರೆ. ಅಲ್ಲಿ ಬಾವಿಯಲ್ಲಿದ್ದ ಬ್ರಹ್ಮರಾಕ್ಷಸಿಯನ್ನು ದೇವಕನ್ನೆಯ ಸಹಾಯದಿಂದ ಶಿವಕುಮಾರ ಕೊಲ್ಲುತ್ತಾನೆ. ಆಗ ಬಾವಿಯಲ್ಲಿ ನೀರಿನ ಸೆಲೆ ಬಂದು ಬಾವಿ ತುಂಬಿ ತುಳುಕುತ್ತದೆ. ಆಗ ವಿಷ್ಣು, ಬ್ರಹ್ಮ, ಈಶ್ವರ, ಪಾರ್ವತಿ ಬಂದು ನೀರು ಕುಡಿದು ಧರ್ಮಸೇನರಾಜನಿಗೆ ಮುಕ್ತಿಕೊಟ್ಟು ಹೋಗುತ್ತಾರೆ. ಅಜ್ಜಿ ಭಾಗೀರಥಿದೇವಿಗೆ ತನ್ನ ಮೊಮ್ಮಗ ಶಿವಕುಮಾರನ ಶೌರ್ಯವನ್ನು ಕೊಂಡಾಡುತ್ತಾಳೆ.

ಶಿವಕುಮಾರ ಬೇಟೆಗೆ ಹೋದಾಗ ದೇವಕನ್ನೆಯು ಭಾಗೀರಥದೇವಿ ಅಜ್ಜಿಯಿಂದ ತನ್ನ ಸೀರೆ ಕುಪ್ಪಸ ತೆಗೆದುಕೊಂಡು ತೊಟ್ಟು ದೇವಲೋಕಕ್ಕೆ ಹೋಗುತ್ತಾಳೆ. ಹೋಗುವ ದಾರಿಯಲ್ಲಿ ಗಂಡ ಶಿವಕುಮಾರನು ಬೇಟೆಯಾಡುವಾಗ ಮುಖಕ್ಕೆ ಬಿಸಿಲು ಬಿದ್ದಿರುತ್ತದೆ. ಆಗ ತನ್ನ ಸೆರಗನ್ನು ಸೂರ್ಯನಿಗೆ ಅಡ್ಡ ಇಡುತ್ತಾಳೆ. ಮೇಲೆ ನೋಡಿದ ಶಿವಕುಮಾರ ದೇವಕನ್ನೆಯನ್ನು ಕಾಣುತ್ತಾನೆ. ಆಗ ದೇವಕನ್ನೆಯು ನಿನ್ನ ಧೈರ್ಯ ಇದ್ದರೆ ದೇವಲೋಕಕ್ಕೆ ಬಂದು ಗೆದ್ದುಕೊಂಡು ಹೋಗೆಂದಳು. ಆಗ ಶಿವಕುಮಾರನು ಆಕಳ ಬಾಲವನ್ನು ಹಿಡಿದುಕೊಂಡು ದೇವಲೋಕ ಸೇರಿದನು. ದೇವಕನ್ನೆಯು ಆರು ಜನ ದೇವಕನ್ನೆಯರಲ್ಲಿ ಸೇರಿಕೊಂಡಿದ್ದಳು. ದೇವೇಂದ್ರನು ತನ್ನ ಆಸ್ಥಾನದಲ್ಲಿ ಕುಳಿತಿದ್ದನು. ಶಿವಕುಮಾರ ನೇರವಾಗಿ ಅಲ್ಲಿಗೆ ಹೋದನು. ದೇವೇಂದ್ರನಿಗೆ ತನ್ನ ಪರಿಚಯ ಮಾಡಿಕೊಂಡನು. ನಂತರ ತನ್ನ ಹೆಂಡತಿಯನ್ನು ಕಳಿಸಬೇಕೆಂದು ಕೇಳಿಕೊಂಡನು. ಈ ಏಳು ಜನ ಕನ್ನೆಯರಲ್ಲಿ ನಿನ್ನ ಹೆಂಡತಿಯ ಸೆರಗನ್ನು ಹಿಡಿದು ಎಳೆಯಬೇಕು. ಒಂದು ವೇಳೆ ತಪ್ಪಿ ಬೇರೆ ಕನ್ನೆಯನ್ನು ಎಳೆದರೆ ರುಂಡವನ್ನು ಚೆಂಡಾಡುತ್ತೇನೆ ಎಂದನು. ಏಳು ಜನ ದೇವಕನ್ನೆಯರ ರೂಪ, ಅವರು ಧರಿಸಿದ ಬಟ್ಟೆಗಳು ಒಂದೇ ತರಹ ಇದ್ದವು. ಆಗ ಹಿರಿಯ ದೇವಕನ್ನೆ ತನ್ನ ಗಂಡ ಬೇರೆ ಕನ್ನೆಯ ಸೆರಗು ಹಿಡಿದು ಎಳೆದರೆ ತನ್ನ ತಂದೆ ದೇವೇಂದ್ರನು ಗಂಡನನ್ನು ಸಾಯಿಸುತ್ತಾನೆಂದು ತಿಳಿದು ಸೆರಗಲ್ಲಿ ಹರಳನ್ನು ಕಟ್ಟಿಕೊಂಡು ಕೋಲಾಟ ಆಡುತ್ತ ಶಿವಕುಮಾರನ ಮುಖಕ್ಕೆ ಹೊಡೆದಳು. ಆಗ ಶಿವಕುಮಾರ ಸೆರಗನ್ನು ಹಿಡಿದುಕೊಂಡನು. ಆಗ ದೇವೇಂದ್ರನು ತನ್ನ ಮಗಳನ್ನು ಕೊಡಲು ಒಪ್ಪಿದನು. ಆದರೆ ಏಳು ಜನ ದೇವಕನ್ನೆಯ ಒಪ್ಪಿಗೆಯ ಮೇರೆಗೆ ಅಲ್ಲಿಂದ ದೇವಕನ್ನೆಯರ ಜೊತೆ ಶಿವಕುಮಾರನ ಗಾಂಧರ್ವ ವಿವಾಹ ಮಾಡಿಕೊಟ್ಟು ಕಳಿಸಿದನು. ಅಲ್ಲಿಂದ ದೇವಕನ್ನೆಯರ ಜೊತೆ ಶಿವಕುಮಾರ ಧರ್ಮಸೇನ ಪಟ್ಟಣಕ್ಕೆ ಬಂದು ರಾಜ್ಯದ ಅಧಿಕಾರ ಪಡೆದನು. ಧರ್ಮಸೇನರಾಜ, ಭಾಗೀರಥಿದೇವಿ, ಲವುತರಾಜ, ಗಿರಿಯಾವತಿ ಈ ಭೂಲೋಕ ಸಾಕೆಂದು ಶಿವಲೋಕಕ್ಕೆ ಹೋದರು.

### ವಿಶ್ಲೇಷಣೆ

ಈ ಕತೆಯ ಮುಖ್ಯ ಪಾತ್ರ ಶಿವಕುಮಾರ. ಕತೆಯ ಆಶಯವು ಅತಿಮಾನುಷವಾದುದು. ಶಿವಕುಮಾರ ಅಸಾಧ್ಯವಾದ ಸಾಹಸ ಕಾರ್ಯಗಳನ್ನು ಮಾಡುತ್ತಾನೆ. ಅತಿಮಾನುಷ ಸಹಾಯದಿಂದ ನಿರಾಯಾಸವಾಗಿ ಬಂದ ಕಷ್ಟಗಳನ್ನು ಎದುರಿಸಿ ಸಾಧಿಸುವುದನ್ನು ಕತೆಗಾರರು ರೋಮಾಂಚನಕಾರಿಯಾಗಿ ನಿರೂಪಿಸಿದ್ದಾರೆ.

ಶಿವಕುಮಾರನು ದೈವಬಲದಿಂದ ದೇವಕನ್ಯೆಯ ಸಹಾಯದಿಂದ ರಾಕ್ಷಸರನ್ನು ಸಂಹಾರ ಮಾಡಿ, ತನ್ನ ತಾಯಿ-ತಂದೆ ತಾತನನ್ನು ಅದರ ಬಂಧನದಿಂದ ಮುಕ್ತಗೊಳಿಸುವುದೇ ಇಲ್ಲಿಯ ಕತೆಯ ವಸ್ತು. ಇಲ್ಲಿ ಬರುವ ಧರ್ಮಸೇನ ಮಹಾರಾಜನ ಪಾತ್ರವೇ ಕತೆಯ ಜೀವಾಳ. ಧರ್ಮಸೇನರಾಜನಲ್ಲಿ ಇರುವ ಸತ್ಯ ನಿಷ್ಠೆಯ ಪ್ರಜ್ಞೆಯಿಂದ ಪರಮಾತ್ಮನ ಪರೀಕ್ಷೆಗೆ ಒಳಪಡುತ್ತಾನೆ. ಧರ್ಮಸೇನರಾಜನ ಛಲ, ಸತ್ಯ, ನಂಬಿಕೆ, ಮಾನವೀಯ ಅರಿವು ಇರುವುದರಿಂದ ಪರೀಕ್ಷೆಗೆ ಒಳಪಟ್ಟು ಕಷ್ಟವನ್ನು ಅನುಭವಿಸುತ್ತಾನೆ. ಹರಿಶ್ಚಂದ್ರ ವಿಶ್ವಾಮಿತ್ರರ ಪ್ರತಿಜ್ಞೆಯ ಪ್ರೇರಣೆ ಈ ಕತೆಯ ಮೇಲೆ ಆಗಿರುವಂತೆ ಕಂಡುಬಂದರೂ ಕತೆಗಾರರ ಸ್ವಯಂಪ್ರತಿಭೆಯ ವಾಕ್ಚಾತುರ್ಯ ಕಂಡುಬರುತ್ತದೆ.

ತಾಯಿಯೇ ಮಗನನ್ನು ಸಾಯಿಸಲು ಹೂಡುವ ಕುತಂತ್ರವು ಕ್ರೂರತಾಯಿಯ ವರ್ತನೆ ವ್ಯಕ್ತವಾಗಿದೆ. ಸಾಕುತಾಯಂದಿರು ಶಿವಕುಮಾರನಿಗೆ ಬಂದ ಕಷ್ಟಗಳನ್ನು ಕಂಡು ವ್ಯಥೆಪಟ್ಟು, ಅದನ್ನು ಗೆಲ್ಲುವ ಮಾರ್ಗೋಪಾಯಗಳನ್ನು ತಿಳಿಸಿಕೊಡುವುದನ್ನು ಕಂಡರೆ, ಕತೆಗಾರರು ಮಾನವೀಯ ಮೌಲ್ಯದ ಸ್ಪರ್ಶವನ್ನು ಕೊಟ್ಟಿರುವುದು ತಿಳಿಯುತ್ತದೆ. ಮುಖ್ಯವಾಗಿ ಹೆಣ್ಣಿನ ದ್ವಿಮುಖನೀತಿಯನ್ನು ಅಭಿವ್ಯಕ್ತಪಡಿಸಿದ್ದಾರೆ. ದುಷ್ಟರಿಗೆ ಸೋಲು ಖಚಿತ ಎಂಬ ನೀತಿಯು ಸಹ ಇದರಲ್ಲಿದೆ. ರಾಜನು ತನ್ನ ಬಯಕೆ ಈಡೇರಿಕೆಗಾಗಿ ಜ್ಯೋತಿಷ್ಯದ ಮೊರೆ ಹೋಗುವುದು ಶತಮಾನಗಳಿಂದ ನಂಬಿಕೊಂಡ ಬಂದ ಸಂಪ್ರದಾಯವಾಗಿದೆ. ಆಧುನಿಕ ಗಣಕಯಂತ್ರ ಯುಗದಲ್ಲೂ ಸಹ ಇಂದು ಸಾಮಾನ್ಯ ಜನರಲ್ಲದೆ ರಾಜಕೀಯ ಮುಖಂಡರು ಜ್ಯೋತಿಷ್ಯವನ್ನೇ ನಂಬಿಕೊಂಡಿರುವುದನ್ನು ಕಾಣಬಹುದು. ಧರ್ಮಸೇನರಾಜನು ಮಗ ಹಾಗೂ ಸೊಸೆಯನ್ನು ಬಾವಿಗೆ ಆಹುತಿ ಕೊಡುವುದು ಪುರಾತನರು ಒಪ್ಪಿಕೊಂಡ ಒಂದು ಸಾಮಾಜಿಕ ಪರಂಪರೆಯಾಗಿ ಜನಪದದಲ್ಲಿದೆ. ಮುಖ್ಯವಾಗಿ ಧರ್ಮಸೇನರಾಜನಲ್ಲಿ ಕಂಡುಬರುವ ಮೌಲ್ಯಗಳು ಹಾಗೂ ಬದುಕಿನ ಹೋರಾಟವು ಸಮಕಾಲೀನ ವಾಸ್ತವ ಬದುಕಿನ ಅಂಗವಾಗಿ ಕತೆಯಲ್ಲಿ ಬಂದಿವೆ.

ಬುರ್ರಕತೆಗಾರರು ಪ್ರಾರಂಭದಲ್ಲಿ ಸ್ತುತಿಪದ್ಯದಲ್ಲಿ ಸರಸ್ವತಿ, ಆದಿಶಕ್ತಿ, ದೇವತೆಗಳನ್ನು ನೆನೆಯುವುದರ ಮೂಲಕ ಕತೆಯನ್ನು ಪ್ರಾರಂಭಿಸುತ್ತಾರೆ. ನಂತರ ಮೂಲಕತೆಗೆ ಹಿಂತಿರುಗುತ್ತಾರೆ. ಇವರಿಗೆ ಶ್ರೋತೃಗಳನ್ನು ರಂಜಿಸುವುದೇ ಉದ್ದೇಶವಾಗಿದ್ದರೂ, ಅವರಿಗೆ ಇರುವ ಅವಧಿಯಲ್ಲಿ ಕತೆಯನ್ನು ಹಾಡಿ ಮುಗಿಸುತ್ತಾರೆ. ಆ ಸಮಯದಲ್ಲೇ ಕತೆಯಲ್ಲಿ ಬರುವ ಎಲ್ಲಾ ಪಾತ್ರಗಳಿಗೆ ಜೀವ ತುಂಬುತ್ತಾರೆ. ಕತೆಗಾರರು 'ತೆಲಂಗಾಣೆಕಿ ಯಾ ಪಟ್ನ ಆಯ್ತುಲ ಧರ್ಮಸೇನ ಪಟ್ನ ಆಯ್ತುಲ' ಎಂದು ನಿರೂಪಿಸಿರುವುದು ಕತೆಗಾರರ ಮೇಲೆ ತೆಲುಗು ಪರಿಸರದಲ್ಲಿ ಕತೆ ನೆಲೆಗೊಳ್ಳುವುದನ್ನು ಕಾಣಬಹುದು. ತೆಲಂಗಾಣೆಕಿ ಎನ್ನುವ ಪದರಚನೆಯಲ್ಲಿ ತೆಲುಗು ಸಾಂಸ್ಕೃತಿಕ ಹಿನ್ನೆಲೆ ಇದೆ. ಆ ತೆಲಂಗಾಣದ ಪ್ರದೇಶದಲ್ಲಿ ಧರ್ಮಸೇನ ಪಟ್ಟಣ ಇದೆ ಎಂದು ಹೇಳುತ್ತಾರೆ. ರಾಜ ಧರ್ಮಸೇನರಾಜ ಎಂದು ಹೇಳುತ್ತಾ ಪಟ್ಟಣ ಮತ್ತು ರಾಜನ ಹೆಸರಿನಲ್ಲಿ ಸಮಾನತೆ ಹೇಳಿದ್ದಾರೆ. ಇಲ್ಲಿ ಪದಗಳನ್ನು, ಪಾತ್ರಗಳ ಹೆಸರುಗಳನ್ನು ಜೋಡಿಸಿ ಹೇಳುವುದು ಕತೆಗಾರರ ಕಲೆಗೆ

ಸಾಕ್ಷಿಯಾಗಿದೆ. ಪ್ರತಿಯೊಂದು ಕತೆಯು ಪ್ರಾರಂಭವಾಗುವುದು. ಸಿರಿ, ಸಂಪತ್ತು, ಅಧಿಕಾರ, ಅಂತಸ್ತು ಇದ್ದರೂ ಬಂಜೆತನದ ಅಳಲು ಇರುವುದರ ಮೂಲಕವಾಗಿದೆ. ಭಾಗೀರಥಿದೇವಮ್ಮ ಸಂತಾನವಿಲ್ಲದೆ ಚಿಂತಿಮಾಡ್ಯಾಳ ಎಂದು ಹೇಳುವಲ್ಲಿ ಮಕ್ಕಳ ಹಂಬಲ ಕಾಣಿಸುತ್ತದೆ. ಸಂತಾನ ಎಂಬುದು ಹೆಣ್ಣಿನ ಆಶಯ. ಇದರಲ್ಲಿ ಅವಳ ಮುಕ್ತಿ ಇರುತ್ತದೆ. ಸಂತಾನವಿಲ್ಲದೆ ಜೀವನವೇ ಇಲ್ಲ ಎಂಬುದು ಗೊತ್ತಾಗುತ್ತದೆ.

ಧರ್ಮಸೇನರಾಜ ಹೆಂಡತಿ ಭಾಗೀರಥಿದೇವಿ ಸಂತಾನವಿಲ್ಲದ ಕೊರಗಿನಿಂದ ಬಳಲುತ್ತಾ ಅಲ್ಲಿಂದಲೇ ಕತೆಯ ಪ್ರವೇಶ ಮಾಡುತ್ತದೆ. ಯಾವುದೇ ಕುಟುಂಬವಿರಲಿ ರಾಜ ವಂಶವೇ ಇರಲಿ ತಮ್ಮ ವಂಶೋದ್ಧಾರಕ್ಕೆ ಮಕ್ಕಳ ಭಾಗ್ಯ ಅವಶ್ಯ. ಮಕ್ಕಳಾಗದಿದ್ದಾಗ ಸಮಾಜದ ದೃಷ್ಟಿಯಲ್ಲಿ ಕೀಳಾಗಿ ಕಾಣುತ್ತಾರೆ. ಅನೇಕ ಅಪಮಾನಗಳಿಗೆ ಈಡಾಗುತ್ತಾರೆ. ಸಂತಾನಭಾಗ್ಯಕ್ಕಾಗಿ ತೀರ್ಥಯಾತ್ರೆ ಹೋಗುವುದು, ದೇವತೆಗಳಿಗೆ ಹರಕೆ ಹೊರುವುದು ಮುಂತಾದವನ್ನು ಕಾಣುತ್ತೇವೆ. ಧರ್ಮಸೇನರಾಜನು ಭಾಗೀರಥಿದೇವಿ ತಮ್ಮ ಬಂಜೆತನ ದೂರ ಮಾಡಲು ತೀರ್ಥಯಾತ್ರೆ, ದೇವತೆಗಳ ಮೊರೆ ಹೋಗುತ್ತಾರೆ. ಸಂತಾನಕ್ಕಾಗಿ ಧರ್ಮಸೇನ ಮಹಾರಾಜನು

ಆನೆ ಮ್ಯಾಲ ಅಂಬಾರ ಕಟ್ಟಿಕೊಂಡು
ಅಂಬಾರ ಮ್ಯಾಲೆ ಕುಂತುಕೊಂಡು
ಹನ್ನೆರಡು ಹರದಾರಿ ತಿರುಗಿ ಬಿಟ್ಟನಲ್ಲ
ರಾಜ ಸುಣ್ಣ ಹಚ್ಚಿದ ಕಲ್ಲಿಗಿ
ಶರಣು ಮಾಡ್ತನಲ್ಲ
ಅರಣ್ಯ ತಿರುಗ್ತಾನ
ಅಲ್ಲಿ ಶಂಭುಲಿಂಗ ಗುಡಿ ಆದ
ಆ ಗುಡಿದಾಗ ತಪ ಕುಂತನಲ್ಲ
ತಂದೆ ಪರಮಾತ್ಮನ ನೋಡ
ಮಾಲಿಂ ಆಯ್ತಲ್ಲ

ಎನ್ನುವ ಈ ಪದ್ಯದಲ್ಲಿ ರಾಜನು ಆನೆಯ ಮೇಲೆ ಅಂಬಾರ ಕಟ್ಟಿಕೊಂಡು ಅದರ ಮೇಲೆ ಕುಳಿತುಕೊಂಡು ಹೋಗುವ ಸನ್ನಿವೇಶದ ವರ್ಣನೆ ರಾಜನ ವೈಭವವನ್ನು ತೋರಿಸುತ್ತದೆ. ರಾಜನಾದವನು ತಪಸ್ಸಿಗೆ ಹೋದರೂ ಆನೆಯ ಮೇಲೆಯೇ ಹೋಗುವುದು ಆ ಸ್ಥಾನದ ಗೌರವವಾಗಿದೆ. ಅಂಬಾರಿ ಮೇಲೆ ಕುಳಿತು ಹೋಗುವಂತಹುದು ಅವರ ಶ್ರೀಮಂತಿಕೆಯನ್ನು ಪ್ರತಿನಿಧಿಸುತ್ತದೆ. ಇನ್ನು ಸುಣ್ಣ ಹಚ್ಚಿದ ಕಲ್ಲಿಗೆ ಶರಣು ಮಾಡುವುದು ರಾಜನ ಸರಳತನ ಆ ಪರಿಸ್ಥಿತಿಯ ಅರಿವು ಕಾಣುತ್ತದೆ. ಮಕ್ಕಳ ಹಂಬಲವು ಶ್ರೀಮಂತ,

ಒಡವ, ರಾಜ ಹೀಗೆ ಅವರಲ್ಲಿ ವ್ಯತ್ಯಾಸವಿಲ್ಲ. ಸಾಮಾನ್ಯರ ಬದುಕಿಗಿಂತ ಭಿನ್ನ ಇಲ್ಲ ಎಂಬುದನ್ನು ಚಿತ್ರಿಸಿದ್ದಾರೆ. ರಾಜನಲ್ಲಿ ಭಕ್ತಿಭಾವ, ಮಕ್ಕಳ ಹಂಬಲ ಇದೆ. 'ತಂದೆ ಪರಮಾತ್ಮಗ ನೋಡ ಮಾಲಿಂ ಆಯ್ತಲ್ಲ' ಎಂದು ವ್ಯಕ್ತವಾದ ಸಾಲಿನಲ್ಲಿ ಭಾಷೆಯ ಬಳಕೆಯು ಆ ಸನ್ನಿವೇಶವನ್ನು ಅವಲಂಬಿಸಿದೆ.

ಧರ್ಮಸೇನ ಮಹಾರಾಜನು ತನ್ನ ಬಯಕೆ ಈಡೇರಿಕೆಗಾಗಿ ತಾನು ತೋಡಿಸಿದ ಬಾವಿಯಲ್ಲಿ ನೀರಿನ ಸೆಲೆ ಸಿಗದಿದ್ದಾಗ ಜ್ಯೋತಿಷಿಗಳ ಮೊರೆ ಹೋಗುತ್ತಾನೆ. ಇಲ್ಲಿ ಜ್ಯೋತಿಷಿಗಳ ಪಾತ್ರವು ನಂಬಿಕೆ, ಸಂಪ್ರದಾಯದ ಹಿನ್ನೆಲೆಯಲ್ಲಿ ಬಂದಿದೆ. ಧರ್ಮಸೇನರಾಜನ ನಂಬಿಕೆಯಲ್ಲಿ ಜ್ಯೋತಿಷಿಗಳ ಪಾತ್ರ ಸೃಷ್ಟಿಯಾಗಿದೆ. ಈ ಪಾತ್ರ ಮುಖ್ಯವಾಗಿ ಕಾಣುತ್ತದೆ. ರಾಜನು 'ಬಾವಿಯೊಳಗ ಮಾತ್ರ ನೀರು ಬೀಳಲಿಲ್ಲ, ಈ ಹೊತ್ತೊ ನಾಳೆಯೋ ದೇವಾನುದೇವತೆಯರು ಬರ್ತರ, ನನ್ನ ರುಂಡ ಒಯ್ತರ ಈ ಬಾವಿಯಲ್ಲಿ ಏನು ಇದೆಯೋ ಗೊತ್ತಿಲ್ಲ' ಎಂದು ಆತಂಕದಿಂದ ಜ್ಯೋತಿಷಿಗಳಿಗೆ ಪಂಚಾಂಗ ನೋಡಬೇಕೆಂದು ಹೇಳುತ್ತಾನೆ ಆಗ-

> ಜೋಶಿಬ್ರಾಹ್ಮಣ ಪಂಚಾಂಗ ನೋಡ್ತನ
> ಏನಯ್ಯ ಧರ್ಮಸೇನರಾಜ
> ಈ ಬಾವಿಯೊಳಗೆ ಕೆಟ್ಟ ಬ್ರಹ್ಮರಾಕ್ಷಸ ಆದ
> ಆ ರಾಕ್ಷಸಗೆ ಆಗಾರ ಮಾಡಬೇಕು
> ಬಾವಿಗೆ ಶಾಂತಿ ಆಗ್ತದಲ್ಲ
> ಬಾವಿಯೊಳಗೆ ನೀರು ಬೀಳ್ತವಲ್ಲ

ಎಂದು ಜ್ಯೋತಿಷ್ಯ ಹೇಳುತ್ತಾನೆ. ರಾಜನು ತನ್ನ ವಚನವನ್ನು ಪಾಲಿಸದಿದ್ದರೆ ದೇವತೆಗಳು ಬಂದು ಸಿರವನ್ನು ಕಡಿದುಕೊಂಡು ಹೋಗುತ್ತಾರೆಂಬ ಭಯವಿದೆ. ಹೀಗಾಗಿ ಜ್ಯೋತಿಷಿಗಳಿಗೆ ಈ ಬಾವಿಯಲ್ಲಿ ಏನು ಇದೆಯೋ ಗೊತ್ತಿಲ್ಲ ಎಂದು ತನ್ನ ದುಗುಡವನ್ನು ವ್ಯಕ್ತಪಡಿಸುತ್ತಾನೆ ಸಾಮಾನ್ಯವಾಗಿ ಗ್ರಾಮಾಂತರ ಜನರು ತಮಗೆ ಒದಗಿದ ಕಷ್ಟವನ್ನು ಜ್ಯೋತಿಗಳಲ್ಲಿ ಹೇಳಿಕೊಂಡು ಪರಿಹಾರ ಸೂಚಿಸಲು ತಿಳಿಸುತ್ತಾರೆ. ಇಂತಹ ಸಂಪ್ರದಾಯ ಗ್ರಾಮೀಣ ಪ್ರದೇಶದಲ್ಲಿ ಇನ್ನೂ ಇದೆ. ರಾಜನ ದುಗುಡದಂತೆ ಜ್ಯೋತಿಷಿಗಳು 'ಬಾವಿಯೊಳಗೆ ಕೆಟ್ಟ ಬ್ರಹ್ಮರಾಕ್ಷಸ ಆದ' ಎನ್ನುವುದು ರಾಜನನ್ನು ಇನ್ನಷ್ಟು ಆತಂಕಕ್ಕೆ ಒಳಪಡಿಸುವುದಾಗಿದೆ. 'ಬಾವಿಯೊಳಗೆ ಕೆಟ್ಟ ಬ್ರಹ್ಮರಾಕ್ಷಸ' ಇರುವುದು ದುಷ್ಟ ಹಾಗೂ ಕೇಡುತನದ ಸಂಕೇತವಾಗಿ ದುಷ್ಟತನವನ್ನು ಅಥವಾ ಕೇಡಿನಿಂದ ಪಾರಾಗಲು ಬಾವಿಗೆ ಶಾಂತಿ ಮಾಡಬೇಕು. ಆಹುತಿ ಕೊಡಬೇಕೆಂದು ಹೇಳುವುದರಲ್ಲಿ ಪುರಾತನರು ನಂಬಿ ಬೆಳೆಸಿಕೊಂಡು ಬಂದ ಕಟ್ಟಳೆಯಾಗಿದೆ. 'ದುಷ್ಟಶಕ್ತಿ ದೂರ ಸರಿದಾಗ' ಒಳ್ಳೆಯದಾಗುತ್ತದೆಂಬ ಆಶಯವು ಇದೆ. ಬಾವಿಗೆ ಕೊಡುವ ಆಹುತಿಯೇ ಮುಕ್ತಿಗೆ ಪ್ರತಿಫಲ ಎಂಬ ಆಶಯ ಸಹ ವ್ಯಕ್ತವಾಗಿದೆ.

ಭಾಗೀರಥಿದೇವಿಗೆ ಮಗ ಜನಿಸಿದ್ದರಿಂದ ಆ ಮಗುವಿಗೆ ತೊಟ್ಟಿಲಲ್ಲಿ ಹಾಕುವ ಪದ್ಯ ಸಾಂಪ್ರದಾಯಿಕ ಹಿನ್ನೆಲೆಯಲ್ಲಿ ಬಂದಿದೆ. 'ಜೋ ಜೋ ಎನ್ನ ರಾಜಕುಮಾರ,' 'ಎಪ್ಪ ಜೋ ಎಂದು ಪಾಡುವೆ' ಎಂದು ಹಾಡುವ ಈ ಸನ್ನಿವೇಶವು ಗಿರಿಯಾವತಿ ಮಗ ಹುಟ್ಟಿದಾಗ ತೊಟ್ಟಿಲಲ್ಲಿ ಹಾಕುವ ಸನ್ನಿವೇಶದಲ್ಲಿ ಅದೇ ಹಾಡು ಯಥಾವತ್ತಾಗಿ ಬಂದಿದೆ. ಒಬ್ಬರೇ ವಕ್ತೃವಿನ ಕತೆಯಲ್ಲಿ ಎರಡೂ ಸನ್ನಿವೇಶದಲ್ಲೂ ಪ್ರತಿ ಪದದಲ್ಲೂ ಅವರ ಪಠ್ಯವನ್ನು ಕಂಠಪಾಠ ಮಾಡಿ ಅಭಿವ್ಯಕ್ತಿಗೊಂಡಿದ್ದನ್ನು ಕಾಣಬಹುದು.

ಇಂತಹ ಸನ್ನಿವೇಶವು ಕಾಂಭೋಜರಾಜ ಕತೆಯಲ್ಲೂ ಹಾಗೂ ಬಾಲಗಿರಿರಾಜನ ಕತೆಗಳಲ್ಲೂ ಬಂದಿದೆ. ಇಲ್ಲಿ ಬೇರೆ ಬೇರೆ ವಕ್ತೃಗಳು ಬೇರೆ ಬೇರೆ ಕತೆಗಳನ್ನು ನಿರೂಪಿಸಿದ್ದರೂ ತೊಟ್ಟಿಲಲ್ಲಿ ಹಾಕುವ ಸಂಪ್ರದಾಯದಲ್ಲಿ ಒಂದೇ ಪಠ್ಯವನ್ನು ವ್ಯತ್ಯಾಸವಿಲ್ಲದೆ ಹಾಡಿದ್ದಾರೆ. ಇಲ್ಲಿ ಕತೆಗಳು ಬೇರೆ ಬೇರೆಯಾಗಿ ಬಂದರೂ ಆ ಸಂಪ್ರದಾಯದಲ್ಲೂ ಯಾವುದೇ ವ್ಯತ್ಯಾಸ ಕಾಣುವುದಿಲ್ಲ. ಇದು ಒಂದು ಪ್ರದೇಶದ ಸಂಪ್ರದಾಯ. ಈ ಸನ್ನಿವೇಶವನ್ನು ಬಾಲಗಿರಿರಾಜ ಕತೆಯಲ್ಲಿ ವಿಶ್ಲೇಷಿಸಲಾಗಿದೆ.

ಭಾಗೀರಥಿದೇವಿಗೆ ಹುಟ್ಟಿದ ಮಗ ದೊಡ್ಡವನಾಗಿದ್ದಾನೆ. ಮಗನ ಮದುವೆ ಮಾಡಬೇಕೆಂಬ ಹಂಬಲ ತಾಯಿಗಿದೆ. ಮಕ್ಕಳ ಜವಾಬ್ದಾರಿ ತಾಯಿಗೆ ಮಾತ್ರ ಇರುತ್ತದೆಯೆಂಬ ಭಾವ ಇದೆ. ಬಾವಿಯ ಹತ್ತಿರ ಇದ್ದ ಗಂಡ ಧರ್ಮಸೇನರಾಜನಿಗೆ ಪತ್ರ ಬರೆಯುತ್ತಾಳೆ.

ಏನಯ್ಯ ಧರ್ಮಸೇನರಾಜ
ಮಗ ಹನ್ನೆರಡು ವರ್ಷದ ಮಗನಾದ
ಮಗನಿಗೆ ವಿದ್ಯೆ ಕಲಿಸಿದೆ ಬುದ್ಧಿ ಕಲಿಸಿದೆ
ಸಾಮ ಕಲಿಸಿದೆ ಶಕ್ತಿ ಕಲಿಸಿದೆ
ಮಗನ ಒದ್ಯದಾರ್ನ ಮಾಡಿದೆ
ಮಗನಿಗೊಂದು ಲಗ್ನ ನಾವು ಮಾಡಮು
ತಾಯಿ ಭಾಗೀರಥಿದೇವಮ್ಮ
ಕೈಯೊಳಗ ಬೆಳ್ಳದೊಂದು ಕಾಗದ ಹಿಡಕೊಂಡು
ಗರಗರ ಬರೆದು ಬಾವಿಬೆಲ್ಲಿಗೆ ಕೊಟ್ಟು ಕಳಿಸ್ಯಾಳ

ತಂದೆಗಿಂತ ತಾಯಿಯ ಜವಾಬ್ದಾರಿಯು ಮಕ್ಕಳ ಪೋಷಣೆಯಲ್ಲಿ ಯಾವ ರೀತಿ ಇರುತ್ತದೆಂಬುದು ಭಾಗೀರಥಿದೇವಿ ಪಾತ್ರದಲ್ಲಿ ವ್ಯಕ್ತವಾಗಿದೆ. ತಾಯಿಗೆ ತನ್ನ ಮಗನು ಬೆಳೆದು ದೊಡ್ಡವನಾಗಿದ್ದಾನೆ. ಅವನಿಗೆ ಹನ್ನೆರಡು ವರ್ಷವಾಗಿದೆ. ಆದ್ದರಿಂದ ಅವನು ಮದುವೆಯ ವಯಸ್ಸಿಗೆ ಬಂದನೆಂಬುದು ಅವಳ ಅಭಿಮತ. ಇಲ್ಲಿ 'ಮಗನಿಗೆ ವಿದ್ಯೆ ಬುದ್ಧಿ ಕಲಿಸಿದೆ' ಎಂಬುದು ಹೆಣ್ಣಿನ ಜವಾಬ್ದಾರಿಯನ್ನು ಸೂಚಿಸುತ್ತದೆ.

ವಿದ್ಯೆ ಒಂದೇ ಅಲ್ಲ, ಅದರ ಜೊತೆಗೆ ಜ್ಞಾನದ ಸಂಪತ್ತನ್ನು ಕಲಿಸಿದ್ದೇನೆ. ಅಲ್ಲದೆ ಕುಸ್ತಿಯ ಕಲೆ ಯುದ್ಧದ ಕಲೆ ಕಲಿಸಿದ್ದಾಳೆ. ಒಬ್ಬ ರಾಜಕುಮಾರನಿಗೆ ಬೇಕಾಗುವ ಅರ್ಹತೆಗಳು ಚಿತ್ರಿತವಾಗಿವೆ. ತನ್ನ ಮಗನನ್ನು ಸಂಪೂರ್ಣವಾಗಿ ಸಕಲ ವಿದ್ಯೆಗಳಲ್ಲಿ ಪಾರಂಗತನನ್ನಾಗಿ ಮಾಡಿದ್ದನ್ನು ಹೇಳುತ್ತಾಳೆ. ಆದರೆ ಈ ಎಲ್ಲಾ ವಿದ್ಯೆಗಳನ್ನು ಕಲಿಸಿದ್ದಾಯಿತು. ತನ್ನ ಮಗನಿಗೆ ಮದುವೆ ಮಾಡುವುದೊಂದೇ ಬಾಕಿ ಉಳಿದಿದೆ ಎಂದು ಗಂಡನಿಗೆ ಪತ್ರ ಬರೆಯುವುದು ಸ್ತ್ರೀಯೊಬ್ಬಳ ಕಾಳಜಿಯನ್ನು ತೋರಿಸುತ್ತದೆ. 'ಹೆಣ್ಣು ಸಂಸಾರದ ಕಣ್ಣು' ಎನ್ನುವಂತೆ ಇಡೀ ಕುಟುಂಬದ ಜವಾಬ್ದಾರಿಯನ್ನು ಸ್ತ್ರೀ ಹೊತ್ತಿರುತ್ತಾಳೆ. ಆ ನೆಲೆಯಲ್ಲಿ ಈ ಸನ್ನಿವೇಶ ಬಂದಿದೆ. ಹನ್ನೆರಡು ವರ್ಷದ ಮಗನಿಗೆ ಮದುವೆ ಮಾಡುವ ಪ್ರಸ್ತಾಪವು ಹಿಂದೆ ಬಾಲ್ಯವಿವಾಹ ಜಾರಿಯಲ್ಲಿ ಇದ್ದಿತು ಎಂಬುದನ್ನು ದೃಢಪಡಿಸುತ್ತದೆ. ಕೈಯೊಳಗ ಬೆಳ್ಳದೊಂದು ಕಾಗದ ಹಿಡಕೊಂಡು ಗರಗರ ಬರೆದು 'ಬಾವಿಬೆಲ್ಲಿಗೆ ಕೊಟ್ಟು ಕಳಿಸ್ಯಾಳ' ಎನ್ನುವ ಸಾಲುಗಳನ್ನು ನೋಡಿದಾಗ ಭಾಷಿಕವಾಗಿ ಪದಗಳ ಪ್ರಯೋಗವು ಆ ಸನ್ನಿವೇಶಕ್ಕೆ ತಕ್ಕಂತೆ ವ್ಯಕ್ತ ಮಾಡಿದ ಕತೆಗಾರರ ಪ್ರಬುದ್ಧತೆ ಮತ್ತು ಅವರ ಸೃಜನಶೀಲತೆ ಇಲ್ಲಿ ಕಂಡುಬರುತ್ತದೆ.

ಧರ್ಮಸೇನರಾಜನು ಪ್ರತಿಯೊಂದು ಕೆಲಸಕ್ಕೆ ಜ್ಯೋತಿಷಿಗಳ ನೆರವು ಪಡೆಯುವುದು ನಂಬಿಕೆ, ಸಂಪ್ರದಾಯವಾಗಿದೆ. ಬಾವಿಗೆ ಏನೇ ಆಹುತಿ ಕೊಟ್ಟರೂ ಬಾವಿಯಲ್ಲಿ ನೀರಿನ ಸೆಲೆ ಕಾಣುವುದಿಲ್ಲ ರಾಜನು ಮತ್ತೆ ಜ್ಯೋತಿಷಿಗಳನ್ನು ಕರೆದು ಪಂಚಾಂಗ ನೋಡಿದಾಗ-

ಏನಯ್ಯ ಧರ್ಮಸೇನರಾಜ
ನಿನ್ನೆ ಮಾಡಿದ ಆಹುತಿ ಸರಿ ಹೋಗಿಲ್ಲಂತ
ನೋಡಪ್ಪ ನೀ ಮಾಡಿದ್ದ ಆಹುತಿ ಸರಿ ಹೋಗಿಲ್ಲ
ಖಂಡಗ ಗೋದಿಟ್ಟು ತರಬೇಕು
ಅದನ್ನು ನಾದಬೇಕು
ಒಂದೇ ಪಣತಿ ಮಾಡಬೇಕು
ಹನ್ನೆರಡು ಬಿಳಿಸೀರೆ ತರಬೇಕು
ಒಂದೇ ಜೊತೆ ಮಾಡಬೇಕು
ಹನ್ನೆರಡು ಪೀಪಿ ಎಣ್ಣೆ ತರಬೇಕು
ಪಣೆತಿಗಿ ಸುರುವಬೇಕು
ಖಂಡಗ ಕುಂಕುಮ
ಖಂಡಗ ಬಂಡಾರ
ಬಾವಿಯೊಳಗ ರತಿ ಬರೆಯಬೇಕು

ಒಂದು ಬಂಡಿ ನಿಂಬೆಬಾಯಿ

ಒಂದು ಬಂಡಿ ಅನ್ನ ಕುಂಬ ಹಾಕಬೇಕು

ರಾಜ ಇದೆಲ್ಲ ಆಹಾರ ಮಾಡಿ

ತಿರುಗಿ ನೋಡಲಾರದಂಗ ಹೋಗಬೇಕು

ಬಾವಿಗೆ ಆಹುತಿ ಕೊಡುವ ವಿಧಾನವು ಜ್ಯೋತಿಷಿಗಳ ಪಾತ್ರದ ಮೂಲಕ ಬಂದಿದೆ. ಆದರೆ ಜ್ಯೋತಿಷಿಗಳ ಪಾತ್ರದ ಮೂಲಕ ಕತೆಗಾರರ ಅನುಭವ ಮೂಡಿಬಂದಿದೆ. ಗೋದಿ ಹಿಟ್ಟಿನಿಂದ ಹಣತೆ ಮಾಡುವ ವಿಧಾನವಿದೆ. ಹಿಟ್ಟನ್ನು ನೆನೆಸಿ ನಾದಿದಾಗ ಮಾತ್ರ ಎಣ್ಣೆಯನ್ನು ಹಿಡಿದಿಟ್ಟುಕೊಳ್ಳುವ ಶಕ್ತಿ ಬರುತ್ತದೆ. ಇಲ್ಲಿ ಖಂಡಗ ಅಂದರೆ ಇಪ್ಪತ್ತು ಚೀಲದ ಗೋದಿ ಹಿಟ್ಟಿನಿಂದ ಮಾಡಿದ ಹಣತೆಗೆ ಹನ್ನೆರಡು ಬಿಳಿಸೀರೆಯ ಬತ್ತಿ ಮಾಡುವುದು, ಹನ್ನೆರಡು ಡಬ್ಬಿ ಎಣ್ಣೆ ಸುರಿಯುವುದು, ಅಲ್ಲದೆ ಇಪ್ಪತ್ತು ಚೀಲ ಕುಂಕುಮ, ಇಪ್ಪತ್ತು ಚೀಲ ಅರಿಸಿನ ಬಾವಿಯಲ್ಲಿ ರಂಗೋಲಿ ಹಾಕುವುದು, ಅದರ ಮೇಲೆ ಹಣತೆ ಇಡುವುದು ಎಂದು ಹೇಳುತ್ತಾರೆ. ಬಂಡಿ ನಿಂಬೆಕಾಯಿ ಬಂಡಿ ಅನ್ನ ಕುಂಬ ಹಾಕಿ ತಿರುಗಿ ನೋಡಲಾರದಂಗ ಹೋಗಬೇಕು ಎಂದು ಹೇಳುವ ಮಾತಿನಲ್ಲಿ ಸಂಪ್ರದಾಯ ಇದೆ. ತಿರುಗಿ ನೋಡಿದರೆ ಕೆಡಕು ಉಂಟಾಗುತ್ತದೆಂಬ ಆತಂಕವನ್ನು ಹೇಳುವುದು. ಇಲ್ಲಿ ಬಾವಿಗೆ ಆಹುತಿ ಕೊಡುವ ವಿಧಾನವು ಚಿತ್ರಿತವಾಗಿದೆ.

ಭಾಗೀರಥಿದೇವಿಗೆ ಮಗನ ಮದುವೆ ಮಾಡುವ ಹಂಬಲ. ಆದರೆ ಗಂಡ ಧರ್ಮಸೇನರಾಜನಿಗೆ ತನ್ನ ಬಯಕೆ ಈಡೇರಲಿಲ್ಲ ಎಂಬ ಆತಂಕದಲ್ಲಿ ಮಗನ ಮದುವೆಯನ್ನು ತಾನೇ ಮಾಡಿಕೊಳ್ಳಲು ಹೇಳುತ್ತಾನೆ. ಗಂಡನ ಮನದ ಇಂಗಿತವನ್ನು ಅರಿತ ಭಾಗೀರಥಿದೇವಿ ಮಗನ ಮದುವೆ ಮಾಡಬೇಕೆಂದು-

ಲಗ್ನ ಸಾಹಿತ್ಯ ತೈನಾತ ಮಾಡಿ ಇಟ್ಟಳ

ಏನಪ್ಪ ಕೈ ತೆಳಗೆ ರೈತರೆ

ರಾಜ ಬಾವಿ ಬಿಟ್ಟು

ಮೂರು ಹೆಜ್ಜೆಮುಂದ ಬರಲ್ಲಂತ

ಏಳೇಳು ಹದಿನಾಲ್ಕು ಬಂಡಿ ಕಟ್ಟಿಕೊಂಡು

ಊರಿನ ರೈತರ ಹಿಡಕೊಂಡು

ತಾಯಿ ಭಾಗೀರಥಿದೇವಿ

ಯಾ ಊರು ಪಟ್ನಕ ಹೊಂಟಳಲ್ಲ

ಗಿರಿಯಾವತಿ ಪಟ್ನಕ ಹೊಂಟಳಲ್ಲ

ರಾಜ ಗಿರಿಯಾವತಿರಾಜನಲ್ಲ

ಮಗಳ ಗಿರಿಯಾವತಿ ನೋಡ

ಹಾದಿಗಿ ಹಂದರ ಹಾಕಿ

ಬೀದಿಗಿ ಚಳಿ ಕೊಟ್ಟು

ಗಾಂಧಾರ ಲಗ್ನ ಆಗ್ಯದಲ್ಲ

ತಾಯಿ ಗಿರಿಯಾವತಿನ ಕರಕೊಂಡು

ಅರಮನೆಗೆ ಹೊಂಡು ಬಂದಳಲ್ಲ

ತಾಯಿ ಭಾಗೀರಥಿದೇವಿ ಸೊಸೆ ಮಗ

ಇಲ್ಲಿ ಮದುವೆ ಪ್ರಸಂಗವನ್ನು ಸೊಗಸಾಗಿ ವರ್ಣಿಸಲಾಗಿದೆ. ಭಾಗೀರಥಿದೇವಿಯೇ ಮದುವೆಗೆ ಬೇಕಾಗುವ ಸಾಮಗ್ರಿಗಳನ್ನು ತಯಾರು ಮಾಡಿ ಇಟ್ಟುಕೊಂಡಿದ್ದಾಳೆ. ಗಂಡನು ಬಾವಿಯಲ್ಲಿ ನೀರು ಬೀಳುವ ತನಕ ಅರಮನೆಗೆ ಬಾರದಿದ್ದನ್ನು ಮನಗಂಡು, ತಾನೇ ಪಟ್ಟಣದ ಜನರನ್ನು ಮುಂದಿಟ್ಟುಕೊಂಡು ಮಗನ ಮದುವೆಗೆ ಹೊರಡುತ್ತಾಳೆ. ಏಳೇಳು ಹದಿನಾಲ್ಕು ಬಂಡಿ ಕಟ್ಟಿಕೊಂಡು ಮದುವೆಗೆ ಹೋಗುವ ಸನ್ನಿವೇಶವು ಮದುವೆಯ ವೈಭವವನ್ನು ತೋರುತ್ತದೆ. ಗಿರಿಯಾವತಿ ಪಟ್ಟಣದ ಗಿರಿಯಾವತಿರಾಜನ ಮಗಳು ಗಿರಿಯಾವತಿಯ ಜೊತೆ ಲವುತರಾಜನ ಗಾಂಧಾರ ಲಗ್ನವಾಗುತ್ತದೆ. 'ಹಾದಿಗಿ ಹಂದರ ಹಾಕಿ ಬೀದಿಗಿ ಚಳಿ ಕೊಟ್ಟು' ಎನ್ನುವಲ್ಲಿ ಮದುವೆಯ ಮನೆಯ ಮುಂದಿನ ಶೃಂಗಾರವನ್ನು ವರ್ಣಿಸಿದ್ದಾರೆ. 'ಹಂದರ' ಎಂಬುದನ್ನು ಮನೆಯಿಂದ ಹಾದಿಯವರೆಗೆ ಹಾಕಿ, ಮುಂದೆ ಬೀದಿಯಲ್ಲಿ ಚಳಿ (ಸಗಣಿಯಿಂದ ಸಾರಿಸುವುದು) ಹಾಕಿ ಶೃಂಗಾರ ಮಾಡಿದ್ದಾರೆ. ಇದು ಸಾಮಾನ್ಯ ಜನರ ಮದುವೆಯ ವರ್ಣನೆಯಾಗಿದೆ. ಹೆಣ್ಣಿನ ಮನೆಯಲ್ಲೇ ಮದುವೆಯಾಗುವುದರಿಂದ ಅರಮನೆಗೆ ಸೊಸೆ ಮಗನನ್ನು ಭಾಗೀರಥಿದೇವಿ ಕರೆದುಕೊಂಡು ಹೋಗುತ್ತಾಳೆ. ಇಲ್ಲಿ ಮುಖ್ಯವಾಗಿ ಮದುವೆಯ ಸನ್ನಿವೇಶವನ್ನು ಅರ್ಥಗರ್ಭಿತವಾಗಿ ನಿರೂಪಿಸಿದ್ದಾರೆ.

ಧರ್ಮಸೇನ ತೋಡಿಸಿದ ಬಾವಿಗೆ ಆಹುತಿ ಕೊಟ್ಟರೆ ಮಾತ್ರ ನೀರಿನ ಸೆಲೆ ಸಿಗುತ್ತದೆಂಬ ಆಶಯವನ್ನು ಜ್ಯೋತಿಷಿಗಳು ಹೇಳುತ್ತಾರೆ. 'ಕೆರೆಗೆ ಹಾರ' ಕಾವ್ಯದಲ್ಲಿ ಸೊಸೆಯನ್ನು ಕೆರೆಗೆ ಆಹುತಿ ಕೊಡುವ ವಿಷಯವನ್ನು ಜನಪದರು ಮನಮೋಹಕವಾಗಿ ಹೇಳಿದ್ದನ್ನು ಇಲ್ಲಿ ನೆನಪಿಸಿಕೊಳ್ಳಬಹುದು. ಬಾವಿಗಳಿಗೆ ಆಹುತಿ ಕೊಡುವ ಸಂಪ್ರದಾಯವು ಕನ್ನಡ ನಾಡಿನಲ್ಲಿದೆ. ಇಲ್ಲಿ ಧರ್ಮಸೇನರಾಜನು ಸಹ ಬಾವಿಯಲ್ಲಿ ನೀರಿನ ಸೆಲೆ ಕಾಣದಿದ್ದಾಗ ಜ್ಯೋತಿಷಿಗಳ ಸಲಹೆಯ ಮೇರೆಗೆ ಮಗ ಹಾಗೂ ಸೊಸೆಯನ್ನು ಆಹುತಿ ಕೊಡಲು ಮುಂದಾಗುತ್ತಾನೆ. ಆದರೆ ತಾಯಿ ಭಾಗೀರಥಿದೇವಿ ಕರುಳಿನ ಮಿಡಿತದಿಂದ ಮಗನನ್ನು ಉಳಿಸುವ ಪ್ರಯತ್ನ ಮಾಡುತ್ತಾಳೆ. ತನ್ನ ಮಗನಿಗೆ ಬಂದ ವನವಾಸವನ್ನು ಕುರಿತು ಕಣ್ಣೀರಿಡುತ್ತಾಳೆ. ತನ್ನ ಮಗನನ್ನು ಆಹುತಿಯಿಂದ ತಪ್ಪಿಸಿ ಬೇರೆ ನಾಡಿಗೆ ಕಳಿಸುವ ಸನ್ನಿವೇಶವು ಶೋಕಮಯವಾಗಿ ವ್ಯಕ್ತವಾಗಿದೆ. ವಕ್ತೃವು ಆ ಸನ್ನಿವೇಶವನ್ನು ಶೋಕರಸವಾಗಿ ನಿರೂಪಿಸಿದ್ದಾರೆ. ಅದು ಈ ರೀತಿ ವ್ಯಕ್ತವಾಗಿದೆ-

ಹರಹರ ಯನ್ನದೇವ ಮಾಯದಾರಿ

ಯಾ ದೇಶ ಹೋಗ್ತಿ ಮಗನೆ

ಯಾ ನಾಡಿಗೆ ಹೋಗ್ತಿ ಮಗನೆ

ತಂದೆ ಎಲ್ಲಿ ಮಗನೆ

ನಿನಗ ತಾಯಿ ಎಲ್ಲಿ ಮಗನೆ

ಬಂಧು ಎಲ್ಲಿ ಮಗನೆ

ನಿನಗ ಬಳಗ ಎಲ್ಲಿ ಮಗನೆ

ತಾಯಿ ಮಗನ ಕಾಲಚೆಲ್ಲಿ ಕುಂತುಕೊಂಡು

ಆಲೋಕಂಗ ದುಃಖ ಮಾಡಿ

ಮಗನೇ ಈ ಪಾಪಿ ಕೈಯಲ್ಲಿ

ನಾ ಹ್ಯಾಂಗ ಆಹುತಿ ಕೊಡಲಿ

ಎಂದು ತನ್ನ ದುಃಖವನ್ನು ತಾಯಿ ವ್ಯಕ್ತಪಡಿಸಿದ್ದಾಳೆ. ತಾಯಿ ಮಗನನ್ನು ಉಳಿಸಲು ಬೇರೆ ನಾಡಿಗೆ ತಾನೇ ಕಳಿಸುವ ಏರ್ಪಾಡು ಮಾಡಿದ್ದರೂ, ಆ ಮಗನು ಒಬ್ಬನೇ ಹೋಗುತ್ತಾನೆಂಬ ಆತಂಕವಿರುತ್ತದೆ. 'ಹರಹರ ಯನ್ನದೇವ ಮಾಯದಾರಿ' ಎನ್ನುವ ಸಾಲಿನಲ್ಲಿ ಶೋಕದ ಮಡುವು ತುಂಬಿಕೊಂಡಿದೆ. ಒಬ್ಬ ತಾಯಿಯು ಮಗನ ಅಗಲುವಿಕೆಯ ದುಃಖವನ್ನು ಕತೆಗಾರರು ನಿರೂಪಿಸಿದ್ದಾರೆ. ತಾನು ಹೋದ ಸ್ಥಳದಲ್ಲಿ ತಾಯಿ, ತಂದೆ, ಬಂಧು ಬಳಗದ ಸಂಪರ್ಕವೇ ಇಲ್ಲವಾಗುತ್ತದಲ್ಲ ಎಂಬ ಕಳವಳ. ಮಗನ ಕಾಲುಗಳ ಹತ್ತಿರ ಕುಳಿತುಕೊಂಡು ದುಃಖ ಮಾಡುವ ಸನ್ನಿವೇಶವು ತಾಯಿಯೊಬ್ಬಳ ಮನಮಿಡಿತವನ್ನು ತೋರುತ್ತದೆ. 'ಈ ಪಾಪಿ ಕೈಲಿ ನಾ ಹ್ಯಾಂಗ ಆಹುತಿ ಕೊಡಲಿ' ಎನ್ನುವ ಪಾಪದ ಪ್ರಜ್ಞೆಯ ಅರಿವು ಅವಳಿಗೆ ಬಂದಿದೆ. ನನ್ನ ಕೈಯಿಂದ ಬಾವಿ ಆಹುತಿಗೆ ಮಗನನ್ನು ಹಿಡಿದುಕೊಟ್ಟು ಅದರ ಪಾಪವನ್ನು ಹೊರಲು ತಯಾರಿರುವುದಿಲ್ಲ. ಮುಖ್ಯವಾಗಿ ಇಲ್ಲಿಯ ತಾಯಿಯ ಶೋಕರಸವು ಮಾನವೀಯ ನೆಲೆಯಿಂದ ಕೂಡಿದೆ.

ಅದೇ ತಾಯಿ ದುಃಖವು ಮಗನನ್ನು ಕರೆದುಕೊಂಡು ಹೋಗುವವರ ಮುಂದೆ ನಾಟಕೀಯವಾಗಿ ಪ್ರದರ್ಶಿಸುವುದು ತಾಯಿಯೊಬ್ಬಳ ಸಮಯೋಚಿತ ಚತುರತೆ ಕಾಣುತ್ತದೆ. ತಾಯಿ ಭಾಗೀರಥಿದೇವಮ್ಮ ನಿಲಗಚ್ಚಾಯಿ ಹಾಕಿಕೊಂಡು ಟೊಂಕಕ್ಕೆ ಸೆರಗು ಸುತ್ತಿ ಬಾಗಿಲ ಬೆಲ್ಲಿಗೆ (ಬಾಗಿಲು ಹತ್ತಿರ) ಬಂದು

ತಾಯಿ ಲಬಲಬ ಬಾಯಿ ಬಡ್ದಳ

ತಾಯಿ ದಬದಬ ಎದಿ ಬಡಕಂಡಳ

ಎನ್ನುವ ಸಾಲಿನಲ್ಲಿ ಇರುವ ದುಃಖಕ್ಕೂ ತಾಯಿಯು ಮಗನ ಕಾಲಿನ ಹತ್ತಿರ ಕುಳಿತುಕೊಂಡು ದುಃಖ ಮಾಡುವ ಸನ್ನಿವೇಶದಲ್ಲಿ ವ್ಯತ್ಯಾಸವಿದೆ. ಇಲ್ಲಿ ಲಬಲಬ ಬಾಯಿ ಬಡಿದುಕೊಳ್ಳುವ ಬರೀ ಆಡಂಬರತನ

ತೋರಿಸುತ್ತದೆ. ಅಂತರಾಳದ ದುಃಖವಾಗಿ ಕಾಣಿಸುವುದಿಲ್ಲ. ದಬದಬ ಎದೆಯನ್ನು ಬಡೆದುಕೊಳ್ಳುವುದು ಸಹ ನಾಟಕೀಯತೆ ಕಂಡುಬರುತ್ತದೆ. ರೈತರ ಮುಂದೆ ತೋರಿಸುವ ದುಃಖವು ಇದೆ.

ಈ ದುಃಖದ ಸನ್ನಿವೇಶವು ಕತೆಗಾರರಲ್ಲಿ ಹುಟ್ಟಿರುವುದರಿಂದ ಅದು ಅಲೌಕಿಕವಾದದ್ದು ಇಲ್ಲಿ ಕ್ರಿಯೆ ಅಲೌಕಿಕವಾಗಿ ವ್ಯಕ್ತವಾಗಿದ್ದು ಕೃತಕ ದುಃಖವಾಗಿ ಕಂಡುಬರುತ್ತದೆ. ಭಾಗೀರಥಿದೇವಿ ರೈತರನ್ನು ಉದ್ದೇಶಿಸಿ ಹೇಳುವ ಸನ್ನಿವೇಶವು ಇನ್ನೂ ಸ್ವಾರಸ್ಯಕರವಾಗಿ ಮೂಡಿಬಂದಿದೆ. ರಾಜನು ಕಳಿಸಿದ ಬಂಟರನ್ನು ಕುರಿತು-

ಏನಪ್ಪ ತಂದೆ ರೈತರೆ
ನನ್ನ ಮಗ ಲವುತರಾಜಗ
ಜಳಕ ಮಾಡಿಸಿ ಉಣಿಸಿ ತಿನಿಸಿದೆನಲ್ಲ
ಇದೇ ಬಂಗಾರ ಕುರ್ಚಿ ಮ್ಯಾಲೆ ಕೂಡಿಸಿದ್ದೆ
ರಾಕ್ಷಸ ಮ್ಯಾಲ ಮಣ್ಣಾಕಲಿ
ನೋಡಿ ನೋಡಲಾರದಂಗ ಮುಂಚ್ಯಕ
ಮಗನ ನುಂಗಿ ಹೋಗ್ಯಾದ
ನಾ ಹ್ಯಾಂಗ ಮಾಡಲಂತಂದು
ತಾಯಿ ದಬದಬ ಎದೆ ಬಡಕೊಂಡಳ
ತಾಯಿ ಲಬಲಬ ಬಾಯಿ ಬಡಕೊಂಡಳ

ಮಗ ಲವುತರಾಜನ ಮುಂದೆ ಕುಳಿತುಕೊಂಡು ದುಃಖ ಮಾಡುವ ಸನ್ನಿವೇಶಕ್ಕೂ ರೈತರನ್ನು ಉದ್ದೇಶಿಸಿ ಮಾತನಾಡಿ ಮಾಡುವ ದುಃಖಕ್ಕೂ ವ್ಯತ್ಯಾಸವಿದೆ. ಒಬ್ಬ ಹಾಡುಗಾರರು ಎರಡು ದುಃಖದ ಸನ್ನಿವೇಶದ ನಿರೂಪಣೆ ಭಿನ್ನವಾಗಿ ಬಂದಿದೆ. ಹಾಡುವ ರಾಗ, ಪದಗಳ ಬಳಕೆಯಲ್ಲಿ ವ್ಯತ್ಯಾಸವಿದೆ. ತಾಯಿ ತನ್ನ ಮಗನಿಗೆ ಜಳಕ ಮಾಡಿಸಿ ತಿನ್ನಿಸಿ, ಬಂಗಾರದ ಕುರ್ಚಿಯಲ್ಲೇ ಕೂಡಿಸುವುದು ರಾಜಕುಮಾರನ ವೈಭವವನ್ನು ತೋರಿಸುತ್ತದೆ. ರಾಕ್ಷಸನ ಮ್ಯಾಲೆ ಮಣ್ಣಾಕಲಿ ಎಂದು ಹೇಳುವ ತಾಯಿಯ ಮಾತಿನಲ್ಲಿ ತೋರಿಕೆ ದುಃಖ ಬಂದಿದೆ. ತಾಯಿ ಎದೆಯನ್ನು ಬಡಿದುಕೊಳ್ಳುವುದು, ಬಾಯಿ ಬಡಿದುಕೊಳ್ಳುವಂತಹುದು ಇನ್ನೂ ಅವಳ ನಾಟಕೀಯ ಅಭಿನಯವಾಗಿ ಕಾಣುತ್ತದೆ. ಮುಖ್ಯವಾಗಿ ಒಬ್ಬ ತಾಯಿ ತನ್ನ ಮಗನನ್ನು ಉಳಿಸಿಕೊಳ್ಳಲು ಏನೆಲ್ಲ ಪ್ರಯತ್ನಗಳನ್ನು ಮಾಡುತ್ತಾಳೆಂಬ ಆಶಯ ಇದೆ. ಹಾಗೆಯೇ ಒಂದು ಹೆಣ್ಣಿನ ದುಃಖದ ಎರಡು ಮುಖಗಳನ್ನು ಹೊರಹೊಮ್ಮಿಸಿದ ಕತೆಗಾರನ ಅನುಭವ ಅವರ ಸೃಜನಕಲೆಗೆ ಸಾಕ್ಷಿಯಂತಿದೆ.

ಧರ್ಮಸೇನರಾಜನ ಆತಂಕಕ್ಕೊಳಗಾಗಿ ಮತ್ತೆ ಜ್ಯೋತಿಷಿಗಳ ಮೊರೆ ಹೋದಾಗ ಸೊಸೆಯನ್ನು ಬಾವಿಗೆ ಆಹುತಿ ಕೊಡಲು ಹೇಳುತ್ತಾನೆ. ರಾಜನ ಆದೇಶ ಮೇರೆಗೆ ಬಂಟರು ಮತ್ತೆ ರಾಣಿ ಭಾಗೀರಥಿದೇವಿ ಅರಮನೆಗೆ ಹೊರಟು ಬಂದು 'ಮಗನಿಗಿ ಬಂದಾಕಿಗಿ ಸೊಸೆ ಗಿರಿಯಾವತಿಗಿ ಬಾವಿ ಆಗಾರ ಕೇಳಕತ್ಯಾದ'

ಎಂದು ಹೇಳುತ್ತಾರೆ. ಇಲ್ಲಿ ಭಾಗೀರಥಿದೇವಿ ಮತ್ತು ಬಂದ ಬಂಟರ ಮಧ್ಯ ಸಂಭಾಷಣೆ ನಡೆಯುತ್ತದೆ. ಬಂದ ಬಂಟರನ್ನು ಉದ್ದೇಶಿಸಿ ಭಾಗೀರಥಿದೇವಿಯು-

ಏನಪ್ಪ ನೀವು ರೈತರೆ
ಇಲ್ಲೇ ತಲಬಾಗಿಲ ಹತ್ತಿರ ಕೂಡ್ರಿ
ಸೊಸಿನ ತಯಾರು ಮಾಡ್ತಿನಿ
ನಾಲ್ಕು ಮಂದಿ ರೈತರು ನೋಡಿ ಏನಂತರಲ್ಲ
ಏನಮ್ಮ ಭಾಗೀರಥಿದೇವಮ್ಮ
ಆವಾಗ ನೀ ಹಿಂಗೆ ಹೇಳಿದೆಲ್ಲ
ನಿನ್ನ ಮಗನ ನುಂಗಿಹೋಗಿದಂತ ಹೇಳಿದಲ್ಲ
ಈಗ ನಾವು ಬಿಟ್ಟು ಹೋಗ್ಲಾಕ ಸಾದ್ಯ ಇಲ್ಲಮ್ಮ
ಜಲ್ದಿ ತಯಾರು ಮಾಡ್ಸು ಅಂತರಲ್ಲ
ನಾವು ಕರಕಂಡು ಹೋಗ್ಲಕತ್ತಿವಿ
ಆ ರೈತರು ತಲಬಾಗಿಲಬೆಲ್ಲಿ
ಕಾಯ್ದುಕೊಂಡು ಕುಂತರಲ್ಲ

ಭಾಗಿರಥಿದೇವಿಗೆ ಮಗನಿಗೆ ಒದಗಿದ ಕಷ್ಟವು ತನ್ನ ಸೊಸೆಗೆ ಬಂತಲ್ಲ ಎಂದು ಮರುಗಿ ಸೊಸೆಯನ್ನು ಉಳಿಸಲು ಪ್ರಯತ್ನ ಮಾಡುವಲ್ಲಿ ಆದರ್ಶ ಸ್ತ್ರೀಯಾಗಿ ಗೋಚರಿಸುತ್ತಾಳೆ. ಮತ್ತೆ ಬಂದ ರೈತರಿಗೆ ಅರಮನೆಯ ಬಾಗಿಲಲ್ಲಿ ಕೂಡಿರಿ ಸೊಸೆಯನ್ನು ತಯಾರು ಮಾಡ್ತಿನಿ ಎನ್ನುವಲ್ಲಿ ಅವಳ ಹಿತಾಸಕ್ತಿ ಅಡಗಿದೆ. ಬಂದಂತ ರೈತರು ಭಾಗೀರಥಿದೇವಿಗೆ 'ಆವಾಗ ನೀ ಹಿಂಗೆ ಹೇಳಿದೆಲ್ಲ' ಎನ್ನುವಲ್ಲಿ ರೈತರಿಗೆ ಆತಂಕವಿದೆ. ಹೀಗಾಗಿ 'ಈಗ ನಾವು ಬಿಟ್ಟು ಹೋಗ್ಲಾಕ ಸಾದ್ಯ ಇಲ್ಲಮ್ಮ' ಎಂದು ಹೇಳುವಲ್ಲಿ ಸೊಸೆಯನ್ನು ತಪ್ಪದೆ ಕಳಿಸಬೇಕೆಂಬ ಭಾವವು ಇದೆ. ಇಲ್ಲಿ ಒಂದು ಕಡೆ ಭಾಗೀರಥಿದೇವಿಗೆ ಸೊಸೆಯನ್ನು ಆಹುತಿಗೆ ಕಳಿಸಬೇಕಲ್ಲ ಎಂಬ ದುಗುಡವಿದ್ದರೆ, ರೈತರಿಗೆ ಈ ಸಲವಾದರೂ ಸೊಸೆಯನ್ನಾದರೂ ಕರೆದುಕೊಂಡು ಹೋಗುತ್ತೇವೆಯೋ ಇಲ್ಲ ಎಂಬ ಭಯವು ಅವರಲ್ಲಿ ಇರುತ್ತದೆ. ಇಬ್ಬರಲ್ಲೂ ಆತಂಕದ ಛಾಯೆಯಲ್ಲೇ ಸಂಭಾಷಣೆ ನಡೆಯುತ್ತದೆ. ರೈತರು 'ಜಲ್ದಿ ತಯಾರು ಮಾಡ್ಸು' ಎನ್ನುವ ಸಾಲಿನಲ್ಲಿ ಸಹ ಆತಂಕವಿದೆ. ಆ ಭಯದ ನೆರಳಲ್ಲೇ ರೈತರು ಹೊಸ್ತಿಲದ ಬಾಗಿಲನ್ನು ಕಾಯ್ದುಕೊಂಡು ಕುಳಿತುಕೊಳ್ಳುತ್ತಾರೆ. ಇವರಿಗೆ ಈ ಸಲವಾದರೂ ಕರೆದುಕೊಂಡು ಹೋಗಿ ರಾಜನ ಕೃಪೆಗೆ ಪಾತ್ರರಾಗಬೇಕೆಂಬ ಹಂಬಲ ಇರುತ್ತದೆ.

ಭಾಗೀರಥಿದೇವಿ ಸೊಸೆಯನ್ನು ಆಹುತಿ ಕೊಡಲು ಕಳಿಸುವ ಉದ್ದೇಶದಿಂದ-

ಸೊಸೆ ಗಿರಿಯಾವತಿಗಿ

ಹೊಟ್ಟೆ ತುಂಬ ಊಟ ಮಾಡಿಸಿ

ವಡವೆ ವಸ್ತ್ರ ಮೈತುಂಬ ಇಟ್ಟು

ತಾಯಿ ಸೊಸಿನ ಟೆಕ್ಕಿಗಿ ಹಾಕಿಕೊಂಡು

ಆಲೋಕಂಗ ದುಃಖ ಮಾಡಿದಳು

ಏನಮ್ಮ ಸೊಸೆ ಗಿರಿಯಾವತಿ

ನಿಮಗೇನು ಕಷ್ಟ ಬಂತು

ನಿಮ್ಮದು ಸತಿಪತಿ ಧರ್ಮ ನೆಟ್ಟಗೆ ಇದ್ದರೆ

ನೀವು ಗಂಡ ಹೆಂಡ್ತಿ ಕೂಡ್ತೀರಮ್ಮ

ಎಂದು ಹರಸುತ್ತಾಳೆ. ಇಲ್ಲಿ ಅತ್ತೆ ಸೊಸೆಯನ್ನು ನೋಡುವ ಪರಿ ಇದೆ. ಸೊಸೆ ಎಂಬ ತಾತ್ಸಾರ ಭಾವನೆ ಇಲ್ಲ. ಅತ್ತೆ ಆದರ್ಶ ಸ್ತ್ರೀಯಾಗಿ ಕಾಣುತ್ತಾಳೆ. ಮಗನಂತೆ ಸೊಸೆಯು, ಮಗನಿಗಿಂತ ಕಡಿಮೆಯಲ್ಲ ಎನ್ನುವ ಭಾವ ಇದೆ. ಹೀಗಾಗಿ ಸೊಸೆಗೆ ಹೊಟ್ಟೆ ತುಂಬ ಊಟ ಮಾಡಿಸುತ್ತಾಳೆ. ಕಾರಣ ಮನೆಯನ್ನು ಬಿಟ್ಟು ಹೋಗುತ್ತಾಳೆ. ಅವಳಿಗೆ ಮತ್ತೆ ಊಟ ಎಲ್ಲಿ ಸಿಗುತ್ತದೋ ಎಂಬ ಆತಂಕ, ನಂತರ ಸೊಸೆಗೆ ಮೈತುಂಬ ಆಭರಣಗಳನ್ನು ಧರಿಸುತ್ತಾಳೆ. ಅಂದರೆ ಕಷ್ಟದ ಕಾಲದಲ್ಲಿ ಆಭರಣಗಳು ಸಹಾಯಕ್ಕೆ ಬರಬಹುದೆಂಬ ಆಶಯ ಇರುತ್ತದೆ. ಸೊಸೆಯನ್ನು ತನ್ನ ತೆಕ್ಕೆಗೆ ಹಾಕಿಕೊಂಡು ದುಃಖ ಮಾಡುವ ಪ್ರಸಂಗವು ನಿಜವಾದ ಸ್ತ್ರೀಯ ಕಳಕಳಿ ವ್ಯಕ್ತವಾಗಿದೆ. ಸೊಸೆಗೆ ಬಂದ ಕಷ್ಟ ನೆನೆದು ದುಃಖ ಮಾಡುವ ಅತ್ತೆ ನಿಮ್ಮದು ಸತಿ ಪತಿ ಧರ್ಮ ನೆಟ್ಟಗೆ ಇದ್ದರೆ, ನೀವು ಗಂಡ-ಹೆಂಡ್ತಿ ಕೂಡ್ತೀರಮ್ಮ ಎಂದು ಹರಸುತ್ತಾಳೆ. ಇಲ್ಲಿ ಸತಿ ಪತಿ ಧರ್ಮದ ಬೋಧನೆ ಇದೆ. ಸತಿ ಪತಿ ಅನನ್ಯವಾಗಿದ್ದರೆ, ಗಂಡ-ಹೆಂಡತಿಯ ಋಣಾನುಬಂದ ಇದ್ದರೆ, ಪತಿಯೇ ದೇವರೆಂಬ ನಂಬಿಕೆ ಇದ್ದರೆ, ಆ ನಂಬಿಕೆಗೆ ದ್ರೋಹ ಉಂಟಾಗುವುದಿಲ್ಲ, ಗಂಡ-ಹೆಂಡತಿ ತಪ್ಪದೆ ಕೂಡುತ್ತಾರೆ ಎಂಬ ಆಶಯವು ಅತ್ತೆಗೆ ಇರುತ್ತದೆ.

ಅತ್ತೆಯು ತನ್ನ ಸೊಸೆಗೆ ಧರ್ಮ ಬೋಧೆ ನೀಡಿ, ಸೊಸೆಯನ್ನು ಮುಖ್ಯ ದ್ವಾರದಿಂದ ಕಳಿಸಿದರೆ, ಬಂದ ಬಂಟರು ನೋಡುತ್ತಾರೆಂದು ತಿಳಿದು, ನಡೆಮ್ಮ ನಿನ್ನ ಗಂಡನ ದಾರಿ ಹಿಡಕೊಂಡು ಎಂದು-

ತಾಯಿ ಟೊಂಕಕ ಹಗ್ಗಕಟ್ಟಿ ಮಾಳಿಗಿಂದ ಬಿಟ್ಟಳ

ತಾಯಿ ಟೊಂಕಕ ಹಗ್ಗ ಬಿಚ್ಚಿಕೊಂಡು

ನೆಟ್ಟಗ ಎಲ್ಲಿಗೆ ಬಂದಳಲ್ಲ

ಹಣ್ಮದೇವರ ಗುಡಿಗಿ ಬಂದಳಲ್ಲ

ತಾಯಿ ಕಣ್ಣೀರ ಒರೆಸಿಕೊಂಡು

ಗಿರಿಯಾವತಿಯಮ್ಮ
ನೆಲದ ಮ್ಯಾಲ ಬಗ್ಗಿ ನೋಡಿದಳಲ್ಲ
ಮುತ್ತು ಕಣ್ಣಿಗೆ ಬಿದ್ದವಲ್ಲ
ನೋಡಿದ್ಲೆ ನನ್ನ ಗಂಡ ಹೋಗಾಗ
ನಮ್ಮತ್ತಿ ಮುತ್ತು ಕಟ್ಟಿದ್ದಳಲ್ಲ
ಅವೇನ ರಾಜನ ಮುತ್ತು ಇರಬೇಕೆಂದು
ತಾಯಿ ಹುಡಿ ಕಟ್ಟಿಕೊಂಡಳಲ್ಲ
ಮುತ್ತಾತರಿಸಿಕಂತ ಮುತ್ತಾರಿಸಿಕಂತ ಹೊಂಟಳಲ್ಲ

ಅತ್ತೆಯು ತನ್ನ ಸೊಸೆಯುನ್ನು ಉಳಿಸಲು ಉಪಾಯ ಹೂಡುತ್ತಾಳೆ. ಅರಮನೆಯ ಹಿಂದಿನಿಂದ ಕಳಿಸುತ್ತಾಳೆ. ಸೊಸೆ ಗಿರಿಯಾವತಿ ಟೊಂಕಕ್ಕೆ ಕಟ್ಟಿದ ಹಗ್ಗ ಬಿಚ್ಚಿಕೊಂಡು ಆಂಜನೇಯ ದೇವಸ್ಥಾನಕ್ಕೆ ಬರುತ್ತಾಳೆ. ನೇರವಾಗಿ ಆಂಜನೇಯ ಸ್ವಾಮಿ ಮಂದಿರಕ್ಕೆ ಬರುವುದು ಆಂಜನೇಯಸ್ವಾಮಿ ಕಷ್ಟದಿಂದ ಪಾರು ಮಾಡುತ್ತಾನೆಂಬ ಸಂಕೇತ ಇದೆ. ದೇವರಲ್ಲಿ ತನ್ನ ಕಷ್ಟ ತೋಡಿಕೊಂಡ ಗಿರಿಯಾವತಿ ತನ್ನ ಕಣ್ಣೀರನ್ನು ಒರೆಸಿಕೊಂಡು ಕೆಳಗೆ ನೋಡಿದಾಗ ಮುತ್ತು ಕಾಣುತ್ತಾಳೆ. ಇಲ್ಲಿ ಮುತ್ತು ಪರಿಹಾರದ ಸಂಕೇತವಾಗಿದೆ. ಆ ಮುತ್ತುಗಳು ಗಂಡನನ್ನು ಕೂಡಿಸುತ್ತವೆ. ಹುಡಿ (ಸೀರೆಯ ಸೆರಗು) ಎಂಬುದು ಪವಿತ್ರವಾದುದು ಎಂಬ ನಂಬಿಕೆ. 'ಮುತ್ತಾರಿಸಿಕಂತ, ಮುತ್ತಾರಿಸಿಕಂತ ಹೊಂಟಳಲ್ಲ' ಎನ್ನುವುದು ಗಂಡನು ಹೋಗಿದ್ದ ದಾರಿಯನ್ನು ಕಂಡುಕೊಂಡು ಹೊರಟಿದ್ದಾಳೆಂಬ ಆಶಯ ಅಭಿವ್ಯಕ್ತಗೊಂಡಿದೆ.

ಗಿರಿಯಾವತಿ ಮುತ್ತಾರಿಸಿಕೊಳ್ಳುತ್ತ ಗಂಡನ ದಾರಿ ಹಿಡಿದುಕೊಂಡು
ರಾಜನ ಬೆಲ್ಲಗಿ ನೆಟ್ಟಗ ಹೊಂಟು ಬಂದಳಲ್ಲ
ಗಿರಿಯಾವತಿ ರಾಜನ ಕಾಲಿನ ಮ್ಯಾಲೆ ಬಿದ್ದಳಲ್ಲ
ದುಃಖ ಮಾಡ್ಲಕತ್ತ್ಯಾಳಲ್ಲ
ರಾಜ ಲವುತರಾಜ ಏನಂತನ
ಭಾಮ ಗಿರಿಯಾವತಿ
ನನಗ ಬಾವಿ ಆಗಾರ ಕೇಳಿತ್ತು
ನನಗ ಕಷ್ಟ ಬಂದಿತು
ನಾನು ಹೊಂಟು ಬಂದೆನಲ್ಲ
ನೀ ಯಾಕೆ ಬಂದೆ
ಭಾಮ ಗಿರಿಯಾವತಿ

ಏನಯ್ಯ ರಾಜ ಲವುತರಾಜ

ನಿನಗ ಬಂದ ವನವಾಸ ನನಗೂ ಬಂತು

ನಿನಗ ಕೇಳಿದಂತ ರಾಕ್ಷಸಿ

ನನಗೂ ಕೇಳಿತಯ್ಯ

ಎಂದು ಗಿರಿಯಾವತಿ ಹೇಳುತ್ತಾಳೆ. ಗಿರಿಯಾವತಿ ಗಂಡ ಲವುತರಾಜನ ಮಧ್ಯೆ ಸಂವಾದ ಇದೆ. ಗಿರಿಯಾವತಿ ತನ್ನ ಗಂಡನನ್ನು ಕಂಡ ಕೂಡಲೇ ಗಂಡನ ಕಾಲಿನ ಮೇಲೆ ಬೀಳುವುದು ಅವಳ ಪತಿ ಭಕ್ತಿಯನ್ನು ಸೂಚಿಸುತ್ತದೆ. ಹೆಣ್ಣು ಗಂಡನಿಗೆ ಅಧೀನಳು ಎಂಬ ಭಾವ ಸಹ ಇದೆ. ಗಂಡನ ಕಾಲಿನ ಮೇಲೆ ಬಿದ್ದು ದುಃಖ ಮಾಡುವುದು ಕಷ್ಟವನ್ನು ತನ್ನ ಅಳುವಿನ ಮೂಲಕ ವ್ಯಕ್ತಪಡಿಸುತ್ತಾಳೆ. ಗಂಡ ಲವುತರಾಜ ತನ್ನ ಕಷ್ಟದಿಂದ ಅರಮನೆ ಬಿಟ್ಟು ಬಂದಿದ್ದನ್ನು ವ್ಯಕ್ತಪಡಿಸಿ ನೀ ಯಾಕ ಬಂದೆ? ಎಂದು ಪ್ರಶ್ನಿಸುತ್ತಾನೆ. ಇಲ್ಲಿ ಗಿರಿಯಾವತಿ ಒಂದೇ ಮಾತಿನಲ್ಲಿ ನಿನಗ ಬಂದ ವನವಾಸ ನನಗೂ ಬಂತು ಎಂದು ವ್ಯಕ್ತವಾದ ಈ ಸಾಲಿನಲ್ಲಿ ರಾಜನಿಗೆ ಬಂದ ಕಷ್ಟ ಅಡಗಿದ್ದು ತಿಳಿಯುತ್ತದೆ. ಒಂದೇ ವಾಕ್ಯದಲ್ಲಿ ಇಡೀ ನೋವಿನ ಪರಿಯನ್ನು ನಿರೂಪಿಸಿದ ಕತೆಗಾರರ ಪ್ರತಿಭೆಯನ್ನು ಇಲ್ಲಿ ಕಾಣಬಹುದು.

ಗಿರಿಯಾವತಿ ಲವುತರಾಜ ಗಂಡ ಹೆಂಡತಿ ಇಬ್ಬರು ಕೂಡಿಕೊಂಡ ಮೇಲೆ ಪರಮಾತ್ಮನು ಇವರನ್ನು ಪರೀಕ್ಷಿಸಿ ಪರಸ್ಪರ ದೂರ ಮಾಡಿ ನೋಡಬೇಕೆಂದು ಗಿರಿಯಾವತಿಗೆ ನೀರಡಿಕೆ ಹುಟ್ಟಿಸಿದನು. ಆಗ ಹೆಂಡತಿಗೆ ನೀರು ತರಲು ಹೋದ ಲವುತರಾಜನನ್ನು ಬಾವಿಯಲ್ಲಿದ್ದ ರಾಕ್ಷಸ ನುಂಗುತ್ತದೆ. ಗಂಡನನ್ನು ಹುಡುಕುತ್ತ ಗಂಡನ ಹೆಸರನ್ನು ಕೂಗುತ್ತ ಅರಣ್ಯದಲ್ಲಿ ತಿರುಗುತ್ತ ಹೋಗುವಾಗ ಗಿಡದ ಮೇಲೆ ಇದ್ದ ದಾಸರ ಹಾವು.

ತಾಯಿ ಗಿರಿಯಾವತಿಗೆ ನೋಡಿತಲ್ಲ

ನೋಡಿ ಗಿರಿಯಾವತಿಗೆ ನುಂಗುತಿನಿ

ನನ್ನ ಹೊಟ್ಟೆ ಶಾಂತಿ ಆಗ್ತದ

ದಾಸರ ಹಾವು ಮ್ಯಾಲೆ ಮಣ್ಣಾಕಲಿ

ಲವುತರಾಜ ಎಂಬ ಶಬ್ದ

ದಾಸರ ಹಾವು ಕೇಳಿತಲ್ಲ

ಲವುತರಾಜನ ರೂಪದಲ್ಲು

ಲವುತರಾಜನ ದನಿ ಇಟ್ಟು

ಭಾಮ ಗಿರಿಯಾವತಿ ಅಂದಿತಲ್ಲ

ನಿನಗ ನೀರು ತರ್ಲಾಕು ಬಂದಿದ್ದೆ

ಗಿಡ ಎಬ್ಬಿ ನೀರು ನೋಡ ಅಂತಂದು

ಗಿಡ ಎಬ್ಬಿದೆನಲ್ಲ

ನನ್ನ ಕಾಲು ಮುರ್ದವಲ್ಲ

ನನ್ನ ಕೈ ಮುರ್ದವಲ್ಲ

ಗಿಡ ಇಳಿದು ಬರ್‍ಲಾಕ ಬರವಲ್ದು

ಬಾ ಭಾಮ ಗಿಡ ಎಬ್ಬಿ ಇಳಿಸಿಕೊ

ಗಂಡನ ದನಿ ಇಟ್ಟು

ಹಾವು ದುಷ್ಟರ ಸಂಕೇತ, ಕಾಮದ ಸಂಕೇತವಾಗಿಯೂ ಪರಿಗಣಿಸಬಹುದು. ಒಬ್ಬಳೇ ಗಿರಿಯಾವತಿಯನ್ನು ನೋಡಿದ ಹಾವಿಗೆ ಅವಳ ಮೇಲೆ ಮನಸಿರುತ್ತದೆ. ಹಾವು ಗಂಡನ ವೇಷ ಧರಿಸಿ ಗಂಡನ ಧ್ವನಿ ಇಟ್ಟು ಕರೆಯುತ್ತದೆ. ಒಬ್ಬಂಟಿಯಾದ ಹೆಣ್ಣಿನ ಮೇಲೆ ದುಷ್ಟ ಶಕ್ತಿಯೊಂದು ಬಳಸಿಕೊಳ್ಳುವ ರೀತಿಯು ಇಲ್ಲಿ ಅಭಿವ್ಯಕ್ತಗೊಂಡಿದೆ.

ಓಡೋಡಿ ಬಂದ ಗಿರಿಯಾವತಿ ತನ್ನ ಕಷ್ಟವನ್ನು ಚೆಂಚು ಸಮುದಾಯದ ಏಳು ಜನ ಹೆಣ್ಣುಮಕ್ಕಳಲ್ಲಿ ಹೇಳುತ್ತಾಳೆ. ದಾಸರ ಹಾವು ಮ್ಯಾಲೆ ಮಣ್ಣು ಸುರುವಲಿ ನನ್ನ ಗಂಡ ಕರೆದಂಗನೇ ಕರೆದು ನನ್ನ ಗಿಡದ ಮ್ಯಾಲೆ ದಾಸರ ಹಾವು ನುಂಗಿತು, ಕೊರವರ ಎಲ್ಲಪ್ಪ ಬಂದು ಆ ದಾಸರ ಹಾವನ್ನು ಸೀಳಿ ನನ್ನ ಪ್ರಾಣ ಉಳಿಸಿದ ನಿನ್ನ ಮಾಡಿಕಂತಿನಂತ ಹಿಂದೆ ಬಿದ್ದ-

ಆವಾಗ ಓಡೋಗಿ ಬಂದೆನಕ್ಕ

ಬ್ಯಾನಿ ತಾಳಲಾರೆ

ತಾಸು ತಾಸಿನ ಬ್ಯಾನಿ

ಕತ್ತೀಲಿ ಕಡ್ದಂಗ

ಹೊತ್ತು ಹೊತ್ತಿನ ಬ್ಯಾನಿ

ನಾ ತಾಳಲಾರೆ

ಎಂದು ಗಿರಿಯಾವತಿ ತನ್ನ ಅಳಲನ್ನು ವ್ಯಕ್ತಪಡಿಸುತ್ತಾಳೆ. ಓಡೋಡಿ ಬಂದ ಗರ್ಭಿಣಿ ಗಿರಿಯಾವತಿಗೆ ಪ್ರಸವ ವೇದನೆ ಹೆಚ್ಚುತ್ತದೆ. ಗರ್ಭವತಿಯಾದ ಸಂದರ್ಭದಲ್ಲಿ ಒಂದು ಹೆಣ್ಣಿನ ಆ ವೇದನೆ ಹೇಗೆ ಇರುತ್ತದೆಂಬುದು ಇಲ್ಲಿ ಅಭಿವ್ಯಕ್ತಗೊಂಡಿದೆ. ತಾಸು ತಾಸಿನ ಬ್ಯಾನಿ ಎಂದು ಗಂಟೆ ಗಂಟೆಗೆ ಕಡ್ದಂಗ ಎಂದು ಹೇಳುವಲ್ಲಿ ತಾಯಿ ಮಗುವಿನಿಂದ ಕೊಂಡಿ ಕಳಚಿ ಬೀಳುತ್ತದೆಯೋ ಏನೋ ಎಂಬ ಆತಂಕ ವ್ಯಕ್ತವಾಗಿದೆ. ಇನ್ನೊಂದು ಕಡೆ ಆ ವೇದನೆ ತಾಳಲಾರದೆ ಸಾಯುತ್ತೇನೆಂಬ ಭಯ ಇರುತ್ತದೆ. ಇಲ್ಲವೇ

ಮಗುವಿಗೆ ಅಪಾಯವಾಗುತ್ತೋ ಏನೋ ಅಂಜಿಕೆಯು ಮತ್ತೊಂದು ಕಡೆ ಇದೆ. ಹೀಗೆ ಗರ್ಭಿಣಿಯು ತನ್ನ ನೋವಿನ ಪರಿಯನ್ನು ಹೇಳುತ್ತಾಳೆ.

ಅಡವಿಯಲ್ಲಿ ವಾಸ ಮಾಡುವ ಚೆಂಚು ಸಮುದಾಯವು ಬೇಟೆಯಾಡಿ ಜೀವನ ಸಾಗಿಸುವ ಜನರು ಆ ಸಮುದಾಯವು ಗಿರಿಯಾವತಿಯ ಕಷ್ಟವನ್ನು ಕಂಡು ಅವರ ಹಟ್ಟಿಗೆ ಕರೆದೊಯ್ಯುವರು. ಗಿರಿಯಾವತಿಗೆ ಜನಿಸಿದ ಮಗನಿಗೆ ಶಿವಕುಮಾರ ಎಂದು ನಾಮಕರಣ ಮಾಡುತ್ತಾರೆ. ಈ ಸಮುದಾಯವು ತಮ್ಮ ಹಟ್ಟಿಯಲ್ಲಿ ಮಗು ಜನಿಸಿದ್ದರಿಂದ ಐದು ದಿನವರೆಗೆ ಬೇಟೆಗೆ ಹೋಗಿರಲಿಲ್ಲ, ಬೇಟೆಗೆ ಹೋಗುವಾಗ ಏಳು ಮಂದಿ ಚೆಂಚು ಹೆಣ್ಣುಮಕ್ಕಳು ಆ ಮಗುವನ್ನು ಎತ್ತಿಕೊಂಡು ಹೋಗುತ್ತಾರೆ. ಬೇಟೆಯಾಡುವಾಗ-

ಆ ಹುಲಿ ಏಳು ಮಂದಿಗಿ ತಪ್ಪಿಸಿಕೊಂಡು
ಆ ಗುಂಡಿನ ಬೆಲ್ಲಿಗಿ ಬಂದು ಮಕ್ಕೊಂತು
ಮಗ ಶಿವಕುಮಾರ ನೋಡಿದನಲ್ಲ
ನೋಡಿ ತಾಯಿನಾಡ ತಕ್ಕಿನಾಡ ಅಂದನಲ್ಲ
ನಮ್ಮ ದೊಡ್ಡಮ್ಮದೋರು ಕೈಲಿ ತಪ್ಪಿಸಿಕೊಂಡು
ಇಲ್ಲಿ ಬಂದು ಮಕ್ಕೊಂಡದಲ್ಲ
ಬಿಲ್ಲುಬಾಣ ಏರಿಸಿದ್ದು
ಶಿವಕುಮಾರ ಕೈಯಾಗ ಹಿಡಕೊಂಡು
ಆ ಹುಲಿಗಿ ಶೂಟ್ ಮಾಡಿದನಲ್ಲ
ಹುಲಿ ಸತ್ತು ಬಿದ್ದಿತಲ್ಲ

ತಪ್ಪಿಸಿಕೊಂಡು ಬಂದ ಹುಲಿಯನ್ನು ಐದು ದಿನದ ಮಗುವು ಬಿಲ್ಲಿನಿಂದ ಹೊಡೆಯುವುದು. ಹುಟ್ಟಿದ ಕೂಸು ಅದ್ಭುತ ಸಾಹಸ ಮಾಡುವ ಜನಪದ ಆಶಯ ಇಲ್ಲಿ ಇದೆ. ಆ ಮಗುವು ಅಂತಿಂಥ ಮಗುವಲ್ಲ. ಅಸಾಮಾನ್ಯ ಮಗು ಎಂಬುದು ವ್ಯಕ್ತವಾಗಿದೆ. ಬಿಲ್ಲು ವಿದ್ಯೆಯಲ್ಲಿ ನುರಿತ ಚೆಂಚು ಸಮುದಾಯದ ಹೆಣ್ಣುಮಕ್ಕಳ ಕೈಯಿಂದ ಆಗದ ಕೆಲಸ ಆ ಮಗುವು ಮಾಡುತ್ತದೆಂಬುದು ಇದು ಅತಿಮಾನುಷ ಆಶಯವಾಗಿದೆ. ಬಿಲ್ಲು ಬಾಣ ಏರಿಸಿದ್ದು ಶಿವಕುಮಾರ ಕೈಯಾಗ ಹಿಡಕೊಂಡು ಆ ಹುಲಿಗಿ ಶೂಟ್ ಮಾಡಿದ ಎನ್ನುವ ಈ ಸಾಲುಗಳನ್ನು ನೋಡಿದರೆ ಕತೆಗಾರರು ಬಳಸಿದ ಭಾಷೆಯ ಸಂದರ್ಭ, ಭಾವಕ್ಕೆ ಅನುಗುಣವಾಗಿ ವ್ಯಕ್ತಪಡಿಸಿದ್ದನ್ನು ಕಾಣಬಹುದು.

ಸತ್ತು ಬಿದ್ದ ಹುಲಿಯನ್ನು ಕಂಡ ಚೆಂಚು ಸಮುದಾಯದ ಹೆಣ್ಣುಮಕ್ಕಳಲ್ಲಿ ಸಂವಾದ ನಡೆಯುತ್ತದೆ. ಹುಲಿಯನ್ನು ಹೊಡೆದ ಬಿಲ್ಲು ನನ್ನದಲ್ಲ, ನಿನ್ನದಲ್ಲ ಎನ್ನುವಾಗ ಸಣ್ಣಾಕಿ ಬುಡ್ಡಿಎಲ್ಲಮ್ಮ ಅಕ್ಕ ನಾನೇ ಬಿಲ್ಲು ಬಾಣ ಏರಿಸಿ ಮಗನ ಬೆಲ್ಲಿ(ಹತ್ತಿರ) ಇಟ್ಟು ಬಂದಿದೆ ಎಂದಾಗ, ಆಗ ಏಳು ಮಂದಿ ಅಕ್ಕತಂಗಿಯರು

ಓಯಮ್ಮ ಮಗ ಎಷ್ಟು ಚದಾಮ ಆನ

ಮಗ ಎಷ್ಟು ಲಫಂಗ ಆನ

ಯಾ ಹಾದ್ಯಾವಗ ಹುಟ್ಯಾನೇನೋ

ಯಾ ಬೀದ್ಯಾವಗ ಹುಟ್ಯಾನೇನೋ

ನಮ್ಮ ಕೈಲಿ ಆಗಲಿಲ್ಲ

ಈ ಮಗ ಹುಲಿ ಹೊಡ್ದನಂತ

ಎಂದು ಅಕ್ಕ ತಂಗಿಯರು ಮಾತನಾಡಿಕೊಳ್ಳುತ್ತಾರೆ. ಇಲ್ಲಿ ಒಬ್ಬನ ಚತುರ ಧೈರ್ಯ, ಸಾಹಸ ಮಾಡಿದ ಹುಡುಗನ ಬಗ್ಗೆ ಮಾತನಾಡಿಕೊಳ್ಳುವ ಸ್ತ್ರೀಯರ ಅಭಿವ್ಯಕ್ತಿಯಿದೆ. ಐದು ದಿನದ ಕೂಸು ಮಾಡಿದ ಸಾಹಸ, ಆ ಹುಡುಗನನ್ನು ಬಯ್ಯುವ ಪದಗಳು ಸಾಮಾನ್ಯ ಜನರು ಬಳಸುವ ಪದಗಳಾಗಿವೆ, ಚದಾಮ ಲಫಂಗ ಉರ್ದು ಪದಗಳು ಹುಡುಗ ಜೊತೆಗಿನ ಆತ್ಮೀಯತೆಯನ್ನು ತಿಳಿಸುತ್ತವೆ. ಮೋಸ, ಕಪಟ, ದುರಾಚಾರಿ, ದುಷ್ಟ ಎಂದು ಸಂಬೋಧಿಸುತ್ತಾರೆ. ಯಾ ಹಾದ್ಯಾವಗ, ಯಾ ಬೀದ್ಯಾವಗ ಹುಟ್ಯಾನೇನೋ ಎಂಬ ಅನುಮಾನ ವ್ಯಕ್ತಪಡಿಸುತ್ತಾರೆ. ಸರಳ ವ್ಯಕ್ತಿತ್ವಗಿಂತ ದುಷ್ಟ ವ್ಯಕ್ತಿತ್ವವುಳ್ಳವನಿಗೆ ಧೈರ್ಯ ಹೆಚ್ಚು ಇರುತ್ತದೆಂಬ ಭಾವವು ಇಲ್ಲಿ ವ್ಯಕ್ತವಾಗಿದೆ.

ಮಗು ಶಿವಕುಮಾರ ಒಂದೇ ಸಮನೆ ಅಳುವುದನ್ನು ಕಂಡು ತಾಯಿ ಗಿರಿಯಾವತಿಯು ಚೆಂಚು ಸಮುದಾಯದ ತಾಯಂದಿರಿಗೆ ಕೇಳಿದಾಗ ಆಗ ಅವರು

ನಾವು ಏನು ಅಂದಿಲ್ಲಮ್ಮ ತಂಗಿ

ಮಗ ಏನು ಚದಾಮ ಆನ

ಮಗ ಏನು ಲಫಂಗ ಆನ

ಯಾ ಹಾದ್ಯಾಗ ಹೋಗೋನಿಗಿ

ಯಾ ಬೀದ್ಯಾಗ ಹೋಗೋನಿಗಿ

ಈ ಮಗ ಹುಟ್ಯಾನಂದಿವಿ

ಇಷ್ಟೇ ಅಂದಿವಮ್ಮನಾವು

ಮಗನೇ ಶಿವಕುಮಾರ

ಯಾ ಹಾದ್ಯಾಗ ಹೋಗೋವನಿಗಿ ಹುಟ್ಟಿಲ್ಲ

ಯಾ ಬೀದ್ಯಾಗ ಹೋಗೋವನಿಗಿ ಹುಟ್ಟಿಲ್ಲ

ನಿಮ್ಮ ತಂದಿ ಲವುತರಾಜಗ

ನೀನು ಹುಟ್ಟಿದಿ ಮಗನೆ

ಎಂದು ಮಗ ಶಿವಕುಮಾರನಿಗೆ ತಾಯಿ ಹೇಳುತ್ತಾಳೆ. ಚೆಂಚು ತಾಯಂದಿರು ಶಿವಕುಮಾರನ ಚತುರತೆಯನ್ನು ಕಂಡು, ತಂದೆಗೆ ಹುಟ್ಟಿದವನಲ್ಲ ಎಂದು ವ್ಯಂಗ್ಯ ಧ್ವನಿಯಲ್ಲಿ ಹಾದ್ಯಾಗ, ಬೀದ್ಯಾಗ, ಹೋಗವನಿಗಿ ಹುಟ್ಟಿದ್ದಾನೆಂದು ಹೇಳುತ್ತಾರೆ. ಅಸಾಮಾನ್ಯವಾದ ಆ ಹುಡುಗ ಇವರ ಮಾತುಗಳಿಂದ ನೊಂದು ಅಳುತ್ತಾನೆ. ಆದರೆ ಇನ್ನೂ ಮಾತು ಬರಲಾರದ ಐದು ದಿವಸದ ಕೂಸು, ಇದರಿಂದ ಗಾಬರಿಗೊಂಡ ಗಿರಿಯಾವತಿ ಚೆಂಚು ಹೆಣ್ಣುಮಕ್ಕಳನ್ನು ಕೇಳಿದಾಗ, ಅವರ ಮಾತುಗಳನ್ನು ಕೇಳಿಕೊಂಡ ತಾಯಿ 'ಯಾ ಹಾದ್ಯಾವನಿಗಿ, ಬೀದ್ಯಾವನಿಗಿ ಹುಟ್ಟಿಲ್ಲ, ನಿಮ್ಮ ತಂದೆ ಲವುತರಾಜನಿಗಿ ಹುಟ್ಟಿದ್ದಿ' ಎಂದು ಹೇಳುತ್ತಾನೆ. ಇಲ್ಲೂ ಹೆಣ್ಣುಮಕ್ಕಳು ಮಾತನಾಡಿದಾಗ ಅವರು ಹೇಳುವ ಪದಗಳು ಎಷ್ಟರ ಮಟ್ಟಿಗೆ ಪರಿಣಾಮ ಬೀರುತ್ತವೆ ಎಂಬುದು ತಿಳಿಯುತ್ತದೆ. ಅಸಂಬದ್ಧವಾದ ಪದಗಳು ಮಕ್ಕಳಿರಲಿ ದೊಡ್ಡವರಿರಲಿ ಅವರಲ್ಲಿ ರೋಷ, ಆವೇಶಕ್ಕೆ ಒಳಗಾಗುತ್ತಾರೆಂಬ ಭಾವವು ವ್ಯಕ್ತವಾಗಿದೆ.

ಚೆಂಚು ಸಮುದಾಯದ ಹಟ್ಟಿಯಲ್ಲಿ ಗಿರಿಯಾವತಿಯು ಹಾಸಲು ಹಾಸಿಗೆ ಇಲ್ಲ ಉಡಲು ಬಟ್ಟೆಯಿಲ್ಲ, ಈ ಮಗನನ್ನು ಹೇಗೆ ಬೆಳೆಸಬೇಕೆಂದು ದುಃಖ ಮಾಡುವುದನ್ನು ಕಂಡು-

ಆವಾಗ ಪಾರ್ವತಿ ದೇವಿಗೆ
ಮಾಲಿಂ ಆಯ್ತಲ್ಲ
ಮುಪ್ಪಾದ ಮುದುಕಿ ಆದಳು
ತಾಯಿ ಚೆಂಚರ ಬಂಡಿಗಿ ಬಂದಳಲ್ಲ
ಪಾರ್ವತಿ ದೇವಿ
ಕ್ರೋದಾಂಡ ಭಿಕ್ಷೆ ಅಂತ ಬೇಡಿದಳಲ್ಲ
ಏನಮ್ಮ ತಾಯಿ
ಈ ಚೆಂಚರ ಬಂಡಿ ಮ್ಯಾಲ
ಏನಂತ ದಾನ ಕೊಡಲಿ
ನನ್ನ ಬೆಲ್ಲಿ ಏನಿಲ್ಲ
ಈ ಮಗ ಒಂದೇ ಸವನೆ ಅಡ್ಡಿ ಮಾಡ್ಲಕತ್ತ್ಯದ
ಈ ಮಗನ ದಾನ ಕೊಡ್ತೀನಿ ತಗಂಡು ಹೋಗಮ್ಮ

ಎಂದು ಗಿರಿಯಾವತಿ ಹೇಳುತ್ತಾಳೆ, ಗಿರಿಯಾವತಿಯ ಕಷ್ಟವನ್ನು ಕಂಡು ಪಾರ್ವತಿದೇವಿಗೆ ಗೊತ್ತಾಗುತ್ತದೆ. ಗಿರಿಯಾವತಿಯ ಕಷ್ಟವನ್ನು ಅರಿತ ಪಾರ್ವತಿದೇವಿ ಮುಪ್ಪಾದ ಮುದುಕಿಯ ವೇಷಧರಿಸಿ ಪರೀಕ್ಷಿಸಲು ಬಂದಿದ್ದಾಳೆ. ಆದರೆ ಗಿರಿಯಾವತಿಗೆ ದಾನ ಧರ್ಮದ ಬಗ್ಗೆ ಪ್ರಜ್ಞೆ ಇದೆ. ಧರ್ಮ ನೀಡಲು ಏನಿಲ್ಲ

ಹೀಗಾಗಿ ಮಗನನ್ನೇ ಕೊಡಲು ಮುಂದಾಗುತ್ತಾಳೆ. ಮುಖ್ಯವಾಗಿ ಹೆಣ್ಣಿನ ಧರ್ಮ ಅವಳ ನಂಬಿಕೆ ಹಾಗೂ ಭಕ್ತಿ ಇಲ್ಲಿ ವ್ಯಕ್ತವಾಗಿದೆ.

ದುಷ್ಟಶಕ್ತಿಯು ಹೆಣ್ಣನ್ನು ಪಡೆಯುವ ಬಯಕೆಯಿಂದ ಮಗನು ತನ್ನ ಆಶೆಗೆ ಅಡ್ಡ ಬರುತ್ತಾನೆಂದು ಭಯದಿಂದ ತಾಯಿಯಿಂದಲೇ ಮಗನನ್ನು ಕೊಲ್ಲಿಸುವ ಕುತಂತ್ರವನ್ನು ಲವುತರಾಜ ರೂಪದ ರಾಕ್ಷಸ ಗಿರಿಯಾವತಿಗೆ ಹೇಳುತ್ತದೆ.

ಭಾಮ ನಾ ಒಂದು ಮಾತು ನಿನಗ ಹೇಳ್ತೀನಿ
ಏನಯ್ಯ ರಾಜ
ನಿನ್ನ ಮಗ ಬರೋಟಿಗೆಲ್ಲ
ನನಗ ತಲಿಬ್ಯಾನಿ ಎದ್ದದ
ಅಂಗಾಲದೊಳಗೆ ಆರು ತಿಂಗಳ
ಬಾಣಂತಿ ದಣಿವು ಸೇರಿಕೊಂಡದ
ನಿನ್ನ ಮಗನಿಗೆ ಶಿವಕುಮಾರಗ
ಹುಲಿ ಹಾಲನ್ನು ತಗಂಡು ಬರಲು ಹೇಳು
ನಿನ್ನ ಮಗ ಹುಲಿ ಹೊಡೆಯುವದಿಲ್ಲ
ಹುಲಿಯ ಬಾಯಾಗ ಆಗ್ತನ
ಆವಾಗ ಗಂಡ ಹೆಂಡತಿ
ಬಾವಿಮ್ಯಾಲ ಸಂಸಾರ ಮಾಡ್ತೀವಿ

ಎಂಬ ಆಶೆಯನ್ನು ಗಿರಿಯಾವತಿಯಲ್ಲಿ ರಾಕ್ಷಸ ಹುಟ್ಟಿಸುತ್ತದೆ. ಇಲ್ಲಿ ಮಾಯಾಶಕ್ತಿಯಾದ ಬ್ರಹ್ಮರಾಕ್ಷಸ ಗಿರಿಯಾವತಿಯ ಗಂಡ ಲವುತರಾಜನ ವೇಷ ಧರಿಸಿ ತನ್ನ ಬಯಕೆ ಈಡೇರಿಸಿಕೊಳ್ಳಲು ಹವಣಿಸುತ್ತದೆ. ರಾಕ್ಷಸ ಮಾತುಗಳಲ್ಲಿ ಮೋಸ ಅಡಗಿರುತ್ತದೆ. ನನಗೆ 'ತಲಿಬ್ಯಾನಿ ಎದ್ದದ ಅಂಗಾಲದೊಳಗ ಆರು ತಿಂಗಳ, ಬಾಣಂತಿ ದಣಿವು ಸೇರಿಕೊಂಡದ' ಎಂದು ಮಗನಿಗೆ ಹೇಳಲು ಸೂಚಿಸುವ ಮಾತಿನಲ್ಲಿ ಕುತಂತ್ರ ಇರುತ್ತದೆ. ತಲೆ ಬೇನೆ ಒಂದೇ ಅಲ್ಲ ಬಾಣಂತಿ ದಣಿವು ಇದೆ. ಹೆಣ್ಣಿಗೆ ಬರುವ ಬಾಣಂತಿ ರೋಗದ ವಾಸ್ತವತೆ ಅಭಿವ್ಯಕ್ತವಾಗಿದೆ. ಬಾಣಂತಿ ರೋಗವು ಹೆಣ್ಣಿಗೆ ಭಯಂಕರವಾಗಿ, ಮಾರಕವಾಗಿ ಕಾಡುತ್ತದೆ. ಆ ರೋಗವು ಮೊದಲು ದೇಹದಲ್ಲಿ ಪ್ರವೇಶಿಸಿ ಕೊನಗೆ ಅಂಗಾಲುಗಳಲ್ಲಿ ಬಂದು ಸೇರಿಕೊಳ್ಳುತ್ತದೆಂಬ ನಂಬಿಕೆ ಇದೆ. ಆ ರೋಗದಿಂದ ನಡೆಯಲು ಬಾರದೆ ನಿಂತುಕೊಳ್ಳದೆ ನಿಶ್ಯಕ್ತವಾಗಿ ಮಾಡುತ್ತದೆಂಬ ಆಶಯವು ಇದೆ. ಬಾಣಂತಿ ಸಂದರ್ಭದಲ್ಲಿ ಸರಿಯಾಗಿ ಹಾರೈಕೆಯಾಗದಿದ್ದಾಗ ಇಂತಹ ದಣಿವು ಸೇರುತ್ತದೆಂಬ ನಂಬಿಕೆ ಸಹ ಇದೆ. ಇಂತಹ ಭಯಾನಕ ರೋಗಕ್ಕೆ ಹುಲಿ ಹಾಲು ಮದ್ದು ಅದನ್ನು ಶಿವಕುಮಾರನಿಂದ

ತರಿಸಲು ರಾಕ್ಷಸ ತಂತ್ರವನ್ನು ಬಳಸುತ್ತದೆ. ಇಲ್ಲಿ ಹುಲಿ ಎಂಬುದು ಮೃತ್ಯುವಿನ ಸಂಕೇತ. ಹುಲಿಯಿಂದ ಹಾಲನ್ನು ತರಲು ಸಾಧ್ಯವೇ ಇಲ್ಲ. ಆ ಹುಲಿಯ ಬಾಯಿಗೆ ಶಿವಕುಮಾರ ತುತ್ತಾಗುತ್ತನೆಂಬುದು ರಾಕ್ಷಸ ಅನಿಸಿಕೆ. ಹೀಗಾಗಿ ಇಂತಹ ಉಪಾಯವನ್ನು ಗಿರಿಯಾವತಿಗೆ ಹೇಳುತ್ತದೆ. ರಾಕ್ಷಸದ ಮುಖ್ಯ ಆಶಯ ಶಿವಕುಮಾರನನ್ನು ಸಾಯಿಸುವುದಾಗಿದೆ ಹಾಗೂ ಗಿರಿಯಾವತಿಯ ಜೊತೆ ಸಂಸಾರ ಮಾಡಬೇಕೆಂಬ ಬಯಕೆ ಇರುತ್ತದೆ. ಆದರೆ ಶಿವಕುಮಾರನಲ್ಲಿ ಅಸಾಮಾನ್ಯವಾದ ಶಕ್ತಿ ಸಾಮರ್ಥ್ಯವುಳ್ಳವನಾಗಿದ್ದನ್ನು ಕಂಡು, ತಾಯಿಯಿಂದಲೇ ಮಗನನ್ನು ಕೊಲ್ಲಿಸುವ ಕುತಂತ್ರವು ರಾಕ್ಷಸದಲ್ಲಿ ಕಂಡುಬರುತ್ತದೆ. ಮುಖ್ಯವಾಗಿ ದುಷ್ಟಶಕ್ತಿ, ದುಷ್ಟರಲ್ಲಿ ಮೋಸ, ಕಪಟ, ವಂಚನೆ ಹೀಗೆ ಅಡಗಿರುತ್ತದೆ. ಅದನ್ನು ಹೀಗೆ ಸಮಯೋಚಿತವಾಗಿ ಬಳಸಿಕೊಳ್ಳುತ್ತಾರೆಂಬುದು ವ್ಯಕ್ತವಾಗಿದೆ.

ಶಿವಕುಮಾರ ಮನೆಗೆ ಬರುವ ಸಮಯವನ್ನು ನೋಡಿ, ಬ್ರಹ್ಮರಾಕ್ಷಸ ಹೇಳಿಕೆಯಂತೆ ನನಗೆ ದಣಿವು ಬಂದಿದೆ, ಇನ್ನೂ ದಣಿವು ವಾಸಿಯಾಗಿಲ್ಲ ಎಂದು ನಟನೆ ಮಾಡುವ ಗಿರಿಯಾವತಿ ಮಗನನ್ನು ಕುರಿತು

ನಾನು ಸಾಯ್ತೀನಿ ಮಗನೆ ಶಿವಕುಮಾರ
ನನಗೆ ದಣಿವು ಹೋಗುವಲ್ಲುದು
ಏನು ಮಾಡಬೇಕಮ್ಮ ತಾಯಿ
ಮಗನೆ ಕುದಿಲಾರದ ಸುಣ್ಣ ತರಬೇಕು
ಮಾತನಾಡುವ ಎಲೆ ತರಬೇಕು
ಅವೆರಡು ತಂದು ಕೊಟ್ಟರೆ
ನಾನು ತಿಂದರೆ
ನನ್ನ ಹೊಟ್ಟೆ ನೋವು ತಣ್ಣಗ ಆಗ್ತದ
ಬಾಣಂತಿ ದಣಿವು ಹೋಗ್ತದ
ಏನಮ್ಮ ತಾಯಿ ಗಿರಿಯಾವತಿ
ನಿನಗೆ ಹೆಚ್ಚನದು ಬಂದಿಲ್ಲ

ಎಂದು ಹೇಳುವ ಶಿವಕುಮಾರ ಹಾಗೂ ತಾಯಿಯ ಮಧ್ಯ ಸಂಭಾಷಣೆ ನಡೆಯುತ್ತದೆ. 'ನಾನು ಸಾಯ್ತೀನಿ ಮಗನೆ ಶಿವಕುಮಾರ ನನಗೆ ದಣಿವು ಹೋಗವಲ್ಲುದು' ಎಂದು ಹೇಳುವ ತಾಯಿಯ ಮಾತಿನ ಮೋಸ ಅರಿಯದ ಶಿವಕುಮಾರನು ತನ್ನ ತಾಯಿ ರೋಗದ ನೋವು ತಾಳಲಾರದೆ ಸಾಯ್ತೀನಿ ಎನ್ನುತ್ತಾಳೆಂದು ಆತಂಕಕ್ಕೆ ಒಳಗಾಗಿ, ಅದಕ್ಕೆ ಏನು ಮಾಡಬೇಕೆಂದು ಪ್ರಶ್ನಿಸುತ್ತಾನೆ. ತಾಯಿಯ ಮಾತಿನಲ್ಲಿ ಮೋಸ ಅಡಗಿದರೆ, ಮಗನ ಮಾತಿನಲ್ಲಿ ಆತಂಕದ ಛಾಯೆ ಇದೆ. ಕುದಿಯಲಾರದ ಸುಣ್ಣ ಎಂದರೆ ಹುಲಿಯ ಮೆದುಳು, ಮಾತನಾಡುವ ಎಲೆ ಎಂದರೆ ಸಮುದ್ರದಾಚೆ ಸಿಗುವ ವೀಳ್ಯದೆಲೆ ತನ್ನ ದಣಿವಿಗೆ ಬೇಕೆಂದು

ಹೇಳುತ್ತಾಳೆ. ಕುದಿಯಲಾರದ ಸುಣ್ಣ ಮಾತನಾಡುವ ಎಲೆ ಎರಡನ್ನು ತಿಂದರೆ ತಲೆನೋವು ಬಾಣಂತಿ ದಣಿವು ಹೋಗುತ್ತದೆಂಬ ತನ್ನ ಆಶೆಯನ್ನು ಮಗನಲ್ಲಿ ತೋಡಿಕೊಳ್ಳುತ್ತಾಳೆ. ತಾಯಿಯು ಮಗನನ್ನು ಸಾಯಿಸುವ ಉದ್ದೇಶದಿಂದ ಈ ಮಾತನ್ನು ಹೇಳಿದರೆ ಮಗನು ನಿನಗ ಹೆಚ್ಚಿನದು ಬಂದಿಲ್ಲ ಎಂದು ಹೇಳುವಲ್ಲಿ ತಾಯಿಯಲ್ಲಿ ಪ್ರೀತಿಯನ್ನು ಪ್ರಕಟಿಸುತ್ತಾನೆ. ತಾಯಿಗಿಂತ ದೊಡ್ಡದು ಈ ಪ್ರಪಂಚದಲ್ಲಿ ಮತ್ತ್ಯಾವುದಿಲ್ಲ ಎಂಬ ಅಂಶವು ಮಗನ ಮಾತಿನಲ್ಲಿದೆ. ತಾಯಿಯ ಆಶೆಯನ್ನು ತೀರಿಸುವುದೇ ಮಗನ ಕರ್ತವ್ಯವೆಂದು ಬಗೆಯುತ್ತಾನೆ. ಆದರೆ ಇಲ್ಲಿ ತಾಯಿಯಲ್ಲಿ ಮೋಸ, ವಂಚನೆ, ಕಪಟ ಸುಳ್ಳು ಅಡಗಿದ್ದರೆ ಮಗನಲ್ಲಿ ತಾಯಿಯ ಪ್ರೀತಿ ವಾತ್ಸಲ್ಯ, ಮಮತೆ ಇದೆ. ಕೊನೆಗೆ ಮೋಸ ಸೋತು ಹೋಗಿ ಪ್ರೀತಿ ಗೆಲ್ಲುತ್ತದೆ.

ಶಿವಕುಮಾರನು ತಾಯಿಯ ದಣಿವಿಗೆ ಮದ್ದು ತರಲು ನೇರವಾಗಿ ಚೆಂಚು ದೊಡ್ಡ ತಾಯಂದಿರ ಮನೆಗೆ ಬಂದು ಏನಮ್ಮ ದೊಡ್ಡಮ್ಮದವರೆ ಕುದಿಯಲಾರದ ಸುಣ್ಣ ಮಾತನಾಡುವ ಎಲೆ ನಮ್ಮವ್ವಗ ತಂದು ಕೊಟ್ಟರೆ ದಣಿವು ವಾಸಿ ಆಗುತ್ತದೆಂದು ಹೇಳುತ್ತಾನೆ. ಮಗನೇ ಶಿವಕುಮಾರ 'ನಿಮ್ಮವ್ವನ ಮ್ಯಾಲೆ ಮಣ್ಣಾಕಲಿ ನಿನ್ನನ್ನು ಸಾಯಿಸ್ಲಕ' ಈ ಮಾತನ್ನು ಹೇಳಿದ್ದಾಳೆ ನಿನ್ನ ಕೈಯಲ್ಲಿ ಆಗಲಾರದನ್ನು ಹೇಳಿದ್ದಾಳೆ ಅದಕ್ಕೆ ನಾವೊಂದು ಉಪಾಯವನ್ನು ಹೇಳ್ತೀವಿ ಎಂದು ಈ ರೀತಿ ಹೇಳುತ್ತಾರೆ.

ಮಗನೇ ನಾವೊಂದು ಹಂಚಿಕೆ ಹೇಳ್ತೀವಿ
ಒಂದು ಗಡಿಗೆ ತಗಪ್ಪ ಮಗನೆ ಶಿವಕುಮಾರ
ನಾವು ಅಕ್ಕಿ ಬ್ಯಾಳಿ ಕಟ್ತೀವಿ
ಆ ಗಡಿಗ್ಯಾಗ ಅಕ್ಕಿ ಬ್ಯಾಳಿ ಹಾಕಪ್ಪ
ಗಡಿಗಿಗಿ ಮೂರು ತೂತು ಹೊಡಿ
ಎರಡು ಒಲಿ ಗುಂಡು ಹಚ್ಚು
ಅಲ್ಲಿ ಶಂಭುಲಿಂಗ ಗುಡಿ ಆದ
ಶಂಭುಲಿಂಗತಾತ ಒಳಗ ಇರ್‍ತನ
ಒಲಿ ಮಟುವು ಮಾಡು ಮಗನೆ
ಮೊಣಕಾಲಿಗೆ ಸೆಕೆ ಹತ್ತ ಪಟಿಗೆಲ್ಲ
ಮೊಣಕಾಲು ಹಿಂದಕ್ಕೆ ತಗೊ
ಗಡಿಗಿ ಬೋರ್‍ಲ ಬೀಳ್ತದ
ಮತ್ತೆ ಅಕ್ಕಿಬ್ಯಾಳಿ ಗಡಿಗ್ಯಾಗ ಹಾಕು
ಮತ್ತೆ ಒಲಿಯ ಮ್ಯಾಲೆ ಇಡು ಮಗನೆ

ಇದರಂತೆಯೇ ಮೂರು ಸಲ ಮಾಡು ಮಗನೆ
ಆ ಶಂಭುಲಿಂಗತಾತ ಹೊರಗೆ ಬಂದು ನೋಡ್ತಾನ
ಆವಾಗ ಕುದಿಲಾರದ ಸುಣ್ಣ
ಮಾತಾಡ ಎಲಿ ದಾರಿ ತೋರಿಸ್ತಾನ

ಎಂದು ಚೆಂಚು ದೊಡ್ನ ತಾಯಂದಿರು ಮಗನಿಗೆ ಹೇಳುತ್ತಾರೆ. ಒಂದು ಕಡೆ ತಾಯಿಯೇ ಮಗನನ್ನು ಸಾಯಿಸಲು ಹೊರಟಿರುವ ಕ್ರೂರ ತಾಯಿಯ ವರ್ತನೆ ಇದ್ದರೆ, ಅದೇ ಸಾಕುತಾಯಂದಿರು ಮಗನನ್ನು ರಕ್ಷಿಸಲು ಹೊರಡುವ ವಾತ್ಸಲ್ಯ ಇದೆ. ಇಲ್ಲಿ ಹೆಣ್ಣಿನ ಎರಡು ಮುಖಗಳು ಚಿತ್ರಿತವಾಗಿವೆ. ಚೆಂಚು ದೊಡ್ನ ತಾಯಂದಿರು ಮಗುವನ್ನು ರಕ್ಷಿಸಲು ಹೊರಟಿರುವರು ಕತೆಯ ಆಶಯಕ್ಕೆ ಮಾನವೀಯ ಸ್ಪರ್ಶವನ್ನು ಹಾಡುಗಾರರು ನೀಡಿದ್ದಾರೆ. ಕ್ರೂರ ತಾಯಿಯ ಕುತಂತ್ರಕ್ಕೆ ಚೆಂಚು ತಾಯಂದಿರು ತಂತ್ರಕ್ಕೆ ಪ್ರತಿ ತಂತ್ರವನ್ನು ಹೇಳಿಕೊಡುತ್ತಾರೆ. ತಮ್ಮ ತಂತ್ರದಿಂದ ಗುರುವನ್ನು ಕಾಣಲು ಉಪದೇಶ ಮಾಡುತ್ತಾರೆ. ಶಂಭುಲಿಂಗ ಗುಡಿಯೊಳಗೆ ಶಂಭುಲಿಂಗತಾತ ಇರ್ತಾನ ಎಂದು ಹೇಳುವಲ್ಲಿ ದೈವ ಹಾಗೂ ಗುರುವೇ ನಿನಗೆ ದಾರಿ ತೋರಿಸುತ್ತಾನೆಂಬ ಆಶಯ ವ್ಯಕ್ತವಾಗಿದೆ. ಇಲ್ಲಿ ಗಡಿಗೆಯಲ್ಲಿ ಅಕ್ಕಿ ಬ್ಯಾಳಿ ಹಾಕಿ ಒಲೆಯ ಮೇಲೆ ಇಡುವುದು ನೆಪ ಮಾತ್ರ, ಆದರೆ ಶಂಭುಲಿಂಗತಾತನಿಂದ ಪ್ರತಿಫಲವನ್ನು ಪಡೆದುಕೊಳ್ಳುವ ವಿಚಾರವಿದೆ. ಕುದಿಯಲಾರದ ಸುಣ್ಣ ಮಾತನಾಡುವ ಎಲೆ ಇಂತಹ ಒಗಟಿನ ಪದಗಳನ್ನು ಬಳಸುವ ಮೂಲಕ ಕತೆಗಾರರು ಜನಪದ ಪ್ರತಿಮೆಗಳನ್ನು ತಂದಿರುವುದು ಗಮನಾರ್ಹ.

ಶಿವಕುಮಾರ ಶಂಭುಲಿಂಗತಾತ ಹೇಳಿದಂತೆ ಬಾವಿಯಲ್ಲಿ ಸ್ನಾನ ಮಾಡುವ ದೇವಕನ್ನೆಯರಲ್ಲಿ ಎಲ್ಲರಿಗಿಂತ ಚಿಕ್ಕವಳಾದ ದೇವಕನ್ನೆಯ-

ಸೀರಿ ಕುಪಸ ಕಳ್ಳತನ ಮಾಡಿ ಓಡಿ ಬರುತ್ತಿದ್ದ
ಅಕ್ಕತಂಗಿಯರು ನೋಡಿದರಲ್ಲ
ಏನಮ್ಮ ನಿನ್ನ ಸೀರಿಕುಪಸ ಕಳ್ಳ ಒಯ್ಯುಕತ್ತ್ಯಾನ
ಆಗ ಆಕಾರ ಹೊಡ್ಡೆರಲ್ಲ
ಮಗ ಶಿವಕುಮಾರ
ಸೀರಿ ಕುಪಸ ಬಗಲಾಗ ಇಡಕೊಂಡು
ಓಡಿ ಬರುತ್ತಿದ್ದ
ಏ ಎಡಕ್ಕೆ ಹಾವು ಬಂತು
ಬಲಕ್ಕೆ ಚೇಳು ಬಂತು ಎಂದರಲ್ಲ
ಮತ್ತೆ ಆಕಾರ ಹೊಡ್ಡೆರಲ್ಲ

ಮಗ ಹಿಂದಕ ತಿರುಗಿ ನೋಡಿದನಲ್ಲ

ಐದು ಅಳ್ಳು ಫಳ ಫಳ ಒಗೆದರು

ನಿಲುಗಲ್ಲು ಆದನಲ್ಲ ಶಿವಕುಮಾರ

ಕೆರೆಯಲ್ಲಿ, ಬಾವಿಯಲ್ಲಿ ದೇವಕನ್ನೆಯರು ಇರುತ್ತಾರೆಂಬ ನಂಬಿಕೆ ಜನಪದರಲ್ಲಿ ಕಾಣುತ್ತೇವೆ. ಶಂಭುಲಿಂಗತಾತನು ಶಿವಕುಮಾರನ ಬಯಕೆ ಈಡೇರಲು ದೇವಕನ್ನೆಯ ಸೀರೆ ಕುಪ್ಪಸ ಕಳ್ಳತನ ಮಾಡಿಕೊಂಡು ಬರಲು ಕಳಿಸುತ್ತಾನೆ. ಶಿವಕುಮಾರ ಏನು ಅರಿಯದ ಮುಗ್ಧ ಅದೂ ಸೀರೆ ಕುಪ್ಪಸ ಎತ್ತಿಕೊಂಡು ಓಡಿ ಬರುತ್ತಾನೆ. ಏಳು ಜನ ಅಕ್ಕ ತಂಗಿಯರು ನೋಡಿ ಕೂಗುತ್ತಾರೆ. ಕೊನೆಗೆ ಅವರದೇ ಆದ ತಂತ್ರ ಬಳಸುತ್ತಾರೆ. 'ಎಡಕ್ಕೆ ಹಾವು ಬಂತು ಬಲಕ್ಕೆ ಚೇಳು ಬಂತು' ಎಂದು ಹೇಳುವಲ್ಲಿ ಮುಂದೆ ಓಡಬೇಡ ಎನ್ನುವ ಸೂಚನೆ ನೀಡುತ್ತಾರೆ. ಯಾವುದೇ ಒಂದು ಒಳ್ಳೆಯ ಕೆಲಸ ಮುಗಿಸಿಕೊಂಡು ಹಿಂದಕ್ಕೆ ತಿರುಗಿ ನೋಡದಂತೆ ಬರಬೇಕೆಂಬ ನಂಬಿಕೆ. ಹಿಂದೆ ತಿರುಗಿ ನೋಡಿದರೆ ಸಾಯುತ್ತಾರೆ ಅಥವಾ ಕಲ್ಲು ಬಂಡೆಯಾಗುತ್ತಾರೆಂಬ ನಂಬಿಕೆಯು ಇದೆ. ಜನಪದ ನಂಬಿಕೆಯ ಚೌಕಟ್ಟಿನಲ್ಲಿ ಈ ಸನ್ನಿವೇಶವನ್ನು ನಿರೂಪಿಸಿದ್ದಾರೆ. ಜನಪದ ಆಶಯದಂತೆ ಶಿವಕುಮಾರ ನಿಲುಕಲ್ಲಾಗುತ್ತಾನೆ.

ಶಿವಕುಮಾರ ಶಂಭುಲಿಂಗತಾತ ಹೇಳಿದಂತೆ ಮತ್ತೆ ದೇವಕನ್ನೆಯರು ಸ್ನಾನ ಮಾಡುವಾಗ ಈಗ ಹಿರಿಯ ದೇವಕನ್ನೆಯ ಸೀರೆ ಕುಪ್ಪಸ ಎತ್ತಿಕೊಂಡು ಹಿಂದಕ್ಕೆ ತಿರುಗಿ ನೋಡದೆ ಓಡಿ ಬರುತ್ತಾನೆ. ಶಂಭುಲಿಂಗ ಮುತ್ತ್ಯಾ ಐದು ಹರಳು ಮಂತ್ರಿಸಿ ಶಿವಕುಮಾರನನ್ನು ಹಲ್ಲಿಯಾಗಿ ಮಾಡಿದಾಗ ಗೋಡೆಗೆ ಕುಳಿತುಕೊಂಡನು. ಆಗ-

ಏಳು ಮಂದಿ ದೇವಕನ್ನಿಕೆಯರು

ಮುತ್ತ್ಯಾನ ಬೆಲ್ಲಿಗಿ ಒಡೆ ಬಂದ್ರು

ಏನಪ್ಪ ಮತ್ತ್ಯಾ ಸೀರೆ ಕುಪಸಕಳ್ಳ

ಸೀರೆ ಕುಪಸ ಕಳ್ಳತನ ಮಾಡಿ

ನಿನ್ನ ಮಠಕ ಬಂದ್ರಲ್ಲ

ಏನಮ್ಮಾ ಏಳು ಮಂದಿ ದೇವಕನ್ನೆರೆ

ನನ್ನ ಮಠದಾಗ ಎಲ್ಯಾನ

ಹುಡ್ಕಿರಮ್ಮಾ ಎಂದನಲ್ಲ

ಮಗ ಶಿವಕುಮಾರ ಬಹಳ ಚದಾಮ

ಒಂದೊಂದು ಅಳ್ಳು ಬಾಯೊಳಗೆ ಹಿಡಕೊಂಡು

ದೇವಕನ್ನೆಯು ಎದೆಗೆ ಹೊಡ್ಡೆಕತ್ತ್ಯಾನ

ಏನಷ್ಟ ಮುತ್ತ್ಯಾ ನಿನ್ನ ಮಠದಗ ಆನಲ್ಲ

ನನ್ನ ಎದೆಗೆ ಅಳ್ಳು ಹೊಡ್ದೆಕತ್ತ್ಯಾನಲ್ಲ

ಎಂದು ದೇವಕನ್ನೆಯು ಶಂಭುಲಿಂಗ ಮುತ್ತ್ಯಾಗೆ ಹೇಳುತ್ತಾಳೆ. ಶಂಭುಲಿಂಗ ಮುತ್ತ್ಯಾ ದೇವಕನ್ನೆಯ ಮಧ್ಯೆ ಸಂವಾದ ನಡೆಯುತ್ತದೆ. ಏಳು ಜನ ದೇವಕನ್ನಿಕೆಯರು ಮಠಕ್ಕೆ ಬಂದು ಪ್ರಶ್ನಿಸುತ್ತಾರೆ. ಶಂಭುಲಿಂಗತಾತ ಇಲ್ಲವೆಂದರೂ, ಶಿವಕುಮಾರ ಹರಳಿನಿಂದ ದೇವಕನ್ನೆಯು ಎದೆಗೆ ಹೊಡೆದು ತನ್ನ ತುಂಟಾಟವನ್ನು ಬಯಲಿಗೆಳೆಯುತ್ತಾನೆ.

ಶಿವಕುಮಾರ ಶಂಬುಲಿಂಗತಾತನ ಆಶೀರ್ವಾದದಿಂದ ದೇವಕನ್ನೆಯನ್ನು ಗಾಂಧರ್ವ ಮದುವೆಯಾದ ಮೇಲೆ, ನೇರವಾಗಿ ತಾಯಿ ಗಿರಿಯಾವತಿ ಇದ್ದ ಜಾಗಕ್ಕೆ ಬರುತ್ತಾರೆ. ಅಲ್ಲೇ ಬಾವಿಯಲ್ಲಿದ್ದ ಬ್ರಹ್ಮರಾಕ್ಷಸಿ ಮೇಲೆ ಯುದ್ಧ ಮಾಡಲು ದೇವಕನ್ನೆ ಹೇಳುತ್ತಾಳೆ. ಎಷ್ಟೇ ಯುದ್ಧವಾದರೂ ಬ್ರಹ್ಮರಾಕ್ಷಸಿ ಸಾಯುವುದಿಲ್ಲ. ಆಗ ದೇವಕನ್ನೆಯು-

ಎದಿಯೊಳಗ ಸುರಾಯಿ ಹಾಕಿ ಸೀಳು ಅಂದಳಲ್ಲ

ಶಿವಕುಮಾರ ರಾಕ್ಷಸ ಎದೆ ಸೀಳ್ಯಾನ

ರಾಕ್ಷಸ ಲವುತರಾಜನ ಬಂಗಾರ ಕಳಸ ಮಾಡಿ

ಒಂದು ಪಕ್ಕಕೆ ಇಟ್ಟುಕೊಂಡಿತಲ್ಲ

ಏಳು ಮಂದಿ ಚೆಂಚು ಗಂಡುಮಕ್ಕಳ್ನ

ಬೆಳ್ಳಿ ಕಡಗ ಮಾಡಿ ಎಡ ಪಕ್ಕಕೆ ಇಟ್ಟುಕೊಂಡಿತಲ್ಲ

ಮಗ ಶಿವಕುಮಾರ ಹೊರಗೆ ತೆಗೆದು ಇಟ್ಟಾನಲ್ಲ

ಆವಾಗ ದೇವಕನ್ನೆ

ವೀರ ಹನುಮಾನ್ ಮಂತ್ರ ಮಂತ್ರಿಸ್ಯಾಳ

ಏಳು ಮಂದಿ ಚೆಂಚು ಗಂಡುಮಕ್ಕಳು

ಬಿಲ್ಲು ಬಾಣ ಏರಿಸಿ ನಿಂತರಲ್ಲ

ಕುಂಡ್ಯಾಗ ಲಂಗೋಟಿ ಹಾಕೊಂಡು

ರಾಜ ಲವುತರಾಜ ಎದ್ದು ನಿಂತನಲ್ಲ

ರಾಕ್ಷಸವನ್ನು ದೇವಕನ್ನೆಯ ಸಹಾಯದಿಂದ ಶಿವಕುಮಾರ ಕೊಲ್ಲುತ್ತಾನೆ. ರಾಕ್ಷಸ ಲವುತರಾಜನನ್ನು ನುಂಗಿ ಬಂಗಾರ ಕಳಸ ಮಾಡಿ ಒಂದು ಪಕ್ಕಕ್ಕೆ ಇಟ್ಟುಕೊಂಡಿತ್ತು. ಇದರಿಂದ ಲವುತರಾಜನ ರೂಪವನ್ನು ಧರಿಸಲು ಅನುವಾಗಿರುತ್ತದೆ. ಲವುತರಾಜನ ಧ್ವನಿಯಲ್ಲಿ ಕೂಗುತ್ತದೆ. ಶಿವಕುಮಾರ ರಾಕ್ಷಸವನ್ನು ಸೀಳಿದಾಗ

ಬಂಗಾರದ ಕಳಸ ಹೊರಗೆ ಬೀಳುತ್ತದೆ. ಹಾಗೆ ಬೆಳ್ಳಿ ಕಳಸವೂ ಹೊರಗೆ ಬೀಳುತ್ತದೆ. ದೇವಕನ್ನೆಗೆ ಬದುಕಿಸುವ ತಂತ್ರವು ಸಹ ಗೊತ್ತಿರುತ್ತದೆ. ಹನುಮಾನ್ ಮಂತ್ರದಿಂದ ಬೆಳ್ಳಿ ಕಳಸದಿಂದ ಏಳು ಮಂದಿ ಚೆಂಚು ಗಂಡು ಮಕ್ಕಳು ಬದುಕುತ್ತಾರೆ. ಬಂಗಾರದ ಕಳಸದಿಂದ ಲವುತರಾಜ ಬದುಕುತ್ತಾನೆ. ಚೆಂಚು ಗಂಡುಮಕ್ಕಳು ಬಿಲ್ಲು ಬಾಣ ಏರಿಸಿ ನಿಂತಿದ್ದು ಅವರು ಲಂಗೋಟಿ ಹಾಕಿಕೊಂಡಿದ್ದುದು ಆ ಜನಾಂಗದ ವೈಶಿಷ್ಟ್ಯ ವ್ಯಕ್ತವಾಗಿದೆ. ಇಲ್ಲಿ ಚೆಂಚು ಸಮುದಾಯದ ನಡವಳಿಕೆ ಅಭಿವ್ಯಕ್ತವಾಗಿದೆ.

ಈ ಕತೆಯಲ್ಲಿ ಬಂದಿರುವ ದೇವಕನ್ನೆಯರು ದೇವಲೋಕದಿಂದ ಬಂದಿದ್ದರೂ ಇವರಲ್ಲಿ ಮಾನವೀಯ ಮೌಲ್ಯಗಳಿವೆ. ಶಂಭುಲಿಂಗತಾತನ ಆಶೀರ್ವಾದದಿಂದ ಶಿವಕುಮಾರ ಹಿರಿಯ ದೇವಕನ್ನೆಯನ್ನು ಗಾಂಧರ್ವ ಮದುವೆಯಾಗಿದ್ದ, ಅವಳ ಸಹಾಯದಿಂದ ಅತಿಮಾನುಷ ಶಕ್ತಿಗಳನ್ನು ಸಂಹಾರ ಮಾಡುತ್ತಾನೆ. ಹಿರಿಯ ದೇವಕನ್ನೆ ಮತ್ತೆ ದೇವಲೋಕದ ದೇವೇಂದ್ರನ ಆಸ್ಥಾನಕ್ಕೆ ಸೇರಿದಾಗ ಅವಳನ್ನು ಪಡೆಯಲು ಹೋದ ಸಂದರ್ಭದಲ್ಲಿ, ಅಲ್ಲಿ ಹಿರಿಯ ದೇವಕನ್ನೆಯಲ್ಲಿ ಮಾನವೀಯ ಮೌಲ್ಯ ವ್ಯಕ್ತವಾಗುತ್ತದೆ.

ಶಿವಕುಮಾರ ಏಳು ಜನ ದೇವಕನ್ನೆಯರನ್ನು ನೋಡಿದರೆ ಒಂದೇ ಬಣ್ಣ, ಒಂದೇ ಸೀರೆಕುಪ್ಪಸ ತೊಟ್ಟಿದ್ದನ್ನು ಕಂಡು ಗುರುತು ಹಿಡಿಯಲು ದಿಕ್ಕು ತೋಚದಂತಾಗುತ್ತದೆ. ಆಗ ಹಿರಿಯ ದೇವಕನ್ನೆ ತಂದೆಯ ಮಾತನ್ನು ಆಲಿಸಿದ ಅವಳು ಮಾನವೀಯತೆಯಿಂದ ಹಿರಿಯ ದೇವಕನ್ನೆಯು ವಿಚಾರಿಸಿ-

ನನ್ನ ಬಿಟ್ಟು ನನ್ನ ತಂಗಿ ಸೆರಗು ಹಿಡಿದು ಜಗ್ಗಿದರೆ
ರುಂಡ ಹೊಡೆದು ಚಂಡಾಡ್ತನ ನಮ್ಮ ತಂದಿ
ಅವರು ಏಳು ಮಂದಿ ಕೋಲಾಟ ಆಡುತ್ತಿದ್ದರಲ್ಲ
ಶಿವಕುಮಾರ ಕೋಲಾಟ ಆಡ್ಲಕತ್ತ್ಯನಲ್ಲ
ಐದು ಅಳ್ಳು ಮಂತ್ರಿಸಿ ಸೆರಗಿನಗ ಕಟ್ಟಿಕೊಂಡಳಲ್ಲ
ದೊಡ್ಡಾಕಿ ದೇವಕನ್ನೆ ಆಡಿಕಂತ ಆಡಿಕಂತ
ಶಿವಕುಮಾರ ಮಾರಿಗೆ ಹಾಕಿ ಹೊಡೆದಳಲ್ಲ
ಆವಾಗ ಸೆರಗು ಸವರಿ ಹಿಡಕೊಂಡನಲ್ಲ

ಹಿರಿಯ ದೇವಕನ್ನೆಯು ತನ್ನ ತಂತ್ರವನ್ನು ಉಪಯೋಗಿಸಿ ಶಿವಕುಮಾರನನ್ನು ರಕ್ಷಿಸುತ್ತಾಳೆ. ಇವಳು ಮಾನವೀಯ ನೆಲೆಯಿಂದ ಶಿವಕುಮಾರನನ್ನು ಗಂಡಾಂತರದಿಂದ ಪಾರು ಮಾಡುತ್ತಾಳೆ. ನನ್ನ ಬಿಟ್ಟು ನನ್ನ ತಂಗಿ ಸೆರಗು ಹಿಡಿದು ಜಗ್ಗಿದರೆ ಏನು ಗತಿ ಎಂದು ಆತಂಕಕ್ಕೆ ಒಳಗಾಗುತ್ತಾಳೆ. ತನ್ನ ಗಂಡನ ರುಂಡ ಚಂಡಾಡಿದರೆ ತಾನು ವಿಧವೆ ಆಗುತ್ತೇನೆಂಬ ಆತಂಕ ಇನ್ನೊಂದು ಕಡೆ ಇರುತ್ತದೆ. ಶಿವಕುಮಾರ ನರಲೋಕದಿಂದ ದೇವಲೋಕಕ್ಕೆ ಬಂದಿದ್ದರೂ ಸಹ ತನ್ನ ಗಂಡನೆಂಬುದು ಅವಳ ಮನಸು

ಹಾತೊರೆಯುತ್ತಿರುತ್ತದೆ. ಅವಳಲ್ಲಿ ಪತಿಧರ್ಮದ ಪ್ರಜ್ಞೆ ಕಂಡುಬರುತ್ತದೆ. ಹೀಗಾಗಿ ಶಿವಕುಮಾರನನ್ನು ಉಳಿಸುವುದರಲ್ಲಿ ಮಾನವೀಯತೆ ಮರೆಯುತ್ತಾಳೆ. ಅವಳು ತನ್ನ ಮಾಂತ್ರಿಕ ಶಕ್ತಿಯನ್ನು ಪ್ರಯೋಗಿಸುತ್ತಾಳೆ. ತನ್ನ ಸೆರಗಿನಲ್ಲಿ ಅರಳನ್ನು ಮಂತ್ರಿಸಿ ಕಟ್ಟಿಕೊಂಡು ಕೋಲಾಟ ಆಡುತ್ತಾ ಆಡುತ್ತಾ ಗಂಡನಾದ ಶಿವಕುಮಾರನ ಮುಖಕ್ಕೆ ಹೊಡೆಯುವುದರಲ್ಲಿ ಸಫಲಳಾಗುತ್ತಾಳೆ. ಇದು ಅವಳ ಕ್ರಿಯೆಯನ್ನು ವ್ಯಕ್ತಪಡಿಸುತ್ತದೆ. ಮುಖ್ಯವಾಗಿ ಅವಳ ಮನೋಧರ್ಮವು ಮಾನವೀಯ ನೆಲೆಯಿಂದ ಕೂಡಿದೆ. ಇಲ್ಲಿ ಶಿವಕುಮಾರನು ದೇವಕನ್ಯೆಯ ಸೆರಗನ್ನು ಹಿಡಿಯುವ ಸನ್ನಿವೇಶವು ಗೆಲುವಿನ ಸಂಕೇತವಾಗಿರುತ್ತದೆ. ಕೊನೆಗೆ ಶಿವಕುಮಾರನ ಧೈರ್ಯ, ಸಾಹಸ ಹಾಗೂ ಭಕ್ತಿಯನ್ನು ಕಂಡ ದೇವೇಂದ್ರರಾಜನು ಅವನನ್ನು ಹೊಗಳಿ ತನ್ನ ಏಳು ಜನ ದೇವಕನ್ಯೆಯರನ್ನು ಅವರ ಒಪ್ಪಿಗೆಯ ಮೇರೆಗೆ ಗಾಂಧರ್ವ ವಿವಾಹ ಮಾಡಿ ಕಳಿಸುತ್ತಾನೆ. ಏಳು ಜನ ಹೆಣ್ಣುಮಕ್ಕಳನ್ನು ಮದುವೆ ಮಾಡಿ ಕಳಿಸುವ ದೇವೇಂದ್ರನ ಪಾತ್ರದಲ್ಲಿ ಒಬ್ಬ ತಂದೆಯ ಜವಾಬ್ದಾರಿ ಹಾಗೂ ಕರ್ತವ್ಯ ವ್ಯಕ್ತವಾಗಿದೆ.

### ೫. ೫. ಆರ್ಯವರಕತೆ

ಕೌಲೇಶಕೋಟಿ ಮೌಲೇಶಕೋಟೆಯ ರಾಜ ಬಂಡಿ ಬಂಜೆರಾವು. ಹೆಂಡತಿ ಸಂದುಬಾಯಿ. ಇವರಿಗೆ ಮೂವರು ಗಂಡುಮಕ್ಕಳು. ದೊಡ್ಡ ಮಗ ನರೇಂದ್ರರಾವು, ನಡುವಿನ ಮಗ ಬಂಡೆರಾವು, ಚಿಕ್ಕಮಗ ಸಿದ್ದೋಜಿರಾವು. ಮೂವರು ಮಕ್ಕಳಿಗೆ ಮದುವೆ ಮಾಡಿದ್ದ ದೊಡ್ಡ ಮಗ ನರೇಂದ್ರರಾವು ಹೆಂಡತಿ ದಾರುಕಾಯಮ್ಮ, ಇವರಿಗೆ ಮೂರು ಜನ ಗಂಡು ಮಕ್ಕಳು, ಒಬ್ಬಳೇ ಮಗಳು. ದೊಡ್ಡ ಮಗ ಸೋಮರಾವು, ನಡುವಿ ಮಗ ಫಿರೋಜರಾವು ಚಿಕ್ಕಮಗ ಸೀಮೋಜಿರಾವು, ಮಗಳು ರುಕುಂಬಾಯಿ. ಖಂಡೆರಾವು ಸಿದ್ದೋಜಿರಾವುಗೆ ಮಕ್ಕಳಿರಲಿಲ್ಲ. ದೊಡ್ಡ ಮಗ ನರೇಂದ್ರರಾವುಗೆ ಕೌಲೇಶಕೋಟೆ ಮೌಲೇಶಕೋಟೆ, ನಡುವಿನ ಮಗ ಖಂಡೆರಾವು ದಡೆಗಾಮ ಪಟ್ಟಣ, ಚಿಕ್ಕಮಗ ಸಿದ್ದೋಜಿರಾವು ಬಡೆಗಾಮ ಪಟ್ಟಣವನ್ನು ಆಳುತ್ತಿದ್ದರು.

ಇಳಿವಂತ ಪಾಳ್ಯದಿಂದ ರುಕುಂಬಾಯಿಗೆ ಇಳಿ (ಮದುವೆ ಪ್ರಸ್ತಾವ) ಬರುತ್ತದೆ. ಇಳಿವಂತ ಪಾಳ್ಯದ ಬುರಾನ್‌ಸಾಬ್‌ಗೆ ಮಗಳನ್ನು ಕೊಡಲು ನರೇಂದ್ರರಾವು ತಾಯಿ ತಂದೆ, ತಮ್ಮಂದಿರನ್ನು ಕೇಳಿ ಅವರ ಅಪ್ಪಣೆ ಪಡೆದು ಮದುವೆ ಮಾಡಿಕೊಡುತ್ತಾನೆ. ಆಗ ಸಿದ್ದೋಜಿರಾವುಗೆ ಅಣ್ಣನ ಮಗಳಿಗೆ ಕೊಟ್ಟ ವರದಕ್ಷಿಣೆ ಹಾಗು ಖರ್ಚನ್ನು ನೋಡಿ ಮತ್ಸರ ಉಂಟಾಗುತ್ತದೆ. ಹೀಗಾಗಿ ಮದುವೆಯಾದ ಮೇಲೆ ಭಾಗ ಆಗಬೇಕೆಂದು ಹಟ ಮಾಡುತ್ತಾನೆ. 'ಆರ್ಯಕುಲ'ದಲ್ಲಿ ಭಾಗ ಪದ್ಧತಿ ಇಲ್ಲ ಎಂದು ಅಣ್ಣಾ ಹೇಳಿದರೂ ಕೇಳದೆ ಭಾಗ ಆಗುತ್ತಾರೆ. ಇದರಿಂದ ನರೇಂದ್ರರಾವು ತಾಯಿತಂದೆ, ಹೆಂಡತಿ ಇಹಲೋಕ ತ್ಯಜಿಸುತ್ತಾರೆ. ಕೊನೆಗೆ ನರೇಂದ್ರರಾವು ಸಹ ಸಾಯುತ್ತಾನೆ. ಮಕ್ಕಳು ಅನಾಥರಾಗುತ್ತಾರೆ. ಆಗ ಗೆಳೆಯರಾದ ನಾರಾಯಣಪ್ಪ, ಕಿಷ್ಟರೆಡ್ಡಿ, ವೆಂಕಟರೆಡ್ಡಿ, ಸಂಗಿಶೆಟ್ಟಿ, ಎಲ್ಲಯ್ಯ ಸಾಹುಕಾರ ಮಕ್ಕಳನ್ನು ನೋಡಿಕೊಳ್ಳುತ್ತಾರೆ. ಆದರೆ

ಸಿದ್ದೋಜಿರಾವು, ಖಂಡೆರಾವು ಚಿಕ್ಕ ಮಕ್ಕಳನ್ನು ಕಂಡು ಮಧ್ಯರಾತ್ರಿಯಲ್ಲಿ ಬಂದು ಮಕ್ಕಳನ್ನು ಕಂಬಕ್ಕೆ ಕಟ್ಟಿ ಸಂಪತ್ತನ್ನು ಲೂಟಿ ಮಾಡಿಕೊಂಡು ಹೋಗುತ್ತಾರೆ. ಸಂಗಿಶೆಟ್ಟಿ ಎಲ್ಲಯ್ಯನು ಮಕ್ಕಳಾದ ಸೋಮರಾವು, ಫಿರೋಜರಾವು, ಸೀಮೋಜಿರಾವನ್ನು ತನ್ನ ಮನೆಯಲ್ಲಿಟ್ಟುಕೊಂಡು ಸಾಕುತ್ತಾನೆ. ಕೊನೆಗೆ ತಿಳಿಯದೆ ಚಿಕ್ಕಪ್ಪ ಸಿದ್ದೋಜಿರಾವು ಪಟ್ಟಣಕ್ಕೆ ಮಕ್ಕಳನ್ನು ಕಳಿಸುತ್ತಾನೆ. ಸಿದ್ದೋಜಿರಾವು ಈ ಮಕ್ಕಳು ಬೆಳೆದು ದೊಡ್ಡವರಾದರೆ ಮುಂದೆ ವೈರಿಗಳಾಗುತ್ತಾರೆಂದು ಕಷ್ಟಕೊಟ್ಟು ಸಾಯಿಸಲು ಪ್ರಯತ್ನಿಸುತ್ತಾನೆ. ಸಿದ್ದೋಜಿರಾವುನ ಕುದುರೆ ಕಾಯುವ ಬೇಗಾರ್ ಎಲ್ಲೋಜಿ ಮಕ್ಕಳನ್ನು ಉಳಿಸಿ ರುಕುಂಬಾಯಿ ಊರಿಗೆ ಕಳಿಸುತ್ತಾನೆ. ಅಕ್ಕ ರುಕುಂಬಾಯಿ ಊರಿನಲ್ಲಿ ಮೂರು ಜನ  ಮಕ್ಕಳು ದೊಡ್ಡವರಾಗುತ್ತಾರೆ.

ರುಕುಂಬಾಯಿ ಹಿರಿಯ ತಮ್ಮ ಸೋಮರಾವುಗೆ ಮಗಳು ಅಂತುಬಾಯಿಯನ್ನು ಕೊಟ್ಟು ಮದುವೆ ಮಾಡುತ್ತಾಳೆ. ಈ ವಿಷಯ ಸಿದ್ದೋಜಿರಾವುಗೆ ತಿಳಿಯುತ್ತದೆ. ಅಣ್ಣನ ಮಗಳು ರುಕುಂಬಾಯಿಗೆ ಆ ಮಕ್ಕಳನ್ನು ಕಳಿಸಬೇಕೆಂದು ಅವ್ಯಾಚ ಪದಗಳಿಂದ ಪತ್ರ ಬರೆದು ಕಳಿಸಿರುತ್ತಾನೆ. ಇದನ್ನು ಅರಿತ ರುಕುಂಬಾಯಿ ತಮ್ಮಂದಿರನ್ನು ಮಗಳನ್ನು ಬೇರೆ ನಾಡಿಗೆ ಹೋಗಿ ಬದುಕಬೇಕೆಂದು ಹೇಳಿ ತಂದೆ ಕೊಟ್ಟ ವರದಕ್ಷಿಣೆಗಿಂತ ಹೆಚ್ಚು ಕೊಟ್ಟು ಕಳಿಸುತ್ತಾಳೆ. ಅಲ್ಲಿಂದ ನೇರವಾಗಿ ಇವರು ಗೊಲ್ಲನಾಗಮ್ಮ ಇದ್ದ ಮನೆಗೆ ಬರುತ್ತಾರೆ. ರಾತ್ರಿಯಾಗಿದ್ದರಿಂದ ನಾಗಮ್ಮ ಅಲ್ಲೇ ಉಳಿಸಿಕೊಳ್ಳುತ್ತಾಳೆ. ನಾಗಮ್ಮ ಮನೆಯಲ್ಲಿ ಇದ್ದ ಸಂಪತ್ತಿನ ಬಗ್ಗೆ ಸೀಮೋಜಿರಾವು ತಿಳಿದುಕೊಂಡು ಮಧ್ಯರಾತ್ರಿಯಲ್ಲಿ ಸಂಪತ್ತನ್ನು ತೆಗೆದುಕೊಂಡು ಹೋಗುತ್ತಾನೆ. ಬೆಳಿಗ್ಗೆ ಎದ್ದ ನಾಗಮ್ಮ ಮನೆಯ ಕಳ್ಳತನವನ್ನು ಪ್ರಸ್ತಾಪಿಸಿ, ಒಳ್ಳೆಯದೆಂದು ಹೇಳುತ್ತಾಳೆ. ತನಗೆ ಮೊಲದ ಮಾಂಸ ತಿನ್ನಬೇಕೆಂಬ ಆಶೆಯಾಗಿದೆ, ನೀವು ತಂದು ಕೊಟ್ಟರೆ ತಿಂದು ಜೀವ ಬಿಡುತ್ತೇನೆಂದು ಹೇಳುತ್ತಾಳೆ. ಆಗ ಮಕ್ಕಳು ಬೇಟೆಗೆ ಹೋಗುತ್ತಾರೆ. ಮೊಲ ಹಿಡಿಯಲಾಗದೆ ತಪ್ಪಿಸಿಕೊಂಡು ಹೋದದನ್ನು ಅಜ್ಜಿಗೆ ತಿಳಿಸುತ್ತಾರೆ. ಆಗ ನಾಗಮ್ಮಜ್ಜಿ ಮೊಲ ಮಾಯವಾದ ಜಾಗದಲ್ಲಿ ಕೋಟೆ ಕಟ್ಟಲು ಹೇಳಿದಳು. ಕೋಟೆ ಕಟ್ಟಿದ ಮೇಲೆ ಆ ಪಟ್ಟಣಕ್ಕೆ 'ಕರ್ನೆಕಲ್' ಎಂದು ಹೆಸರಿಟ್ಟರು. ಆ ಪಟ್ಟಣಕ್ಕೆ ಶಾಂತಿ ಆಗಬೇಕಾದರೆ ಆಹುತಿ ಕೊಡಬೇಕೆಂದು ಯೋಚಿಸಿದ ಸೋಮರಾವು ಚಿಕ್ಕಪ್ಪ ಸಿದ್ದೋಜಿರಾವನ್ನು ಬಲಿಕೊಡಬೇಕೆಂದು ನಿಶ್ಚಯಿಸಿದನು.

ಅತ್ತ ಸಿದ್ದೋಜಿರಾವು ಕುದುರೆಗೆ ಆಹುತಿ ಕೊಡುವ ವಿಷಯ ತಿಳಿದು ಹುಲ್ಲು ತಿನ್ನದೆ ನಿಂತಿರುತ್ತದೆ. ಆ ವಿಷಯವನ್ನು ಸಿದ್ದೋಜಿರಾವು ಕುದುರೆಯಿಂದ ತಿಳಿದುಕೊಳ್ಳುತ್ತಾನೆ. ಆಗ ಸಿದ್ದೋಜಿರಾವು ಕಳ್ಳರ ಪಟ್ಟಣ 'ದೇವಮಲದಾರಿ' ಎಂಬ ಪಟ್ಟಣಕ್ಕೆ ಹೋಗಿ, ಕಳ್ಳರಿಗೆ ಆಮೀಶ ಒಡ್ಡಿ ತನ್ನ ಅಣ್ಣನ ಮಕ್ಕಳ ರುಂಡಗಳನ್ನು ಕಡಿದು ತರಲು 'ಕರ್ನೆಕಲ್' ಪಟ್ಟಣಕ್ಕೆ ಕಳಿಸುತ್ತಾನೆ. ಕಳ್ಳರಲ್ಲಿ ಮಂತ್ರ ಮಾಡುವ 'ಮಂತ್ರೇಶ' ನಿಂದ ಸೋಮರಾವು ರುಂಡವನ್ನು ಕಡಿದುಕೊಂಡು ಹೋಗುತ್ತಾರೆ. ಆದರೆ ಫಿರೋಜರಾವು, ಸೀಮೋಜಿರಾವು ಅವರ ನಾಯಿಗಳ ಸಹಾಯದಿಂದ ಇಬ್ಬರು ಕಳ್ಳರ ರುಂಡಗಳನ್ನು ಕಡಿದು ತರುತ್ತಾರೆ. ತನ್ನ ಅಣ್ಣನ

ರುಂಡವನ್ನು ಪಡೆದು ತರುತ್ತಾರೆ. ಇತ್ತ ಅಂತುಬಾಯಿ ಮಗುವನ್ನು ಹೆತ್ತಿರುತ್ತಾಳೆ. 'ತುಳೈರಾವು' ಮೋಹದಲ್ಲಿ ಗಂಡನ ಕಷ್ಟವನ್ನು ಮರೆತಿರುತ್ತಾಳೆ. ಅಂತುಬಾಯಿ ತನ್ನ ಮಗ ತುಳೈರಾವುನ ಸಾಕಿ ಬೆಳೆಸುತ್ತಾಳೆ. ಅಂತುಬಾಯಿಗೆ ತನ್ನ ಗಂಡನ ಸೇಡು ತೀರಿಸಿಕೊಳ್ಳಬೇಕೆಂಬ ಛಲ ಇರುತ್ತದೆ. ಆಗ ಅಂತುಬಾಯಿ ದಸರಕ್ಕೆ ಬನ್ನಿಮುಡಲು ಸಿದ್ಧೋಜಿರಾವುಗೆ ಆಹ್ವಾನ ನೀಡುತ್ತಾಳೆ. ಬನ್ನಿ ಮುಡಿವಾಗ ನಾ ಮುಡಿತಿನಿ ನೀ ಮುಡಿತಿನಿ ಎಂದು ಜಗಳ ತೆಗೆದು ಅಂತುಬಾಯಿಯು ಸಿದ್ಧೋಜಿರಾವು ಕೂದಲು ಹಿಡಿದು ಕೆಳಗೆ ಹಾಕುತ್ತಾಳೆ. ತನ್ನ ಮಗ ತುಳೈರಾವುನಿಂದ ತಾತನ ರುಂಡವನ್ನು ಹೊಡೆಸುತ್ತಾಳೆ. ನಂತರ ಖಂಡೆರಾವು, ರುಂಡವನ್ನು ಹೊಡೆಸುತ್ತಾಳೆ. ಅಂತುಬಾಯಿಯು ಸಿದ್ಧೋಜಿರಾವು, ಖಂಡೆರಾವು ಹೆಂಡತಿಯರನ್ನು ಸಾಯಿಸಿ ತನ್ನ ಸೇಡನ್ನು ತೀರಿಸಿಕೊಳ್ಳುತ್ತಾಳೆ. ಕೌಲೇಶಕೋಟೆ, ಮೌಲೇಶಕೋಟೆ, ದಡೆಗಾಮ, ಬಡೆಗಾಮ ಪಟ್ಟಣಗಳನ್ನು ತನ್ನ ವಶಕ್ಕೆ ತೆಗೆದುಕೊಳ್ಳುತ್ತಾಳೆ. ಮೈದುನರಾದ ಫಿರೋಜರಾವು ಸೀಮೋಜಿರಾವು ತಮಗೆ ಮದುವೆ ಬೇಡವೆಂದು ಹೇಳುತ್ತಾರೆ. ನಂತರ ತುಳಸಿಗಿಡವಾಗಿ ಕೂಡುತ್ತೇವೆಂದು ಅತ್ತಿಗೆ ಅಂತುಬಾಯಿಗೆ ಹೇಳುತ್ತಾರೆ. ಆಗ ಅಂತುಬಾಯಿ ತನ್ನ ಮಗ ತುಳೈರಾವು ಮದುವೆ ಮಾಡುತ್ತಾಳೆ. ಮಗನಿಗೆ ರಾಜ್ಯವನ್ನು ಆಳಲು ಹೇಳಿ ಶಿವಲೋಕಕ್ಕೆ ಹೋದಳು.

**ವಿಶ್ಲೇಷಣೆ**

ಆರ್ಯವರ ಕತೆಯು ಸಮಕಾಲೀನ ವಾಸ್ತವ ಬದುಕಿನ ವಿಚಾರಗಳನ್ನು ಒಳಗೊಂಡಿದೆ. ಕತೆಯು ಅತ್ಯಂತ ದುರಂತಮಯ ಹಾಗೂ ದುಃಖದಿಂದ ಕೂಡಿದೆ. ಒಂದು ಸಮುದಾಯದಲ್ಲಿ ನಡೆದಿರುವ ಅಣ್ಣತಮ್ಮಂದಿರ ದ್ವೇಷದ ಬದುಕನ್ನು ಚಿತ್ರಿಸುತ್ತದೆ. ಅಣ್ಣನ ಪ್ರಾಮಾಣಿಕತನ, ತಮ್ಮಂದಿರ ಮತ್ಸರವು ಅವರ ಕ್ರೂರತನವು ಕತೆಯನ್ನು ದುರಂತಕ್ಕೆ ತಳ್ಳುತ್ತದೆ. ಬುರ್ರಕತೆಗಾರರು ದುಃಖದಿಂದ ಕೂಡಿದ ಕತೆಯನ್ನು ದುಃಖದ ಭಾವವನ್ನು ಹೊರಹೊಮ್ಮಿಸಿದ್ದಾರೆ.

ಎರಡು ತಲೆಮಾರಿನ ಈ ಕತೆಯಲ್ಲಿ ಬಜೆರಾವು ಹಿರಿಯ ಮಗ ನರೇಂದ್ರರಾವು ಜೀವನ ದುರಂತದಿಂದ ಕೂಡಿದೆ. ಆರ್ಯವರ ಸಮುದಾಯದಲ್ಲಿ ಭಾಗ ಆಗಿದ್ದಕ್ಕೆ ಇಡೀ ತನ್ನ ಕುಟುಂಬವೇ ಕಷ್ಟವನ್ನು ಅನುಭವಿಸುತ್ತದೆ. ಈ ಸಮುದಾಯದಲ್ಲಿ ಭಾಗ ಆಗಬಾರದೆಂಬ ನಿಯಮ ಇದ್ದು ಅದನ್ನು ತಮ್ಮಂದಿರಾದ ಖಂಡೆರಾವು, ಸಿದ್ಧೋಜಿರಾವು ಅದನ್ನು ಮೆಟ್ಟಿ ತಮ್ಮ ಸ್ವಾರ್ಥಕ್ಕಾಗಿ, ಅಣ್ಣನ ಮೇಲಿನ ದ್ವೇಷಕ್ಕಾಗಿ ಭಾಗ ಆಗಬೇಕೆಂದು ಹಟ ತೊಟ್ಟು ಆಸ್ತಿಯನ್ನು ಭಾಗ ಮಾಡಿಕೊಳ್ಳುತ್ತಾರೆ. ಇದರ ದೋಷದಿಂದ ನರೇಂದ್ರರಾವು ಹೆಂಡತಿ ರುಕುಂಬಾಯಿ, ಬಂಡಿಬಜೆರಾವು, ಹೆಂಡತಿ ಸಂದುಬಾಯಿ ಒಬ್ಬೊಬ್ಬರು ಇಹಲೋಕ ತ್ಯಜಿಸುತ್ತಾರೆ. ಹುಟ್ಟುತ್ತ ಅಣ್ಣ ತಮ್ಮಂದಿರು ಬೆಳೆಯುತ್ತ ದಾಯಾದಿಗಳು ಎನ್ನುವಂತೆ ಕುಟುಂಬವನ್ನು ಒಡೆದು, ಸ್ವಾರ್ಥ ಸಾಧಿಸುತ್ತಾರೆ. ನರೇಂದ್ರರಾವು ಮಕ್ಕಳಾದ ಸೋಮರಾವು, ಫಿರೋಜರಾವು ಮತ್ತು ಸೀಮೋಜಿರಾವು ಚಿಕ್ಕ ಮಕ್ಕಳಾಗಿದ್ದರೂ ಆ ಮಕ್ಕಳಿಗೆ ಖಂಡೆರಾವು ಸಿದ್ಧೋಜಿರಾವು ಅನೇಕ ತೊಂದರೆಗಳನ್ನು ಕೊಡುತ್ತಾರೆ.

ಅಣ್ಣ ನರೇಂದರಾವು ಮಗಳಾದ ರುಕುಂಬಾಯಿ ಮದುವೆಗೆ ಖರ್ಚಾದ ಸಂಪತ್ತನ್ನು ಕಂಡು ತಮ್ಮಂದಿರಿಗೆ ಹೊಟ್ಟೆ ಕಿಚ್ಚು ಉಂಟಾಗುತ್ತದೆ. ತಮ್ಮಂದಿರಿಗೆ ಮಕ್ಕಳ ಭಾಗ್ಯ ಇಲ್ಲದ್ದರಿಂದ ಅಣ್ಣನ ಮೇಲಿನ ದ್ವೇಷಕ್ಕೆ ಇನ್ನೊಂದು ಕಾರಣ. ಚಿಕ್ಕಪ್ಪಂದಿರಿಂದ ತಪ್ಪಿಸಿಕೊಂಡ ಮಕ್ಕಳು ಅಕ್ಕ ರುಕುಂಬಾಯಿ ಪಟ್ಟಣ ಸೇರುತ್ತಾರೆ. ತಮ್ಮಂದಿರನ್ನು ಸಲುಹಿ ಹಿರಿಯ ತಮ್ಮ ಸೋಮರಾವುಗೆ ಮಗಳು ಅಂತುಬಾಯಿಯನ್ನು ಕೊಟ್ಟು ಮದುವೆ ಮಾಡುತ್ತಾಳೆ. ಚಿಕ್ಕಪ್ಪಂದಿರ ದ್ವೇಷವನ್ನು ಅರಿತು ತಮ್ಮಂದಿರನ್ನು ಮಗಳನ್ನು ಬೇರೆ ನಾಡಿಗೆ ಹೋಗಿ ಜೀವಿಸಲು ಕಳುಹಿಸುತ್ತಾಳೆ. ಮುಂದೆ ಅಂತುಬಾಯಿ ಸೇಡನ್ನು ತೀರಿಸಿಕೊಳ್ಳುತ್ತಾಳೆ. ಕತೆಯ ಕೊನೆಯ ತನಕ ಸೇಡಿಗೆ ಸೇಡು ಮುಯ್ಯಿಗೆ ಮುಯ್ಯಿ ತೀರಿಸಿಕೊಳ್ಳುವ ಹಂಬಲದಲ್ಲಿ ಕತೆಯು ಕೊನೆಗೊಳ್ಳುತ್ತದೆ.

ಕತೆಗಾರರು ಕತೆಯ ನಿರೂಪಣೆಯಲ್ಲಿ ಅವರ ಗುಲಬರ್ಗಾ ಪ್ರದೇಶದ ಪರಿಸರ ಹಾಗೂ ಸಂಪ್ರದಾಯ ನಡವಳಿಕೆಯು ಕತೆಯ ಸಂದರ್ಭಕ್ಕೆ ತಕ್ಕಂತೆ ಅಭಿವ್ಯಕ್ತಪಡಿಸಿದ್ದಾರೆ. ನರೇಂದ್ರರಾವು ತನ್ನ ಮಗಳ ಮದುವೆ ಪ್ರಸ್ತಾಪ ಬಂದಾಗ ಸಂಪ್ರದಾಯದಂತೆ ತಾಯಿ, ತಂದೆ ತಮ್ಮಂದಿರನ್ನು ಕೇಳುವ ಒಂದು ಸನ್ನಿವೇಶ ಈ ರೀತಿ ವ್ಯಕ್ತವಾಗಿದೆ.

> ರುಕುಂಬಾಯಿಗೆ ಇಳ್ಕ ಬಂದವಲ್ಲ
> ಯಾವ ಊರಿಂದ ಬಂತು ಇಳ್ಕ
> ಇಳ್ಕವಂತ ಪಾಳ್ಕದಿಂದ
> ಇಳ್ಕ ಬಂದರೆ ಆಯಮ್ಮನ ಗಂಡನ ಹೆಸರು ಬುರಾನ್ ಸಾಬ್
> ಕೊಡಮಾ ಬ್ಯಾಡಂತನಲ್ಲ
> ಸಂದುಬಾಯಿ ಬಂಡಿಬಜೆರಾವು
> ಮೊಮ್ಮಗಳಿಗೆ ಇಳ್ಕ ಬಂದವಲ್ಲ
> ಮಗ ಸುರುವು ಸೂಣೆ ಮುತ್ತೈದೆತನ ಬಂದದ
> ಕೊಡಬೇಕು ಮಗ ಲಗ್ನ ಮಾಡಬೇಕು
> ಅಲ್ಲಿಂದ ತಮ್ಮನ ಬೆಲ್ಲಿಗಿ ನೋಡ
> ಸಿದ್ದೋಜಿರಾಜನ ಬೆಲ್ಲಿಗಿ ಬಂದನಲ್ಲ
> ಮಗಳಿಗೆ ಇಳ್ಕ ಬಂದವ

ಎಂದು ನರೇಂದ್ರರಾವು ಹೇಳುತ್ತಾನೆ. ನರೇಂದ್ರರಾವು ಮಗಳಿಗೆ 'ಇಳ್ಕ' ಬಂದಿದೆ ಎಂದರೆ ಮದುವೆ ಪ್ರಸ್ತಾಪ ಬಂದಿದೆ. ಇಳ್ಕವಂತ ಪಾಳ್ಕದಿಂದ 'ಇಳ್ಕ' ಬಂದದ ಎಂದು ನಿರೂಪಿಸಿದ ಕತೆಗಾರರ ಪದಗಳು ಬಳಕೆ, ಭಾಷೆಯ ಹಿಡಿತ, ಅವರ ಪ್ರತಿಭೆ ಕಾಣುತ್ತದೆ. ಸನ್ನಿವೇಶಕ್ಕೆ ಅನುಗುಣವಾಗಿ ಪದಗಳ ಬಳಕೆಗೊಂಡಿದೆ. ಇಳ್ಕ ಎಂದರೆ ಹೆಣ್ಣಿಗೆ ವರ ಬಂದಿದೆ ಎಂಬ ಅರ್ಥ ಇದೆ. ಇಳ್ಕವಂತ ಪಟ್ಟಣದಿಂದಲೇ ಕನ್ಯೆ ಬೇಡಲು

ಬಂದಿದ್ದಾರೆ. ನರೇಂದ್ರರಾವು ತನ್ನ ಮಗಳನ್ನು ಮದುವೆಗ ಕೇಳಲು ಬಂದಾಗ ಮೊದಲು ತನ್ನ ತಾಯಿ ತಂದೆ ಸಂದುಬಾಯಿ ಬಂಡಿಬಜೆರಾವು ಮುಂದೆ ಪ್ರಸ್ತಾಪಿಸುತ್ತಾನೆ. ಮೊದಲು ಹಿರಿಯರ ಒಪ್ಪಿಗೆ ಪಡೆಯಬೇಕೆಂದು ಸಂಪ್ರದಾಯ ವ್ಯಕ್ತವಾಗಿದೆ. ಅದೇ ಸಂಪ್ರದಾಯದಂತೆ ಸಂದುಬಾಯಿ ಬಂಡಿಬಜೆರಾವು 'ಸುರುವು ಸೂಣೆ ಮುತ್ತೈದತನ' ಬಂದದ ಎಂದು ಹೇಳುವ ಹಿರಿಯರು ಮೊದಲು ಕನ್ಯೆ ಬೇಡಲು ಬಂದಂತಹದು ಅತ್ಯಂತ ಶ್ರೇಷ್ಠವಾದುದು, ಅದನ್ನು ಮುತ್ತೈದೆತನಕ್ಕೆ ಹೋಲಿಸುತ್ತಾ, ಬೇಡ ಅನ್ನಬಾರದು ಕೊಡಬೇಕೆಂದು ಹೇಳುವುದರಲ್ಲಿ ಅರ್ಥವಿದೆ. ಹಳ್ಳಿಯಲ್ಲಿ ಮೊದಲು ಕನ್ಯೆ ಬೇಡಲು ಬಂದವರಿಗೆ ಕನ್ಯೆ ಕೊಡಬೇಕು ಎಂಬ ನಂಬಿಕೆ ಇದೆ. ನಂತರ ತಮ್ಮಂದಿರ ಹತ್ತಿರ ಹೋಗಿ ಮಗಳಿಗೆ ಇಳ್ಯ ಬಂದದ ಎಂದು ಹೇಳುವುದರಲ್ಲಿ ಅರ್ಥವಿದೆ. ಕನ್ಯೆಯ ಚಿಕ್ಕಪ್ಪರನ್ನು ಕೇಳುವುದು ಸಹ ಇದೆ. ಕೌಟುಂಬಿಕ ವ್ಯವಸ್ಥೆಯ ಸೌಹಾರ್ದತೆ ಕಾಣುತ್ತದೆ. ಇಂದಿಗೂ ಹಳ್ಳಿಗಳಲ್ಲಿ ಇಡೀ ಕುಟುಂಬದ ಸದಸ್ಯರ ಒಪ್ಪಿಗೆ ಪಡೆಯುವುದನ್ನು ಕಾಣುತ್ತೇವೆ. ಒಂದು ಸಮಾಜದ ಸಂಪ್ರದಾಯ ನಂಬಿಕೆ ಕುಟುಂಬ ವ್ಯವಸ್ಥೆ ಪದ್ಧತಿ ಮುಂತಾದ ಅಂಶಗಳು ಅಭಿವ್ಯಕ್ತವಾಗಿವೆ.

ಅಣ್ಣನ ಮೇಲಿನ ದ್ವೇಷದಿಂದ ಹಿರಿಯ ಸಂಪತ್ತನ್ನು ಭಾಗ ಮಾಡಬೇಕೆಂದು ಹಟ ಹಿಡಿಯುವ ತಮ್ಮಂದಿರು ಅಣ್ಣನಿಗೆ.

ಭೂಮಿ ಪೈನಾಸ್ ತಂದು ಅಳಿಸಬೇಕು
ಮೂರು ಭಾಗ ಆಗಬೇಕಲ್ಲ
ಮನ್ಯಾಗ ಬೆಳ್ಳಿ ಬಂಗಾರ
ಜನಕ್ಕೆ ಕೊಟ್ಟ ಆಸ್ತಿ ಹಂಚಬೇಕು
ಎಲ್ಲ ಪಾಲ ಮಾಡಿದರಲ್ಲ
ಇನ್ನು ಒಂದು ಉಳಿತಲ್ಲ
ಮನ್ಯಾಗ ಎಂಬಲು ಗಡಿಗಿ ಉಳಿದದ
ಅದು ಪಾಲ ಆಗಬೇಕ
ಮನುಷ್ಯಗೊಂದು ತುಕಡಿ ಬರಲಿ ಪಾಲ ಆಗಬೇಕ
ದೇವರು ಮನ್ಯಾಗ ಹೊಕ್ಕಂಡ್ರಲ್ಲ
ಎಂಬ್ಲು ಗಡಿಗಿ ತಗಂಡು ಬಂದ್ರಲ್ಲ
ತಲಾಗ ತಂಬಿಗಿ ತುಂಬಿ ಕೊಂಡ್ರಲ್ಲ
ಮೂರು ಬೋಕಿ ಹೊಡ್ರದ್ರಲ್ಲ
ಮೂರು ಜನ ಹಂಚಿಕೊಂಡರಲ್ಲ
ಅವರವರ ಮನೆ ಹೊದ್ರಲ್ಲ

ಅಣ್ಣತಮ್ಮಂದಿರ ದ್ವೇಷದ ವಾಸ್ತವ ಬದುಕು ಚಿತ್ರಿತವಾಗಿದೆ. ಹಿರಿಯರು ಇಡೀ ಸಂಪತ್ತನ್ನು ಮೂರು ಭಾಗ ಮಾಡಿದರೂ ತಮ್ಮಂದಿರಿಗೆ ತೃಪ್ತಿ ಇಲ್ಲ. ಮನೆಯ ಜಗಲಿ ಮೇಲೆ ಇರುವ 'ಎಂಬ್ಲುಗಡಿಗಿ' (ದೇವರ ಮನೆಯಲ್ಲಿರು ನೀರು ತುಂಬಿದ ಗಡಿಗೆ) ಭಾಗ ಆಗಲೇಬೇಕೆಂದು ಹೇಳುವುದರಲ್ಲಿ ಅರ್ಥವಿದೆ. 'ಎಂಬ್ಲುಗಡಿಗಿ' ಮನೆಯ ಲಕ್ಷ್ಮೀ ಎಂಬ ನಂಬಿಕೆ, ಕತೆಗಾರರ ಗುಲಬರ್ಗಾ ಪ್ರದೇಶದಲ್ಲಿ ಈ ಗಡಿಗೆಗೆ ಅತ್ಯಂತ ಮಹತ್ವದ ಸ್ಥಾನವನ್ನು ಕೊಡುವುದನ್ನು ಕಾಣಬಹುದು. ಪ್ರತಿಯೊಬ್ಬರ ಮನೆಯಲ್ಲಿ ಎಂಬ್ಲುಗಡಿಗಿ ಇರುವಂತಹದು. ಅದಕ್ಕೆ ಹಬ್ಬ ಹರಿದಿನಗಳಲ್ಲಿ ಮೊದಲು ಪೂಜೆ ಮಾಡಿದ ನಂತರ ಬೇರೆ ದೇವರುಗಳಿಗೆ ಪೂಜೆ ಮಾಡುತ್ತಾರೆ. ಆ ಗಡಿಗೆಯೇ ಲಕ್ಷ್ಮೀ ಎಂಬ ನಂಬಿಕೆ, ಅದರಲ್ಲಿ ಇರುವ ವಿಶೇಷವಾದ ಕಲಿ (ನೀರನ್ನು) ಅತ್ಯಂತ ಶ್ರೇಷ್ಠವಾದುದು ಲಕ್ಷ್ಮೀ ಎಂದು ನಂಬಿರುತ್ತಾರೆ. ಹೀಗಾಗಿ ಅಣ್ಣ ತಮ್ಮಂದಿರು ಭಾಗ ಆಗುವಾಗ ಮನೆ, ಸಂಪತ್ತು, ಆಸ್ತಿಗಿಂತ ಎಂಬ್ಲುಗಡಿಗಿ ಭಾಗಕ್ಕೆ ಹೆಚ್ಚು ಮಹತ್ವ ನೀಡುತ್ತಾರೆ. 'ದೇವರು ಮನ್ಯಾಗ ಹೊಕ್ಕಂಡ್ರು ಎಂಬ್ಲುಗಡಿಗಿ ತಗಂಡು ಬಂದ್ರು' ಎನ್ನುವಲ್ಲಿ ಆ ಗಡಿಗೆಯು ದೇವರ ಕೋಣೆಯಲ್ಲಿ ಇರುವಂತಹದೆಂಬುದು ಗೊತ್ತಾಗುತ್ತದೆ. ಅದರಲ್ಲಿ ಇರುವ (ಕಲಿ) ವಿಶೇಷ ನೀರನ್ನು ಮೂರು ಜನರು ಮೂರು ತಂಬಿಗೆಯಲ್ಲಿ ತುಂಬಿಕೊಳ್ಳುವುದನ್ನು ಕಂಡರೆ ಆ ನೀರಿನ ವಿಶಿಷ್ಟತೆ ಅದರ ಮಹತ್ವ ಅರಿವಾಗುತ್ತದೆ. ಹಾಗೆಯೇ ಆ ಗಡಿಗೆಯನ್ನು ಹೊಡೆದು ಹಾಕಿ ಅದರ ಚೂರುಗಳನ್ನು ಸಹ ಮೂರು ಜನ ಹಂಚಿಕೊಂಡು ಹೋಗುವುದನ್ನು ನೋಡಿದರೆ, ಪೂಜೆಗೊಂಡ ಆ ಗಡಿಗೆಗೆ ಇರುವ ಶ್ರೇಷ್ಠತೆ ತಿಳಿಯುತ್ತದೆ. ಈ ಎಲ್ಲವನ್ನು ಗಮನಿಸಿದಾಗ ಕತೆಗಾರರು ವಾಸ್ತವತೆಯ ಅಭಿವ್ಯಕ್ತಿಯನ್ನು ಕಾಣಬಹುದು.

ತಾಯಿತಂದೆಯನ್ನು ಕಳೆದುಕೊಂಡು ಅನಾಥರಾದ ಸೋಮರಾವು, ಫಿರೋಜರಾವು ಮತ್ತು ಸಿಮೋಜಿರಾವು, ಚಿಕ್ಕಮಕ್ಕಳಾದ ಇವರನ್ನು ಕಂಡು ಚಿಕ್ಕಪ್ಪರಾದ ಖಂಡೆರಾವು ಸಿದ್ದೋಜಿರಾವು ಮಾರುವೇಷದಿಂದ ಬಂದು ಮಕ್ಕಳನ್ನು ಕಂಬಕ್ಕೆ ಕಟ್ಟಿಹಾಕಿ ಮನೆಯಲ್ಲಿದ್ದ ಸಂಪತ್ತನ್ನು ದೋಚಿ ಆನೆ ಮೇಲೆ ಹಾಕಿಕೊಂಡು ತಮ್ಮ ಪಟ್ಟಣವನ್ನು ಸೇರುವ ಇವರು ಅಣ್ಣನ ಮೇಲಿನ ದ್ವೇಷವನ್ನು ಮಕ್ಕಳಲ್ಲೂ ಸಹ ತೀರಿಸಿಕೊಳ್ಳುತ್ತಾರೆ. ಅಣ್ಣತಮ್ಮಂದಿರ ದ್ವೇಷ ಇಡೀ ಕುಟುಂಬಕ್ಕೆ ಆವರಿಸುವುದನ್ನು ಕಾಣುತ್ತೇವೆ. ಮಕ್ಕಳ ಕಷ್ಟವನ್ನು ಕಂಡ ನರೇಂದ್ರರಾವು ಗೆಳೆಯ ಸಂಗಿಶೆಟ್ಟಿ ಯಲ್ಲಯ್ಯ ಮಕ್ಕಳಿಗೆ ಸಹಾಯ ಮಾಡುವುದು ಕುಟುಂಬ ಸಂಬಂಧಕ್ಕಿಂತ ಗೆಳೆಯತನದ ಸಂಬಂಧವು ಅದಕ್ಕಿಂತ ಶ್ರೇಷ್ಠವೆಂದು ತೋರಿಸುತ್ತಾನೆ. ಆದರೆ, ಆ ಮಕ್ಕಳನ್ನು ಚಿಕ್ಕಪ್ಪ ಸಿದ್ದೋಜರಾಜನ ಪಟ್ಟಣಕ್ಕೆ ಕಳಿಸಿದಾಗ, ಚಿಕ್ಕಪ್ಪ ಆ ಮಕ್ಕಳಿಗೆ ಇನ್ನಷ್ಟು ತೊಂದರೆ ಕೊಡುತ್ತಾನೆ. ಮಕ್ಕಳೇ ಅಡಿಗೆ ಮಾಡಿಕೊಂಡು ಊಟ ಮಾಡಲು ಪುಂಡಿಪಲ್ಯ ತರಲು ಸೀಮೋಜಿರಾವು ಹೊಲದೊಳಗೆ ಹೋದಾಗ-

ನಡುಹೊಲ್ದಗೆ ಮಂಚದ ಮ್ಯಾಲ

ವೆಂಕಟರೆಡ್ಡಿ ಕುಂತನಲ್ಲ

ಸೀಮೋಜಿರಾವು ಹೊಲ್ದಗ ಹೋಗ್ಯಾನಲ್ಲ

ಪುಂಡಿಪಲ್ಯ ಹರ್ಲಕತ್ತ್ಯಾನ

ವೆಂಕಟರೆಡ್ಡಿ ಓಡೋಡಿ ಬಂದನಲ್ಲ

ಹಸಿದಂಡು ಕಿತ್ತುಕೊಂಡನ

ಮಗನ ಹೊಡ್ಲೆಕತ್ತ್ಯಾನಲ್ಲ

ಯಾಕ ಹೊಡ್ತಿಯಪ್ಪ ಅಂದನಲ್ಲ

ನನ್ನ ಕಾಕ ಅದ್ದನ ಆರ್ಕ ಕೊಟ್ಟನ

ಬೀಸಿ ಹಿಟ್ಟು ಮಾಡಿವಿ

ಹೂಗಾರ ಈರಮ್ಮ ಮನ್ಯಾಗ ನೋಡ

ರೊಟ್ಟಿ ಮಾಡಿಕೊಂಡಿವಿ

ಪುಂಡಿಪಲ್ಯ ಒಯ್ಯಿಲಕ ಬಂದಿನಿ

ಎಂದು ತನ್ನ ಕಷ್ಟವನ್ನು ಹೊಲದ ಮಾಲಕನಲ್ಲಿ ಸೀಮೋಜಿರಾವು ಹೇಳುತ್ತಾನೆ. ಸೀಮೋಜಿರಾವು ಹೊಲದ ಮಾಲೀಕ ವೆಂಕಟರೆಡ್ಡಿ ಮಧ್ಯ ಸಂವಾದ ಇದೆ. ನಡು ಹೊಲ್ದಗ ಮಂಚದ ಮ್ಯಾಲ ವೆಂಕಟರೆಡ್ಡಿ ಕುಂತನ ಸಾಮಾನ್ಯವಾಗಿ ಗುಲಬರ್ಗಾ ಪ್ರದೇಶದಲ್ಲಿ ಹೊಲಗಳ ಮಧ್ಯದಲ್ಲಿ ನಾಲ್ಕು ಕಟ್ಟಿಗೆಗಳಿಂದ ಎತ್ತರವಾದ ಅಟ್ಟ ಹಾಕುವುದನ್ನು ಕಾಣುತ್ತೇವೆ. ಇದರ ಮೇಲೆ ಕುಳಿತುಕೊಂಡರೆ ಇಡೀ ಹೊಲವು ಗೋಚರಿಸುತ್ತದೆ. ಇದರಿಂದ ಸಂಪೂರ್ಣವಾಗಿ ಹೊಲದ ಮೇಲೆ ಹಿಡಿತದಿಂದ ಬೇರೆಯವರು ಹೊಲದಲ್ಲಿ ಪ್ರವೇಶಕ್ಕೆ ಆಸ್ಪದ ಇರುವುದಿಲ್ಲ. ಇಲ್ಲಿ ಅಟ್ಟದ ಮೇಲೆ ಕುಳಿತ ವೆಂಕಟರೆಡ್ಡಿ ಹೊಲದಲ್ಲಿ ಬಂದ ಹುಡುಗನನ್ನು ಗಮನಿಸಿ ಓಡೋಡಿ ಹೋಗುತ್ತಾನೆ. ಹಸಿಯ ದಂಡನ್ನು ಕಿತ್ತು ಹುಡುಗನನ್ನು ಹೊಡೆಯುವುದು ಕೆಳವರ್ಗ ಜನರ ಮೇಲೆ ಹಕ್ಕು ಚಲಾಯಿಸುವ ಮನೋಸ್ಥಿತಿ ಇದೆ. 'ಯಾಕ ಹೊಡ್ತಿಯಪ್ಪ' ಎಂದು ಪ್ರಶ್ನಿಸುವ ಹುಡುಗನು ನಿನಗಿಂತ ನಾನೇನು ಕಡಿಮೆಯಿಲ್ಲ ಎಂಬುದನ್ನು ತೋರಿಸುತ್ತದೆ. ಆ ಧೈರ್ಯ ಉಳ್ಳವರಲ್ಲಿ ಮಾತ್ರ ಕಾಣಬಹುದು. ಹುಡುಗನು ಅನಾಥ ಸ್ಥಿತಿಯಲ್ಲಿದ್ದರೂ ಅರಸರ ಮನೆತನದ ಹುಡುಗನು ಎಂದು ಹೇಳುವ ಮಾತಿನಲ್ಲಿ ಧೈರ್ಯ ಇದೆ. ತನ್ನ ಚಿಕ್ಕಪ್ಪ ಕೊಟ್ಟ ಅದ್ದನ ಅಂದರೆ ಒಂದು ಸೇರು ಆರ್ಕದ ಕಾಳನ್ನು ಬೀಸಿ ರೊಟ್ಟಿ ಮಾಡಿಕೊಂಡಿದ್ದನ್ನು ಹೇಳುತ್ತಾನೆ. ಆರ್ಕದ ಕಾಳು ಸಹ ಈ ಪ್ರದೇಶದ ಪ್ರಸಿದ್ಧ ಆಹಾರದ ಕಾಳಾಗಿದೆ. ಹೂಗಾರ ಈರಮ್ಮ ಎಂಬುವವಳು ಈ ಮಕ್ಕಳಿಗೆ ಹಿಟ್ಟು ಬೀಸಿ ರೊಟ್ಟಿ ಮಾಡಲು ಸಹಾಯ ಮಾಡುತ್ತಾಳೆ. ರೊಟ್ಟಿಯನ್ನು ತಿನ್ನಲು ಪುಂಡಿಪಲ್ಯಕ್ಕಾಗಿ ಬಂದಿದ್ದೇನೆ ಎಂದು ಹೇಳುತ್ತಾನೆ. ಈ ಪ್ರದೇಶದಲ್ಲಿ ಹೊಲಗಳಲ್ಲಿ ಪುಕ್ಕಟೆ ಸಿಗುವ ಪುಂಡಿಪಲ್ಯವನ್ನು ತರಕಾರಿಯಾಗಿ ಬಳಸುತ್ತಾರೆ.

ರುಕುಂಬಾಯಿ ತಮ್ಮಂದಿರನ್ನು ತನ್ನಲ್ಲಿಟ್ಟುಕೊಂಡು ಅವರನ್ನು ಪೋಷಿಸುವುದನ್ನು ಕಂಡ ಚಿಕ್ಕಪ್ಪ ಸಿದ್ದೋಜಿರಾವು ಪತ್ರ ಬರೆದು-

ಇವತ್ತು ಮಕ್ಕಳ್ನ ಕಳಿಸಿದ್ರೆ ಕಳಿಸಬೇಕು

ಇಲ್ಲಂದರೆ ಇಜ್ಜತ್ ಕಾರಟ್ ಬರೆದು ಹಾಕ್ತಿನಿ

ಮತ್ತೆ ಕಾರಟ್ ಬರೆದು ಹಾಕಿದನಲ್ಲ

ಕಳಿಸಿದರೆ ನನ್ನ ಮನೆಗೆ ಕಳಿಸಬೇಕು

ಇಲ್ಲಂದರೆ ಜಿಂದಾಗಾನ ಸಂಸಾರ

ತಮ್ಮಂದೋರಿಗೆ ಮಾಡಬೇಕು

ಎಂದು ತನ್ನ ಆಕ್ರೋಶವನ್ನು ವ್ಯಕ್ತಪಡಿಸುತ್ತಾನೆ. ಸಿದ್ದೋಜಿರಾಜನ ಮಕ್ಕಳನ್ನು ಕೂಡಲೇ ಕಳಿಸಬೇಕೆಂದು ರುಕುಂಬಾಯಿಗೆ ಪತ್ರ ಬರೆಯುತ್ತಾನೆ. ಕಳಿಸದೇ ಹೋದರೆ ಇಜ್ಜತ್ ಕಾರಟ್ ಅಂದರೆ ಮರ್ಯಾದೆ ಪತ್ರ ಹಾಕುತ್ತೇನೆಂದು ಭಯ ಹುಟ್ಟಿಸುತ್ತಾನೆ. ಮನುಷ್ಯನಿಗೆ ಎಲ್ಲಕ್ಕಿಂತ ಮರ್ಯಾದೆ ಮುಖ್ಯ ಅವಾಚ್ಯ ಪದಗಳಿಂದ ಕೂಡಿದ ಪತ್ರ ಹಾಕುತ್ತೇನೆಂಬ ಭಾವವನ್ನು ವ್ಯಕ್ತ ಮಾಡಿದ್ದಾನೆ. ಜಿಂದಗಾನ ಸಂಸಾರ ಇಡೀ ಜೀವನ ತಮ್ಮಂದಿರಿಗೆ ಸಂಸಾರ ಮಾಡಬೇಕೆಂದು ಹೇಳುವ ಚಿಕ್ಕಪ್ಪನ ಮಾತಿನಲ್ಲಿ ಕ್ರೂರತನ ಅಡಗಿರುತ್ತದೆ. ಚಿಕ್ಕಪ್ಪನಿಗೆ ಅಣ್ಣನ ಮಕ್ಕಳಿಗಿಂತ ತನ್ನ ಪ್ರತಿಷ್ಠೆ ಮುಖ್ಯವಾಗಿರುತ್ತದೆ. ಅಣ್ಣನ ಸಂಪತ್ತನ್ನು ತಾನೇ ವಶ ಮಾಡಿಕೊಳ್ಳಬೇಕೆಂಬ ಆಶೆಯು ಇರುತ್ತದೆ. ಮಕ್ಕಳ ಜೊತೆ ನಡೆದುಕೊಳ್ಳುವ ರೀತಿ, ಮಗಳನ್ನು ಮಾತಾಡಿಸುವ ರೀತಿ ಸಮಾಜ ತಲೆತಗ್ಗಿಸುವಂತೆ ಮಾಡುತ್ತದೆ.

ಸಿದ್ದೋಜಿರಾವು ಅಣ್ಣನ ಮಕ್ಕಳು ನನಗೆ ಮುಂದೆ ವೈರಿಗಳಾಗುತ್ತಾರೆಂದು ತಿಳಿದು ಅವರನ್ನು ಕೊಲ್ಲಲು ಕಳ್ಳರನ್ನು ಕಳಿಸಿದಾಗ ಸೋಮರಾವು ಕಳ್ಳರ ಕೈಗೆ ಸಿಗುತ್ತಾನೆ. ಆಗ ಸೋಮರಾವು ತನ್ನ ಜೀವ ಉಳಿಸಿಕೊಳ್ಳಲು-

ಅವನು ಒಮ್ಮಾನ ಕೂಲಿ ಹಾಕಿದರೆ

ನಾನು ಇಮ್ಮಾನ ಕೂಲಿ ಹಾಕ್ತಿನಿ

ನನ್ನ ಜೀವಾತ್ಮ ಬಿಟ್ಟು ಕೊಡಿರಿ

ನನ್ನ ಬೆಲ್ಲಿ ಕೆಟ್ಟು ಅವನ ಬೆಲ್ಲಿಗಿ ಹೋದರೆ

ಅವನು ಸಲುವುತನಲ್ಲ

ದಯಮಾಡಿ ಜೀವಾತ್ಮ ಬಿಡ್ರಪ್ಪ

ಬಿಡದಿಲ್ಲಪ್ಪ ಸೋಮರಾವು

ನಾವು ಬಿಡದಿಲ್ಲ ನಿನ್ನ ಸಲುವಾಗಿ ಬಂದಿವಿ

ನಿನ್ನ ಕಾಕ ಕೊಟ್ಟು ಕಳಿಸ್ಯಾನ

ಕರಕರ ಕುತ್ತಿಗಿ ಕೊಯ್ದರ

ಪಟ್ನ ದಾರಿ ಹಿಡಿದ್ರುಲ್ಲ

ಸಿದ್ದೋಜಿರಾವು ಅಣ್ಣನ ಮೇಲಿನ ದ್ವೇಷದಿಂದ ಅಣ್ಣನ ಕುಟುಂಬವನ್ನೇ ನಾಶ ಮಾಡಲು ಮುಂದಾಗುತ್ತಾನೆ. ಸೋಮರಾವು ಕಳ್ಳರ ಕೈಗೆ ಸಿಕ್ಕು ಅವನು 'ಒಮ್ಮಾನ ಕೂಲಿ ಹಾಕಿದರೆ, ನಾನು ಇಮ್ಮಾನ ಕೂಲಿ ಹಾಕ್ತಿನಿ' ಎಂದು ಹೇಳುವುದರ ಮೂಲಕ ಕಳ್ಳರಿಗೆ ಆಶೆಯನ್ನು ಹುಟ್ಟಿಸುತ್ತಾನೆ. ಕಳ್ಳರಿಗೆ ಹಣ ಮುಖ್ಯ. ಹೀಗಾಗಿ ಸಿದ್ದೋಜಿರಾವು ಕೊಟ್ಟ ಹಣಕ್ಕಿಂತ ಎರಡು ಪಾಲು ಹೆಚ್ಚು ಹಣವನ್ನು ಕೊಡುತ್ತೇನೆಂದು ಹೇಳುತ್ತಾನೆ. 'ನನ್ನ ಜೀವಾತ್ಮ ಬಿಟ್ಟು ಕೊಡಿರಿ' ಎಂದು ಹೇಳುವ ಮಾತಿನಲ್ಲಿ ಕರುಣಾಜನಕ ಇದೆ. ತನ್ನನ್ನು ಕಡಿಯಬೇಡಿರಿ ಎಂದು ಸೋಮರಾವು ಪ್ರಾಣಭಿಕ್ಷೆಯನ್ನು ಕೇಳಿಕೊಳ್ಳುತ್ತಾನೆ. ಕಳ್ಳರಿಗೆ ಎಷ್ಟೇ ಆಮಿಷ ಒಡ್ಡಿದರೂ ಅವರ ಛಲವನ್ನು ಬಿಡುವುದಿಲ್ಲ. 'ನಿನ್ನ ಸಲುವಾಗಿ ಬಂದೀವಿ ಹೊರತು ಹಣಕ್ಕಾಗಿ ಅಲ್ಲ' ಎಂಬುದನ್ನು ಹೇಳುತ್ತಾರೆ. ಸೋಮರಾವು ಎಷ್ಟೇ ಬೇಡಿಕೊಂಡರು ಕುತ್ತಿಗಿ ಕೊಯ್ದು ಪಟ್ಟಣಕ್ಕೆ ಸೇರುವ ಕಳ್ಳರಲ್ಲಿ ದಯವೇ ಕಾಣುವುದಿಲ್ಲ. ಸೋಮರಾವು ತಮ್ಮಂದಿರು ಹುಟ್ಟಿದಂದಿನಿಂದಲೂ ಅನೇಕ ಕಷ್ಟಗಳನ್ನು ಸಹಿಸಿಕೊಳ್ಳುತ್ತಾರೆ ಹಾಗೂ ಸೋಮರಾವು ಜೀವನ ಕೊನೆಗೆ ಕೊಲೆಯ ಮೂಲಕ ಕೊನೆಗೊಳ್ಳುತ್ತದೆ.

ಸೋಮರಾವು ಹೆಂಡತಿ ಅಂತುಬಾಯಿ ತನ್ನ ಗಂಡನನ್ನು ಕೊಂದ ಸೇಡನ್ನು ತೀರಿಸಿಕೊಳ್ಳಲು ಉಪಾಯ ಹೂಡುತ್ತಾಳೆ. ಅಂತುಬಾಯಿಯು ದಸರ ಹಬ್ಬಕ್ಕೆ ಬನ್ನಿ ಮುಡಿಯಲು ಸಿದ್ದೋಜಿರಾವುಗೆ ಆಹ್ವಾನಿಸುತ್ತಾಳೆ. ಆಗ-

ಮುತ್ತ್ಯಾ ಈ ಬನ್ನಿ ಮಾಕಾಳಿ ಗಿಡ ಆದ

ಪೂಜ ಮಾಡಬೇಕು

ಬನ್ನಿ ಯಾರು ಮುಡಬೇಕು

ನಾ ಮುಡಿತಿನಿ ಅಂದ ಸಿದ್ದೋಜಿರಾವು

ಅಂತುಬಾಯಿ ನಾನು ಮುಡ್ತಿನಿ ಅಂತಳ

ಅಂದು ಕಾಲು ಕೆದರಿ ಕದನ ತೆಗೆದಳಲ್ಲ

ಮಾವ ಸಿದ್ದೋಜಿರಾಜಗ ಬುದ್ದಿ ಇಲ್ಲ

ಸಣ್ಣ ಕೂಸಿಗಿ ಕಳ್ಳರ ಹಚ್ಚಿ ಜೀವ ಹೊಡಿದಿ ಬಿಟ್ಟಿ

ನನ್ನ ಗಂಡನ ಜೀವ ನೋಡ

ಈಗ ನಿನ್ನ ಜೀವನ ಹೊಡ್ತಿನಿ

ಹೇಳಿ ಕೇಳಿ ಜೀವ ಹೊಡ್ತಿನಿ

ಆವಾಗ ಕೂದಲು ಕೈಯಾಗ ಹಿಡಿದಳ

ಮಗ ತುಳ್ಳೆರಾವು ನೋಡು

ಮಾವನ ಎದಿಯ ಮ್ಯಾಲೆ ಕೂಡಿಸ್ಯಾಳ

ನಿಮ್ಮಪ್ಪನ ಜೀವ ಹೊಡ್ದನ

ಅವನ ಜೀವ ನೀ ಹೊಡಿಬೇಕು

ಕೈಯಾಗ ಡಾಬ ಸುರಾಯಿ ಕೊಟ್ಟಳ

ಮುತ್ಯಾನ ಜೀವನ

ಗೋವಿಂದ ಗೋವಿಂದ ಅಂತ ಕುತ್ತಿಗಿ ಕೊಯ್ದನ

ಇಲ್ಲಿ ಸೇಡಿನ ಮನೋಭಾವ ವ್ಯಕ್ತವಾಗಿದೆ. ತನ್ನ ಗಂಡನನ್ನು ಕೊಂದ ಸೇಡನ್ನು ಅಂತುಬಾಯಿ ತೀರಿಸಿಕೊಳ್ಳುತ್ತಾಳೆ. ಬನ್ನಿ ಮುಡಲು ಸಿದ್ದೋಜಿರಾವನನ್ನು ಆಹ್ವಾನಿಸಿ ಜಗಳ ತೆಗೆಯುತ್ತಾಳೆ. ಮಾವನ ಕೂದಲನ್ನು ಹಿಡಿದು ಕೆಳಗೆ ಹಾಕಿ ಮಗ ತುಳೆರಾವುನಿಂದ ಸಾಯಿಸುತ್ತಾಳೆ. ಮೊಮ್ಮಗನ ಕೈಯಲ್ಲಿ ಜೀವ ಕೊಡುತ್ತಾನೆ. ಸೊಸೆ ಅಂತುಬಾಯಿಯ ಕೈಯಲ್ಲಿ ಸಿದ್ದೋಜಿರಾಜನ ವಂಶ ನಿರ್ನಾಮವಾಗುತ್ತದೆ. ಗಂಡನ ರುಂಡನನ್ನು ಕೊಯ್ದ ಹಾಗೆ, ಸಿದ್ದೋಜಿರಾಜನ ಕುತ್ತಿಗಿಯನ್ನು ತುಳೇರಾವುನಿಂದ ಕೊಯ್ಯಿಸುತ್ತಾಳೆ. ಚಿಕ್ಕ ಕೂಸು ಮಾಡುವ ಸಾಹಸ ಜನಪದ ಆಶಯಗಳು ಮುಖ್ಯವಾಗಿದೆ. ಕತೆಯ ಕೊನೆಯುತನಕ ಮುಯ್ಯಿಗಿ ಮುಯ್ಯಿ ಎಂಬ ಸೇಡಿನ ಮನೋಭಾವನೆ ಕಂಡುಬರುತ್ತದೆ. ಒಟ್ಟಿನಲ್ಲಿ ಅಣ್ಣ ತಮ್ಮಂದಿರ ದ್ವೇಷದಲ್ಲಿ ಕುಟುಂಬಗಳು ಹೇಗೆ ನಾಶವಾಗುತ್ತವೆಂಬ ಆಶಯವು ಕತೆಯಲ್ಲಿ ವ್ಯಕ್ತವಾಗಿದೆ.

ಇಲ್ಲಿಯ ಬುರ್ರಕತೆಗಳು ಸಮಾಜಕ್ಕೆ ಅದರದೇ ಆದ ಸಂದೇಶ ನೀಡಿವೆ. ಕಾಂಭೋಜರಾಜಕತೆ ಹಾಗೂ ಆರ್ಯವರಕತೆಯಲ್ಲಿ ಒಂದು ಸಮುದಾಯದ ಸಂಸ್ಕೃತಿ, ಸಂಪ್ರದಾಯ ಅಭಿವ್ಯಕ್ತಗೊಂಡಿದೆ. ಕಾಂಭೋಜರಾಜನ ಪಾತ್ರದ ಮೂಲಕ ಕೃಷಿಯ ಪ್ರಾಮುಖ್ಯ ವ್ಯಕ್ತವಾಗಿದೆ. ರಾಜ ಹಾಗೂ ಏಳು ಜನ ರಾಣಿಯರು ಕೃಷಿಯಲ್ಲಿ ತಮ್ಮನ್ನು ತೊಡಗಿಸಿಕೊಳ್ಳುವ ಮೂಲಕ ಕೃಷಿಯ ಮಹತ್ವವನ್ನು ತಿಳಿಸಲಾಗಿದೆ. ಕೃಷಿಯ ಚಟುವಟಿಕೆಗಳ ಮೂಲಕ ಪ್ರತಿಫಲವನ್ನು ಪಡೆಯಬೇಕೆಂಬುದನ್ನು ಕತೆಗಾರರು ನಿರೂಪಿಸಿದ್ದಾರೆ. ಹೀಗಾಗಿ ಇಲ್ಲಿ ರಾಜರಾಣಿಯರು ಸ್ವತಃ ಕೃಷಿಯನ್ನು ಮಾಡುವುದರಿಂದ ಸಾಮಾನ್ಯ ಜನರಿಗೆ ಅದು ಸ್ಫೂರ್ತಿಯಾಗುತ್ತದೆ. ಮಾನವನಿಗೆ ಬೇಕಾಗಿರುವುದು ಮುಖ್ಯವಾಗಿ ಆಹಾರ. ಹೀಗಾಗಿ ಪ್ರತಿಯೊಬ್ಬರು ಕೃಷಿ ಕೆಲಸಗಳಲ್ಲಿ ತೊಡಗಿಕೊಳ್ಳಬೇಕೆಂಬ ಸಂದೇಶ ಈ ಕತೆಯಲ್ಲಿದೆ. ಪ್ರಕೃತಿ ಹಾಗೂ ಮಾನವ ಸಂಬಂಧ, ಪಶುಪಕ್ಷಿಗಳು ಹಾಗೂ ಮಾನವ ಸಂಬಂಧದ ಬಗೆಯನ್ನು ಈ ಕತೆಯಲ್ಲಿ ವಿವರಿಸಲಾಗಿದೆ.

ಅಲ್ಲದೆ ಈ ಕತೆಗಳಲ್ಲಿ ಮಾನವೀಯ ಸಂಬಂಧಗಳು ಹಾಗೂ ಸಂಘರ್ಷಗಳು ಸಹ ಇವೆ. ಮಾನವನಲ್ಲಿ ಅಹಂಭಾವ ಉಂಟಾದಾಗ ಮಾನವೀಯ ಸಂಘರ್ಷಗಳಿಗೆ ಕಾರಣವಾಗುವುದನ್ನು ಕತೆ ತಿಳಿಸುತ್ತದೆ. ಕಾಂಭೋಜರಾಜ ತನ್ನ ಅಹಂಭಾವದಿಂದ ಮತ ಸಂಘರ್ಷ ಉಂಟಾಗುತ್ತದೆ. ಶೈವ-ವೈಷ್ಣವ ಮತಗಳ ಸಂಘರ್ಷವಾಗುವ ಬಗೆಯನ್ನು ಕತೆಗಾರರು ವ್ಯಕ್ತಪಡಿಸಿ, ಅದರಿಂದಾಗುವ ಅನಾಹುತವನ್ನು ತಿಳಿಸುತ್ತಾರೆ. ಈ ಎಲ್ಲಾ ಕತೆಗಳಲ್ಲಿ ಮಾನವೀಯ ಮೌಲ್ಯಗಳನ್ನು ಕಾಣುತ್ತೇವೆ. ಶರಬಂಧರಾಜ ಹಾಗೂ ಸಿರಿದೇವಿ ಅನೇಕ ಕಷ್ಟಗಳನ್ನು ಅನುಭವಿಸಿದರೂ ಮಾನವೀಯತೆ ಮೆರೆಯುತ್ತಾರೆ. ಆದರೆ ಆರು ಜನ ಹಿರಿಯ ರಾಣಿಯರು ಹಾಗೂ ಅವರ ಆರು ಜನ ಮಕ್ಕಳಲ್ಲಿ ಇರುವ ದ್ವೇಷ, ಅಸೂಯೆ, ಅಧಿಕಾರದ ಆಸೆ ಮುಂತಾದವು ಕಾಣುತ್ತದೆ. ಇಲ್ಲಿ ಅಸೂಯೆ, ದ್ವೇಷಕ್ಕಿಂತ ಮಾನವೀಯ ಗುಣಗಳೇ ಗೆಲ್ಲುತ್ತವೆ.

ಸ್ತ್ರೀಯ ಆದರ್ಶ ಗುಣಗಳು ಬಾಲಗಿರಿರಾಜಕತೆಯಲ್ಲಿ ಬಂದಿವೆ. ಬಾಲಗಿರಿರಾಜಕುಮಾರನಲ್ಲಿ ಧೈರ್ಯ, ಸಾಹಸ, ಕ್ಷಮಾಗುಣ ವ್ಯಕ್ತವಾಗಿದೆ. ಪದ್ಮರಾಣಿಯು ತಂದೆಯ ವಿರುದ್ಧ ನಿಂತು, ತಾನು ಮೆಚ್ಚಿದ ಗಂಡನು ಸತ್ತರೂ ಸಹ ಅವನನ್ನೇ ಮದುವೆ ಮಾಡಿಕೊಂಡು ಮುಕ್ತಿ ಪಡೆಯುತ್ತೇನೆಂಬಲ್ಲಿ ಇವಳ ನಿಷ್ಠೆಯಿದೆ. ಹಾಗೆಯೇ ಸ್ತ್ರೀಯ ಪ್ರತಿಭಟನೆ ಮನೋಭಾವ ಮೂಡಿದೆ. ಇಲ್ಲಿ ಸ್ತ್ರೀಧರ್ಮ, ಪತಿಧರ್ಮ ಮುಂತಾದ ಅಂಶಗಳು ಅಭಿವ್ಯಕ್ತಗೊಂಡಿವೆ. ಅಲ್ಲದೆ ಸ್ತ್ರೀಯ ದ್ವಿಮುಖವು ಭೂಲಕ್ಷ್ಮಿಕತೆಯಲ್ಲಿ ಕಾಣುತ್ತದೆ. ಸ್ತ್ರೀ ಪ್ರಧಾನವಾದ ಈ ಕತೆಯಲ್ಲಿ ಮತ್ಸರ, ದ್ವೇಷ, ಅಸೂಯೆ ಭಾವನೆಯ ಧೋರಣೆಗಳು ಇವೆ. ಇಲ್ಲಿ ಮಾಣಿಕ್ಯಲದೇವಿ ಪಾತ್ರದಲ್ಲಿ ಸವತಿ ಮತ್ಸರ, ಸವತಿ ಮಕ್ಕಳ ಮೇಲೆ ಸೇಡು ತೀರಿಸಿಕೊಳ್ಳುವ ಛಲವಿದೆ. ಹಾಗೆ ಎರಡನೇ ಹೆಂಡತಿ ಮಾಡಿಕೊಂಡಾಗ ಗಂಡನಿಗೆ ಆಗುವ ಮಾನಸಿಕ ತೊಳಲಾಟಗಳು ನವಭೋಜರಾಜನ ಪಾತ್ರದಲ್ಲಿ ಬಂದಿದೆ. ಈ ಕಥನದಲ್ಲಿ ಸತ್ತ ಭೂಲಕ್ಷ್ಮಿದೇವಿ ಆಕಳಾಗಿ ಬಂದು ಮಕ್ಕಳಿಗೆ ಹಾಲು ಉಣಿಸುವ ರೀತಿಯು ಆಕಳ ಹಾಗೂ ಮಾನವನ ಸಂಬಂಧ ಸೂಚಿಸುತ್ತದೆ. ಆಕಳು ಮಾನವನಿಗೆ ಉಪಯೋಗಿ ಪ್ರಾಣಿ. ಅದರಿಂದ ಮಾನವನಿಗೆ ಉಪಕಾರವಾಗುವ ಬಗೆಯನ್ನು, ಅದರ ಮಹತ್ವವನ್ನು ಕತೆಗಾರರು ನಿರೂಪಿಸಿದ್ದಾರೆ. ಅಲ್ಲದೆ ಶಿವಕುಮಾರಕತೆಯಲ್ಲಿ ಶಿವಕುಮಾರನು ತನ್ನ ಹೆಂಡತಿಯನ್ನು ಪಡೆಯಲು ದೇವಲೋಕಕ್ಕೆ ಆಕಳ ಬಾಲವನ್ನು ಹಿಡಿದುಕೊಂಡು ಹೋಗಿ ಹೆಂಡತಿಯನ್ನು ಪಡೆಯುತ್ತಾನೆ. ಆಕಳು ದೇವತೆಗೆ ಸಮಾನ. ದೇವರನ್ನು ಆಕಳರೂಪದಲ್ಲಿ ಕಾಣಬೇಕೆಂಬ ಸಂದೇಶವೂ ಇದೆ. ಈ ಕತೆಯು ಅತಿಮಾನುಷವಾದುದು. ಧರ್ಮಸೇನ ಮಹಾರಾಜನು ನೀರಿನ ಅವಶ್ಯಕತೆಗಾಗಿ ಬಾವಿ ತೋಡಿಸಿ ಅನೇಕ ಕಷ್ಟಗಳನ್ನು ಅನುಭವಿಸುತ್ತಾನೆ. ಇಲ್ಲಿ ನೀರಿನ ಮಹತ್ವವು ವ್ಯಕ್ತಗೊಂಡಿದೆ ವಿಷ್ಣು, ಈಶ್ವರ, ಬ್ರಹ್ಮ, ಪಾರ್ವತಿ ಬಂದು ನೀರು ಕುಡಿದಾಗ ಮಾತ್ರ ಧರ್ಮಸೇನರಾಜನಿಗೆ ಮುಕ್ತಿ ಸಿಗುತ್ತದೆ. ವಿಶ್ವಾಮಿತ್ರ ಅಥವಾ ಶನಿಮಾತ್ಮ ಪಾತ್ರಗಳ ಮೂಲಕ ಧರ್ಮಸೇನರಾಜನಿಗೆ ಕಷ್ಟಕೊಡುವುದು ದುಷ್ಟತನವನ್ನು ವ್ಯಕ್ತಪಡಿಸುತ್ತದೆ. ಇಲ್ಲಿ ಸಾಮಾನ್ಯ ಜನರ ಬದುಕಿನ ನೋವಿದೆ. ಆರ್ಯವರಕತೆಯ ಮೂರು ತಲೆಮಾರಿನ ಕತೆಯು ವಾಸ್ತವ ಬದುಕನ್ನು ನೆನಪಿಸುತ್ತದೆ.

ಹೀಗೆ ಇಲ್ಲಿಯ ಬುರ್ರಕತೆಗಳಲ್ಲಿ ಬರುವ ಪಾತ್ರಗಳು ಕಾಲ್ಪನಿಕವಾಗಿ ಕಂಡುಬಂದರೂ ಬುರ್ರಕತೆಗಾರರು ವಾಸ್ತವ ಸಮಾಜವನ್ನು ದೃಷ್ಟಿಯಲ್ಲಿಟ್ಟುಕೊಂಡು ಅವರಿಗೆ ನೇರವಾಗಿ ತಲುಪುವಂತೆ ನಿರೂಪಿಸಿದ್ದಾರೆ. ಇವು ಸರ್ವರ ಮನಸೆಳೆಯುವ ಕಥನಗಳಾಗಿವೆ. ಇವುಗಳಲ್ಲಿ ಜನಪದ ಸಂಗೀತದ ಸ್ವಾರಸ್ಯ ಇದೆ. ಅಲ್ಲದೆ ಪ್ರೇಕ್ಷಕರನ್ನು ತನ್ನ ತೆಕ್ಕೆಗೆ ಒಳಪಡಿಸಿಕೊಳ್ಳುವ ಆಕರ್ಷಣೆ ಅಪೂರ್ವವಾಗಿದೆ. ಈ ಎಲ್ಲ ಕಾರಣಗಳಿಗಾಗಿ ಇಂದಿಗೂ ಸಹ ಬುರ್ರಕತೆಗಳನ್ನು ಹೇಳುವ ಕಲೆಯು ಜನಪ್ರಿಯವಾಗಿ ಜೀವಂತವಾಗಿ ಉಳಿದುಕೊಂಡಿದೆ.

# ಅಧ್ಯಾಯ ೪

# ಬುರ್ರಕತೆಗಳ ತೌಲನಿಕ ಅಧ್ಯಯನ

೪.೧. ಒಂದೇ ಕತೆ ಬೇರೆ ಬೇರೆ ವಕ್ತೃಗಳ ಕನ್ನಡ-ಕನ್ನಡ ಆವೃತ್ತಿಗಳು

೪.೨. ಒಬ್ಬರೇ ವಕ್ತೃವಿನ ಒಂದೇ ಕತೆಯ ಕನ್ನಡ-ತೆಲುಗು ಆವೃತ್ತಿಗಳು

೪.೩. ಒಂದೇ ಕತೆಯ ಬೇರೆ ಬೇರೆ ನಿರೂಪಕರ ಕನ್ನಡ-ತೆಲುಗು ಭಾಷೆಗಳ ಆವೃತ್ತಿಗಳು

# ಅಧ್ಯಾಯ ೪

# ಬುರ್ರಕತೆಗಳ ತೌಲನಿಕ ಅಧ್ಯಯನ

## ೪.೧. ಒಂದೇ ಕತೆಯ ಬೇರೆ ಬೇರೆ ವಕ್ತೃಗಳ ಕನ್ನಡ-ಕನ್ನಡ ಆವೃತ್ತಿಗಳು

ಮೌಖಿಕ ಕತೆಗಳಾದ ಕನ್ನಡ-ತೆಲುಗು ಬುರ್ರಕತೆಗಳನ್ನು ತೌಲನಿಕ ಅಧ್ಯಯನಕ್ಕೆ ತೆಗೆದುಕೊಂಡಿದೆ. ಈ ಕತೆಗಳನ್ನು ತೌಲನಿಕ ಅಧ್ಯಯನ ಮಾಡುವ ಮುಖ್ಯ ಉದ್ದೇಶ ಎಂದರೆ ಒಬ್ಬರೇ ವಕ್ತೃ ಕನ್ನಡ-ತೆಲುಗು ಎರಡು ಭಾಷೆಗಳಲ್ಲಿ ಕತೆಯನ್ನು ಹಾಡುತ್ತಾರೆ. ಹೀಗಾಗಿ ಒಂದೇ ಕಥಾವಸ್ತುವಿನ ಎರಡು ವಿಭಿನ್ನ ಭಾಷೆಗಳಲ್ಲಿ ಕತೆ ಹೇಗೆ ಅಭಿವ್ಯಕ್ತಗೊಂಡಿದೆ ಎಂಬ ಕುತೂಹಲದಿಂದ ಅಧ್ಯಯನ ಕೈಗೊಂಡಿದೆ. ಅಲ್ಲದೇ ಒಂದೇ ಕತೆಯು ವಿಭಿನ್ನ ಪ್ರದೇಶದಲ್ಲಿ ವಕ್ತೃಗಳು ಅಭಿವ್ಯಕ್ತಪಡಿಸಿದ ಬಗೆಯನ್ನು ನೋಡುವುದಾಗಿದೆ. ಇನ್ನು ವಿಭಿನ್ನ ಪ್ರದೇಶದ ಎರಡು ವಿಭಿನ್ನ ಭಾಷೆಯ ಒಂದೇ ಕಥಾವಸ್ತುವಿನಲ್ಲಿ ಇರುವ ಸಮಾನ ಹಾಗೂ ಭಿನ್ನ ಅಂಶಗಳು ಹೇಗೆ ಬಂದಿವೆ ಎಂಬುದನ್ನು ನೋಡಲಾಗಿದೆ.

ಕಾಂಭೋಜರಾಜಕತೆಯನ್ನು ಇಬ್ಬರು ವ್ಯಕ್ತಿಗಳು ಬೇರೆ ಬೇರೆ ಪ್ರದೇಶಗಳಲ್ಲಿ ಹಾಡಿದ್ದನ್ನು ತೌಲನಿಕವಾಗಿ ಇಲ್ಲಿ ವಿಶ್ಲೇಷಿಸಲಾಗಿದೆ. ಶಂಕ್ರಮ್ಮ ಇವರು ಹಾಡಿದ 'ಕಾಂಭೋಜರಾಜಕತೆ' ಹಾಗೂ ಈರಮ್ಮ ಇವರು ಹಾಡಿದ 'ಕೃಷ್ಣಗೊಲ್ಲರ ಕಾವ್ಯ'ವನ್ನು ತೌಲನಿಕವಾಗಿ ನೋಡಲಾಗಿದೆ. ಇಲ್ಲಿ ಹೆಸರು ಬೇರೆ ಬೇರೆಯಾಗಿ ಕಂಡುಬಂದರೂ, ಎರಡೂ ಕಥನಗಳ ಕಥಾವಸ್ತು ಒಂದೇ ಆಗಿದೆ. ಈ ಎರಡು ಕಥನಗಳು ಕಥನಗಾರರ ಪ್ರಾದೇಶಿಕ ಪರಿಸರದ ಹಿನ್ನೆಲೆಯಲ್ಲಿ ಮೂಡಿಬಂದಿದೆ. ಇದೇ ಕಥನವನ್ನು ಚೌಡಿಕೆಯರು ಸಹ 'ಕಾಂಭೋಜರಾಜ ಕತೆ' ಎಂಬ ಹೆಸರಿನಲ್ಲಿಯೇ ಹಾಡುತ್ತಾರೆ.

**ಭೌಗೋಳಿಕತೆ**

'ಕಾಂಭೋಜರಾಜಕತೆ' ಹಾಗೂ 'ಕೃಷ್ಣಗೊಲ್ಲರ ಕಾವ್ಯ' ಈ ಎರಡು ಕನ್ನಡದ ಆವೃತ್ತಿಗಳನ್ನು ಪರಿಶೀಲಿಸಿದಾಗ ಕಥನಗಾರರ ಅನುಭವ ಹಾಗೂ ಅವರ ಪ್ರಾದೇಶಿಕತೆಯ ಹಿನ್ನೆಲೆಯಲ್ಲಿ ಇವು ಮೂಡಿರುವುದು ಕಂಡುಬರುತ್ತದೆ.

ಕಥನಗಾರರು ತಾವು ನೆಲೆಸಿರುವ ಪ್ರದೇಶದ ಸುತ್ತಮುತ್ತಲಿನ ಊರುಗಳನ್ನು ತಮ್ಮ ಕಥನಕ್ಕೆ ಅಳವಡಿಸಿಕೊಂಡಿದ್ದಾರೆ. ಅವರವರ ತಿಳುವಳಿಕೆಯ ವ್ಯಾಪ್ತಿಯಲ್ಲಿ ಪಟ್ಟಣಗಳ ಹೆಸರುಗಳನ್ನು, ಪಾತ್ರಗಳ ಹೆಸರುಗಳನ್ನು ಹೇಳುತ್ತಾ ಕಥನವನ್ನು ಪ್ರಸ್ತುತಗೊಳಿಸಿದ್ದಾರೆ. ಇಲ್ಲಿ ಕಥನಗಾರರು ಅವರದೇ ಆದ ಕಥಾತಂತ್ರವನ್ನು ಬಳಸಿ ಅಭಿವ್ಯಕ್ತಿ ಮಾಡಿದ್ದನ್ನು ಕಾಣಬಹುದು. ಈ ಇಬ್ಬರು ಹಾಡುಗಾರರ ಕಥನಗಳನ್ನು ಪರಿಶೀಲಿಸಿದಾಗ ಅದರ ಕಥನದ ವಸ್ತು ಒಂದೇ ಆಗಿದ್ದರೂ ಅವುಗಳಲ್ಲಿ ಭಿನ್ನವಾದ ಅಂಶಗಳಲ್ಲಿ ಅನನ್ಯತೆಯನ್ನು ಕೂಡ ಕಾಣಬಹುದು.

ಈರಮ್ಮ ಅವರು ತಾನು ಹಾಡಿದ ಕತೆಗೆ 'ಕೃಷ್ಣಗೊಲ್ಲರ ಕತೆ' ಎಂದು ಕರೆದಿದ್ದರೂ ಇಲ್ಲಿ ಕಥನದ ಪ್ರಮುಖ ಪಾತ್ರ' ಕಾಂಭೋಜರಾಜ'ನದ್ದೇ ಆಗಿದೆ. ಕಾಂಭೋಜರಾಜನು ತನ್ನ ಮದುವೆಗಾಗಿ ಒಂದೇ ಮನೆಯಲ್ಲಿ ಹುಟ್ಟಿದಂತಹ ಏಳು ಜನ ಹೆಣ್ಣುಮಕ್ಕಳನ್ನು ಹುಡುಕಲು ರೈತರು, ಶಾನುಭೋಗರು ಹಾಗೂ ತಳವಾರ ಇವರೆಲ್ಲರನ್ನು ತನ್ನ ಜೊತೆಯಲ್ಲಿ ಕರೆದುಕೊಂಡು ಹೋಗುತ್ತಾನೆ. ಕಾಂಭೋಜರಾಜಕುಮಾರನು ತನ್ನ ತಾಯಿ ನೀಲವೇಣಿಯನ್ನು ಕುರಿತು ತಮ್ಮ ಕುಲದವರು ಕರ್ನಾಟಕದಲ್ಲಿ ಎಲ್ಲೆಲ್ಲಿ ಇದ್ದಾರೆಂದು ಪ್ರಶ್ನಿಸುತ್ತಾನೆ. ಆಗ ತಾಯಿ 'ಊರ ಗೊಲ್ಲರು ಊರು ತುಂಬ ಇದಾರ, ಅಡವಿ ಗೊಲ್ಲರು ಅಡವಿ ತುಂಬ ಐದಾರ, ಬಲಗೈ ಕೆಳಗೈ ಬರೇ ಕೃಷ್ಣಗೊಲ್ಲರು ಇದ್ದಾರೆ. ಆದರೆ ಹಾಲು ಗೋಲ್ರು, ಕೃಷ್ಣಗೋಲ್ರು ಎತ್ತಾಗೈದಾರಂದ್ರೆ-

"ನೋಡಪ್ಪ ಚಳ್ಳಕೆರೆಗೆ ಕಡೆಗೆ
ರಾಯದುರ್ಗದ ಕಡೆಗೆ
ಅವ್ರು ಕುಲ ಇರೋದು ಕರ್ನಾಟಕದಾಗ ನೋಡಪ್ಪ
ಆಂದ್ರ ಕಡೆಗಿಲ್ಲ
ನೈಜಾಮ ಕಡೆಗಿಲ್ಲ ಅಂತ ಕುಲ
ಒಹೋ ಹಂಗಾದ್ರೆ ಚಳ್ಳಕೆರೆ
ಆಗಿನ್ನವರ ರಾಯದುರ್ಗ
ಆಗ ಕೂಡ್ಲಿಗಿ ಕಡೀಗೆ ಇರೋದು ನಮ್ಮ ಕುಲ
ಅಂತ್ಯವಿಲ್ಲದ ಗೊಲ್ಲರು"(೧೯೯೭: ೨೫೭)

ಹೀಗೆ ಹಾಲುಮತ ಕುಲ ಗೊಲ್ಲರು ಇದ್ದಾರೆಂದು ತನ್ನ ಮಗನಿಗೆ ತಾಯಿ ಕೃಷ್ಣವೇಣಿ ಹೇಳುತ್ತಾಳೆ. ಕಥನಗಾರ್ತಿಯು ತನ್ನ ಸುತ್ತಲಿನಲ್ಲಿ ಇರುವ ರಾಯದುರ್ಗ, ಕೂಡ್ಲಿಗಿ, ಚಳ್ಳಕೆರೆ ಪಟ್ಟಣಗಳನ್ನು ತನ್ನ ಕಥನದಲ್ಲಿ ಅಭಿವ್ಯಕ್ತಿಸಿ, ಕಥನಕ್ಕೆ ವಾಸ್ತವ ಸ್ಪರ್ಶವನ್ನು ನೀಡಿದ್ದಾರೆ. ಆದರೆ 'ಕಾಂಭೋಜರಾಜಕತೆ'ಯಲ್ಲಿ ಈ ಸನ್ನಿವೇಶವಾಗಲಿ ವಾಸ್ತವ ಪಟ್ಟಣಗಳಾಗಲಿ ಹಾಗೂ ಮದುವೆ ಸಂದರ್ಭವನ್ನು ನಿರೂಪಣೆ ಮಾಡದೆ,

ತನ್ನ ಕಥನದಲ್ಲಿ ನೇರವಾಗಿ ಏಳು ಜನ ಹೆಂಡತಿಯರು ಕಾಂಭೋಜರಾಜನಿಗೆ ಎಂದು ಅಭಿವ್ಯಕ್ತಿ ಮಾಡಿದ್ದನ್ನು ಕಂಡರೆ ಇಲ್ಲಿ ಅವರದೇ ಆದ ಕಥಾತಂತ್ರವನ್ನು ಬಳಸಿಕೊಂಡು ನಿರೂಪಣೆ ಮಾಡಿದ್ದಾರೆ. ಹಾಗೆ ಶಂಕ್ರಮ್ಮ ಅವರು 'ಪಾಂದೇವಿ' ಕಾಂಭೋಜರಾಜನ ತಾಯಿಯೆಂದು ನಿರೂಪಿಸಿದ್ದಾರೆ. ಈರಮ್ಮ ಅವರು 'ಕೃಷ್ಣನೀಲವೇಣಿ' ಎಂದು ನಿರೂಪಿಸಿದ್ದಾರೆ.

ಕಾಂಭೋಜರಾಜನ ಬೆನ್ನುಹುಣ್ಣಿನ ಔಷಧಿಗಾಗಿ ರಾಜನ ಹಿರಿಯ ಆರು ಜನ ಮಕ್ಕಳು ದಾರಿ ಹಿಡಿದುಕೊಂಡು ಹೋಗುತ್ತಾರೆ. 'ಆರು ಗಾವುದ ಬಂದರ ದಾರಿ ಕಾಯುವ ಮಲ್ಲಣ್ಣ ಮುದುಕ ಗುಡಿಸಲು ಕಟ್ಟಿಕೊಂಡು ದಾರಿಗಳು ಕಾಯುಕೊಂಡು ಕುಂತನ'. ಆರು ಮಂದಿ ಅಣ್ಣ ತಮ್ಮಂದಿರು ಬಂದು ಮಲ್ಲಣ್ಣ ಮುತ್ಯಾಗೆ ದಾರಿಗಳ ಬಗ್ಗೆ ಕೇಳುತ್ತಾರೆ.

ಮುತ್ತ್ಯಾ ಈ ದಾರಿ ಯಾ ಊರಿಗೆ ಹೋಗ್ತದ  
ಘಸ್ಸು ಮೊಮ್ಮಕ್ಕಳೆ ಇದು ಎದಿನಗಂಧೀ ಪಟ್ನಕ ಹೋಗ್ತದ  
ಇದು ಚಿತ್ರಾಂಗಿ ಪಟ್ನಕ ಹೋಗ್ತದ  
ಈ ದಾರಿ ಘೂಲಾವತಿ ರೂಪಾವತಿ ಪಟ್ನಕ ಹೋಗ್ತದ  
ಈ ದಾರಿ ಸುಂದರಮ್ಮಳ ಪಟ್ನಕ ಹೋಗ್ತದ  
ಎಲ್ಲ ದಾರಿ ಹೇಳಿಕೊಟ್ಟ ಮುತ್ತ್ಯಾ  
ಇವೀಸು ಪಟ್ನದೊಳಗ ಯಾ ಪಟ್ನದಾಗ ಹೆಣ್ಣು ಪಾಡಾದ(ಶಂಕ್ರಮ್ಮ ಕಾ.ರಾ.ಕ.)

ಆರು ಜನ ರಾಜಕುಮಾರರು ತಂದೆಯ ಬೆನ್ನುಹುಣ್ಣಿನ ಮದ್ದಿಗಾಗಿ ಹೋಗುವ ದಾರಿಯಲ್ಲಿ ದಾರಿ ಕಾಯುವ ಮಲ್ಲಣ್ಣನಲ್ಲಿ ಮದ್ದು ಇರುವ ಪಟ್ಟಣವನ್ನು ತಿಳಿದುಕೊಳ್ಳುತ್ತಾರೆ. ಎಲ್ಲಾ ಪಟ್ಟಣಗಳ ದಾರಿ ತಿಳಿದುಕೊಂಡು ಸುಂದರ ಹೆಣ್ಣು ಇರುವ ಪಟ್ಟಣವನ್ನು ಕೇಳಿಕೊಳ್ಳುತ್ತಾರೆ. ಇಲ್ಲಿ ನಿರೂಪಣೆಯಲ್ಲಿ ಬಂದಿರುವ ಪಟ್ಟಣಗಳು ಶಂಕ್ರಮ್ಮ ಅವರ ಕಲ್ಪನೆಯ ಭೌಗೋಳಿಕತೆಯನ್ನು ಪ್ರಸ್ತುತಪಡಿಸುತ್ತದೆ. ಇಲ್ಲಿ ಮಲ್ಲಣ್ಣನ ಪಾತ್ರದ ಮೂಲಕ ಪಟ್ಟಣಗಳ ಹೆಸರುಗಳು ಅಭಿವ್ಯಕ್ತಿಗೊಂಡಿವೆ.

ಇದೇ ಸನ್ನಿವೇಶವು ಈರಮ್ಮ ಅವರ ಕಥನದಲ್ಲಿ ಅವರು ವಾಸಿಸುವ ಪ್ರದೇಶದ ಹಿನ್ನೆಲೆಯಲ್ಲಿ ಅವರದೇ ಆದ ಕಲ್ಪನೆಯ ಪಟ್ಟಣಗಳನ್ನು ತನ್ನ ಕಥನಕ್ಕೆ ಭೌಗೋಳಿಕ ವಲಪ್ಪಿಯನ್ನು ಪ್ರಸ್ತುತಪಡಿಸಿದ್ದಾರೆ. ಇಲ್ಲಿ ಗೇಟು ಕಾಯುವ ಸುಂಕನ ಪಾತ್ರದ ಮೂಲಕ ಪಟ್ಟಣಗಳ ಹೆಸರುಗಳನ್ನು ಅಭಿವ್ಯಕ್ತಿ ಮಾಡಿದ್ದಾರೆ. ಆರು ಜನ ಹಿರಿಯ ರಾಜಕುಮಾರರು ದಾರಿ ಕಾಯುವ ಸುಂಕನಿಗೆ ಮದ್ದನ್ನು ತರಲು ಹೋಗುವ ದಾರಿಯನ್ನು ಕೇಳುತ್ತಾರೆ. ಸುಂಕನು ನಿಮಗೆ 'ಬಂಡಿದಾರಿ ಬೇಕಾ, ಕಾಲುದಾರಿ ಬೇಕಾ' ಎಂದಾಗ ಕಾಲುದಾರಿ ಬೇಕೆಂದು ಹೇಳುತ್ತಾರೆ. ಕಾಲುದಾರಿ ಬಂಡಿದಾರಿಯ ವ್ಯತ್ಯಾಸವನ್ನು ಕೇಳುತ್ತಾರೆ. ಬಂಡಿದಾರಿ ಹಿಡಿದುಕೊಂಡು ಹೋದರೆ ಏನಾಗುತ್ತದೆಂದು ಆ ಪಟ್ಟಣಗಳ ಹೆಸರುಗಳನ್ನು ತಿಳಿಸುತ್ತಾನೆ.

"ಭೂಪತಿ ಪಟ್ನಲಿದ್ದ ಆಗ ದೇವಗಿರಿ
ದೇವಗಿರಿ ಪಟ್ನಲಿದ್ದ ಚಾವುಲರಾಜ
ಚಾವುಲರಾಜ ಪಟ್ನಲಿದ್ದ ಚಿತ್ರಗಿರಿ
ಚಿತ್ರಗಿರಿ ಪಟ್ನಲಿದ್ದ ಏಳು ಸಮುದ್ರ
ಹಿಂಗ ಬಂಡಿದಾರಿ ಸುತ್ತವರಿಕ್ಯಂಡು ಹೋಗಬೇಕು
ಹಿಂಗ ಕಾಲುದಾರಿ ನೆಟ್ಟಗ ಕಾಲಕೂಟ ಹೋದರ
ಇಲಾ ಮಂತ್ರ ಪಟ್ನ ಇಲಾ ಮಂತ್ರ ಪಟ್ನದ್ದಾಗ ಪಾತರಗಿತ್ತಿ"(೧೯೯೭: ೫೦೧)

ಎಂದು ಗೇಟು ಕಾಯುವ ಸುಂಕನು ಆರು ಜನ ರಾಜಕುಮಾರರಿಗೆ ತಿಳಿಸುತ್ತಾನೆ. ಇಲ್ಲಿ ಕಾಲುದಾರಿ ಹಿಡಿದು ಹೋದರೆ ಇಲಾಮಂತ್ರ ಪಟ್ಟಮದ ಪಾತರಗಿತ್ತಿ ಸಿಗುತ್ತಾಳೆಂದು, ಅವಳು ಸುರಸುಂದರಿ ಎಂದು ತಿಳಿದುಕೊಳ್ಳುತ್ತಾರೆ. ಇಲ್ಲಿ ಊರುಗಳ ಹೆಸರುಗಳ ಮೂಲಕ ಕೇಳುಗರಿಗೆ ಕತೆಯನ್ನು ಆಕರ್ಷಣೀಯವಾಗಿಸುವ ಸೃಜನಶೀಲ ಪ್ರವೃತ್ತಿ ಈರಮ್ಮ ಅವರ ನಿರೂಪಣೆಯಲ್ಲಿ ಕಾಣಬಹುದು.

**ಕಥನಗಳ ಪ್ರಾದೇಶಿಕತೆ**

ಬುರ್ರಕತೆಗಳನ್ನು ಮುಖ್ಯವಾಗಿ ಕೆಳವರ್ಗದ ಜನರನ್ನು ಹಾಗೂ ಹಿಂದುಳಿದ ಜನರನ್ನು ದೃಷ್ಟಿಯಲ್ಲಿಟ್ಟು ಕೊಂಡು ಅಭಿವ್ಯಕ್ತ ಮಾಡಲಾಗಿದೆ. ಶಂಕ್ರಮ್ಮ ಇವರು ಗುಲಬರ್ಗಾದ ಪ್ರಾದೇಶಿಕ ಪರಿಸರದಲ್ಲಿ 'ಕಾಂಭೋಜರಾಜ' ಕಥನವನ್ನು ಚಿತ್ರಿಸಿದ್ದಾರೆ. ಈರಮ್ಮ ಅವರು ಬಳ್ಳಾರಿಯ ಪ್ರಾದೇಶಿಕ ಪರಿಸರವನ್ನು ತನ್ನ 'ಕೃಷ್ಣಗೊಲ್ಲರ ಕಾವ್ಯ'ದ ಕಥನಕ್ಕೆ ಅಳವಡಿಸಿಕೊಂಡಿದ್ದಾರೆ. ಈರಮ್ಮಳು ತನ್ನ ಪ್ರದೇಶದಲ್ಲೇ ನಡೆದಿದ್ದ ಘಟನೆಯೋ ಎಂಬಂತೆ ನಿರೂಪಿಸಿದ್ದನ್ನು ಕಾಣಬಹುದು. ತನ್ನ ಸುತ್ತಮುತ್ತಲಿನ ಪಟ್ಟಣಗಳಾದ ರಾಯದುರ್ಗ, ಹಂಪಿ, ಚಳ್ಳಕೆರೆ, ಕೂಡ್ಲಿಗಿ, ದಾವಣಗೆರೆ, ಹುಬ್ಬಳ್ಳಿ, ಧಾರವಾಡ ಮುಂತಾದವನ್ನು ಕಥನದಲ್ಲಿ ಸನ್ನಿವೇಶಕ್ಕೆ ಅನುಗುಣವಾಗಿ ಬಳಸಿಕೊಂಡಿದ್ದಾಳೆ. ಹಾಗೆಯೇ ಪಾತ್ರಗಳ ಹೆಸರುಗಳನ್ನು ಸಹ ಬಳಸಿಕೊಂಡಿದ್ದಾಳೆ. ಆದರೆ ಅವರು ಶಂಕ್ರಮ್ಮ ವಾಸ್ತವ ಪಟ್ಟಣಗಳ ಹೆಸರನ್ನು ತರದೆ ಕಾಲ್ಪನಿಕ ಪಟ್ಟಣಗಳನ್ನು ಅಭಿವ್ಯಕ್ತಿ ಮಾಡಿದ್ದಾರೆ. ಇದರ ಕಥನಕ್ಕೆ ಪ್ರಾದೇಶಿಕತೆಯ ಸೊಬಗನ್ನು ಮಾತ್ರ ಅಳವಡಿಸಿಕೊಂಡಿದ್ದಾರೆ.

ಈರಮ್ಮ ಅವರ ಕಥನದಲ್ಲಿ ಚಿತ್ರಗಿರಿ ಪಟ್ಟಣದ ಚಿತ್ತಪ್ಪನ ಏಳು ಜನ ಹೆಣ್ಣುಮಕ್ಕಳು ಮದುವೆಯ ವಯಸ್ಸಿಗೆ ಬಂದಿರುತ್ತಾರೆ. ಹೀಗಾಗಿ ಏಳು ಜನ ಹೆಣ್ಣುಮಕ್ಕಳನ್ನು ಒಬ್ಬನೇ ಮಾಡಿಕೊಳ್ಳುವಂತಹ ಅಳಿಯನನ್ನು ಹುಡುಕುತ್ತ ಚಳ್ಳಕೆರೆಗೆ ಬರುತ್ತಾನೆ. ಇತ್ತ ಕಾಂಭೋಜರಾಜನ ಮದುವೆಗಾಗಿ ಒಂದೇ ಮನೆಯಲ್ಲಿ ಹುಟ್ಟಿದ ಏಳು ಜನ ಅಕ್ಕತಂಗಿಯರನ್ನು ಹುಡುಕಲು ರಾಜನ ಜೊತೆಗೆ ಶಾನುಭೋಗರು, ರೈತರು ಹಾಗೂ ತಳವಾರರೂ ಚಳ್ಳಕೆರೆಗೆ ಬಂದಿರುತ್ತಾರೆ. ಹೆಣ್ಣುಗಳನ್ನು ಕೊಡುವ ಚಿತ್ತಪ್ಪ ಹಾಗೂ ಮದುವೆ ಮಾಡಿಕೊಳ್ಳಲು ಬಂದಿದ್ದ ಕಾಂಭೋಜರಾಜನ ಸಮಾಗಮ 'ಚಳ್ಳಕೆರೆ'ಯಲ್ಲಿ ಮೂರ್ತರೂಪ ಪಡೆಯುತ್ತದೆ.

"ಬುತ್ತಿ ಕಟ್ಟಿಕೊಂಡು ಕಂಬಳಿ ಹೆಗಲ ಮ್ಯಾಲೆ ಹಾಕ್ಯಂತ

ಆಗ ಇನ್ನು ಅಳಿಯನ್ನ ಹುಡುಕ್ಯಾಡಕ ಬಂದ

ಚಳ್ಳಕೆರೆಗೆ ಬಂದು ಇಳಿದು ಬಿಟ್ಟ

ಕುದ್ರಿ ಹಿಡಕಂಡು ಬರ್‍ತಿದ್ದ

ಏನ್ರಿ ಯಜಮಾನ್ರೇ

ನಿಂದು ಯಾವೂರ್‍ರಿ ಅಂದ

ನಂದು ಚಿತ್ರಗಿರಿ ಪಟ್ಣಂದ

ನನ್ನ ಹೆಸರೇ ಗೊಲ್ರ ಚಿತ್ತಪ್ಪ ಅಂದ

ಈತ ಗೊಲ್ರ ಅಂತೆ

ನಮ್ಮ ಕುಲ ಗೊಲ್ರೆ

ಏನ್ರೀ ನಮ್ಮದು ಚಾಂಪುರ ಪಟ್ಣ

ಕರ್ಣಾಟ ಒಳಗಿರೋದು

ಈಗಿನ್ನ ಚಾಮರಾಜೇನ ಮಗ ಕಾಂಭೋಜರಾಜ

ಗೊಲ್ರು ನಾವು ಹಾಲುಗೊಲ್ರು

ಮತ್ತೆ ಎದಕ್ಕಾಗಿ ಬಂದ್ರೀ

ಏನ್ರಿ ನಿಮ್ಮ ಚಿತ್ರಗಿರಿ ಪಟ್ಣದಾಗ

ಏಳು ಮಂದಿ ಕೊಡೋರು ಇದಾರೇನ್ರಿ

ಹೆಣ್ಣುಮಕ್ಕಳ"(೧೯೯೭: ೨೫೭)

ಹೆಣ್ಣನ್ನು ಕೊಡುವವರು ಹಾಗೂ ಹೆಣ್ಣನ್ನು ಕೊಳ್ಳುವವರ ಮಧ್ಯದಲ್ಲಿ ಭೇಟಿಯಾದ ಸಂದರ್ಭದಲ್ಲಿ ಅವರು ಹೇಗೆ ತಮ್ಮ ತಮ್ಮ ಪರಿಚಯ, ಸಂಭಾಷಣೆ ನಡೆಸುತ್ತಾರೆಂಬುದು ವಾಸ್ತವ ಬದುಕಿನ ಬಿಂಬವಾಗಿ ಸೊಗಸಾಗಿ ಪ್ರಾದೇಶಿಕತೆ, ಗ್ರಾಮೀಣ ಸೊಗಡು ಮೂಡಿಬಂದಿದೆ. ತಮ್ಮ ಮಕ್ಕಳಿಗೆ ತಕ್ಕಂತ ವರ ಸಿಗದಿದ್ದ ಸಂದರ್ಭದಲ್ಲಿ ತಂದೆಯೇ ಅಳಿಯನನ್ನು ಹುಡುಕುವ ಸಂದರ್ಭ ಬರುತ್ತದೆ. ಹಾಗೆಯೇ ಗಂಡಿಗೆ ತಕ್ಕಂತೆ ಕನ್ಯಾ ಸಿಗದಿದ್ದ ಸಂದರ್ಭದಲ್ಲಿ ಗಂಡು ಹಾಗೂ ಪರಿವಾರದ ಜೊತೆ ಹುಡುಕುವ ಸಂದರ್ಭ ಬರುವುದುಂಟು. ಸಾಮಾನ್ಯ ಜನರ ಬದುಕಿನಲ್ಲೂ ಕಾಣಬಹುದು. ಆಗಿನ ಸಂದರ್ಭದಲ್ಲಿ ಕುದುರೆಗಳನ್ನೇ ಒಂದು ಊರಿನಿಂದ ಇನ್ನೊಂದು ಊರಿಗೆ ಬಳಸುತ್ತಿದ್ದರು. ಚಿತ್ರಗಿರಿ ಚಿತ್ತಪ್ಪ ಹಾಗೂ ಕಾಂಭೋಜರಾಜ ಜೊತೆಯಲ್ಲಿ ಬಂದ ಸಂಗಡಿಗರ ಮಧ್ಯ 'ಚಳ್ಳಕೆರೆ'ಯಲ್ಲಿ ಎದುರುಬದುರಾಗುತ್ತಾರೆ. ಕುದುರೆಯನ್ನು ಹಿಡಿದುಕೊಂಡು ಬರುತ್ತಿದ್ದ ಚಿತ್ತಪ್ಪನನ್ನು ರಾಜಕುಮಾರನ ಕೈಕೆಳಗಿನ ತಳವಾರರು, ಶಾನುಭೋಗರು, ರೈತರು ನಿನ್ನದು ಯಾವ

ಊರೆಂದು ಪ್ರಶ್ನಿಸುತ್ತಾರೆ. 'ನಂದು ಚಿತ್ರಗಿರಿ ಪಟ್ನ' ಆದ ಅಂದು 'ನನ್ನ ಹೆಸರೇ ಗೊಲ್ರು ಚಿತ್ರಪ್ಪ' ಅಂದ ಈ ಮಾತಿಗೆ ಇವರು ನಮ್ಮ ಕುಲದವರೆಂದು ಹರ್ಷದಿಂದ ರಾಜಕುಮಾರನಿಗೆ ತಿಳಿಸುತ್ತಾರೆ. 'ಇವರದು ನಮ್ಮ ಪಟ್ಟಣ ಕರ್ನಾಟಕದ ಒಳಗಿರುವ ಚಾಂಪುರ ಪಟ್ಟಣ' ಎಂದು ಹೇಳುವ ಸಂದರ್ಭದಲ್ಲಿ ಕಥನಗಾರರು ತನ್ನ ಪರಿಸರವನ್ನು ವ್ಯಕ್ತಪಡಿಸುತ್ತಾರೆ. ಇಲ್ಲಿ ನಿರೂಪಣೆ ಇಡೀ ಕಥನವು ಒಂದು ಸಮುದಾಯವನ್ನು ಪ್ರತಿನಿಧಿಸಿ ಚಿತ್ರಿಸಿದ್ದಾರೆ. ಈರಮ್ಮಳು ಕಥನವನ್ನು ದೀರ್ಘವಾಗಿ ತಂದು, ಕಥನಕ್ಕೆ ವಾಸ್ತವ ಹಾಗೂ ಪ್ರಾದೇಶಿಕ ಬನಿಯನ್ನು ಒಡಮೂಡಿಸಿದ್ದಾಳೆ. ಈ ಸನ್ನಿವೇಶವು ಶಂಕ್ರಮ್ಮ ಅವರ ಕಥನದಲ್ಲಿ ಮೂಡಿಬಂದಿಲ್ಲ. ಆದರೆ ತನ್ನ ಕಥನವನ್ನು ನಿರೂಪಿಸುವಾಗ ಕಥನಕ್ಕೆ ಬೇಕಾಗುವ ಅವಶ್ಯ ವಿಷಯವನ್ನು ಮಾತ್ರ ಅಭಿವ್ಯಕ್ತಿ ಮಾಡಿದ್ದಾಳೆ. ಕಾಂಭೋಜರಾಜ ಕತೆಯು ಮೂಲ ತೆಲುಗು ಇದ್ದು ಆ ಕಥನಕ್ಕೆ ಶಂಕ್ರಮ್ಮ ಅವರ ಕಥನವು ಹತ್ತಿರವಾಗಿದ್ದನ್ನು ಕಾಣುತ್ತೇವೆ. ಮೂಲಕತೆಯಲ್ಲಿ ಕಾಂಭೋಜರಾಜ ಗೊಲ್ಲ ಸಮುದಾಯಕ್ಕೆ ಸೇರಿರುತ್ತಾನೆ. ಆದರೆ ಸಮುದಾಯವನ್ನೇ ಗುರಿಯಾಗಿಟ್ಟುಕೊಂಡ ನಿರೂಪಣೆ ಕಂಡುಬರುವುದಿಲ್ಲ. ಕಥನವು ಪ್ರದೇಶದಿಂದ ಪ್ರದೇಶಕ್ಕೆ ಭಿನ್ನವಾಗಿ ನಿರೂಪಣೆ ಪಡೆದು, ಹೊಸ ವಿಚಾರಗಳು ಸೇರಿ, ವ್ಯತ್ಯಾಸವುಂಟಾಗುವುದನ್ನು ಕಾಣುತ್ತೇವೆ.

**ಕಥನತಂತ್ರ**

'ಕಾಂಭೋಜರಾಜಕತೆ' ಹಾಗೂ 'ಕೃಷ್ಣಗೊಲ್ಲರ ಕಾವ್ಯ' ಎರಡೂ ಕಥನಗಳಲ್ಲಿ ಕಥನಗಾರರು ಅವರವರ ತಂತ್ರಗಳನ್ನು ಅನುಸರಿಸಿ ನಿರೂಪಿಸಿದ್ದಾರೆ. ಶಂಕ್ರಮ್ಮ ಇವರ ಕಾಂಭೋಜರಾಜ ಕಥನವನ್ನು ಪ್ರಾರಂಭಿಸುವ ವಿಧಾನ ಹಾಗೂ ಪ್ರಾರಂಭದ ಪದ್ಯದಲ್ಲೇ ಕಥನದ ಮುಖ್ಯ ಆಶಯವನ್ನು ವ್ಯಕ್ತಮಾಡಿದ್ದಾರೆ.

ಸಿರಿಹರಿ ವೈದೇವಿ ತಂದನಾನ-ತಂದಾನ
ಮೇಲುಗಡೆ ದೇಶದೊಳಗೆ ಗುರುವೇ ಮಹದೇವ
ಅಕ್ಕಡಿ ಯಾವದು ಪಟ್ನ ಇದ್ದದೇನ ಯೇ ಶಿವನೆ
ಶಾಂಪುರ ಪಟ್ನ ಇದ್ದದೇನ ಮಹದೇವ
ರಾಜ ಶಮರಾಜ ಇದ್ದಡೇನ ಮಹರಾಜ
ಶಮರಾಜನ ಹೆಂಡತಿ ಯಾರಪ್ಪ ಹಡೆದಮ್ಮ
ತಾಯಿಯು ಪಾಂದೇವಿ ಇದ್ದಳೇನ
ರಾಜನ ಹೊಟ್ಟೆಯೊಳಗೆ ಯೇ ಶಿವನೆ ಮಹದೇವ
ಒಬ್ಬನೆ ಕಾಂಭೋಜರಾಜ ಮಹರಾಜ ಗಜರಾಜ
ರಾಜನಿಗೆ ಏಳುಮಂದಿ ಇದ್ದರೇನ
ಒಬ್ಬರಿಗನ್ನ ಸಂತಾನವಿಲ್ಲ ಗುರುವೇ ಮಹದೇವ(ಶಂಕ್ರಮ್ಮ, ಕಾಂ.ರಾ.ಕ)

ಶಂಕ್ರಮ್ಮ ಅವರ ಕಥನ ಪ್ರಾರಂಭದ ಹನ್ನೊಂದು ಸಾಲುಗಳಲ್ಲೇ ಕಥನದ ಮುಖ್ಯ ವಿಷಯವನ್ನು ಅಭಿವ್ಯಕ್ತಿಸಿ, ತನ್ನ ಕಥಾತಂತ್ರದ ಮೂಲಕ ಕೇಳುಗರಿಗೆ ಮುಖ್ಯ ಆಶಯ ವ್ಯಕ್ತಪಡಿಸಿದ್ದಾರೆ. ಇಲ್ಲಿ ಕಥನದ ವಸ್ತು ನೇರವಾಗಿ ನಿರೂಪಣೆಗೊಂಡಿದೆ. ದೀರ್ಘಕ್ಕಿಂತ ಇಂತಹ ಚಿಕ್ಕ ಪದ್ಯದಲ್ಲಿಯೇ ಮುಖ್ಯ ವಿಷಯ ವ್ಯಕ್ತವಾಗಿದ್ದರಿಂದ ಕೇಳುಗರ ಮೇಲೆ ನೇರ ಪರಿಣಾಮ ಉಂಟಾಗುತ್ತದೆ. ಅನಾವಶ್ಯಕ ವಿಷಯ ವ್ಯಕ್ತವಾಗದೆ ಮುಖ್ಯ ವಿಷಯ ಚಿತ್ರಿತಗೊಂಡಿದೆ.

ಆದರೆ ಈರಮ್ಮ ಇವರ ಕೃಷ್ಣಗೊಲ್ಲರ ಕಾವ್ಯವನ್ನು ಪರಿಶೀಲಿಸಿದಾಗ ಕಥನದ ಪ್ರಾರಂಭವು ಶಂಕ್ರಮ್ಮ ಇವರ ಕಥನಕ್ಕಿಂತ ಭಿನ್ನವಾಗಿ ಕಂಡುಬಂದು ಕತೆಯನ್ನು ದೀರ್ಘವಾಗಿ ಹಾಡಿದ್ದಾರೆ.

“ತಂದಾನ ತಂದಾನ ತಾನ ತಂದಾನ
ಉತ್ತರ ಕಡೆಗೆ ಚಾಂಪುರ ಪಟ್ಣದಾಗ
ಚಾಮರಾಜೈನಂತವರ ಕುಲದಲ್ಲಾಗಿ
ಚಾಮರಾಜ ಮಗನಮ್ಮ ಲೋಕದಾಗ ನೋಡಮ್ಮ
ಹೇಣೆತಾಗಿ ನೋಡಣ್ಣ ನೀಲವೇಣಿ ತಾಯೋರು
ಆಗ ಚಾಮರಾಜನ ಹೆಣ್ತಿ
ನೀಲವೇಣಿದೇವಿ
ಆಗ ಕುಲದಲ್ಲಿ ಆಗಿ
ಕೃಷ್ಣಗೊಲ್ಲರು
ಹಾಲುಗೊಲ್ಲರ”(೧೯೯೭: ೨೨೭)

ಈರಮ್ಮ ಅವರು ತನ್ನ ಕಥನವನ್ನು ಅತ್ಯಂತ ದೀರ್ಘವಾಗಿ ನಿರೂಪಿಸಿದ್ದಾಳೆ. ಚಾಮರಾಜನ ಪಾತ್ರವನ್ನು ದೀರ್ಘವಾಗಿ ಚಿತ್ರಿಸಿದ್ದಾರೆ. ನೀಲವೇಣಿಯ ಪಶ್ಚಾತ್ತಾಪ, ಆಕೆಯ ದುಃಖ, ಕಾಂಭೋಜರಾಜನ ವಿದ್ಯಾಭ್ಯಾಸ ಹಾಗೂ ಪಟ್ಟಾಭಿಷೇಕ, ಶಾನುಭೋಗರ ಭವಿಷ್ಯ, ಅದರಿಂದ ಕಾಂಭೋಜರಾಜನ ಮದುವೆಗಾಗಿ ಕನ್ಯೆಗಳ ಹುಡುಕಾಟ, ಕಾಂಭೋಜರಾಜನ ಮದುವೆ, ಪತ್ನಿಯರೊಂದಿಗೆ ಚಾಂಪುರ ಪಟ್ಟಣಕ್ಕೆ ಆಗಮನ ಈ ವಿಷಯಗಳನ್ನು ಈರಮ್ಮ ಅವರು ತನ್ನ ಕಥನದಲ್ಲಿ ದೀರ್ಘವಾಗಿ ನಿರೂಪಿಸಿದ್ದಾರೆ. ಆದರೆ ಶಂಕ್ರಮ್ಮ ಅವರ ಕಥನದಲ್ಲಿ ಈ ಸನ್ನಿವೇಶಗಳನ್ನು ನಿರೂಪಿಸದೆ ನೇರವಾಗಿ ಪ್ರಾರಂಭದ ಹನ್ನೊಂದು ಸಾಲಿನ ಪದ್ಯದಲ್ಲೇ ಎಲ್ಲಾ ವಿಷಯ ಅಡಗಿದೆ ಎಂಬಂತೆ ಚಿತ್ರಿಸಿದ್ದಾರೆ. ಇದು ಇಬ್ಬರು ಕಥನಗಾರರ ಕಥಾತಂತ್ರ ಭಿನ್ನವಾಗಿರುವುದನ್ನು ಕಾಣಬಹುದು. ಹಾಗೆಯೇ ಪಾತ್ರಗಳ ಹೆಸರುಗಳಲ್ಲಿ ಭಿನ್ನತೆ ಕಾಣುತ್ತದೆ. ಇಲ್ಲಿ ಪಾತ್ರಗಳ ಹೆಸರುಗಳಲ್ಲಿ ಬೇರೆಬೇರೆಯಾಗಿ ಕಂಡುಬರುತ್ತವೆ. ಆದರೆ ಎರಡು ಪಾತ್ರಗಳ ಒಳನೋಟವು ಒಂದೆ.

ಶಂಕ್ರಮ್ಮ ಅವರು ಜ್ಯೋತಿಷಿಗಳ ಮೂಲಕ ಕಾಂಭೋಜರಾಜನ ಮಕ್ಕಳ ಕೊರಗು, ತಂದೆಯ ದುರ್ಮರಣ, ಗಂಗಿಮ್ಮೆಲ ಆಕಳದ ಶಾಪ ಮುಂತಾದ ವಿಷಯಗಳನ್ನು ನಿರೂಪಿಸಿದ್ದಾರೆ. ಇದರಲ್ಲಿ ಶಂಕ್ರಮ್ಮನವರ ಕಥಾತಂತ್ರವು ಎದ್ದು ಕಾಣುತ್ತದೆ. ಕಾಂಭೋಜರಾಜನು ತನಗೆ ಮಕ್ಕಳಾಗದಿದ್ದ ಕೊರಗಿನಿಂದ ಅದರ ದೋಷ ತಿಳಿಯಲು ಜ್ಯೋತಿಷಿಗಳನ್ನು ಕರೆಸಿ ಪಂಚಾಂಗ ನೋಡುತ್ತಾನೆ. ಆಗ ಜ್ಯೋತಿಷಿಗಳೇ ಹಿಂದಿನ ಘಟನೆಯ ಕತೆಯನ್ನು ಹೇಳುತ್ತಾರೆ. ಇಲ್ಲಿ ಜ್ಯೋತಿಷಿಗಳ ಮೂಲಕ ಕತೆಯನ್ನು ಹೇಳಿಸುವ ತಂತ್ರ ಶಂಕ್ರಮ್ಮ ಅವರಲ್ಲಿ ಬಂದಿದ್ದನ್ನು ಕಾಣಬಹುದು.

ಏನಯ್ಯ ರಾಜ
ಈ ಪಂಚಾಂಗದೊಳಗ ಹೊಂಟಿದಂತ ಸುದ್ದಿ
ನೀ ಚೆನ್ನಾಗಿ ಕೇಳಬೇಕಯ್ಯ ರಾಜ
ಹಿಂದಕ ನಿಮ್ಮ ತಂದೆ ಶಮರಾಜ
ಐರು ಮೂಂದ ಕಾಸುಪಾಕ ತೋಟ ಹಚ್ಚಿದ್ದ
ಆ ತೋಟಗ ಅಷ್ಟು ಪಾಬಂದಿ ಮಾಡಿದ್ದ
ಒಂದು ಮನುಷ್ಯ ಹೋಗಲಾಕ ದಾರಿ ಇಲ್ಲ
ಅಷ್ಟು ಪಾಬಂದಿ ಮಾಡಿದ್ದ
ಪರಮಾತ್ಮ ಸಲುವಿದ ಗಂಗಿಮ್ಮೆಲ ಆಕಳ
ತುಂಬ ಈಯಿಲಾಕ ದಿನಗಳಾಗಿದ್ದವು
ಆ ತೋಟದ ಮ್ಯಾಲೆ ಮನಸಿಟ್ಟು
ಆ ತೋಟದೊಳಗೆ ಬಂದದ(ಶಂಕ್ರಮ್ಮ, ಕಾಂ.ರಾ.ಕ)

ಜ್ಯೋತಿಷಿಗಳೇ ಈ ಸನ್ನಿವೇಶವನ್ನು ಕಾಂಭೋಜರಾಜನಿಗೆ ತಿಳಿಸುತ್ತಾರೆ. ಕಾಂಭೋಜರಾಜನ ತಂದೆ ಶಮರಾಜನು ಊರು ಮುಂದೆ ಹಣ್ಣುಹಂಪಲ ತೋಟವನ್ನು ಮಾಡಿ ಒಳಗೆ ಯಾವುದೇ ಪ್ರಾಣಿಗಳು ಪ್ರವೇಶವಾಗದಂತೆ ಭದ್ರತೆ ಒದಗಿಸಿರುತ್ತಾನೆ. ಆದರೆ, ತುಂಬು ಗರ್ಭಿಣಿಯಾದ ಪರಮಾತ್ಮ ಸಲಹಿದ ಗಂಗಿಮ್ಮೆಲ ಆಕಳ ಈ ತೋಟದ ಮೇಲೆ ಮನಸ್ಸಿಟ್ಟು ಮೇಯಲು ಬಂದಿರುತ್ತದೆ. ಕಾಂಭೋಜರಾಜನು ತೋಟಕ್ಕೆ ಬಂದು ಆಕಳನ್ನು ನೋಡಿ ಬಂದೂಕಿನಿಂದ ಹೊಡೆದು ಸಾಯಿಸುತ್ತಾನೆ. ಆಕಳು ಸಾಯುವಾಗ ಶಾಪ ಹಾಕಿರುತ್ತದೆ. ಅದರ ಪರಿಣಾಮದಿಂದ ನಿನಗೆ ಮಕ್ಕಳಿಲ್ಲ ಎಂದು ಜ್ಯೋತಿಷಿಗಳೇ ಹೇಳುತ್ತಾರೆ. ಈ ಸನ್ನಿವೇಶವು ಕೇಳುಗರಿಗೆ ನೇರವಾಗಿ ಪರಿಣಾಮ ಬೀರುತ್ತದೆ. ಒಂದು ಆಕಳನ್ನು ಹೊಡೆದಾಗ ಅದರಿಂದ ಯಾವ ರೀತಿ ಇಡೀ ಕುಟುಂಬಕ್ಕೆ ಅದರ ಶಾಪ ಹತ್ತುತ್ತದೆಂಬ ಅಂಶವು ಜ್ಯೋತಿಷಿಗಳೇ ಹೇಳುವುದರಿಂದ ಕೇಳುಗರಿಗೆ ಇದು ಎಚ್ಚರದ ಸಂದೇಶವಾಗಿ ಕಾಣುತ್ತದೆ. ಕತೆಯನ್ನು ಕೇಳುವ ಸಾಮಾನ್ಯ

ಜನರು ಜ್ಯೋತಿಷ್ಯದಲ್ಲಿ ನಂಬಿಕೆ ಇಟ್ಟಿರುತ್ತಾರೆ. 'ಗೋಹತ್ಯೆ ಮಹಾಪಾಪ' ಎನ್ನುವ ಸಂದೇಶವನ್ನು ಈ ಸನ್ನಿವೇಶ ತಿಳಿಸುತ್ತದೆ.

ಆದರೆ ಈರಮ್ಮ ಅವರು ಈ ಸನ್ನಿವೇಶವನ್ನು ನೇರವಾಗಿ ತಾನೇ ನಿರೂಪಿಸಿರುತ್ತಾಳೆ. ಇಲ್ಲಿ 'ಕಾಮದೇವತೆ' ಪಾತ್ರದ ಮೂಲಕ ಶಾಪ ಸನ್ನಿವೇಶವನ್ನು ಅಭಿವ್ಯಕ್ತಪಡಿಸಿದ್ದಾರೆ.

> "ವಿಷ್ನು ಪರಮಾತ್ಮ
> ಶಾಂಭ ದೇವೇಂದ್ರ
> ಜಟಂಗೇಶ್ವರತಲ್ಲಿರೋದು
> ಕಲ್ಪವೃಕ್ಷದ ಕಾಮದೇವತೆ
> ಆಗಿನ್ನ ಆಗ ಈಗ ಹಡ್ಯಾಂಗ್ಯೆತಿ
> ಎಲ್ನುರೆಕ್ಕಿ ನಾಲ್ಕು ಪಾದ
> ಗೋಪ್ಯಮ್ಮ"(೧೯೯೭: ೨೩೦)

ಶಂಕ್ರಮ್ಮನವರ ಕಥನದಲ್ಲಿ ಪರಮಾತ್ಮ ಸಲುಹಿದ 'ಗಂಗಿಮೈಲ' ಆಕಳು ಇದ್ದರೆ, ಈರಮ್ಮ ಅವರ ಕಥನದಲ್ಲಿ ವಿಷ್ನು, ಪರಮಾತ್ಮ, ದೇವೇಂದ್ರ ಜಟಂಗೇಶ್ವರದಲ್ಲಿ ಇರುವ 'ಕಾಮದೇವತಿ' ಆಕಳು ಎಂದು ನಿರೂಪಿಸಿದ್ದಾರೆ. ಇಲ್ಲಿ ಈರಮ್ಮ ತಾನೇ ಈ ಸನ್ನಿವೇಶ ವ್ಯಕ್ತಪಡಿಸಿದ್ದರಿಂದ ತನ್ನ ಕಲ್ಪನೆಯ ದೇವರುಗಳನ್ನು ನಿರೂಪಿಸುತ್ತಾಳೆ. ಶಂಕ್ರಮ್ಮ ಕಥನದಲ್ಲಿ ಜ್ಯೋತಿಷಿಗಳ ಮೂಲಕ ನಿರೂಪಿಸಿದ್ದರಿಂದ ಅಲ್ಲಿ ದ್ವಂದ್ವ ಕಾಣದೇ 'ಪರಮಾತ್ಮ'ನೇ ಸಲುಹಿದ ಆಕಳು ಆಗಿರುತ್ತದೆ. ಆದರೆ ಆಕಳು ಎರಡೂ ಕಥನಗಳಲ್ಲಿ ಶಾಪ ಕೊಡುವ ಹಾಗೂ ರಾಜನು ಕೊಲ್ಲುವ ಒಂದೇ ಆಶಯ ವ್ಯಕ್ತವಾಗಿದೆ. ಎರಡೂ ಕಥನಗಳಲ್ಲಿ 'ಗೋಹತ್ಯೆ ಮಹಾಪಾಪ ಎನ್ನುವ' ಸಂದೇಶ ಬಂದಿದ್ದರಿಂದ, ಅದರಿಂದ ಆಗುವ ಪರಿಣಾಮ ಇಲ್ಲಿ ವ್ಯಕ್ತವಾಗಿದೆ. ಕೇಳುಗರ ಮೇಲೆ ಇಂತಹ ಸನ್ನಿವೇಶಗಳು ಪರಿಣಾಮ ಬೀರುತ್ತದೆ.

ಕಾಂಭೋಜರಾಜನು ಜ್ಯೋತಿಷಿಗಳಿಗೆ ತನ್ನ ತಂದೆ ಮಾಡಿದ ಪಾಪವನ್ನು ಕಳೆಯಬೇಕಾದರೆ, ಅದರ ದೋಷದಿಂದ ಮುಕ್ತರಾಗಬೇಕಾದರೆ ತಾನು ಏನು ಮಾಡಬೇಕೆಂದು ಕೇಳುತ್ತಾನೆ. ಆಗ ಜ್ಯೋತಿಷಿಗಳು 'ಆಕಳನ್ನು ಕೊಂದ ಕರ್ಮದಿಂದ ಮುಕ್ತರಾಗಲು ಊರು ಮುಂದೆ ಬಾವಿ ತೋಡಿಸಿ, ಎತ್ತುಗಳಿಲ್ಲದೆ ಹೊಲವನ್ನು ಹಸನು ಮಾಡಿ ಹಣ್ಣಿನ ತೋಟ ಮಾಡಬೇಕು. ಹೆಂಡತಿಯರ ಜೊತೆಗೂಡಿ ತೋಟದಲ್ಲಿ ಶ್ರಮಪಟ್ಟಾಗ, ಗಿಡಗಳಿಗೆ ಹಣ್ಣುಗಳಾಗಿ ಗಿಳಿಪಕ್ಷಿಗಳು ತಿಂದಾಗ ಮಕ್ಕಳಾಗುತ್ತಾರೆಂದು ಹೇಳುತ್ತಾರೆ.

> "ಏನಯ್ಯ ರಾಜೇಂದ್ರ
> ಈ ಪಾಪ ಹ್ಯಾಂಗ ಹೋಳಾಗ್ತದಂತ ನೀ ಕೇಳುತಿದ್ದಿ

ಊರಿಗೊಂದು ಹರದಾರಿ

ಬಾವಿ ಅಗಸಬೇಕು

ಬಾವಿಯೊಳಗ ನೀರು ಬಿದ್ದರೆ

ಹೋಗುವರು ಬರುವರು

ಬಾವ್ಯಾಗ ನೀರು ಕುಡಿದು

ಇಂತಹ ಅಡಿವ್ಯಾಗ ಎಂತಹ ಪುಣ್ಯಾತ್ಮ

ಬಾವಿ ಅಗಸ್ಯಾನ ಆತನಿಗೆ ಪುಣ್ಯಬರಲಿ

ಬಾವ್ಯಾಗ ನೀರು ಕುಡಿದು ಕೈ ಎತ್ತಿ ಶರಣು ಮಾಡ್ತರ

ಅದರ ಅರ್ಧ ಪಾಪ ಹೊಡೆದುಕೊಂಡು ಹೋಗ್ತದ"(ಶಂಕ್ರಮ್ಮ, ಕಾಂ.ರಾ.ಕ)

ಜ್ಯೋತಿಷಿಗಳ ಮೂಲಕ ಹೇಳಿಸುವ ಕಥನಗಾರರ ತಂತ್ರ ಅತ್ಯಂತ ಸೊಗಸಾಗಿ ಮೂಡಿದೆ. ರಾಜನಿಗೆ ತನ್ನ ತಂದೆಯ ಕರ್ಮ ಕಳೆಯಲು ಪುಣ್ಯದ ಕಾರ್ಯ ಮಾಡಲು ಜ್ಯೋತಿಷಿಗಳು ಹೇಳುತ್ತಾರೆ. ಇಲ್ಲಿ 'ನೀರು' ಪುಣ್ಯದ ಸಂಕೇತವಾಗಿ ಮೂಡಿದೆ. ನೀರು ಪ್ರತಿಯೊಬ್ಬರಿಗೆ ಅವಶ್ಯ. ನೀರನ್ನು ಎಲ್ಲರೂ ಬೇಡಿ ಪಡೆಯುತ್ತಾರೆ. ಆದರೆ 'ಅನ್ನ'ವನ್ನು ಯಾರೂ ಕೇಳುವುದಿಲ್ಲ. ಅನ್ನಕ್ಕಿಂತ ನೀರು ಅತ್ಯಂತ ಶ್ರೇಷ್ಠ. ಬಾವಿಯಲ್ಲಿದ್ದ ನೀರನ್ನು ಕುಡಿಯಲು ನೀರಡಿಸಿ ಬಂದವರು, ಬಾವಿಯ ಮಾಲಕರಿಗೆ ಪುಣ್ಯ ಬರಲಿ ಎಂದು ಹರಸುತ್ತಾರೆ. ನೀರಿನ ಮಹತ್ವ, ಅದರ ಅವಶ್ಯಕತೆ ಎಂತಹದೆಂಬುದರ ಭಾವ ಇಲ್ಲಿ ವ್ಯಕ್ತವಾಗಿದೆ. ನೀರು ಕುಡಿದ ಜನರ ಹರಸುವಿಕೆಯಿಂದ ಅರ್ಧ ಪಾಪ ಕಳೆದು ಮುಕ್ತಿ ಪಡೆಯುತ್ತಾರೆ ಎನ್ನುವ ಅಂಶವು ಅರ್ಥಪೂರ್ಣವಾಗಿದೆ.

ಆದರೆ ಈರಮ್ಮ ಅವರ ಕಥನದಲ್ಲಿ ಈ ಸನ್ನಿವೇಶವನ್ನು ತಾನೇ ನೇರವಾಗಿ ನಿರೂಪಿಸಿದ್ದಾಳೆ. ಇಲ್ಲಿ ಶಾನುಭೋಗರು ತಾಳೆಗರಿ ನೋಡಿ ಕಾಂಭೋಜರಾಜನಿಗೆ ಪಾಪದ ದೋಷವನ್ನು ಕಳೆಯಲು ನಿವಾರಣೆಯನ್ನು ಸೂಚಿಸುತ್ತಾರೆ.

"ತಾಳೆಗರಿ ಹೊತ್ತಿಗೆ ತೆರದು ನೋಡಿದ್ರು

ನೋಡ್ರಿ ಉಗುರೋಷ್ಟು ಪಾಪೈತಿ

ಬಳ್ಳೆಲೋಟು ಕರ್ಮ ಐತಿ

ಈಗ ದೇವರು ನಿಧಿಗಳೆಲ್ಲ ತಿರುಗಿ

ಗುಂಡಿಗೀಟು ಗುಡಿಗೀಟು ಕರ್ಮಕಳಕಂಡು ಬಂದ್ರೆ

ಆಗ ಏಳು ಮಂದಿಗೆ ಮಕ್ಕಳಾಗ್ತವ್ರಿ ಅಂತ ಹೇಳ್ದ"(೧೯೯೭: ೨೭೮)

ಶಾನುಭೋಗರು 'ತಾಳೆಗರಿ' ಹೊತ್ತಿಗೆ ನೋಡಿ ಕಾಂಭೋಜರಾಜನ ತಂದೆ ಮಾಡಿದ ಪಾಪದ ದೋಷದ ನಿವಾರಣೆಯನ್ನು ಹೇಳುತ್ತಾರೆ. ಇಲ್ಲಿ ಕಥನಗಾರರ ಕಲ್ಪನೆಯ ಹಾಗೂ ತನ್ನ ತಿಳುವಳಿಕೆಯ ಹಿನ್ನೆಲೆಯಲ್ಲಿ 'ಶಾನುಭೋಗ'ರ ಪಾತ್ರವನ್ನು ಸೃಷ್ಟಿಸಿದ್ದಾರೆ. 'ಉಗಿರಿನಷ್ಟು ಪಾಪ, ಬಳ್ಳೊಳ್ಳಿಯಷ್ಟು ಕರ್ಮ ಇದೆ, ಅದನ್ನು ನಿವಾರಿಸಿಕೊಳ್ಳಲು ಗುಡಿಗುಂಡಾರ ತಿರುಗಿದರೆ ದೋಷ ನಿವಾರಣೆಯಾಗಿ ಏಳು ಜನ ಹೆಂಡತಿಯರಿಗೆ ಮಕ್ಕಳಾಗುವುದೆಂದು ಹೇಳುತ್ತಾರೆ. ಇಬ್ಬರು ವಕ್ತೃಗಳು ಕಥನವನ್ನು ನಿರೂಪಿಸುವ ವಿಧಾನ ಬೇರೆಯಾಗಿದ್ದರೂ ಕೂಡ ಸನ್ನಿವೇಶ ಹಾಗೂ ಕಥಾ ವಸ್ತುವಿನಲ್ಲಿ ಸಾಮ್ಯ ಕಾಣಬಹುದು. ಈರಮ್ಮ ಅವರ ಕಥನಕ್ಕಿಂತ ಶಂಕ್ರಮ್ಮ ಅವರ ಕಥನದ ಈ ಸನ್ನಿವೇಶ ಪರಿಣಾಮಕಾರಿಯಾಗಿದೆ. 'ಬಾವ್ಯಾಗ ನೀರು ಕುಡಿದು ಕೈ ಎತ್ತಿ ಶರಣು ಮಾಡ್ತರ' ಎನ್ನುವ ಸಾಲಿನಲ್ಲಿ ನೀರು ಕುಡಿಯುವ ಮೊದಲು ಸಾಮಾನ್ಯ ಜನರು ಮೊದಲು ನೀರಿಗೆ ಹಾಗೂ ಬಾವಿ ತೋಡಿಸಿದ ವ್ಯಕ್ತಿಗೆ ಶರಣು ಮಾಡುತ್ತಾರೆ ಎನ್ನುವ ವಿಶಾಲಾರ್ಥ ವ್ಯಕ್ತವಾಗಿದೆ.

**ಪಾತ್ರಗಳ ವೈಶಿಷ್ಟ್ಯ**

'ಕಾಂಭೋಜರಾಜಕತೆ' ಹಾಗೂ 'ಕೃಷ್ಣಗೊಲ್ಲರ ಕಾವ್ಯ' ಈ ಎರಡು ಕಥನಗಳನ್ನು ಅಭಿವ್ಯಕ್ತಿಸಿದ ವಕ್ತೃಗಳು ಬೇರೆ ಬೇರೆ ಪ್ರದೇಶಗಳಲ್ಲಿ ನೆಲೆಸಿದವರು. ಶಂಕ್ರಮ್ಮ ಅವರು ಹಾಡಿದ ತನ್ನ ಕತೆಗೆ 'ಕಾಂಭೋಜರಾಜಕತೆ' ಎಂದು ಕರೆದರೆ ಈರಮ್ಮನವರು 'ಕೃಷ್ಣಗೊಲ್ಲರ ಕಾವ್ಯ' ಎಂದು ಕರೆದಿದ್ದಾರೆ. ಶಂಕ್ರಮ್ಮನ ಕಥನದ ಶೀರ್ಷಿಕೆ ಕತೆಯ ಮುಖ್ಯಪಾತ್ರವನ್ನು ಪ್ರತಿನಿಧಿಸಿರೆ, ಈರಮ್ಮನ ಕಥನದ ಕತೆಯು ಒಂದು ಸಮುದಾಯವನ್ನು ದೃಷ್ಟಿಯಲ್ಲಿಟ್ಟುಕೊಂಡು ವಾಸ್ತವ ಚಿತ್ರಣವನ್ನು ಕಥನಕ್ಕೆ ಲೇಪನ ಮಾಡಿದ್ದಾರೆ. ತನ್ನ ಸುತ್ತಮುತ್ತಲಿನ ನಡೆದ ಘಟನೆಯಂತೆಯೇ ಕಾಣಿಸುತ್ತದೆ. ಅಲ್ಲಿ ಬರುವ ಪಾತ್ರಗಳು, ಪಟ್ಟಣಗಳ ಹೆಸರುಗಳು, ಸನ್ನಿವೇಶಗಳು ಅವರ ಬಳ್ಳಾರಿ ಪರಿಸರದಿಂದ ಮೂಡಿದ್ದನ್ನು ಕಾಣಬಹುದು. ಆದರೆ ಶಂಕ್ರಮ್ಮನವರ ಕಥನವು ಕಾಲ್ಪನಿಕವಾದರೂ ಎಂದೋ ನಡೆದ ವಾಸ್ತವ ಕತೆ ಎಂಬಂತೆ ಚಿತ್ರಿಸಿದ್ದಾರೆ.

ಕಥನದ ಪ್ರಾರಂಭದಲ್ಲಿ ಪಾತ್ರಗಳ ಹೆಸರಿನಲ್ಲಿ ಭಿನ್ನತೆ ಕಾಣುತ್ತೇವೆ. ಕಾಂಭೋಜರಾಜಕತೆಯಲ್ಲಿ 'ಪಾಂದೇವಿ' ಪಾತ್ರ 'ಕೃಷ್ಣಗೊಲ್ಲರ ಕಾವ್ಯದಲ್ಲಿ 'ನೀಲವೇಣಿ' ಎಂದು ಚಿತ್ರಿತವಾಗಿದೆ. ಆದರೆ ಪಾತ್ರಗಳ ದೃಷ್ಟಿ ಮಾತ್ರ ಒಂದೇ ಆಗಿದೆ. 'ಕಾಂಭೋಜರಾಜಕತೆ' ಯಲ್ಲಿ ಕಾಂಭೋಜರಾಜನಿಗೆ ಏಳು ಮಂದಿ ರಾಣಿಯರು ಇದ್ದು ಒಬ್ಬರಿಗೂ ಮಕ್ಕಳ ಭಾಗ್ಯ ಇಲ್ಲ ಎಂದು ನಿರೂಪಿಸಿದ್ದಾರೆ. ಇಲ್ಲಿ ಕಿರಿಯ ರಾಣಿ ಸಿರಿದೇವಿ ಹೆಸರನ್ನು ಮಾತ್ರ ಅಭಿವ್ಯಕ್ತ ಮಾಡಿದ್ದಾರೆ. ಕೃಷ್ಣಗೊಲ್ಲರ ಕಾವ್ಯದಲ್ಲಿ ಏಳು ಜನ ರಾಣಿಯರ ಹೆಸರು ಪ್ರಸ್ತಾಪಿಸಿದ್ದಾರೆ. ಮಂಕನ್ನದೇವಿ, ಮಾಡಲ್‌ದೇವಿ, ಗಿರಿದೇವಿ, ರತ್ನಾಚಿದೇವಿ, ಸೂರಮ್ಮ ದೇವಿ, ಸುಂಕಮ್ಮದೇವಿ, ಕಿರಿಯರಾಣಿ ಸಿರಿದೇವಿ. ಈ ಕಥನದಲ್ಲಿ ಏಳು ಜನ ರಾಣಿಯರ ಜೊತೆ ಮದುವೆಯಾಗುವ ಸಂದರ್ಭ, ಕನ್ನೆಗಳನ್ನು ಹುಡುಕುವ ಸನ್ನಿವೇಶ ಮುಂತಾದವು ದೀರ್ಘವಾಗಿ, ನೇರವಾಗಿ ಅಭಿವ್ಯಕ್ತ ಮಾಡಿದ್ದಾರೆ. ಆದರೆ 'ಕಾಂಭೋಜರಾಜಕತೆ'ಯಲ್ಲಿ ಈ ಸನ್ನಿವೇಶ ಇಲ್ಲ.

'ಕಾಂಭೋಜರಾಜಕತೆ'ಯಲ್ಲಿ ಜ್ಯೋತಿಷಿಗಳ ಮೂಲಕ ಕಾಂಭೋಜರಾಜನ ಏಳು ಜನ ಹೆಂಡತಿಯರಿಗೆ ಮಕ್ಕಳಾಗದ ವಿಚಾರವನ್ನು ವ್ಯಕ್ತ ಮಾಡಿದ್ದಾರೆ. ಹಾಗೆ ಶಮರಾಜನು ಆಕಳನ್ನು ಕೊಂದಿದ್ದು ಅದರ ಶಾಪ ಹತ್ತಿದ್ದು ಅದರ ದೋಷ ಪರಿಹಾರಕ್ಕಾಗಿ ಬಾವಿ ತೋಡಿಸುವ ವಿಚಾರ, ಎತ್ತುಗಳಿಲ್ಲದೆ ತೋಟ ಮಾಡುವುದು, ಗಿಳಿಗಳು ಬಂದು ಹಣ್ಣು ಸೇವನೆ ಮಾಡಿದರೆ ಮಕ್ಕಳಾಗುವುದು, ಮುಂತಾದ ವಿಚಾರಗಳನ್ನು ಜ್ಯೋತಿಷಿಗಳ ಮೂಲಕ ಅಭಿವ್ಯಕ್ತಪಡಿಸಿದ್ದಾರೆ. ಆದರೆ 'ಕೃಷ್ಣಗೊಲ್ಲರ ಕಾವ್ಯ'ದಲ್ಲಿ ಈ ಸನ್ನಿವೇಶವನ್ನು ನಿರ್ವಹಿಸುವ ತಂತ್ರವಿದೆ.

'ಕಾಂಭೋಜರಾಜಕತೆ'ಯಲ್ಲಿ ಜ್ಯೋತಿಷಿಗಳ ಮೂಲಕ ಮಕ್ಕಳ ಭಾಗ್ಯವನ್ನು ಪಡೆಯುವ ವಿಧಾನವನ್ನು ಕಾಂಭೋಜರಾಜ ತಿಳಿಯುತ್ತಾನೆ. 'ಕೃಷ್ಣಗೊಲ್ಲರ ಕಾವ್ಯ'ದಲ್ಲಿ ಕಾಂಭೋಜರಾಜನು ತಪಸ್ಸಿಗೆ ಹೋಗಿ ತೀರ್ಥಯಾತ್ರೆ ಮಾಡಿದಾಗ, ಮುನೀಶ್ವರನ ಮಾರ್ಗದರ್ಶನದಿಂದ ವನ ಮಠಗಳ ನಿರ್ಮಾಣ, ಗಿಣಿಗಳಿಂದ ಹಣ್ಣು ಸೇವನೆ ಮುಂತಾದ ವಿಷಯಗಳು ಈ ಕಥನದಲ್ಲಿ ನೇರವಾಗಿ ಮೂಡಿಬಂದಿದೆ. ಆದರೆ ಎರಡೂ ಕಥನಗಳಲ್ಲಿ ಮಕ್ಕಳ ಭಾಗ್ಯವನ್ನು ಪಡೆಯಲು, ಅದರ ಕೊರಗನ್ನು ನೀಗಿಸಲು ಒಂದೇ ಪರಿಹಾರ ಮಾರ್ಗವೂ ಕಂಡುಬರುತ್ತದೆ.

ಶಂಕ್ರಮ್ಮ ಅವರ ಕಥನದಲ್ಲಿ ಆರು ಜನ ರಾಣಿಯರಿಗೆ ಆರು ಜನ ಮಕ್ಕಳು ಜನಿಸುವರು. ಕಿರಿಯ ರಾಣಿ ಸಿರಿದೇವಿ ಆ ಮಕ್ಕಳನ್ನು ತಾನೇ ಸಾಕಿ ಸಲಹುವ ಜವಾಬ್ದಾರಿಯನ್ನು ಹೊತ್ತಿರುತ್ತಾಳೆ. ಆ ಮಕ್ಕಳನ್ನು ತೊಟ್ಟಿಲಲ್ಲಿ ಹಾಕಿ ಆರು ಜನ ಮಕ್ಕಳಿಗೆ 'ಚಿತ್ರಗುಪ್ಪಿ' ರಾಜಕುಮಾರರೆಂದು ನಾಮಕರಣ ಮಾಡಿರುತ್ತಾರೆ. ಹಾಗೆಯೇ ಈರಮ್ಮ ಅವರ ಕಥನದಲ್ಲಿ ಈ ಆರು ಜನ ಮಕ್ಕಳಿಗೆ ಬೇರೆ ಬೇರೆ ಹೆಸರನ್ನು ಹೇಳಲಾಗಿದೆ. ಬೇರೆ ಬೇರೆ ಹೆಸರುಗಳನ್ನು ಚಿತ್ರಿಸಿದ್ದರೂ ಕೂಡ ಮುಂದೆ ಕಥನದ ನಿರೂಪಣೆಯ ಸಂದರ್ಭದಲ್ಲಿ ಆರು ಮಂದಿ ಛತ್ತಿರಿಗುಪ್ತರೆ ಎಂದು ಅಲ್ಲಲ್ಲಿ ಅಭಿವ್ಯಕ್ತ ಮಾಡಿದ್ದನ್ನು ಕಾಣಬಹುದು.

ಆರು ಜನ ಹಿರಿಯ ರಾಜಕುಮಾರರನ್ನು 'ಚಿತ್ರಗುಪ್ಪಿ' ರಾಜಕುಮಾರರೆಂದು ಒಂದೇ ಹೆಸರಿಂದ 'ಕಾಂಭೋಜರಾಜಕತೆ'ಯಲ್ಲಿ ಚಿತ್ರಿಸಿದರೆ, 'ಕೃಷ್ಣಗೊಲ್ಲರ ಕಾವ್ಯ'ದಲ್ಲಿ

> "ಆರು ಮಂದಿ ನಾಗಚತ್ತಿರಿ
> ದೇವಚತ್ತಿರಿ ಕುಲಚತ್ತಿರಿ ಮುನಿಚತ್ತಿರಿ
> ಯೋಗಚತ್ತಿರಿ ಭೋಗಚತ್ತಿರಿ
> ಮರಿಯಾದ ಕುಳಿಯೋರು ಅಂತ ಹೆಸರಿಟ್ಟ"(೧೯೯೭: ೨೪೦)

ಎಂದು ಆರು ಜನ ರಾಜಕುಮಾರರ ಹೆಸರನ್ನು ಅಭಿವ್ಯಕ್ತ ಮಾಡಿದ್ದಾರೆ. ಇನ್ನು ಸಿರಿದೇವಿ ಮಗ ಕಿರಿಯ ರಾಜಕುಮಾರನು ಎರಡೂ ಕಥನಗಳಲ್ಲಿ ಸಹೋದರರ ಮನೋಭಾವ, ದೇವರಲ್ಲಿ ನಂಬಿಕೆ, ತಂದೆಯಲ್ಲಿ

ಪ್ರೀತಿ, ತಾಯಿಯಲ್ಲಿ ಮಮತೆ, ಮುಂತಾದ ಮಾನವೀಯ ಮೌಲ್ಯಗಳು ಈ ಪಾತ್ರದಲ್ಲಿ ವ್ಯಕ್ತವಾಗಿದೆ. ಎರಡೂ ಕಥನಗಳಲ್ಲಿ ಮುಖ್ಯಪಾತ್ರವಾಗಿ ಕಿರಿಯ ರಾಜಕುಮಾರ 'ಶರಬಂಧರಾಜ'ನೇ ಇಲ್ಲಿ ಎದ್ದು ಕಾಣುತ್ತಾನೆ.

ಇಲ್ಲಿ ಇಬ್ಬರು ಕಥನಗಾರರ ನಿರೂಪಣೆಯ ಸಂದರ್ಭದಲ್ಲಿ 'ಚಿತ್ರಗುಪ್ಪಿಯರು, ಛತ್ರಿಗುಪ್ತರು ಎಂಬ ನಿರೂಪಣೆಗಳಲ್ಲಿ ಸಾಮ್ಯ ಕಂಡುಬರುತ್ತದೆ. ಇಬ್ಬರ ಕಥನಗಳಲ್ಲಿ ಆರು ಜನ ರಾಜಕುಮಾರರು ದುಷ್ಟರಾಗಿ ಚಿತ್ರಿಸಲ್ಪಟ್ಟಿದ್ದಾರೆ. ಸ್ವಹಿತಾಸಕ್ತಿ, ರಾಜ್ಯದ ಅಧಿಕಾರದ ಲಾಲಸೆ, ದುರಹಂಕಾರ ಮುಂತಾದ ಗುಣಗಳು ಈ ಪಾತ್ರಗಳಲ್ಲಿ ಕಾಣುತ್ತವೆ. ಹೆತ್ತ ತಂದೆಯ ಬಗ್ಗೆ ತಾತ್ಸಾರ ಭಾವನೆಯನ್ನು ವ್ಯಕ್ತಪಡಿಸುವ ದುಷ್ಟರಾಗಿ ಇಲ್ಲಿ ಕಂಡುಬರುತ್ತಾರೆ. ಇವರಿಗೆ ತಂದೆಯ ಮೇಲೆ ಪ್ರೀತಿ ಎಳ್ಳಷ್ಟೂ ಇರುವುದಿಲ್ಲ. ತಂದೆಯ ಆಸ್ಥಾನ ಹಾಗೂ ಸಂಪತ್ತು ಪಡೆಯುವುದರಲ್ಲಿ ಚಿಂತನಮಗ್ನವಾಗಿರುತ್ತಾರೆ. ಇವರು ತಂದೆಯ ಬೆನ್ನಿನ ಹುಣ್ಣಿಗೆ ಔಷಧಿಗಾಗಿ ಹುಡುಕುತ್ತ ಹೋಗಿ, ಅವರು ಹೋಗಿದ್ದ ವಿಚಾರವನ್ನೇ ಮರೆತು ಹೆಣ್ಣಿನ ಮೋಹಕ್ಕೆ ಸಿಲುಕಿ ಸುಂದರಮ್ಮ ಅಥವಾ ಪಾತರಗಿತ್ತಿಯ ಬಲೆಯೊಳಗೆ ಸಿಲುಕಿಕೊಳ್ಳುತ್ತಾರೆ. ಇಲ್ಲಿ ಪಾತ್ರಗಳ ಗುಣವಿಶೇಷಗಳನ್ನು ಅವಲೋಕಿಸಿದಾಗ ಎರಡು ಕಥನಗಳ ಪಾತ್ರಗಳಲ್ಲಿ ಸಾಮ್ಯತೆ ಕಾಣುತ್ತದೆ. ಹಾಗೆ ಸಮಾನ ಅಂಶಗಳು ಕಂಡುಬರುತ್ತವೆ.

ಹಾಗೆಯೇ ಆರು ಜನ ರಾಣಿಯರು ಹಾಗೂ ಸಿರಿದೇವಿ ಈ ಪಾತ್ರಗಳೂ ಸಹ ಎರಡು ಕಥನಗಳಲ್ಲಿ ಸಮಾನವಾದ ಅಂಶಗಳು ಕಾಣುತ್ತವೆ. ಆರು ಜನ ರಾಣಿಯರಲ್ಲಿ ಕೆಟ್ಟ ಭಾವನೆಗಳು, ಮತ್ಸರ ಗುಣಗಳು, ಎರಡು ಕಥನಗಳಲ್ಲಿ ಮತ್ಸರ, ಮೋಸ, ವಂಚನೆ ಕಾಣುತ್ತವೆ. ಹಾಗೆಯೇ ಸಿರಿದೇವಿಯ ಮಾನವೀಯ ಮೌಲ್ಯ, ಪತಿಭಕ್ತಿ, ಮುಂತಾದ ಅಂಶಗಳಲ್ಲಿ ಸಾಮ್ಯ ಇದ್ದುದನ್ನು ಕಾಣುತ್ತೇವೆ.

'ಕಾಂಭೋಜರಾಜಕತೆ'ಯಲ್ಲಿ ಅಡವಿ ಕಾಯುವ 'ಮಲ್ಲಣ' ಪಾತ್ರವು ಆರು ಜನ ಹಿರಿಯ ರಾಜಕುಮಾರರಿಗೆ ಹಾಗೂ ಕಿರಿಯ ರಾಜಕುಮಾರ ಶರಬಂಧರಾಜನಿಗೆ ಮದ್ದನ್ನು ತರಲು ದಾರಿಗಳನ್ನು ತೋರಿಸುತ್ತಾನೆ. 'ಕೃಷ್ಣಗೊಲ್ಲರ ಕಾವ್ಯ'ದಲ್ಲಿ ಗೇಟು ಕಾಯುವ 'ಸುಂಕ'ನು ಹಿರಿಯ ರಾಜಕುಮಾರರು ಹಾಗೂ ಕಿರಿಯ ರಾಜಕುಮಾರನಿಗೆ ಮದ್ದು ಸಿಗುವ ದಾರಿಗಳನ್ನು ತೋರಿಸುತ್ತಾನೆ. ಈ ಎರಡೂ ಕಥನಗಳಲ್ಲಿ 'ಮಲ್ಲಣ್ಣ' ಹಾಗೂ 'ಸುಂಕ' ಎರಡೂ ಪಾತ್ರಗಳಲ್ಲಿ ಅವರು ತೋರಿಸುವ ಮಾರ್ಗದರ್ಶನದ ಸನ್ನಿವೇಶ ಒಂದೇ ಆಗಿದೆ.

ಹಾಗೆಯೇ ಕಾಂಭೋಜರಾಜನಕತೆಯಲ್ಲಿ ಕಾಂಭೋಜರಾಜನಿಗೆ ಬೆನ್ನುಹುಣ್ಣು ಹುಟ್ಟಿಸಿ ಕಷ್ಟವನ್ನು ಕೊಡುವುದು ವಿಶ್ವಾಮಿತ್ರ ಪಾತ್ರದ ಮೂಲಕವಾದರೆ, 'ಕೃಷ್ಣಗೊಲ್ಲರ ಕಾವ್ಯ'ದಲ್ಲಿ ಶನಿಮಾತ್ಮ ಪಾತ್ರದ ಮೂಲಕ ಕಾಂಭೋಜರಾನಿಗೆ ಕಷ್ಟವನ್ನು ಕೊಡುವುದಾಗಿದೆ. ಇಲ್ಲಿ ವಿಶ್ವಾಮಿತ್ರ ಹಾಗೂ ಶನಿಮಾತ್ಮ ಪಾತ್ರಗಳೂ ಬೇರೆ ಬೇರೆಯಾಗಿ ಕಂಡುಬಂದರೂ, ಆ ಪಾತ್ರಗಳ ಉದ್ದೇಶ ಮಾತ್ರ ಒಂದೇ ತೆರನಾಗಿದೆ.

ಶರಬಂಧರಾಜಕುಮಾರನು ತನ್ನ ತಂದೆಯ ಬೆನ್ನಿನ ಹುಣ್ಣಿಗೆ ಮದ್ದನ್ನು ತರಲು ಹೋಗುವ ದಾರಿಯಲ್ಲಿ ಚಿತ್ರಗಿರಿ ಪಟ್ಟಣದ ಚಿತ್ರಾಂಗಿಯನ್ನು ಎರಡು ಹುಲಿಗಳು ಸಾಕಿರುತ್ತವೆ. ರಾಜಕುಮಾರನು ಆ ಹುಲಿಗಳನ್ನು ಸಂಹಾರ ಮಾಡಿ ಚಿತ್ರಾಂಗಿಯನ್ನು ಮದುವೆಯಾಗುತ್ತಾನೆ. ಹಾಗೆಯೇ ಕೃಷ್ಣಗೊಲ್ಲರ ಕಾವ್ಯದಲ್ಲಿ ಈ ಸನ್ನಿವೇಶ ಭಿನ್ನವಾಗಿ ಮೂಡಿಬಂದಿದೆ. ಇಲ್ಲಿ ಭೂಪತಿಪಟ್ಟಣದ ಭೂಪತಿರಾಜನು ಹುಲಿಯ ಉಗುರುಗಳನ್ನು ತಂದವರಿಗೆ ತನ್ನ ಮಗಳಾದ ಮಾಣಿಕ್ಯಲದೇವಿಯನ್ನು ಮದುವೆ ಮಾಡಿಕೊಡುತ್ತೇನೆಂದು ಡಂಗುರ ಸಾರಿರುತ್ತಾನೆ. ಎರಡೂ ಕಥನಗಳಲ್ಲಿ ಶರಬಂಧರಾಜಕುಮಾರನು ತನಗರಿವಿಲ್ಲದೆ ಹುಲಿಗಳನ್ನು ಕೊಂದಿರುತ್ತಾನೆ. ಭೂಪತಿರಾಜನು ನಿಜಸ್ಥಿತಿಯನ್ನು ಅರಿತು ಶರಬಂಧರಾಜನಿಗೆ ತನ್ನ ಮಗಳು ಮಾಣಿಕ್ಯಲದೇವಿಯನ್ನು ಕೊಟ್ಟು ಮದುವೆ ಮಾಡುತ್ತಾನೆ. ಆದರೆ ಹುಲಿಗಳನ್ನು ಕೊಂದಿದ್ದರಿಂದ ಹುಲಿಗಳನ್ನು ಸಾಕಿದ ಪರದೇಶಿಯಾದ ಚಿತ್ರಾಂಗಿಯನ್ನು ಮದುವೆಯಾಗುವುದು 'ಕಾಂಭೋಜರಾಜಕತೆ'ಯಲ್ಲಿ ಬರುತ್ತದೆ. ಇಲ್ಲಿ ಪಾತ್ರಗಳು ಭಿನ್ನವಾಗಿ ಕಂಡುಬಂದರೂ ಸನ್ನಿವೇಶ ಮಾತ್ರ ಒಂದೇ ಆಗಿದೆ.

'ಕಾಂಭೋಜರಾಜಕತೆ'ಯಲ್ಲಿ ಶರಬಂಧರಾಜನು ಘೂಲಾವತಿ, ರೂಪಾವತಿ, ಪಟ್ಟಣದ ನಾಗರಾಜನ ಅಪ್ಪಣೆಯ ಮೇರೆಗೆ ತನ್ನ ಇಬ್ಬರು 'ಪುತ್ರಿಯರಾದ' ಘೂಲಾವತಿ ರೂಪಾವತಿಯನ್ನು ಮದುವೆ ಮಾಡಿಕೊಳ್ಳುತ್ತಾನೆ. ಕೃಷ್ಣಗೊಲ್ಲರ ಕಾವ್ಯದಲ್ಲಿ ದೇವಗಿರಿ ಪಟ್ಟಣದ ನಾಗೇಂದ್ರನ ಮಗಳಾದ ದೇವಸ್ಥಾನಿಯನ್ನು ತಂದೆಯ ಅಪ್ಪಣೆಯ ಮೇರೆಗೆ ಶರಬಂಧರಾಜಕುಮಾರನು ಮದುವೆ ಆಗುತ್ತಾನೆ. ಇಲ್ಲಿಯೂ ಸಹ ಎರಡೂ ಕಥನಗಳಲ್ಲಿ ಸನ್ನಿವೇಶ ಒಂದೇ ಇದ್ದು ಪಾತ್ರಗಳ ಚಿತ್ರಣದಲ್ಲಿ ಭಿನ್ನತೆ ಕಾಣುತ್ತದೆ.

ಎದಿನಗಂಧಿ ಪಟ್ಟಣದ ಬಕಾಸುರನ ಮಗಳು ಎದಿನಗಂಧಿ. ಇವಳ ಹತ್ತಿರ ಗಾಜಿನ ಬಳಿಬುಡ್ಡಿಯಲ್ಲಿ ಮದ್ದು ಇರುತ್ತದೆ. ಶರಬಂಧರಾಜಕುಮಾರನು ಫೂಲಾವತಿ ರೂಪಾವತಿ ಪಟ್ಟಣದಿಂದ ಇಲ್ಲಿಗೆ ಬಂದು, ಬಕಾಸುರನ ಅನುಮತಿ ಪಡೆದು ಎಧಿನಗಂಧಿಯ ಷರತ್ತನ್ನು ಒಪ್ಪಿ ಅವಳನ್ನು ಮದುವೆಯಾಗಿ ಮದ್ದನ್ನು ಪಡೆಯುತ್ತಾನೆ. ಆದರೆ 'ಕೃಷ್ಣಗೊಲ್ಲರ ಕಾವ್ಯ'ದಲ್ಲಿ ಬಕಾಸುರನ ತಂಗಿ ಮಹಿರಾಮನ ಮಗಳು 'ಎದಿನಗಂಧಿ' ಇವಳಲ್ಲಿ ಗಾಜಿನ ಬುಡ್ಡಿಯೊಳಗೆ ಮದ್ದು ಇದೆ. ಆಕೆಯ ಮನೆಯ ಒಳಗೆ ಪ್ರವೇಶವಾಗದಂತೆ ಭದ್ರತೆ ಇರುತ್ತದೆ. ಅದನ್ನು ಆ ಪಟ್ಟಣದ ಹಿರಿಯ ಅಜ್ಜನಿಂದ ಮದ್ದನ್ನು ಪಡೆಯುವ ವಿಧಾನವನ್ನು ಶರಬಂಧ ರಾಜಕುಮಾರನು ತಿಳಿದುಕೊಳ್ಳುತ್ತಾನೆ.

> "ಆಕೆ ಮನ್ಯಾಕ ಹೋಗಾಕಿಲ್ಲ
> ಕಡ್ಡಿ ಹುಲಿ ರಾಕ್ಷಸಿಗಳು
> ಆಗ ಗಂಡಿರುವಿ ಕೆಂಪಿರುವಿ
> ಒಂದೊಂದು ಹೆಗ್ಗಣ ದಪ್ಪ ಐದಾವ
> ತಮ್ಮ ನೀನು ಹೋಗಾಕ ಆಗೋದಿಲ್ಲ ಅಂದ
> ತಾತ ಮತ್ತ ಏನು ಮಾಡಬೇಕು ಅಂದ"(೧೯೯೭: ೬೫೦)

ಶರಬಂಧರಾಜಕುಮಾರನು 'ಎದಿನಗಂಧಿ'ಯ ಸುತ್ತ ಭದ್ರತೆಯನ್ನು ತಿಳಿದುಕೊಂಡು ಅದರ ಒಳಗೆ ಹೋಗುವ ಉಪಾಯವನ್ನು ಅಜ್ಜನಿಂದ ತಿಳಿದುಕೊಳ್ಳುತ್ತಾನೆ. ಅಜ್ಜನು ಅಲ್ಲಿರುವ ಪ್ರಾಣಿಗಳನ್ನು ವಶಮಾಡಿಕೊಳ್ಳಲು ಮೂರು ಹರಳನ್ನು ಮಂತ್ರಿಸಿ ಕೊಡುತ್ತಾನೆ. ಶರಬಂಧರಾಜಕುಮಾರನು ಅಜ್ಜನಿಂದ ಎಲ್ಲಾ ವಿಷಯ ತಿಳಿದುಕೊಂಡು ಅಜ್ಜ ಹೇಳಿಕೊಟ್ಟ ಮೇಘ ರಥದಲ್ಲಿ ಕುಳಿತುಕೊಂಡು ಹಾರಿ 'ಎದಿನಗಂಧಿ'ಯನ್ನು ಕಾಣುತ್ತಾನೆ. ಅಜ್ಜನ ಹೇಳಿಕೆಯಂತೆ ಬೆಳ್ಳಿ ಪಾದಗಳನ್ನು ತೊಟ್ಟು ಸಮುದ್ರದ ಮಧ್ಯದಲ್ಲಿ ಇರುವ 'ಎದಿನಗಂಧಿ' ಹತ್ತಿರ ಹೋಗಿ ಇಳಿದು, ಅಜ್ಜನು ಹೇಳಿದ ಉಪಾಯವನ್ನು ಅಲ್ಲಿ ಪ್ರಯೋಗಿಸುತ್ತಾನೆ.

> "ಈಗ ಮಾತಾಡೋ ಅಡಿಕೆ
> ನಗೋ ಎಲೆ ಓಡ್ಯಾಡೋ ಕಾಂಚು
> ಅಡಿಕೆ ಹಾಕ್ಯಂಡು
> ಉಗುಳಿ ಬಿಟ್ಟ
> ಈಗ ಎದೆ ಮ್ಯಾಲೆ ಎಡಗಾಲು ಇಟ್ಟು
> ಊರು ಹೆಸರು
> ತಾಯಿ ತಂದೆ ಹೆಸರು
> ಗರ್ ಗರ್ ಗರ್ ಪತ್ರ ಬರೆದು
> ಮುತ್ತಿನ ಸೆರಗಿನ ಗಂಟು ಹಾಕಿದ
> ತಲೆ ಕೂದಲು ಮಿಸುಗ್ಯಾಡಲಾರ್ದೆ
> ಎಡಗೈಲಿ ತೋರಿಸಿ
> ಗಾಜಿನ ಬುಡ್ಡಿ ಮದ್ದು ತಗಂಡು
> ಸಲ್ಲೇದಾಗ ಹಾಕ್ಯಂಡು
> ನಡುವಿಗೆ ಕಟ್ಟಿಕೊಂಡು"(೧೯೯೭: ೯೫೭)

ಎದಿನಗಂಧಿಗೆ ಮಸಿಯಿಂದ ಮೂರು ನಾಮ ಇಟ್ಟು ಎರಡು ಮೀಸೆ ಇಟ್ಟು ಮದ್ದನ್ನು ತೆಗೆದುಕೊಂಡು ಬರುತ್ತಾನೆ. ಎರಡೂ ಕಥನಗಳಲ್ಲಿ ಎದಿನಗಂಧಿ ಪಾತ್ರದಲ್ಲಿ ಅವಳ ತಲೆಯ ಕೆಳಗೆ ಮದ್ದು ಇದ್ದರೆ ಮಾತ್ರ ನಿದ್ದೆ ಬರುತ್ತಿರುತ್ತದೆ. ಅದು ಇಲ್ಲದೆ ಹೋದರೆ ನಿದ್ದೆ ಬರುವುದಿಲ್ಲ. ತನ್ನ ತಲೆಯ ಕೆಳಗೆ ಇದ್ದ ಮದ್ದನ್ನು ಶರಬಂಧರಾಜಕುಮಾರನು ತೆಗೆದುಕೊಂಡು ಹೋದ ಕೂಡಲೇ ಎಚ್ಚರವಾಗಿ ಸುತ್ತ ಮುತ್ತ ನೋಡುತ್ತಾಳೆ. ಅಲ್ಲೇ ಬರೆದು ಇಟ್ಟ ಪತ್ರ ಓದಿ, ಕನ್ನಡಿಯಲ್ಲಿ ಮುಖ ನೋಡಿಕೊಂಡರೆ ಮೂರು ನಾಮ, ಮೀಸೆ ಇದನ್ನು ಕಂಡು ಕ್ರೋಧಗೊಂಡ, ಎದಿನಗಂಧಿ ಶರಬಂಧರಾಜಕುಮಾರನನ್ನು ಹುಡುಕುತ್ತಾ

ಬರುತ್ತಾಳೆ. ಅರ್ಜುನ ಜೊತೆಯಲ್ಲಿ 'ಶರಬಂಧ' ಇರುತಾನೆ. ಅವಳು ಬಂದ ಕೂಡಲೇ 'ಶರಬಂಧ'ನು ಅವಳ ಹನ್ನೆರಡು ಕೈ ಉಚ್ಚಿ ಬೀಳಲು, ಅರ್ಜುನು ಕೊಟ್ಟ ಬಾಣವನ್ನು ಪ್ರಯೋಗಿಸುತ್ತಾನೆ. ಆಗ ಹನ್ನೆರಡು ಕೈಗಳು ಉರುಳಿ ಬಿದ್ದು ಎರಡು ಮಾತ್ರ ಉಳಿಯುತ್ತವೆ. ಎದಿನಗಂಧಿ 'ಶರಬಂಧ'ನಿಗೆ ಶರಣಾಗಿ ಮದುವೆಯಾಗಲು ಬೇಡಿಕೊಳ್ಳುತ್ತಾಳೆ. 'ಕಾಂಭೋಜರಾಜಕತೆ'ಗಿಂತ ಈ ಕಥನದಲ್ಲಿ ಈ ಸನ್ನಿವೇಶವು ದೀರ್ಘವಾಗಿ ನಿರೂಪಣೆಗೊಂಡಿದೆ. 'ಕಾಂಭೋಜರಾಜಕತೆ'ಯಲ್ಲಿ ತಂದೆಯ ಅಪ್ಪಣೆ ಮೇರೆಗೆ ಮದುವೆಯಾದರೆ 'ಕೃಷ್ಣಗೊಲ್ಲರ ಕಾವ್ಯ'ದಲ್ಲಿ ಯುದ್ಧ ಮಾಡಿ ಗೆದ್ದು ಮದುವೆಯಾಗುತ್ತಾನೆ. 'ಎದಿನಗಂಧಿ' ಪಾತ್ರವು 'ಕಾಂಭೋಜರಾಜಕತೆ'ಯಲ್ಲಿ ಬಕಾಸುರನ ಮಗಳಾದರೆ 'ಕೃಷ್ಣಗೊಲ್ಲರ ಕಾವ್ಯ'ದಲ್ಲಿ ಬಕಾಸುರನ ತಂಗಿ ಮಹಿರಾಮನ ಮಗಳು. ಎರಡೂ ಕಥನಗಳಲ್ಲಿ 'ಎದಿನಗಂಧಿ' ಸಮುದ್ರದ ಮಧ್ಯದಲ್ಲಿ ವಾಸವಾಗಿರುತ್ತಾಳೆ.

ಚಾವುಲರಾಜ ಪಟ್ಟಣದ ಚಾವುಲರಾಜ ಮಗಳು ಶಾಮಗಂಧಿ. ಇವಳನ್ನು ಸಹ ತಂದೆಯ ಒಪ್ಪಿಗೆ ಮೇರೆಗೆ ಶರಬಂಧರಾಜಕುಮಾರನು ಮದುವೆಯಾಗುತ್ತಾನೆ. ಈ ಪಾತ್ರಗಳು 'ಕೃಷ್ಣಗೊಲ್ಲರ ಕಾವ್ಯ'ದಲ್ಲಿ ಮಾತ್ರ ಚಿತ್ರಿತವಾಗಿದೆ. 'ಎದಿನಗಂಧಿ'ಯು ಸಹ ಚಾವುಲರಾಜನ ಮಗಳೇ, ಶಾಮಗಂಧಿ ಮತ್ತು ಎದಿನಗಂಧಿ ಇಬ್ಬರು ಅಕ್ಕತಂಗಿಯರು. ಈ ಸನ್ನಿವೇಶವು 'ಕಾಂಭೋಜರಾಜಕತೆ'ಯಲ್ಲಿ ಮೂಡಿಬಂದಿಲ್ಲ.

ಕೊನೆಗೆ ಶರಬಂಧರಾಜನು ಎಲ್ಲಾ ಪಟ್ಟಣಗಳ ಕನ್ಯೆಗಳನ್ನು ಮದುವೆ ಮಾಡಿಕೊಂಡು ಸುಂದರಮ್ಮ ಪಟ್ಟಣಕ್ಕೆ ಬರುತ್ತಾನೆ. ಸುಂದರಮ್ಮಳನ್ನು ಗೆಲ್ಲುವ ವಿಧಾನವನ್ನು ಪಟ್ಟಣದ ಬಡಿಗೇರ ಮೋನಯ್ಯನಿಂದ ತಿಳಿದುಕೊಳ್ಳುತ್ತಾನೆ. ಶರಬಂಧರಾಜನು ಬಡಿಗೇರ ಮೋನಯ್ಯ ತಿಳಿಸಿದ ಉಪಾಯದಿಂದ ಆತನ ತಂತ್ರದಿಂದ ಸುಂದರಮ್ಮಳನ್ನು ಗೆಲ್ಲುವುದು ಕಾಣುತ್ತೇವೆ. ಆರು ಜನ ಹಿರಿಯ ಅಣ್ಣಂದಿರನ್ನು ಸುಂದರಮ್ಮಳಿಂದ ಬಿಡಿಸಿಕೊಂಡು ಬರುತ್ತಾನೆ. ತಮ್ಮನ ಮೇಲಿನ ಹೊಟ್ಟೆಕಿಚ್ಚಿನಿಂದ ಬದುಕಿಸಿದ ತಮ್ಮನನ್ನೇ ಕೊಲ್ಲುವ ಪ್ರಸಂಗವು ಬರುತ್ತದೆ. ನಂತರ ಪರಮಾತ್ಮನು ಶರಬಂಧನನ್ನು ಬದುಕಿಸುತ್ತಾನೆ. ಆರು ಜನ ಹಿರಿಯ ರಾಜಕುಮಾರನನ್ನು ಕುರುಡರನ್ನಾಗಿ ಮಾಡುತ್ತಾನೆ. ಇಲ್ಲಿ ಬದುಕಿದ 'ಶರಬಂಧ' ಮತ್ತೆ ತನ್ನ ಉದಾರ ಗುಣದಿಂದ ಅಣ್ಣಂದಿರಿಗೆ ಸೇವೆ ಮಾಡಲು ಅವರಿಗೆ ಊಟಕ್ಕೆ ಕೊಡಲು ಹೆಂಡತಿಯರಿಗೆ ಹೇಳುತ್ತಾನೆ. ಶರಬಂಧನಲ್ಲಿ ಮಾನವೀಯತೆ ಕಂಡುಬಂದರೆ, ಆರು ಜನ ಚಿತ್ರಗುಪ್ತ ರಾಜರಲ್ಲಿ ದುರ್ಬುದ್ಧಿ, ದುಷ್ಟತನ ಕಾಣುತ್ತದೆ. ಆದರೆ 'ಕೃಷ್ಣಗೊಲ್ಲರ ಕಾವ್ಯ'ದಲ್ಲಿ ಇಲಾಮಂತ್ರ ಪಟ್ಟಣದ 'ಪಾತರಗಿತ್ತಿ' ಬರುತ್ತಾಳೆ. ಇಲ್ಲಿ ಆ ಪಟ್ಟಣದ ಬಡಿಗೇರ ಶಿವ, ಕಂಬರಿ ಕಾಳ ಪಾತ್ರಗಳು ಬಂದು, 'ಶಿವ' ಮತ್ತು 'ಕಾಳ' ಇಬ್ಬರು ಅಣ್ಣತಮ್ಮಂದಿರು ಇವರು ಶರಬಂಧರಾಜನಿಗೆ ಪಾತರಗಿತ್ತಿಯನ್ನು ಗೆಲ್ಲುವ ತಂತ್ರವನ್ನು ತಿಳಿಸಿಕೊಡುತ್ತಾರೆ. ಶರಬಂಧರಾಜಕುಮಾರನು ಶಿವ ಕಾಳ ಹೇಳಿದ ತಂತ್ರವನ್ನು ಉಪಯೋಗಿಸಿ 'ಪಾತರಗಿತ್ತಿ'ಯನ್ನು ಗೆಲ್ಲುತ್ತಾನೆ.

"ಆಡುವಾಗ

ಕರಡಿಗೆ ಹಸಿಹಿಟ್ಟು ಹಾಕಿದ

ಡೊಳ್ಳು ಕೆಳಗಿದ್ದು

ಹುಲಿರಾಜಗೆ ಕೇಜಿ ಮಾಂಸ ಹಾಕ್ದ

ಮ್ಯಾಳ ಕೆಳಗಿದ್ದು

ಆಗ ಏನು ಮಾಡ್ದ

ಮಾವಿನ ಹಣ್ಣು ಕೋತಿಗೆ ಕೊಟ್ಟ

ಅದು ತಾಳ ಕೆಳಗಿದ್ದು

ಆಗ ಸತ್ತೋಗಿದ್ದ ಚಿಕ್ಕಇಲಚಿ ಮುಂದೆ ಒಗೆದು ಬಿಟ್ಟ

ಅದು ದೀಪ ಕೆಳಗಿತ್ತು

ತಿನ್ನಕಾಂತ ಕುಂತುಕೊಂಡವು"(೧೯೯೭: ೭೧೮)

ಇಲ್ಲಿ ಪಾತರಗಿತ್ತಿಯನ್ನು ಗೆಲ್ಲಲು ಮಾಡುವ ತಂತ್ರವಿದೆ. ಇವನ್ನು ಅವಲೋಕಿಸಿದಾಗ ಎರಡೂ ಕಥನಗಳಲ್ಲಿ ಪಾತ್ರಗಳ ಹೆಸರುಗಳಲ್ಲಿ ವ್ಯತ್ಯಾಸ ಮಾತ್ರ ಕಂಡುಬರುತ್ತದೆ. ಆದರೆ ಸನ್ನಿವೇಶ ಸಂದರ್ಭವನ್ನು ನೋಡಿದಾಗ ಸಾಮ್ಯತೆ ಕಂಡುಬರುತ್ತದೆ.

'ಕೃಷ್ಣಗೊಲ್ಲರ ಕಾವ್ಯ'ದಲ್ಲಿ ಒಂದು ಸಮುದಾಯವನ್ನು ಗುರಿಯಾಗಿಟ್ಟುಕೊಂಡು ಚಿತ್ರಿಸಿದ್ದು ಕಾಣಬಹುದು. 'ಕಾಂಭೋಜರಾಜಕತೆ'ಯಲ್ಲಿ ಅಂತಹ ದೃಷ್ಟಿಕೋನ ಕಾಣದಿದ್ದರೂ, ಎರಡೂ ಕಥನಗಳಲ್ಲಿ ಕೊನೆಗೆ ಶರಬಂಧರಾಜನು ತಾಯಿತಂದೆಯ ಆಶೆಯಂತೆ ತಮ್ಮ ಗೊಲ್ಲ ಸಮುದಾಯದ ಕನ್ಯೆಯನ್ನೇ ಮದುವೆಯಾಗುವ ಸನ್ನಿವೇಶ ಕಾಣುತ್ತೇವೆ. ಕಾಂಭೋಜರಾಜನು ಅದೇ ಶಾಂಪುರ ಪಟ್ಟಣದ ಗೊಲ್ಲ ಮಲ್ಲಯ್ಯ ಕಮಲಮ್ಮ ಮಕ್ಕಳಾದ ಗಿರಿದೇವಿ, ರತ್ನಾಚಿದೇವಿಯ ಜೊತೆ ಮದುವೆ ಮಾಡುತ್ತಾನೆ. ಹಾಗೆಂಯೇ 'ಕೃಷ್ಣಗೊಲ್ಲರ ಕಾವ್ಯ'ದಲ್ಲಿ ಅದೇ ಜನಾಂಗದ ಗೊಲ್ಲ ನೀಲಮ್ಮಳೊಂದಿಗೆ ಶರಬಂಧರಾಜಕುಮಾರನ ಮದುವೆಯು ಆಗುತ್ತದೆ. ಹೀಗೆ ಇಡೀ ಕಥನವನ್ನು ಪರಿಶೀಲಿಸಿದರೆ ಎರಡೂ ಕಥನಗಳಲ್ಲಿ ಕಥನದ ಆಶಯವೂ ಒಂದೇ ಇದೆ. ಆದರೆ ಪಾತ್ರಗಳ, ಪಟ್ಟಣಗಳ ಹೆಸರುಗಳಲ್ಲಿ ಮಾತ್ರ ಕೆಲವು ಕಡೆ ವ್ಯತ್ಯಾಸ ಕಂಡುಬರುತ್ತದೆ. ಮುಖ್ಯವಾಗಿ ಇಲ್ಲಿ ಕಥನಗಾರರು ಪಾತ್ರಗಳ ಸೃಷ್ಟಿ, ಪಟ್ಟಣಗಳ ಸೃಷ್ಟಿ, ಕಥನದ ವಿಷಯ ವಸ್ತು ಅದ್ಭುತವಾಗಿ ಮೂಡಿಬಂದಿದೆ. ಕಥನದಲ್ಲಿ ಸಾಮಾನ್ಯ ಜನರ ವಾಸ್ತವ ಬದುಕು ಅಭಿವ್ಯಕ್ತಗೊಂಡಿದ್ದರಿಂದ ಕೇಳುಗರ ಮೇಲೆ ಈ ಕಥನವು ತುಂಬ ಪರಿಣಾಮ ಬೀರಿರುತ್ತದೆ. ಇಂಥ ಕಥನಗಳು ಕೇಳುಗರಿಗೆ ಸಾಮಾಜಿಕ ಸಂದೇಶವನ್ನು ನೀಡುತ್ತವೆ.

**ರಾಣಿಯರ ಕುತಂತ್ರ**

'ಕಾಂಭೋಜರಾಜಕತೆ' ಹಾಗೂ 'ಕೃಷ್ಣಗೊಲ್ಲರ ಕಾವ್ಯ' ಈ ಎರಡೂ ಕಥನಗಳಲ್ಲಿ ಆರು ಜನ ಹಿರಿಯ ರಾಣಿಯರು ತಮ್ಮ ಕುತಂತ್ರದಿಂದ 'ಸಿರಿದೇವಿ'ಯ ಆರೈಕೆಯಲ್ಲಿ ಬೆಳೆಯುತ್ತಿದ್ದ ತಮ್ಮ ಮಕ್ಕಳನ್ನು

ಒಲಿಸಿಕೊಳ್ಳುವುದು, ಸಿರಿದೇವಿಯಿಂದ ದೂರ ಮಾಡುವುದೇ ಇವರ ತಂತ್ರವಾಗಿರುತ್ತದೆ. 'ಕಾಂಭೋಜರಾಜಕತೆ' ಯಲ್ಲಿ ಆರು ಜನ ಹಿರಿಯ ಮಕ್ಕಳು ಶಾಲೆಗೆ ಹೋಗಿ ಬರುವುದನ್ನು ಆರು ಮಂದಿ ತಾಯಿಯರು ಕಣ್ಣಿಂದ ನೋಡಿ, ನಾವು ಹಡೆದು ಬಂಜೆಯ ಸಿರಿದೇವಿಯ ಆರೈಕೆ ಮಾಡಲು ಕೊಟ್ಟಿದ್ದೇವೆ. ಮಕ್ಕಳ ವಾತ್ಸಲ್ಯವನ್ನು ಅವಳು ನೋಡುತ್ತಿದ್ದಾಳೆ. ನಾವು ಹಡೆದು ಬಂಜೆಯರಾಗಿದ್ದೇವೆ. ಆ ಮಕ್ಕಳು ನಮ್ಮ ವಶಕ್ಕೆ ತೆಗೆದುಕೊಳ್ಳಬೇಕೆಂದು ಆರು ಜನ ಅಕ್ಕತಂಗಿಯರು ಮಾತನಾಡಿಕೊಂಡು ಬಜಾರಕ್ಕೆ ಬಂದು ಅಂಗಡಿಯಿಂದ 'ಔಷಧಿ'ಯನ್ನು ತೆಗೆದುಕೊಳ್ಳುತ್ತಾರೆ. ನಂತರ ಮಾವಿನ ಹಣ್ಣುಗಳನ್ನು ತೆಗೆದುಕೊಂಡು ಅದರ ಮೇಲಿನ ತೊಗಟೆ ತೆಗೆದು ವಿಷ ಬೆರೆಸಿ ಕೊಡಲು ಬರುತ್ತಾರೆ. ಅವುಗಳನ್ನು ತಂದು ತಂಗಿ ಸಿರಿದೇವಿ ಕೈಗೆ ಕೊಡುತ್ತಾರೆ.

ಹಾಗೆಯೇ 'ಕೃಷ್ಣಗೊಲ್ಲರ ಕಾವ್ಯ'ದಲ್ಲಿ ಆರು ಜನ ಹಿರಿಯ ರಾಣಿಯರು ತಮ್ಮ ಅರಮನೆಯ ಮೇಲಿಂದ ತಮ್ಮ ಮಕ್ಕಳು ಆಟವಾಡುವುದನ್ನು ಕಂಡು ಆ ಮಕ್ಕಳು ದೊಡ್ಡವರಾಗಿದ್ದಾರೆ. ಆ ಮಕ್ಕಳ ಪ್ರೀತಿ, ವಾತ್ಸಲ್ಯ ನಾವು ನೋಡಲಿಲ್ಲ, ಆ ಮಕ್ಕಳು ಸಿರಿದೇವಿಯನ್ನು ಬಿಟ್ಟು ಬರುವುದಿಲ್ಲ, ಹೀಗಾಗಿ ಆ ಮಕ್ಕಳನ್ನು ತಮ್ಮ ವಶ ಮಾಡಿಕೊಳ್ಳಬೇಕೆಂದು ಆರು ಜನ ರಾಣಿಯರು ಮಾತನಾಡಿಕೊಂಡು ಒಂದು ಉಪಾಯವನ್ನು ಹೂಡುತ್ತಾರೆ.

> "ಏನಿಲ್ಲ ಇರಿಶೆಟ್ಟಿ ಅಂಗಡಿಗೆ ಹೋಗೋದು
> ತೊಲ ತೂಕ ಮದ್ದು ಕೊಂಡುಕೊಳ್ಳೋದು
> ಅದು ಏನು ಸಾಯೋದಲ್ಲ
> ಸುಮ್ನೆ ಮಾತನಾಡಲಾರದಂಗ ಕೆಳಗ ಬೀಳೋದು"(೧೯೬೭: ೫೫೦)

ಎಂದು ಆರು ಜನ ಮಾತನಾಡಿಕೊಳ್ಳುತ್ತಾರೆ. ಅಂಗಡಿಗೆ ಹೋಗಿ 'ವಿಷ'ವನ್ನು ತೆಗೆದುಕೊಂಡು ದೊಡ್ಡ ದೊಡ್ಡ ಮಾವಿನ ಹಣ್ಣುಗಳನ್ನು ತೆಗೆದುಕೊಂಡು 'ಉಗುರಗಲ ಕೊಯ್ದು ಅದರಾಗ ಮದ್ದು ತುಂಬಿಸೋದು' ಅದನ್ನು ತೆಗೆದುಕೊಂಡು ಗೋಲಿ ಹಾಡುವ ಹುಡುಗರ ಹತ್ತಿರ ಹೋದರೆ ಓಡಿ ಹೋಗಿ ಸಿರಿದೇವಿ ಹತ್ತಿರ ಕುಳಿತುಕೊಳ್ಳುತ್ತಾರೆ. ಆಗ 'ವಿಷ'ದ ಹಣ್ಣುಗಳನ್ನು ಸಿರಿದೇವಿ ಕೈಗೆ ಕೊಟ್ಟರೆ, ಅವಳು ಮಕ್ಕಳಿಗೆ ತಿನ್ನಲು ಕೊಟ್ಟರೆ ಅ ಅಪರಾಧ ಅವಳ ಮೇಲೆ ಬಂದು ಮಕ್ಕಳು ನಮ್ಮ ಕೈಗೆ ಸಿಗುತ್ತಾರೆಂದು ಮಾತನಾಡಿಕೊಂಡು ಬಂದು ಸಿರಿದೇವಿಯ ಕೈಗೆ ವಿಷದ ಹಣ್ಣುಗಳನ್ನು ಕೊಡುತ್ತಾರೆ. ಜನಪದ ಕಥನಗಳಾಗಿದ್ದರಿಂದ ಒಬ್ಬರಿಂದ ಒಬ್ಬರಿಗೆ ಸಾಗಿ ಕಥನಗಳು ವಿಕಾಸ ಹೊಂದಿ ಕೆಲವು ಬದಲಾವಣೆಗಳನ್ನು ಪಡೆದುಕೊಳ್ಳುವುದು ಸಾಮಾನ್ಯ.

## ಶಿಕ್ಷೆ

ಜನಪದ ಕಥನಗಳಲ್ಲಿ ಅದರದೇ ಆದ ಶಿಕ್ಷೆಯ ಪದ್ಧತಿಯು ಮೂಡಿ ಬಂದಿರುತ್ತದೆ. ಈ ಕಥನದಲ್ಲಿ ಕಿರಿಯ ರಾಣಿ ಸಿರಿದೇವಿ ಮೇಲೆ ಆರು ಜನ ಮಕ್ಕಳಿಗೆ ಹಣ್ಣಿನಲ್ಲಿ ವಿಷ ಬೆರೆಸಿ ಕೊಟ್ಟಿದ್ದಾಳೆಂಬ ಆಪಾದನೆ ಬರುತ್ತದೆ. ಕಾಂಭೋಜರಾಜನು ತನ್ನ ಆಸ್ಥಾನದಲ್ಲಿ ಕುಳಿತುಕೊಂಡು ಪಟ್ಟಣದ ಹಿರಿಯರನ್ನು ಕರೆಸಿ, ವಿಷವನ್ನು ಕೊಟ್ಟಿದ್ದಂತಹ ವ್ಯಕ್ತಿಗೆ ಯಾವ ಶಿಕ್ಷೆ ಕೊಡಬೇಕೆಂದು ಕೇಳುತ್ತಾನೆ. ಈ ಸನ್ನಿವೇಶ ಎರಡೂ ಕಥನಗಳಲ್ಲಿ ಮೂಡಿಬಂದಿದೆ. ಪಟ್ಟಣದ ಹಿರಿಯರು 'ವಿಷ' ಕೊಟ್ಟವರಿಗೆ ಎಂತಹ ಶಿಕ್ಷೆಯನ್ನು ಕೊಡಬೇಕೆಂದು ಸಲಹೆ ನೀಡುತ್ತಾರೆಂದರೆ,

ಊರಿಗೊಂದು ಹರದಾರಿ ಸುಡುಗಾಡಿ
ಗಡ್ಡಿಯೊಳಗೆ ನ್ಯಾಲ ಬೊಯ್ಯಾರ ಅಗಳಿ
ನ್ಯಾಲ ಬೊಯ್ಯಾರ ಒಳಗೆ
ಉಕ್ಕಿನ ವರುಸ ಮಾಡಿಸಬೇಕು
ಉಕ್ಕಿನ ವರುಸಕ್ಕೆ
ಚೂಜಿಗಳು ದಬ್ಬಣಗಳು ಇಡಬೇಕು
ನೆಗ್ಗಿನ ಮುಳ್ಳು ಹಾಸಿಗೆ ಇರಬೇಕು
ಕಾಲಿಗೆ ಲಾಲ್‌ಬಂದ್ ಬೇಡಿ
ಕೈಯಿಗಿ ಲಾಲ್‌ಬಂದ್ ಬೇಡಿ
ತಲಿಗೆ ಉಕ್ಕಿನ ಟೊಪ್ಪಿಗಿ
ಟೊಂಕಕೆ ಉಕ್ಕಿನದು ಡಾಬು
ಕಣ್ಣಿಗೆ ಉಕ್ಕು ಚಸ್ಮ
ಇಷ್ಟು ಪಾಬಂದಿ ಮಾಡಿ(ಶಂಕ್ರಮ್ಮ, ಕಾಂ.ರಾ.ಕ)

ಈ ರೀತಿಯಾಗಿ ಹಿರಿಯರು ರಾಜನಿಗೆ ಸಲಹೆ ನೀಡುತ್ತಾರೆ. ತಪ್ಪು ಮಾಡಿದವರಿಗೆ ಎಂತಹ ಶಿಕ್ಷೆಯನ್ನು ವಿಧಿಸುತ್ತಿದ್ದರೆಂಬುದು ಈ ಸನ್ನಿವೇಶದಿಂದ ಗೊತ್ತಾಗುತ್ತದೆ. ಇಲ್ಲಿ ಶಿಕ್ಷೆಗೆ ಒಳಪಡುವವರು ಯಾರೇ ಇರಲಿ ಎಲ್ಲರಿಗೂ ಒಂದೆ ನ್ಯಾಯ ಎಂಬ ಅಂಶವು ವ್ಯಕ್ತವಾಗಿದೆ. ಇಲ್ಲಿ ಭೇದಭಾವ ಉಳ್ಳವರು, ಇಲ್ಲದವರು ಎನ್ನುವ ಯಾವುದೇ ವ್ಯತ್ಯಾಸವಿಲ್ಲ. ಅತ್ಯಂತ ಕಠಿಣ ಶಿಕ್ಷೆಯನ್ನು ನೀಡುವ ಒಂದು ವ್ಯವಸ್ಥೆ ಇತ್ತೆಂಬುದು ತಿಳಿದುಬರುತ್ತದೆ. ಆ ಶಿಕ್ಷೆಯಿಂದ ಅಂತಹ ತಪ್ಪನ್ನು ಮತ್ತೊಬ್ಬರು ಮಾಡಬಾರದೆಂಬ ಉದ್ದೇಶದಿಂದ ಕಠಿಣ ಶಿಕ್ಷೆ ವಿಧಿಸುತ್ತಿರುವುದು ಗೊತ್ತಾಗುತ್ತದೆ. ಪಟ್ಟಣದ ಹಿರಿಯರು ತಪ್ಪು ಮಾಡಿದವರನ್ನು ಕುರಿತು ಈ ರೀತಿ ಹೇಳುತ್ತಾರೆ. ಸ್ಮಶಾನದಲ್ಲಿ ಗವಿಯನ್ನು ತೋಡಿ ಅದರೊಳಗೆ ಉಕ್ಕಿನ ಮಂಚ ಇಟ್ಟು

ಅದಕ್ಕೆ ಡಬ್ಬಣ, ಚೂಜಿಗಳನ್ನು ನೆಟ್ಟು ಅದರ ಮೇಲೆ ಸಿರಿದೇವಿಯನ್ನು ಮಲಗಿಸಬೇಕೆಂದು ಹೇಳುತ್ತಾರೆ ಇಲ್ಲಿ ಶಿಕ್ಷೆಯ ವಿಧಾನ ಮೂಡಿಬಂದಿದೆ. ಈ ಸನ್ನಿವೇಶ ಕೃಷ್ಣಗೊಲ್ಲರ ಕಾವ್ಯ'ದಲ್ಲೂ ಸಹ ಬರುತ್ತದೆ.

"ಮದ್ದಿಟ್ಟು ಕೊಲ್ಲಿದ ಹೆಣ್ಣುಮಕ್ಕಳಿಗೆ

ಏನು ಮಾಡಬೇಕೆಂತ ಕೇಳಿದೆ

ಅವರನ್ನು ಬಡೀಬಾರದ್ದು ಬೈಯಿಬಾರ್ದು

ಕಬ್ಬಿಣ ವರುಸ

ವರುಸಕ್ಕೆ ಕತ್ರಿ ಕುಡಗೋಲಿರಬೇಕು

ಎಡಕ್ಕೆ ಬಲಕ್ಕೆ ಡಬ್ಬಣ ಸೊಜ್ಜಿ

ಇರಬೇಕು ವರುಸಕ್ಕೆ

ಒಂದು ಪುಟ್ಟಿ ಡಬ್ಬಿಗಳ ಮುಳ್ಳು

ಒಂದು ಪುಟ್ಟಿ ನೆಗ್ಗಿನ ಮುಳ್ಳು

ನೆಲಮನಿ ಗರಡಿಯೊಳಗೆ

ಸುಡುಗಾಡು ರುದ್ರ ಭೂಮಿಯಾಗ

ಒಡ್ರುಕೂಟ ಭೋಯೋರ ತೋಡ್ಸಬೇಕು"(೧೯೯೭: ೩೭೧)

ಎರಡೂ ಕಥನಗಳಲ್ಲಿ ಶಿಕ್ಷೆಯ ವಿಧಾನವನ್ನು ಪಟ್ಟಣದ ಹಿರಿಯರು ತಿಳಿಸುತ್ತಾರೆ. ಎರಡೂ ಇಬ್ಬರ ಕಥನಗಳಲ್ಲಿ ಭಯಾನಕ ಶಿಕ್ಷೆಯ ವಿಧಾನ ಇದೆ. ಇಲ್ಲಿ ಗಂಡು-ಹೆಣ್ಣು ಭೇದವಿಲ್ಲದೆ ಶಿಕ್ಷೆಯ ವಿಧಾನವನ್ನು ವ್ಯಕ್ತಪಡಿಸಿದ್ದಾರೆ. ಅಪರಾಧ ಮಾಡಿದ ಸ್ತ್ರೀಗೆ ಹೊಡೆಯಬಾರದು, ಬಯ್ಯಬಾರದೆಂದು ಹೇಳುತ್ತ ನೆಲವನ್ನು ಅಗಳಿ ಅದರೊಳಗೆ ಉಕ್ಕಿನ ಮಂಚ, ಅದಕ್ಕೆ ದಬ್ಬಣಗಳು, ಸೂಜಿಗಳು ನೆಡಬೇಕೆಂದು ಕಾಂಭೋಜರಾಜ ಕತೆಯಲ್ಲಿ ಮೂಡಿದರೆ, ಕಬ್ಬಿಣ ಮಂಚ ಅದಕ್ಕೆ ಕತ್ತರಿ, ಕುಡುಗೋಲು ಅಲ್ಲದೆ ಡಬ್ಬಣ, ಸೂಜಿ ನೆಡಬೇಕೆಂಬ 'ಕೃಷ್ಣಗೊಲ್ಲರ ಕಾವ್ಯ'ದಲ್ಲಿ ಮೂಡಿಬಂದಿದೆ. ಎರಡು ಕಥನಗಳ ನಿರೂಪಣೆಯಲ್ಲಿ ವ್ಯತ್ಯಾಸವಿರುವುದನ್ನು ಗಮನಿಸಬಹುದು.

**ಪತಿಧರ್ಮ**

ಸಿರಿದೇವಿಯ ಪಾತ್ರವು ಎರಡೂ ಕಥನಗಳಲ್ಲಿ ಮುಖ್ಯವಾಗಿದೆ. ಸ್ತ್ರೀಯ ಮೌಲ್ಯಗಳು ಈ ಪಾತ್ರದಲ್ಲಿ ವ್ಯಕ್ತವಾಗಿವೆ. ಹೆಣ್ಣಿನ ಸಹನೆ, ಕರುಣಾಮಯ ಮನೋಭಾವನೆ, ಮಾತೃವಾತ್ಸಲ್ಯ, ಸಂಪ್ರದಾಯ, ದೇವರಲ್ಲಿ ನಂಬಿಕೆ, ಪತಿಭಕ್ತಿ ಮುಂತಾದ ಮೌಲ್ಯಗಳನ್ನು ಕಾಣಬಹುದು. ಸಾಮಾನ್ಯ ಜನರ ನೋವು ನಲಿವು ಇದ್ದು ಅದನ್ನು ಹೇಗೆ ಹೋಗಲಾಡಿಸಬೇಕೆಂಬುದು ಸಿರಿದೇವಿ ಪಾತ್ರದಲ್ಲಿ ಚಿತ್ರಿತಗೊಂಡಿದೆ. ಸಮಾಜದಲ್ಲಿ ಹೇಗೆ ಬಾಳಬೇಕು, ಸಂಸಾರ ಎಂಬ ಸಾಗರದಲ್ಲಿ ಹೇಗೆ ಈಜಿ ಪಾರಾಗಬೇಕೆಂಬ ಪ್ರಜ್ಞೆ ಮೂಡಿ ಬಂದಿದೆ.

ಹಾಗೆ ಈ ಪ್ರಪಂಚದಲ್ಲಿ ಹುಟ್ಟಿದ ಮೇಲೆ ಸುಖದುಃಖವನ್ನು ಸರಿಸಮಾನವಾಗಿ ಅನುಭವಿಸಬೇಕೆಂಬ ಆಶಯ ಸಿರಿದೇವಿ ಪಾತ್ರದ ಮೂಲಕ ಚಿತ್ರಿಸಲಾಗಿದೆ.

ಸ್ಮಶಾನದ ಬಂದಿಖಾನೆಯಲ್ಲಿ ಇದ್ದ ಸಿರಿದೇವಿಗೆ ಅವಳ ಭಕ್ತಿಯನ್ನು ಮೆಚ್ಚಿ ಪರಮಾತ್ಮನು ಮಕ್ಕಳ ಭಾಗ್ಯವನ್ನು ಕೊಡಲು ಬರುತ್ತಾನೆ. ಮಕ್ಕಳ ಭಾಗ್ಯವನ್ನು ಕೊಟ್ಟು ನಿನಗೆ ಕೊಟ್ಟ ಕಷ್ಟವನ್ನು ನಿನ್ನ ಗಂಡನಿಗೆ ಅರ್ಧಭಾಗವನ್ನು ಕೊಡುತ್ತೇನೆಂದು ಹೇಳುತ್ತಾನೆ. ಗಂಡನಿಗೆ ಕೊಡುವ ಕಷ್ಟ ನನಗೆ ಕೊಟ್ಟು ಹೋಗು ಎಂದು ಪತಿ ಭಕ್ತಿಯನ್ನು ಮೆರೆಯುತ್ತಾಳೆ.

"ಗಂಡಗ ಉಡಿಸೋದು
ಅನುಬೋಗಿಷ್ಟ ಬೊಬ್ಬೆ
ಅಂಬ್ರಿಯಷ್ಟು ಬೊಬ್ಬೆ ನನ್ನ ಬೆನ್ನಿಗೆ ಉಡಿಸು"(೧೯೯೭: ೨೯೯)

ಇಲ್ಲಿ ನೇರವಾಗಿ ವಾಚ್ಯವಾಗಿ 'ಕೃಷ್ಣಗೊಲ್ಲರ ಕಾವ್ಯ'ದಲ್ಲಿ ಹೇಳುವಂತಿದೆ. ಗಂಡನಿಗೆ ಹುಟ್ಟಿಸುವ ಬೆನ್ನಿನ ಹುಣ್ಣು, ತನ್ನ ಬೆನ್ನಿಗೆ ಹುಟ್ಟಿಸಿ ಹೋಗು ಎಂದು ಹೇಳುವ ಭಾವವು ಮಾಡಿಕೊಂಡವನು ಎಂತಹವನೇ ಇರಲಿ ಅವನು ದುಷ್ಟನಾಗಲಿ, ಕೆಟ್ಟವನಾಗಲಿ, ಕಳ್ಳನಾಗಲಿ, ಒಳ್ಳೆಯವನೇ ಆಗಲಿ ಗಂಡನೆ. ಹೀಗಾಗಿ ಸ್ತ್ರೀಯು ಗಂಡನಿಗೆ ಅಧೀನಳಾಗಬೇಕೆಂಬ ಅಂಶವು ಇದ್ದು ಗಂಡನಿಗೆ ಕೊಡುವ ಕಷ್ಟ ತನಗೆ ಕೊಟ್ಟು ಹೋಗೆಂದು ಬೇಡಿಕೊಳ್ಳುತ್ತಾಳೆ. ಈ ಸನ್ನಿವೇಶ ಕಾಂಭೋಜರಾಜಕತೆಯಲ್ಲಿ ಸಹ ಹೀಗಿದೆ:

ಬ್ಯಾಡ ಬ್ಯಾಡ ಪರಮಾತ್ಮ ಬ್ಯಾಡ
ಅಂತಹ ಹುಟ್ಟಿಸುವ ಹುಣ್ಣು
ನನ್ನ ಬೆನ್ನ ಮ್ಯಾಲ ಹುಟ್ಟಿಸು ತಂದೆ
ಎರಡು ಪಾದ ಗಟ್ಟಿಗ ಹಿಡಿದಾಳ
ಹೋಗುವುದು ನ್ಯಾಯವಲ್ಲ ತಂದಿ(ಶಂಕ್ರಮ್ಮ, ಕಾಂ.ರಾ.ಕ.)

ಇಲ್ಲಿ ದೀನವಾಗಿ ಬೇಡಿಕೊಳ್ಳುವ ಧ್ವನಿಯಿದೆ. ಈರಮ್ಮ ಹಾಡಿದ 'ಕೃಷ್ಣಗೊಲ್ಲರ ಕಾವ್ಯ'ದಲ್ಲಿ ಹುಣ್ಣನ್ನು ನನ್ನ ಬೆನ್ನಿಗೆ ಉಡಿಸು ಎಂದು ವಾಚ್ಯವಾದ ನೇರ ಮಾತುಗಳ ಮೂಲಕ ಆಕೆ ಹೇಳುತ್ತಾಳೆ. ಆದರೆ ಶಂಕ್ರಮ್ಮ ಅವರು ಹಾಡಿದ 'ಕಾಂಭೋಜರಾಜಕತೆ'ಯಲ್ಲಿ ಎದುರುಗಿದ್ದ ದೇವರನ್ನು ಪರಮಾತ್ಮ ಎಂದು ಸಂಬೋಧಿಸಿ 'ಬೇಡ ಬೇಡ' ಎನ್ನುವ ವಿನೀತವಾದ ತಕ್ಷಣದ ಪ್ರಕ್ರಿಯೆಯನ್ನು ಕಾಣಬಹುದು. ಇಲ್ಲಿ ಆಕೆಗಾದ ದುಃಖದ ತೀವ್ರತೆಯನ್ನು ಗಮನಿಸಬಹುದು. ಮತ್ತೆಯೂ ಆಕೆ ದೀನಳಾಗಿ ಎರಡು ಪಾದಗಳನ್ನು ಹಿಡಿದುಕೊಳ್ಳುವ ವಿವರಗಳಿವೆ. ಅಲ್ಲಿ ನಡೆದ ಕ್ರಿಯೆಯನ್ನು ಇಲ್ಲಿ ವಿವರಿಸಿದ ಸನ್ನಿವೇಶದ ತೀವ್ರತೆಯು ಶಂಕ್ರಮ್ಮ ಅವರ ಪಠ್ಯದಲ್ಲಿ ಹೆಚ್ಚಾಗಿದೆ. ಹಾಗೇನಾದರೂ ಗಂಡನ ಬೆನ್ನಿಗೆ ಹುಣ್ಣು

ಹುಟ್ಟಿಸಿದರೆ ಅದು 'ನ್ಯಾಯವಲ್ಲ' ಎಂದರೆ ಅನ್ಯಾಯವಾಗುತ್ತದೆ ಎಂಬ ನ್ಯಾಯ ಅನ್ಯಾಯದ ವಿವೇಚನೆಯ ಮಟ್ಟಕ್ಕೂ ಆಕೆ ಬಂದು ಬಿಡುತ್ತಾಳೆ. ಆರಂಭದಲ್ಲಿ ಆಕೆ ಪರಮಾತ್ಮವೆಂದಿದ್ದು ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ತಂದೆ ಎಂಬ ಸಂಭೋದನೆಯನ್ನು ಮಾಡುತ್ತಾಳೆ. ಎಂದರೆ ಪರಮಾತ್ಮನ ಸಂಬಂಧ ಆಕೆಗೆ ಇನ್ನೂ ಹೆಚ್ಚು ಹತ್ತಿರವಾಗುತ್ತದೆ. ತಂದೆ ತನಗೆ ಅನ್ಯಾಯ ಮಾಡುವುದಿಲ್ಲ ಎಂಬ ಭರವಸೆ ಒಂದೆಡೆಯಾದರೆ, 'ನ್ಯಾಯವಲ್ಲ' ಎಂಬುದನ್ನು ಹೇಳುವ ಧೈರ್ಯ ಕೂಡ ಆಕೆಗೆ ಬಂದಿದೆ. ಭಾವನಾತ್ಮಕವು ಸಿರಿದೇವಿಯ ವರ್ತನೆಯ ಕ್ರಿಯೆ ಹಾಗೂ ಅವಳ ವಿವೇಚನಾಶಕ್ತಿಯಾಗಿ ವಿಸ್ತರಿಸುವ ಈ ಕಾವ್ಯ ಭಾಗ ಈರಮ್ಮ ಅವರ ಪಠ್ಯಕ್ಕಿಂತಲೂ ಹೆಚ್ಚು ಪರಿಣಾಮಕಾರಿಯಾಗಿದೆ ಹಾಗೂ ಸೊಗಸಾಗಿದೆ.

**ಮತಧರ್ಮ**

ಪರಮಾತ್ಮ ಸಿರಿದೇವಿಗೆ ಮಕ್ಕಳ ಭಾಗ್ಯ ಕೊಟ್ಟು ಅಲ್ಲಿಂದ ನೇರವಾಗಿ ಕಾಂಭೋಜರಾಜನ ಅರಮನೆಗೆ ಜಂಗಮವೇಷಧಾರಿಯಾಗಿ ಭಿಕ್ಷೆ ಕೇಳಲು ಬರುತ್ತಾನೆ. ಇಲ್ಲಿ ಮತದ ಸಂಘರ್ಷ ಉಂಟಾಗುತ್ತದೆ. ಈ ಸನ್ನಿವೇಶವು 'ಕಾಂಭೋಜರಾಜಕತೆ' ಹಾಗೂ 'ಕೃಷ್ಣಗೊಲ್ಲರ ಕಾವ್ಯ'ದಲ್ಲಿ ಚಿತ್ರಿತಗೊಂಡಿದೆ. ಕಾಂಭೋಜರಾಜ ಕತೆಯಲ್ಲಿ ಪರಮಾತ್ಮ ನೇರವಾಗಿ ರಾಜನ ಮನೆಗೆ ಭಿಕ್ಷೆ ಬೇಡಲು ಬಂದರೆ 'ಕೃಷ್ಣಗೊಲ್ಲರ ಕಾವ್ಯ'ದಲ್ಲಿ ಭೀಕ್ಷೆ ಬೇಡಲು ಶಿವರಾತ್ರಿ ಜಾಗರಣೆ ದಿನ ಬರುತ್ತಾನೆ. ಚಾಂಪುರ ಪಟ್ಟಣದ ಊರಿನ ಅಗಸೆಯಲ್ಲಿ ಪರಮಾತ್ಮ ಹುಟ್ಟಿ ಅಲ್ಲಿಂದ ನೇರವಾಗಿ ರಾಜನ ಆಸ್ಥಾನಕ್ಕೆ ಬಂದು ಭಿಕ್ಷೆ ಕೇಳುತ್ತಾನೆ. ಕಾಂಭೋಜರಾಜನು ಭಿಕ್ಷೆ ನೀಡುವುದಿಲ್ಲ ಎನ್ನುತ್ತಾನೆ.

"ಶಿವರಾತ್ರಿ ಜಾಗರಣ
ಇಲ್ಲ ಅನಬಾರದು
ಶಿವರಾತ್ರಿ ದಿವಸ"(೧೯೯೭: ೪೦೧)

ಜಂಗಮ ವೇಷಧಾರಿಯಾದ ಶಿವನು ನೇರವಾಗಿ ಬಂದಿದ್ದಾನೆ. ಶಿವರಾತ್ರಿ ದಿವಸ ಭಿಕ್ಷೆ ನೀಡಿ ಎಂದು ಕಾಂಭೋಜರಾನಿಗೆ ಬೇಡಿಕೊಳ್ಳುತ್ತಾನೆ. ಆದರೆ 'ಕೃಷ್ಣಗೊಲ್ಲರ ಕಾವ್ಯ'ದಲ್ಲಿ ಪರಮಾತ್ಮನು ಜಂಗಮ ರೂಪದಲ್ಲಿ ಮುಪ್ಪಾದ ಮುದುಕನ ವೇಷದಲ್ಲಿ ರಾಜನ ಅರಮನೆಯ ಮುಂದೆ ಹುಟ್ಟಿ ಬರುತ್ತಾನೆ. ಇಲ್ಲಿ ಕಾಂಭೋಜರಾಜನಕತೆಯಲ್ಲಿ ನೇರವಾಗಿ ಸಿರಿದೇವಿಯು ಇದ್ದ ಸ್ಮಶಾನದಿಂದ ಇಲ್ಲಿ ಹುಟ್ಟಿ ಬರುತ್ತಾನೆ.

ಪರಮಾತ್ಮ ಮಟ್ಟನೆ ಮಾಯವಾಗಿ
ರಾಜ ಕಚೇರಿ ಮುಂದ ಹುಟ್ಯಾನ
ಮುಪ್ಪಾದ ಮುದುಕ ಆದ
ಮುಂಗೈಗೆ ಜೋಳಿಗೆ ಹಾಕಿಕೊಂಡು

ಗಂಟೆಶಂಕ ಕೈಯಾಗ ಹಿಡಕೊಂಡು

ಕಚೇರಿ ಮುಂದ ನಿಂತನಲ್ಲ(ಶಂಕ್ರಮ್ಮ, ಹಂ.ರಾ.ಕ)

ಪರಮಾತ್ಮನು ಮುಪ್ಪಾದ ಮುದುಕನಾಗಿ ಕಾಂಭೋಜರಾಜನ ಆಸ್ಥಾನದ ಮುಂದೆ ನಿಂತುಕೊಂಡು ಭಿಕ್ಷೆ ಬೇಡುತ್ತಾನೆ. ಕಾಂಭೋಜರಾಜ ಇಲ್ಲಿ ಪರೋಕ್ಷವಾಗಿ ಭಿಕ್ಷುಕರಿಗೆ ದಾನ ಧರ್ಮ ಕೊಡುತ್ತೇವೆ ಹೊರತು ನಿಮ್ಮಂತ ಜಂಗಮರೂಪಿಗಳಿಗೆ ದಾನ ನೀಡುವುದಿಲ್ಲ ಎಂದು ಹೇಳುತ್ತಾನೆ.

ಆದರೆ 'ಕೃಷ್ಣಗೊಲ್ಲರ ಕಾವ್ಯ'ದಲ್ಲಿ ನೇರವಾಗಿ ನಾವು ಉದ್ದನಾಮದವರು ಅಡ್ಡನಾಮದವರಿಗೆ ಭಿಕ್ಷೆ ಕೊಡವುದಿಲ್ಲ ಎನ್ನುತ್ತಾನೆ.

"ಅಡ್ಡ ಹಚ್ಚಿದವರಿಗೆ ದಾನ ಮಾಡೋದಿಲ್ಲ

ಶಿವರಾತ್ರಿ ಶಿವ ಬಂದೀಯಪ್ಪ

ಶಿವಗಾಗಿ ನಾವು ದಾನ ಮಾಡೋದಿಲ್ಲ ನಾವು ಗೊಲ್ರು"(೧೯೯೭: ೪೦೨)

ಎಂದು ಖಡಾಖಂಡಿತವಾಗಿ ಕಾಂಭೋಜರಾಜನು ನಿರಾಕರಿಸುತ್ತಾನೆ. ಈ ಎರಡೂ ಕಥನಗಳನ್ನು ಪರಿಶೀಲಿಸಿದಾಗ ರಾಜನು ಭಿಕ್ಷೆ ನೀಡದೆ ಕೈ ಕೆಳಗೆ ಇದ್ದವರಿಗೆ ಅಲ್ಲಿಂದ ಊರಿನ ಅಗಸೆ ದಾಟಿ ದಬ್ಬಿ ಬರಲು ಹೇಳುತ್ತಾನೆ. ಇಲ್ಲಿ ಅಡ್ಡನಾಮ, ಉದ್ದನಾಮ ಶೈವ, ವೈಷ್ಣವ, ಸಂಘರ್ಷ ಎದ್ದು ಕಾಣುತ್ತದೆ.

ಕೊನೆಗೆ ಜಂಗಮ ವೇಷಧಾರಿಯು ರಾಜನಿಗೆ ಭಿಕ್ಷೆ ಕೊಡದಿದ್ದರೆ ಪರವಾಗಿಲ್ಲ, ವಿಭೂತಿಯಾದರೂ ಹಚ್ಚಿಕೋ ಎಂದಾಗ, ಅದನ್ನು ನಿರಾಕರಿಸಿ ತನ್ನ ಬೆನ್ನನ್ನು ತಿರುಗಿಸುತ್ತಾನೆ.

"ಏನಪ್ಪ ನಿನ್ನ ಧರ್ಮ ನನಗೆ ಬ್ಯಾಡ

ನಂದಾನ ನಿನ್ನ ಮ್ಯಾಲಿರ್ಲಿ

ನನ್ನ ವಿಭೂತಿ ಹಚ್ಚಿ ಹೋತಿನಿ

ನಿನ್ನ ಹಣೆಗೆ

ಏ ನಾವು ಗೊಲ್ರು ಹಚ್ಚಿಕ್ಯಂಬೋದಿಲ್ಲ

ಶಿವನ ವಿಭೂತಿ ಅಡ್ಡ ಹಚ್ಚಿಕ್ಯಾಂಬೋದಿಲ್ಲ ನಾವು

ನಾವು ಉದ್ದನಾಮ ಇಟ್ಕಂಬೋರು ಅಂದ"(೧೯೯೭: ೪೦೯)

ಎರಡು ಕಥನಗಳಲ್ಲಿ ಈ ಸನ್ನಿವೇಶ ಇದ್ದು ಜಂಗಮರೂಪಿ ಹಾಗೂ ಕಾಂಭೋಜರಾಜನ ಮಧ್ಯೆ ಚರ್ಚೆ ಕಂಡುಬರುತ್ತದೆ. ನೀನು ಭಿಕ್ಷೆ ನೀಡದಿದ್ದರೆ ಪರವಾಗಿಲ್ಲ ನನ್ನ ವಿಭೂತಿಯಾದರು ಹಣೆಗೆ ಹಚ್ಚಿಕೋ ಎಂದು ಹೇಳುತ್ತಾನೆ. ಕಾಂಭೋಜರಾಜನು ನಾವು ಉದ್ದ ನಾಮದವರು ಅಡ್ಡನಾಮ ಹಚ್ಚಿಕೊಳ್ಳುವುದಿಲ್ಲ ಎಂದು ತನ್ನ ಬೆನ್ನನ್ನು ತಿರುಗಿಸಿದಾಗ ಬೆನ್ನಿಗೆ ವಿಭೂತಿಯನ್ನು ಹಚ್ಚುತ್ತಾನೆ. ಆಗ ರಾಜನ ಬೆನ್ನಿನಲ್ಲಿ

ಬೇತಾಳ ಹುಣ್ಣು ಹುಟ್ಟುತ್ತದೆ. ಧರ್ಮಕ್ಕೆ ಮಾಡಿದ ಅಪಮಾನದ ಪರಿಣಾಮದಿಂದ ಬೆನ್ನಿಗೆ ಬೇತಾಳ ಹುಣ್ಣು ಹುಟ್ಟುತ್ತದೆ. ಹೀಗೆ ಎರಡೂ ಕಥನಗಳಲ್ಲಿ ಮತ ಸಂಘರ್ಷವು ಅಭಿವ್ಯಕ್ತಗೊಂಡಿದೆ.

ಈರಮ್ಮ ಅವರು ತನ್ನ ಕೃಷ್ಣಗೊಲ್ಲರ ಕಾವ್ಯದಲ್ಲಿ ಐನೋರ ಮಡಪ ಪಾತ್ರವನ್ನು ವಿಶೇಷವಾಗಿ ಸೃಷ್ಟಿಸಿದ್ದಾಳೆ. ಈ ಹುಡುಗ ಆ ಪಟ್ಟಣದಲ್ಲಿ ತಾಯಿಯ ಒತ್ತಾಯದ ಮೇರೆಗೆ ಎಂದಿಲ್ಲದ ಭಿಕ್ಷೆಗೆ ಹೋದಾಗ, ಹಿಂದೆ ರಾಜನಿಗೆ ವಿಭೂತಿ ಮಂತ್ರಿಸಿ ಬೆನ್ನಿಗೆ ಹೊಡೆದು 'ಬೇತಾಳ ಹುಣ್ಣು' ಹುಟ್ಟಿಸಿದವ ಇವನೇ ಎಂದು ಇವನನ್ನು ಚೆನ್ನಾಗಿ ತಳಿಸುತ್ತಾರೆ. ಶಾಲೆಗೆ ಹೋಗುವ ಈ ಹುಡುಗನು ಮೊದಲು ಭಯದಿಂದ ಒಂದೊಂದು ಗುಡಿಸಲಿನಲ್ಲಿ ಭಿಕ್ಷೆ ಬೇಡಿ ಪಡೆಯುತ್ತಾನೆ. ಪಟ್ಟಣದ ಮಧ್ಯದ ಗೌಡರ ಮನೆಗಳನ್ನು ಬಿಟ್ಟು ಕೊನೆಯ ಕುರುಬರ ಗುಡಿಸಲುಗಳಿಗೆ ಹೋಗಿ ಗಂಟೆ ಬಾರಿಸುತ್ತ 'ಕಂತಿ ಭಿಕ್ಷಾಂ ದೇಹಿ' ಎಂದು ಕೂಗುತ್ತಾನೆ. ಆ ಓಣೆಯವರು ಆ ಹುಡುಗನೇ ರಾಜನ ಬೆನ್ನಿಗೆ ಹುಣ್ಣು ಹುಟ್ಟಿಸಿ ಹೋಗಿದ್ದಾನೆಂದು ಹಿಡಿದುಕೊಳ್ಳುತ್ತಾರೆ.

"ಲೇ ಧರ್ಮ ಕೊಟ್ರೆ ಒಳ್ಳೇದು
ದಾನ ಮಾಡಿದ್ರೆ ಒಳ್ಳೇದು
ಧರ್ಮ ಮಾಡಲಿದ್ರೆ
ಯಾವುದೋ ಮಂತ್ರಿಸಿ
ಆಗ ಅಂಬ್ರಯಷ್ಟು ಬೆನ್ನ ಮ್ಯಾಲೆ ಬೊಬ್ಬೆ
ಬರಿಸಿ ಓಡಿ ಹೋಗ್ತಿಯಾ"(೧೯೯೭: ೪೧೨)

ಎಂದು ಹುಡುಗನನ್ನು ಹೊಡೆಯುತ್ತಾರೆ. ಹುಡುಗ ನಾನು ಅವನಲ್ಲ, ನಾನು ಇವತ್ತೆ ಬಂದಿದ್ದೇನೆ, ಶಾಲೆಗೆ ಹೋಗೋದು ಬಿಟ್ಟು ಬಂದಿದ್ದೇನೆ. ಅಮ್ಮ ಕಳಿಸಿದ್ದಾಳೆ ಎಂದು ಪರಿಪರಿಯಾಗಿ ಬೇಡಿಕೊಂಡರೂ ಓಣೆಯ ಜನ ಕೇಳದೆ ಬಡಿದು, ರಾಜನ ಅರಮನೆಗೆ ಹಿಡಿದುಕೊಂಡು ಹೋಗಿ ರಾಜನ ಎದುರು ನಿಲ್ಲಿಸುತ್ತಾರೆ. ಆಗ ಕಾಂಭೋಜರಾಜನು 'ಏ ಕಳ್ಳ ನಾಯಿ ಓಡಿ ಹೋದ್ರೆ, ಓಡ್ಯಾಡೋ ನಾಯಿನ ಹಿಡ್ಕೊಂಡು ಬಂದ್ರಿ', ಪಾಪ ಚಿಕ್ಕ ವಯಸ್ಸಿನ ಹುಡುಗ ಶಾಲೆ ಓದುವವನು ಎಂದು ಹೇಳಿ ಅವನು ಪಟ್ಟಣದ ಜಂಗಮರ ಹುಡುಗ ಎಂದು ಹೇಳುತ್ತಾನೆ. ಹೀಗೆ ಅರಿಯದೆ ಎಂತಹ ಅನಾಹುತ ಆಗುತ್ತದೆಂದು ಗೊತ್ತಾಗುತ್ತದೆ. ಈರಮ್ಮ ಅವರ ಪಠ್ಯದಲ್ಲಿ ಮಾತ್ರ ಈ ಸನ್ನಿವೇಶ ಬಂದಿದೆ. ಈ ಪಾತ್ರದ ಮೂಲಕ ಹುಣ್ಣು ಹುಟ್ಟಿಸುವವರಿಗೆ ಶಿಕ್ಷೆ ನೀಡುವ ಮನೋಧರ್ಮ ಇಲ್ಲಿ ವಾಚ್ಯವಾಗಿದೆ.

**ವೈದ್ಯೋಪಚಾರ**

'ಕಾಂಭೋಜರಾಜ'ನಿಗೆ ಬೆನ್ನು ಹುಣ್ಣನ್ನು ವಾಸಿ ಮಾಡುವ ಸನ್ನಿವೇಶಗಳು ಇದ್ದು ಅದು ಎರಡೂ ಕಥನಗಳಲ್ಲಿ ಭಿನ್ನವಾಗಿ ಮೂಡಿಬಂದಿದೆ. 'ಕಾಂಭೋಜರಾಜಕತೆ'ಯಲ್ಲಿ ವೈದ್ಯೋಪಚಾರದ ವಿಷಯದಲ್ಲಿ

ನಾಟಿ ಪದ್ಧತಿಯನ್ನು ಅಳವಡಿಸಿದರೆ ಕೃಷ್ಣಗೊಲ್ಲರ ಕಾವ್ಯದಲ್ಲಿ ಆಧುನಿಕತೆಯ ವೈದ್ಯ ಪದ್ಧತಿಯನ್ನು ವಿಶೇಷವಾಗಿ ಚಿತ್ರಿಸಲಾಗಿದೆ.

ಈರಮ್ಮ ಅವರ 'ಕೃಷ್ಣಗೊಲ್ಲರ ಕಾವ್ಯ'ದಲ್ಲಿ ಕಾಂಭೋಜರಾಜನ ಬೆನ್ನಿನ ಹುಣ್ಣನ್ನು ವಾಸಿ ಮಾಡಲು ಹುಬ್ಬಳ್ಳಿ ಡಾಕ್ಟರನ್ನು ಕಥನದಲ್ಲಿ ತಂದು ವಾಸ್ತವವನ್ನು ನಿರೂಪಿಸಿದ್ದಾಳೆ. ಕಾಂಭೋಜರಾಜನು ತನ್ನ ಬೆನ್ನು ಹುಣ್ಣಿನ ನೋವನ್ನು ತಾಳಲಾರದೆ ಎಲ್ಲೆಲ್ಲಿ ಮದ್ದನ್ನು ಕೊಡುತ್ತಾರೆ ಅಲ್ಲಲ್ಲಿ ಹೋಗಿ ಮದ್ದು ಮಾರುವವರನ್ನು ಕರೆದುಕೊಂಡು ಬರಲು ತಿಳಿಸಿರುತ್ತಾರೆ. ತನ್ನ ಕೈಕೆಳಗಿನವರಿಗೆ ಹಳ್ಳಿ ಹಳ್ಳಿಗೆ ಕಳಿಸುವ ಸನ್ನಿವೇಶ ಮೂಡಿ ಬಂದಿದೆ. ಕೆಲವರು ಕೂಡ್ಲಿಗಿ, ಕೆಲವರು ಹುಬ್ಬಳ್ಳಿಗೆ ಹೋಗುತ್ತಾರೆ. ಹುಬ್ಬಳ್ಳಿಯ ಡಾಕ್ಟ್ರ ರಾಮಯ್ಯನನ್ನು ಕಾಣುತ್ತಾರೆ. ಕಾಂಭೋಜರಾಜನ ಬೆನ್ನ ಹುಣ್ಣಿನ ವಿಚಾರವನ್ನು ತಿಳಿಸುತ್ತಾರೆ. ಆಗ ಹುಬ್ಬಳ್ಳಿ ಡಾಕ್ಟ್ರ ರಾಮಯ್ಯ,

"ಇವತ್ತು ಸತ್ತೋಗಿ
ನಾಳೆ ಸುಡುಗಾಡ ತಂದ ಹೆಣನ
ಕುಣ್ಯಾಗಿಟ್ಟಿದ ಹೆಣನ ತೆಗೆದು
ಜೀವ ಕೊಟ್ಟು ಎಬ್ಬಿಸ್ತೀನಿ ಅಂದ"(೧೯೯೭: ೪೨೩)

ರಾಮಯ್ಯನು ತನ್ನ ಬಗ್ಗೆ ಜಂಬ ಕೊಚ್ಚಿಕೊಳ್ಳುತ್ತಾನೆ. ಆಧುನಿಕವಾಗಿ ವಾಸ್ತವ ಬದುಕಿನಲ್ಲಿ ಡಾಕ್ಟರು ಜನರನ್ನು ಮರುಳು ಮಾಡುವ ಅಂಶ ಇಲ್ಲಿ ವ್ಯಕ್ತವಾಗಿದೆ. ರಾಮಯ್ಯ ಡಾಕ್ಟ್ರ ಬಂದ ಕೂಡಲೆ ಪಟ್ಟಣದ ಜನರು ಕೈ ಜೋಡಿಸಿ ರಾಜನ ಹುಣ್ಣು ವಾಸಿ ಮಾಡಲು ಬೇಡಿಕೊಳ್ಳುತ್ತಾರೆ. ಹುಬ್ಬಳ್ಳಿ ಡಾಕ್ಟರ್ ರಾಮಯ್ಯ ಅಂದ್ರೆ ಸಾಮಾನ್ಯ ಅಲ್ಲ ಸತ್ತವರನ್ನು ಬದುಕಿಸುವವನು ಎಂದು ತನ್ನನ್ನು ತಾನೇ ಹೊಗಳಿ ಕೊಳ್ಳುತ್ತಾನೆ.

"ಈಗ ಬಟ್ಟೆ ತಗೀರಿ ಅಂದ
ಬಟ್ಟೆ ತೆಗದ್ರೆ
ಬೆನ್ನಗ ಲಾಗ
ಆ ಹುಣ್ಣು ಹೆಸರು ಹೇಳಾಕ ಬರಾದಿಲ್ಲ
ಹುಬ್ಬಳ್ಳಿ ಡಾಕ್ಟ್ರ ಆಗ್ಯಾನ
ಏನ್ರಿ ಇದು ಎದುರದ್ರಿ
ಏ ಹುಣ್ಣು ರೀ ಇದರಾಗ ಹುಳು ಐತಿರೀ
ಹುಳ ಎಲ್ಲಾ ತಿಂತೈತಿರಿ ನಿನ್ನ"(೧೯೯೭: ೪೨೫)

ಎಂದು ರಾಮಯ್ಯ ಡಾಕ್ಟರ್ ಕಾಂಭೋಜರಾಜನ ಮೇಲೆ ಹೊರಿಸಿದ ಬಟ್ಟೆಯನ್ನು ತೆಗೆದು ಹೇಳುತ್ತಾನೆ. ಆ ಹುಣ್ಣಿನ ಹೆಸರು ಹೇಳಲು ಬರುವುದಿಲ್ಲ. ಇದರಲ್ಲಿ ಹುಳ ಇದೆ. ಅದನ್ನ ಸಂಪೂರ್ಣ ವಾಸಿ ಮಾಡಲು ಐದು ನೂರು ರೂಪಾಯಿಗಳು ಬೇಕಾಗುತ್ತದೆಂದು ಹೇಳುತ್ತಾನೆ. ಹಣವನ್ನು ತೆಗೆದುಕೊಂಡು ಸುಳ್ಳು ಆಶ್ವಾಸನೆ ಕೊಟ್ಟು ಹುಬ್ಬಳ್ಳಿಗೆ ಹೋಗುತ್ತಾನೆ. ಇವರು ಮತ್ತೆ ತನ್ನನ್ನು ಹುಡುಕಿಕೊಂಡು ಬರುತ್ತಾರೆಂದು ಹುಬ್ಬಳ್ಳಿಯಿಂದ ತನ್ನ ಕುಟುಂಬಸಮೇತ ಶಿವಮೊಗ್ಗಕ್ಕೆ ಹೋಗಿ ನೆಲೆಸುತ್ತಾನೆ. ಡಾಕ್ಟರರು ಯಾವ ರೀತಿ ಮೋಸ ಮಾಡುತ್ತಾರೆ ಎಂಬ ವಾಸ್ತವವನ್ನು ಇಲ್ಲಿ ಅಭಿವ್ಯಕ್ತಪಡಿಸಿದ್ದಾರೆ. ದೊಡ್ಡವರಿಗೆ ಹೀಗೆ ಮೋಸವಾದರೆ ಇನ್ನು ಸಾಮಾನ್ಯ ಜನರ ಪಾಡೇನು ಎಂಬ ಅಂಶವು ಇಲ್ಲಿ ಬಂದಿದೆ. ಡಾಕ್ಟರುಗಳ ಮೋಸ, ವಂಚನೆ, ಅನ್ಯಾಯ, ಸುಳ್ಳು ಮುಂತಾದವುಗಳ ಬಗ್ಗೆ ಅವರ ವಾಸ್ತವವನ್ನು ಇಲ್ಲಿ ಚಿತ್ರಿಸಿದ್ದಾರೆ. ಈರಮ್ಮ ಅವರು ತನ್ನ ಪಠ್ಯದಲ್ಲಿ ವಿಶೇಷವಾಗಿ ಈ ಸನ್ನಿವೇಶವನ್ನು ಎಳೆದು ತಂದಿದ್ದನ್ನು ಕಾಣಬಹುದು.

ಆದರೆ ಕಾಂಭೋಜರಾಜನಿಗೆ ಹುಣ್ಣನ್ನು ವಾಸಿ ಮಾಡಲು ಎರಡೂ ಕಥನಗಳಲ್ಲಿ ನಾಟಿ ಪದ್ಧತಿಯನ್ನು ಹೇಳುತ್ತಾರೆ. ಶರಬಂಧರಾಜ ಹಾಗೂ ಎದಿನಗಂಧಿ ಮೂಲಕವೇ ವೈದ್ಯೋಪಚಾರ ಮಾಡಿಸುತ್ತಾರೆ. ಎದಿನಗಂಧಿಯ ಬಳಿ ಬುಡ್ಡಿಯ ಮದ್ದೆ ಬೆನ್ನಿನ ಹುಣ್ಣನ್ನು ವಾಸಿ ಮಾಡುತ್ತದೆ. ಶಂಕ್ರಮ್ಮನ ಪಠ್ಯದಲ್ಲಿ ಈ ಸನ್ನಿವೇಶವು ಅತ್ಯಂತ ದೀರ್ಘವಾಗಿ ನಿರೂಪಿತವಾಗಿದೆ. ಎದಿನಗಂಧಿಯೇ ಕಾಂಭೋಜರಾಜನ ಬೆನ್ನಿನ ಹುಣ್ಣಿಗೆ ಮದ್ದನ್ನು ಕಟ್ಟುವುದು, ಬಿಚ್ಚುವುದು, ರಾಜನಿಗೆ ಸ್ನಾನ ಮಾಡಿಸುವುದು ಎಲ್ಲಾ ಉಪಚಾರವನ್ನು ಮಾಡುತ್ತಾಳೆ. ಆದರೆ ಈರಮ್ಮ ತನ್ನ ಪಠ್ಯದಲ್ಲಿ ಕೇವಲ ಹತ್ತು ಸಾಲುಗಳಲ್ಲಿ ಉಪಚಾರ ಪದ್ಧತಿಯನ್ನು ಅಭಿವ್ಯಕ್ತಿ ಮಾಡಿದ್ದಾರೆ.

"ಆಗ ಎದಿನಗಂಧಿ ತೂಕ ಮಾಡಿ
ಬೆನ್ನಿಗೆ ಕೈ ಮುಗಿದು
ಆಗ ಬೆನ್ನಿನ ಹುಣ್ಣಿಗೇ ಹಾಕ್ಯಾಳಮ್ಮ
ಎದಿನಗಂಧಿ ಜನ್ಮದಾಗಯಮ್ಮ
ಬೆನ್ನಗಲಾಗ ಹುಣ್ಣು ಇರೋದು
ಹೊಟ್ಟ್ಯಾಗ ಕಳುವು ತಿರುಣು ಮಾಡೋದು
ಆಗ ಒಂದೇ ಜೀವದ ಒಳಗೆ
ಆಗ ಮದ್ದು ಹಾಕ್ಯೋತ್ತಿಗೆ
ಹುಣ್ಣು ಮಾಯಿಕ್ಕಂಡು ಹೋಗ್ಯೆತೊ"(೧೯೯೭: ೭೪೯)

ಮದ್ದು ಹಾಕುವ ವಿಧಾನವು ಕೆಲವೇ ಸಾಲುಗಳಲ್ಲಿ ಚಿತ್ರಿತಗೊಂಡಿದೆ. ಕಥನದ ಎಲ್ಲಾ ಸನ್ನಿವೇಶಗಳಲ್ಲಿ ಕಥನಕ್ಕೆ ಸಂಬಂಧಿಸಿದಂತೆ ಅತ್ಯಂತ ದೀರ್ಘವಾಗಿ ನಿರೂಪಿಸುವ ಈರಮ್ಮ ಈ ಸನ್ನಿವೇಶದಲ್ಲಿ ಮಾತ್ರ

ಓಂದೆ ಬಿದ್ದಿದ್ದಾಳೆ. ಶಂಕ್ರಮ್ಮ ಅವರ ಪಠ್ಯದಲ್ಲಿ ಈ ಸನ್ನಿವೇಶವು ಅತ್ಯಂತ ದೀರ್ಘವಾಗಿ ವ್ಯಕ್ತವಾಗಿದ್ದು ಹಳೆಯ ನಾಟಿ ಪದ್ಧತಿಯ ವಿಧಾನ ಕಂಡುಬರುತ್ತದೆ. ಎರಡೂ ಕಥನಗಳಲ್ಲಿ ಸ್ತ್ರೀಯೇ ವೈದ್ಯೋಪಚಾರದಲ್ಲಿ ಪ್ರಮುಖ ಪಾತ್ರ ವಹಿಸುತ್ತಾಳೆ. ಮಾವನನ್ನು ಆತನ ಆರೋಗ್ಯವನ್ನು ನೋಡಿಕೊಳ್ಳುವ ಜವಾಬ್ದಾರಿ ಸೊಸೆಯ ಜವಾಬ್ದಾರಿಯಾಗಿರುತ್ತದೆ. ಹೀಗಾಗಿ ಕೊನೆಗೆ ಎದಿನಗಂಧಿ ಸೊಸೆಯ ಪಾತ್ರದ ಮೂಲಕ ಮಾವನ ಬೆನ್ನಿನ ಹುಣ್ಣಿನ ಉಪಚಾರ ಅದನ್ನು ವಾಸಿಮಾಡುವ ಪ್ರಸಂಗವನ್ನು ಕಥನಗಾರರು ಚಿತ್ರಿಸಿದ್ದಾರೆ. ಕಥನಗಾರರು ವಾಸ್ತವ ಬದುಕಿನ ಪ್ರತಿಬಿಂಬವಾಗಿ ಎರಡೂ ಕಥನಗಳಲ್ಲಿ ಈ ಸನ್ನಿವೇಶದ ಪ್ರಸಂಗವನ್ನು ಅಭಿವ್ಯಕ್ತಪಡಿಸಿದ್ದಾರೆ.

### ಮತ್ಸರ

ಇಬ್ಬರು ವಕ್ತೃಗಳ ಪಠ್ಯಗಳಲ್ಲಿ ಮತ್ಸರ ಮನೋಭಾವನೆಯ ಪಾತ್ರಗಳು ಮೂಡಿಬಂದಿವೆ. ಆರು ಜನ ರಾಣಿಯರು ಹಾಗೂ ಅವರ ಮಕ್ಕಳಾದ ಆರು ಜನ ಚಿತ್ರಗುಪ್ಪಿ ರಾಜಕುಮಾರರಲ್ಲಿ ಇರುವ ದ್ವೇಷ, ಅಸೂಯೆ, ಮತ್ಸರ, ಹೊಟ್ಟೆಕಿಚ್ಚು ಎಲ್ಲಾ ಅಂಶಗಳು ಚಿತ್ರಿತವಾಗಿದೆ. ಈ ಪಾತ್ರಗಳು ಸಿರಿದೇವಿ ಹಾಗು ಶರಬಂಧರಾಜಕುಮಾರರನ್ನು ಕೊಲ್ಲುವ ಹೇಯ ಕೃತ್ಯ ಮಾಡುತ್ತವೆ. ಆರು ಜನ ಹಿರಿಯ ರಾಣಿಯರು ಸವತಿ ಮತ್ಸರದಿಂದ ಸಿರಿದೇವಿಗೆ ಶಿಕ್ಷೆ ವಿಧಿಸುವ ಉಪಾಯ ಹೂಡುತ್ತಾರೆ. ವಿಷವನ್ನು ಬೆರೆಸಿ ತಮ್ಮ ಮಕ್ಕಳಿಗೆ ತಾವೇ ಕೊಟ್ಟು ಸಿರಿದೇವಿಯ ಮೇಲೆ ಆಪಾದನೆ ಹೊರಿಸುತ್ತಾರೆ. ತಪ್ಪು ಮಾಡದ ಸಿರಿದೇವಿ ಶಿಕ್ಷೆಯನ್ನು ಅನುಭವಿಸುತ್ತಾಳೆ. ಆದರೆ ಸಿರಿದೇವಿಯು ಭಕ್ತಿಯಿಂದ ಪರಮಾತ್ಮ ಅವಳನ್ನು ಬದುಕಿಸಿ ಸಿರಿ ಸಂಪತ್ತು ಕೊಟ್ಟು ಹಾಗೂ ಸಂತಾನ ಭಾಗ್ಯ ಕೊಟ್ಟು ಹೋಗುತ್ತಾನೆ.

ಆರು ಜನ ಹಿರಿಯ ರಾಜಕುಮಾರರು ತಂದೆಯ ಬೆನ್ನು ಹುಣ್ಣಿನ ಮದ್ದನ್ನು ಹುಡುಕುತ್ತ ತೆರಳುತ್ತಾರೆ. ಅವರು ಹೋಗಿದ್ದ ವಿಚಾರವನ್ನು ಮರೆತು ಹೆಣ್ಣಿನ ಮೋಹಕ್ಕೆ ಸಿಲುಕಿ ಬಲಿಯಾಗುತ್ತಾರೆ. ಆದರೆ ಸಿರಿದೇವಿಯ ಮಗ ಶರಬಂಧ ರಾಜಕುಮಾರನು ಸಹ ತಂದೆಯ ಬೆನ್ನು ಹುಣ್ಣಿನ ಮದ್ದನ್ನು ತರಲು ಹೋಗುತ್ತಾನೆ. ಮದ್ದನ್ನು ಪಡೆದುಕೊಂಡು ಬರುತ್ತಾನೆ. ಈತನ ರೂಪ, ಲಾವಣ್ಯ, ಶೌರ್ಯ, ಸಾಹಸವನ್ನು ಕಂಡು ಹೆಣ್ಣುಗಳು ಮದುವೆಯಾಗಲು ಕೇಳಿಕೊಳ್ಳುತ್ತಾರೆ. ಆ ಹೆಣ್ಣುಗಳನ್ನು ಮದುವೆ ಮಾಡಿಕೊಂಡು ಆರು ಜನ ಅಣ್ಣಂದಿರನ್ನು ಹೆಣ್ಣಿನಿಂದ ಬಿಡಿಸಿಕೊಂಡು ಬರುತ್ತಾನೆ. ಆಗ ಆರು ಜನ ಅಣ್ಣಂದಿರಲ್ಲಿ ಹೊಟ್ಟೆಕಿಚ್ಚು ಉಂಟಾಗಿ ಸ್ಮಶಾನದಲ್ಲಿ ಹುಟ್ಟಿದವನು ಮದ್ದನ್ನು ತೆಗೆದುಕೊಂಡು ಹೋದರೆ ರಾಜ್ಯದ ಅಧಿಕಾರ ಅಂತಸ್ತು ಅವನಿಗೆ ಸಿಗುತ್ತದೆಂದು ಬಗೆದು ಅವನನ್ನು ಕೊಲ್ಲಲು ಉಪಾಯವನ್ನು ಹೂಡುತ್ತಾರೆ. ಈ ಸನ್ನಿವೇಶವು ಎರಡೂ ಕಥನಗಳಲ್ಲಿ ಮೂಡಿಬಂದಿದೆ. ಶಂಕ್ರಮ್ಮ ಅವರ ಕಾಂಭೋಜರಾಜಕತೆಯಲ್ಲಿ ಸುಂದರಮ್ಮ ಪಟ್ಟಣದ ಸುಂದರಮ್ಮನ ಪಾತ್ರ ಬಂದರೆ, ಈರಮ್ಮನ ಕೃಷ್ಣಗೊಲ್ಲರ ಕಾವ್ಯದಲ್ಲಿ ಇಲಾಮಂತ್ರ ಪಟ್ಟಣದ ಪಾತರಗಿತ್ತಿ ಪಾತ್ರ ಬರುತ್ತದೆ. ಇಲ್ಲಿ ಪಾತ್ರಗಳ ಹೆಸರುಗಳು ಬೇರೆಯಾಗಿ ಕಂಡರೂ ಆ

ಪಾತ್ರಗಳ ಗುಣವಿಶೇಷಗಳು ಒಂದೆ. ಈ ಪಾತ್ರಗಳು ಆರು ಜನ ಹಿರಿಯ ರಾಜಕುಮಾರರನ್ನು ಬಂಧಿಸಿ ಇಟ್ಟುಕೊಂಡಿರುತ್ತಾರೆ. ಶರಬಂಧರಾಜಕುಮಾರನು ಸುಂದರಮ್ಮ ಅಥವಾ ಪಾತರಗಿತ್ತಿ ಅವರನ್ನು ಗೆದ್ದು ಅಣ್ಣಂದಿರನ್ನು ಬಿಡಿಸಿಕೊಂಡು ಮದುವೆಯಾಗಿ ಬರುತ್ತಾನೆ. ಅಣ್ಣಂದಿರಲ್ಲಿ ತಮ್ಮನ ಮೇಲೆ ದ್ವೇಷದ ಮನೋಭಾವನೆ ಇನ್ನೂ ಇರುತ್ತದೆ. ಶರಬಂಧರಾಜನಲ್ಲಿ ಸಹೋದರರ ಮನೋಭಾವನೆ, ಮಾನವೀಯತೆ ಇರುತ್ತದೆ. ಆದರೆ ಆರು ಜನ ಹಿರಿಯ ರಾಜಕುಮಾರರು ದುಷ್ಟರಾಗಿ ಚಿತ್ರಿತಗೊಂಡರೆ, ಶರಬಂಧ ರಾಜಕುಮಾರನು ಒಳ್ಳೆಯ ವ್ಯಕ್ತಿತ್ವದ ವ್ಯಕ್ತಿಯಾಗಿ ಚಿತ್ರಿತಗೊಂಡಿದ್ದಾನೆ.

ಈರಮ್ಮ ಅವರ ಕಥನದಲ್ಲಿ ಆರು ಜನ ಅಣ್ಣಂದಿರು ತಮ್ಮನಾದ ಶರಬಂಧನನ್ನು ಎಲ್ಲಮ್ಮದೇವಿಗೆ ಆಹುತಿ ಕೊಡುವ ಉಪಾಯವನ್ನು ಮಾಡುತ್ತಾರೆ ಮತ್ತು ಅವನು ಗೆದ್ದು ತಂದ ಹೆಣ್ಣುಗಳನ್ನು ಮದುವೆ ಮಾಡಿಕೊಳ್ಳುವ ಉಪಾಯ ಹುಡುಕಿರುತ್ತಾರೆ. ತಮ್ಮ ಶರಬಂಧನನ್ನು ದೇವಿ ಗುಡಿಗೆ ಕರೆದುಕೊಂಡು ಹೋಗಿ ದೇವಿಗೆ ನಮಸ್ಕಾರ ಮಾಡಿಸುವಾಗ ಆರು ಜನ ಅಣ್ಣಂದಿರು ಈ ರೀತಿ ಮಾತನಾಡಿಕೊಳ್ಳುತ್ತಾರೆ. 'ನಮ್ಮಪ್ಪಗ ಹುಟ್ಟಿಲ್ಲ ಇವ್ನು, ಸುಡುಗಾಡ್ಯಾಗ ಯಾವನಿಗೋ ಹುಟ್ಟಿದ್ದಾನ'. ಅವನು ಹೋಗಿ ಆರು ಮಂದಿ ಹೆಣ್ಣನ್ನು ಗೆದ್ದು ಮೇಟೌಷಧಿ(ನಾಟಿಔಷಧಿ)ಯನ್ನು ತಂದಿದ್ದಾನೆ. ಏಳು ಸಮುದ್ರದ ಕಡೆಗ್ಹೋಗಿ ಇವ್ನು ಜಯಶಾಲಿಯಾಗಿ ಬಂದಿದ್ದಾನೆಂದು ತಿಳಿದುಕೊಂಡು, ಇವನು ಮದ್ದು ತೆಗೆದುಕೊಂಡು ಹೋದರೆ ತಂದೆಯು 'ನಮ್ಮನ್ನು ಛೀ ಅಂದು ಬಿಡ್ತಾನ' ಅವನನ್ನೇ ಮುಂದೆ ರಾಜನನ್ನಾಗಿ ಮಾಡುತ್ತಾನೆ. ನಾವು ಹುಷಾರಾಗಿರಬೇಕು ಎಂದು ಮಾತನಾಡುತ್ತಾರೆ. 'ಇವ್ನನ್ನು ಆರು ತುಂಡು ಕಡಿಯಾನ' ಇವನ 'ಆರು ಮಂದಿ ಹೆಂಡರ'ನ್ನು ತಲೆ ಗೊಂದ್ಹೆಂಡ್ತಿ ಕರಕಂಡು ಬರಾನ, ಅವರನ್ನು ಮದುವೆ ಮಾಡಿಕೊಂಡು ಅವನು ತಂದ ಮೇಟೌಷಧವನ್ನು ಒಯ್ದು ತಂದೆಯ ಬೆನ್ನು ಹುಣ್ಣನ್ನು ವಾಸಿ ಮಾಡಿ ತಂದೆಯಿಂದ ಹೊಗಳಿಸಿಕೊಳ್ಳೋಣ ಎಂದು ಮಾತನಾಡಿಕೊಳ್ಳುತ್ತಾರೆ. ಈ ಸನ್ನಿವೇಶವು ಎರಡೂ ಕಥನಗಳಲ್ಲಿ ಅದ್ಭುತವಾಗಿ ಮೂಡಿ ಬಂದಿದೆ.

ಆರು ಜನ ಅಣ್ಣಂದಿರು ಶರಬಂಧರಾಜನನ್ನು ಎಲ್ಲಮ್ಮ ದೇವಿಗೆ ಆಹುತಿ ಕೊಡುವ ಸನ್ನಿವೇಶ ಈರಮ್ಮ ಕಥನದಲ್ಲಿ ಮಾತ್ರ ಬಂದಿದೆ. ಶರಬಂಧರಾಜನು ಬೋರ್ಲಬಿದ್ದು ದೇವಿಗೆ ನಮಸ್ಕಾರ ಮಾಡುವಾಗ ಅಣ್ಣಂದಿರು ಕಡಿಯಲು ತಯಾರಾಗುತ್ತಾರೆ.

"ಆರು ಮಂದಿ ಹೋಗಿ ಕಡಿಯಾಕ ನಿಂದ್ರುತಾರೋ
ಧರ್ಮ ಅಂತ ಹೋದ್ರೆ ಕರ್ಮ ಬರ್‍ತ್ರಿ
ಆಹಾ ಹಾಹಾ
ಆರು ಮಂದಿ ತಾವಾಗಿ
ಚಂದ್ರಾಯುಧಗಳು

ಆಯುಧಗಳನ್ನು ಮ್ಯಾಕೆ ಎತ್ತಿ ಬಿಟ್ರಪ್ಪ

ತಮ್ಮನ್ನು ಕಡಿಯಾಕ"(೧೯೯೭: ೭೩೧)

ಹೆಣ್ಣಿನ ಬಂಧನದಿಂದ ಬಿಡಿಸಿಕೊಂಡು ಬಂದ ತಮ್ಮನನ್ನೇ ಕೊಲ್ಲುವ ಹೇಯ ಕೃತ್ಯವನ್ನು ಕಾಣುತ್ತೇವೆ. ಶರಬಂಧನು ಧರ್ಮ ಮಾಡಿದರೆ ಕರ್ಮ ಸುತ್ತಿಕೊಂಡು ಬರುತ್ತದೆ. ಆರು ಜನ ಅಣ್ಣಂದಿರು ತಮ್ಮನನ್ನು ಕಡಿಯುವವನನ್ನು ಎಲ್ಲಮ್ಮದೇವಿ ನೋಡಿ ಶಿಶುವನ್ನು ಕಡಿಯುತ್ತಾರೆಂದು ಅವನ ಮೇಲೆ ಕುಳಿತುಕೊಳ್ಳುತ್ತಾಳೆ. ಆಗ ಆರು ಜನರು ಅಣ್ಣಂದಿರು ದೇವಿಗೆ ತಪ್ಪಾಯಿತೆಂದು ಕೈ ಮುಗಿದು, ಗುಡಿಯ ಹಿಂದಕ್ಕೆ ತಮ್ಮ ಶರಬಂಧನನ್ನು ಕರೆದುಕೊಂಡು ಹೋಗುತ್ತಾರೆ. ಮತ್ತೆ ಅವನನ್ನು ಕಡಿಯಲು ತಯಾರಾಗುತ್ತಾರೆ. ನನ್ನನ್ನು ಕಡಿಯಬೇಡಿರಿ ಎಂದು ಅಂಗಲಾಚುತ್ತಾನೆ. ಈಗ ನಾನು ತಂದ ಮೇಟೌಷದಿ ನಿಮ್ಮ ಕೈಗೆ ಕೊಡ್ತೀನಿ, ಆರು ಮಂದಿ ಅಣ್ಣಂದಿರಿಗೂ ಆರು ಜನ ಹೆಂಡ್ತಿರನ್ನು ಕೊಡ್ತೀನಿ, ಅಣ್ಣ ನಿಮ್ಮ ಪಾದ ಮುಗೀತೀನಿ ಎಂದು ವಿನೀತನಾಗಿ ಕಡಿಯಬೇಡಿರಿ ಎಂದು ಕೇಳಿಕೊಳ್ಳುತ್ತಾನೆ. ಆದರೆ ದುಷ್ಟ ಅಣ್ಣಂದಿರು ತಮ್ಮನನ್ನು ಕಡಿಯುತ್ತಾರೆ.

"ಆಗ ಶಿವ ಶಿವಾ ಅಂದಾನೋ

ಮಗ ತಲೆಯೊಂದು ಬಗ್ಗಿಸ್ಯಾನೊ

ಅಣ್ಣ ಕಡಿರಣ್ಣ ನನ್ನ ಜಲ್ಮ

ನಿಮಗೆಲ್ಲರಿಗೂ ಶರಣಣ್ಣ

ಏ ಆರು ಮಂದಿ ನೋಡಣ್ಣ ಗರಗ್‌ನಂಗೆ ಕಡದಾರ"(೧೯೯೭: ೭೩೧)

ಎಲ್ಲಮ್ಮದೇವಿ ಗುಡಿಯ ಹಿಂದೆ ಹೋಗಿ ಅಣ್ಣಂದಿರು ತಮ್ಮನನ್ನು ಕಡಿದು ಗುಡಿಯ ಮುಂದೆ ಬರುತ್ತಾರೆ. ಎಲ್ಲಮ್ಮದೇವಿ ನೋಡಿ ಆರು ಜನರನ್ನು ಕುರುಡರಾಗಿ ಮಾಡುತ್ತಾಳೆ. ಆದರೆ ಈ ಸನ್ನಿವೇಶವು ಶಂಕ್ರಮ್ಮ ಅವರ ಕಥನದಲ್ಲಿ ಪರಮಾತ್ಮನೇ ಬಂದು ತಮ್ಮನನ್ನು ಕಡಿದಂತ ಅಣ್ಣಂದಿರನ್ನು ಕುರುಡರನ್ನಾಗಿ ಮಾಡುತ್ತಾನೆ.

ಶಂಕ್ರಮ್ಮ ಅವರ ಪಠ್ಯದಲ್ಲಿ ಏಳು ಜನ ಅಣ್ಣಂದಿರು ಕೂಡಿ ಸಮುದ್ರದಲ್ಲಿ ನೀರು ಕುಡಿಯಲು ಹೋದಾಗ ಆರು ಜನ ಅಣ್ಣಂದಿರು ಮತ್ಸರದಿಂದ ತಮ್ಮನಿಗೆ ತಿಳಿಯದಂತೆ ನೀರು ಕುಡಿಯುವಾಗ ಕಡಿಯುತ್ತಾರೆ. ಪರಮಾತ್ಮನು ಅಣ್ಣಂದಿರನ್ನು ಕುರುಡರಾಗಿ ಮಾಡುತ್ತಾನೆ. ಶರಬಂಧನನ್ನು ಬದುಕಿಸುತ್ತಾನೆ. ಸಿರಿದೇವಿಯ ಹಾಗೂ ಶರಬಂಧನ ಭಕ್ತಿಯಿಂದ ಶರಬಂಧ ಮತ್ತೆ ಬದುಕುತ್ತಾನೆ. ಈರಮ್ಮ ಅವರ ಕಥನದಲ್ಲಿ ಸಹ ಪರಮಾತ್ಮನೇ ಶರಬಂಧನನ್ನು ಬದುಕಿಸುತ್ತಾನೆ. ಈರಮ್ಮ ಅವರ ಪಠ್ಯದಲ್ಲಿ ಶರಬಂಧನ ಹೆಂಡತಿಯರಾದ ಮಾಣಿಕ್ಯಮ್ಮ, ಚಿತ್ರಾಂಗಿ, ದೇವಸ್ತಾನಿ, ಶಾಮಗಂಧಿ, ಎದಿನಗಂಧಿ ಮತ್ತು ಪಾತರಗಿತ್ತಿ ಇವರು ಗಂಡನನ್ನು ಕೊಂದಿದ್ದನ್ನು ಕಂಡು ದುಃಖ ಮಾಡುವಾಗ ಪರಮಾತ್ಮ ಬಂದು ಅವರನ್ನು ವಿಚಾರಿಸಿ

ಅವರಿಗೆ ನೀರು ತರಲು ಬಾವಿಗೆ ಕಳಿಸಿ ಶರಬಂಧನನ್ನು ಬದುಕಿಸಿ ಹೋಗುತ್ತಾನೆ. ಎರಡೂ ಕಥನಗಳಲ್ಲಿ ಪರಮಾತ್ಮನೇ ಶರಬಂಧನನ್ನು ಬದುಕಿಸುತ್ತಾನೆ. ಇಲ್ಲಿ ಇಬ್ಬರು ಕಥನಗಾರರ ಪ್ರತಿಭೆ ವ್ಯಕ್ತವಾಗಿದೆ.

**ಆಧುನಿಕ ವಿಚಾರಗಳು**

'ಕಾಂಭೋಜರಾಜನಕತೆ' ಹಾಗೂ 'ಕೃಷ್ಣಗೊಲ್ಲರ ಕಾವ್ಯ' ಈ ಎರಡೂ ಕಥನಗಳಲ್ಲಿ ವಾಸ್ತವ ವಿಚಾರಗಳು ಅಭಿವ್ಯಕ್ತಗೊಂಡಿವೆ. ಕಾಂಭೋಜರಾಜನಕತೆಗಿಂತ 'ಕೃಷ್ಣಗೊಲ್ಲರ ಕಾವ್ಯ' ಆಧುನಿಕ ವಿಚಾರಗಳಿಗೆ ಹತ್ತಿರವಿದೆ. ಹುಬ್ಬಳ್ಳಿ ಡಾಕ್ಟ್ರು ಅಲ್ಲಿ ಬರುವ ಪಟ್ಟಣಗಳ ಹೆಸರುಗಳು ಇಂಗ್ಲಿಷ್ ಪಾಠ ಓದುವ ಪಾತ್ರಗಳು ಮುಂತಾದ ವಿಷಯಗಳು ಕಥನದ ಉದ್ದಕ್ಕೂ ಚಿತ್ರಿತಗೊಂಡಿದೆ. ಹಾಗೆ ಇಡೀ ಕಥನವು ಗೊಲ್ಲ ಸಮುದಾಯ ವನ್ನು ಪ್ರತಿನಿಧಿಸುತ್ತದೆ.

ಕೃಷ್ಣಗೊಲ್ಲರಕತೆ ಎಂದು ಹೇಳುವ ಕಥನಗಾರರು ಕಥನದ ಶೀರ್ಷಿಕೆಯಲ್ಲೂ ಒಂದು ಸಮುದಾಯವು ಸೂಚಿತವಾಗಿದೆ. ಈ ಹಿನ್ನೆಲೆಯಲ್ಲಿ ಈ ಕಥನ ಮೂಡಿದ್ದು ಕಾಣುತ್ತದೆ. ಆದರೆ ಶಂಕ್ರಮ್ಮ ಅವರ ಕಾಂಭೋಜರಾಜ ಕತೆಯ ಶೀರ್ಷಿಕೆಯಲ್ಲಿ ಅಂತಹ ಮನೋಭಾವ ಬಂದಿಲ್ಲ.

ಈರಮ್ಮ ಅವರ ಪಠ್ಯದಲ್ಲಿ ಕಾಂಭೋಜರಾಜನ ಮದುವೆಯ ಸನ್ನಿವೇಶದಲ್ಲಿ ಹೆಣ್ಣನ್ನು ಹುಡುಕುವ ಸಂದರ್ಭದಲ್ಲಿ ಕಥನಗಾರರ ಸುತ್ತಮುತ್ತಲಿನ ಊರುಗಳ ಹೆಸರುಗಳನ್ನು ತನ್ನ ಕಥನಕ್ಕೆ ಅಳವಡಿಸಿಕೊಂಡು ಕಥನವನ್ನು ವಾಸ್ತವದ ಹತ್ತಿರಕ್ಕೆ ತಂದಿದ್ದಾಳೆ. ಕಾಂಭೋಜರಾಜನು ಮದುವೆ ಮಾಡಿಕೊಂಡು ಏಳು ಜನ ಹೆಂಡತಿಯರನ್ನು ಕರೆದುಕೊಂಡು ಬರುತ್ತಾನೆ.

"ತಾವು ಚಳ್ಳಕೆರೆಗೆ ಬಂದ್ಯಾರೋ
ಚಳ್ಳಕೆರೆ ತಟಾದು
ದಾವಣಗೆರೆಗೆ ತಟಾದು
ಥೊತ್ತಡಿ ಕೂಡ್ಲಿಗ್ಯಾಗಿ ಬಂದಾರ
ಕೂಡ್ಲಿಗಿ ತಟಾದು
ಆಗ ಕರ್ನಾಟಕ ಚಾಂಪುರ
ತಾವು ಊರಿಗೆ ಬಂದಾರ"(೧೯೯೭: ೨೭೪)

ಇಲ್ಲಿ ಈರಮ್ಮ ಅವರು ವಾಸ್ತವ ಪಟ್ಟಣಗಳನ್ನು ಕಥನಕ್ಕೆ ತಂದು ಕೇಳುಗರಿಗೆ ಕಥನವನ್ನು ಹತ್ತಿರ ತಂದಿದ್ದಾಳೆ. ಇಲ್ಲಿ ಬರುವ ಪಟ್ಟಣಗಳು ಚಳ್ಳಕೆರೆ, ದಾವಣಗೆರೆ, ಕೂಡ್ಲಿಗಿ ಈ ಪಟ್ಟಣಗಳನ್ನು ಹೇಳಿ ಕರ್ನಾಟಕ ಚಾಂಪುರ ಪಟ್ಟಣ ಎಂದು ನಿರೂಪಿಸಿದ್ದಾರೆ. ಏಕೆಂದರೆ ಇಲ್ಲಿ ಚಾಂಪುರ ಪಟ್ಟಣ ಎಂಬುದು ಕಾಲ್ಪನಿಕವಾಗಿ ಮೂಡಿ ಬಂದಿದ್ದರಿಂದ ಈ ರೀತಿಯಾಗಿ ನಿರೂಪಿಸಿದ್ದನ್ನು ಕಾಣಬಹುದು. ಆದರೆ ಈ

ಸನ್ನಿವೇಶವು ಈ ಪಟ್ಟಣಗಳ ಹೆಸರುಗಳು ಶಂಕ್ರಮ್ಮ ಅವರ ಪಠ್ಯದಲ್ಲಿ ಬಂದಿಲ್ಲ. ಆದರೆ ನೇರವಾಗಿ ಕಥನದ ವಸ್ತುವನ್ನು ತಂದಿದ್ದಾಳೆ.

ಹಾಗೆಯೇ ಈರಮ್ಮ ಅವರ ಪಠ್ಯದಲ್ಲಿ ಕಾಂಭೋಜರಾಜನ ಬೆನ್ನು ಹುಣ್ಣಿನ ಮದ್ದಿಗಾಗಿ ಹುಬ್ಬಳ್ಳಿ ಡಾಕ್ಟರನ್ನು ತಂದು, ಡಾಕ್ಟ್ರುಗಳ ಮೋಸವನ್ನು ಹೊರಹೊಮ್ಮಿಸಿದ್ದಾರೆ. ಹುಬ್ಬಳ್ಳಿ ಡಾಕ್ಟ್ರ ಪಾತ್ರದ ಮೂಲಕ ವಾಸ್ತವವನ್ನು ಕಥನದಲ್ಲಿ ತಂದಿದ್ದಾರೆ. ಇದರ ವಾಸ್ತವ ಬದುಕಿನ ವಿಚಾರಗಳು ಕಥನದಲ್ಲಿ ಅಲ್ಲಲ್ಲಿ ವ್ಯಕ್ತಪಡಿಸಿದ್ದನ್ನು ಕಾಣಬಹುದು.

ಇನ್ನು ಕೃಷ್ಣಗೊಲ್ಲರ ಕಾವ್ಯದಲ್ಲಿ ಚಾವುಲರಾಜ ಪಟ್ಟಣದ ಚಾವುಲರಾಜನ ಮಗಳು ಶಾಮಗಂಧಿಯ ಪಾತ್ರದಲ್ಲಿ ವಾಸ್ತವ ವಿಚಾರಗಳನ್ನು ಚಿತ್ರಿಸಿದ್ದಾರೆ.

> "ಚಾವುಲರಾಜ ಪಟ್ಟಣಕ್ಕೆ ಬಂದ
> ಚಾವುಲರಾಜನ ಮಗಳು
> ನೆರ್ತ್ ಐದೊರ್ಷ ಇಂಗ್ಲಿಷ್ ಮರಾಠಿ
> ಹಿಂದಿ ಬೀಧಿ ಓದಿ ಬಿಟ್ಟಳಪಾ
> ಆಗ ಹೊತ್ ಮುಣಗಲಿ ಸ್ನಾನ
> ಮಾಡದೆ ಮಾಡದೆ ಮಾಡದೆ
> ಸ್ನಾನ ಮಾಡಿದ ನೀರು
> ಆನೆ ಒಂಟಿ ಒಡ್ಕೊಂಡು ಹೋತಾವ"(೧೯೯೭: ೫೭೬)

ಶರಬಂಧರಾಜಕುಮಾರನು ಚಾವುಲರಾಜ ಪಟ್ಟಣಕ್ಕೆ ಬಂದ ಸಂದರ್ಭದಲ್ಲಿ ಈ ಸನ್ನಿವೇಶವನ್ನು ಕಥನಗಾರರು ಅಭಿವ್ಯಕ್ತಿಸಿದ್ದಾರೆ. ಶಾಮಗಂಧಿಯ ಪಡೆಯುವ ಆಧುನಿಕ ಶಿಕ್ಷಣ ಪದ್ಧತಿಯನ್ನು ಇಲ್ಲಿ ನಿರೂಪಿಸಿದ್ದಾರೆ. ಈ ಪಾತ್ರದ ಮೂಲಕ ಮಕ್ಕಳಿಗೆ ಹೇಗೆ ಶಿಕ್ಷಣ ಕೊಡಿಸಬೇಕೆಂಬ ಅರಿವನ್ನು ಮೂಡಿಸಿದ್ದಾರೆ. ಶಿಕ್ಷಣದ ಪ್ರಾಥಮಿಕ ಹಂತ, ನಂತರ ಕೊಡುವ ಶಿಕ್ಷಣ, ಹಿಂದಿ, ಇಂಗ್ಲಿಷ್, ಮರಾಠಿ ಭಾಷೆಗಳು ವ್ಯಕ್ತವಾಗಿದ್ದು ಮಕ್ಕಳಿಗೆ ಕನ್ನಡಕ್ಕಿಂತ ರಾಷ್ಟ್ರೀಯ ಅಂತಾರಾಷ್ಟ್ರೀಯ ಮಟ್ಟದ ಭಾಷೆಗಳು ಮುಖ್ಯ ಎಂದು ವ್ಯಕ್ತಪಡಿಸಿದ್ದಾರೆ. ಇಲ್ಲಿ ಶಾಮಗಂಧಿ ಪಾತ್ರದ ಮೂಲಕ ಸಾಮಾನ್ಯ ಜನರ ಬದುಕಿನ ರೀತಿ ಅವರ ಆಶೆ ಆಕಾಂಕ್ಷೆಗಳು ಮಕ್ಕಳಿಗೆ ಇಂಗ್ಲಿಷ್-ಹಿಂದಿ ಭಾಷೆಯ ವ್ಯಾಮೋಹ ಹಂಬಲ ಮುಂತಾದ ವಿಚಾರಗಳು ವ್ಯಕ್ತವಾಗಿವೆ. ಈರಮ್ಮನ ಕಥನದಲ್ಲಿ ಮಾತ್ರ ಈ ಸನ್ನಿವೇಶ ಮೂಡಿ ಬಂದಿದೆ.

ಎರಡು ಕಥನಗಳು ಬೇರೆ ಬೇರೆ ಪ್ರದೇಶಗಳ ಪರಿಸರಗಳಲ್ಲಿ ರಚಿತವಾಗಿವೆ. ಈ ಕಥನಗಳಲ್ಲಿ ಕಂಡುಬರುವ ಮೂಲಭೂತವಾದ ಸಂಸ್ಕಾರ ವಿಶೇಷಗಳು, ಮಾನವೀಯ ಧೋರಣೆಗಳು, ಜೀವನ ಮೌಲ್ಯಗಳು

ಸಮಾನವಾಗಿ ಇರುವುದನ್ನು ಕಾಣಬಹುದು. ಮೇಲ್ನೋಟಕ್ಕೆ ಭಿನ್ನವೆನ್ನಿಸಬಹುದಾದ ಕೆಲವು ಸನ್ನಿವೇಶಗಳು ವೈಲಕ್ಷಣಗಳಿದ್ದರೂ ಕೂಡ ಸೂಕ್ಷ್ಮವಾಗಿ ಅವಲೋಕಿಸಿದಾಗ ಎರಡು ಕಥನಗಳ ದೃಷ್ಟಿ ಧ್ಯೇಯ ಒಂದೇ ಆಗಿದೆ. ಇಬ್ಬರು ವ್ಯಕ್ತಿಗಳು ಆಲೋಚನೆಗಳು ಬೇರೆ ಬೇರೆಯಾಗಿ ಕಾಣಬಹುದು. ಆದರೆ ಅವರು ಕೊಟ್ಟ ಕಥನಗಳ ಶಿರೋನಾಮೆಗಳಿಂದಲೇ ಅವರ ಕಥನಗಳ ಕೆಲವು ಸನ್ನಿವೇಶಗಳ ದೃಷ್ಟಿ ಅವುಗಳ ಭೇದವನ್ನು ಗುರುತಿಸಬಹುದಾಗಿದೆ. ಇಲ್ಲಿ ಶಂಕ್ರಮ್ಮ ಇವರಿಗೆ ಕಾಂಭೋಜರಾಜ ಮುಖ್ಯವಾಗಿ ಕಂಡರೆ, ಈರಮ್ಮ ಇವರಿಗೆ ಕೃಷ್ಣಗೊಲ್ಲರೇ ಮುಖ್ಯವಾಗಿ ಕಂಡುಬರುತ್ತಾರೆ. ಮುಖ್ಯವಾಗಿ ಇಬ್ಬರು ಕಥನಗಳ ವಸ್ತು ಆಶಯವು ಅತ್ಯಂತ ಸೊಗಸಾಗಿ ಬಂದು ಕೇಳುಗರನ್ನು ಕಥನದ ಕಥಾಲೋಕಕ್ಕೆ ಎಳೆದುಕೊಂಡು ಹೋಗಿದ್ದನ್ನು ಕಾಣಬಹುದು.

### ೪.೨. ಒಬ್ಬರೇ ವಕ್ತೃವಿನ ಒಂದೇ ಕತೆಯ ಕನ್ನಡ-ತೆಲುಗು ಆವೃತ್ತಿಗಳು

ಒಬ್ಬರೇ ವಕ್ತೃವಿನಿಂದ ಸಂಗ್ರಹಿಸಿದ ಕನ್ನಡ-ತೆಲುಗು ಎರಡು ಭಾಷೆಗಳ ಕಾಂಭೋಜರಾಜಕತೆ, ಬಾಲಗಿರಿರಾಜಕತೆ, ಭೂಲಕ್ಷ್ಮಿಕತೆಯನ್ನು ತೌಲನಿಕವಾಗಿ ಅಧ್ಯಯನ ಮಾಡಲಾಗಿದೆ. ಎರಡೂ ಭಾಷೆಗಳಲ್ಲಿ ಒಬ್ಬರೇ ವಕ್ತೃ ಅಭಿವ್ಯಕ್ತ ಮಾಡಿದಾಗ ಅದರಲ್ಲಿ ಸಾಮ್ಯ-ವೈಷಮ್ಯಗಳು ಹೇಗೆ ಮೂಡಿವೆ ಎಂಬುದನ್ನು ಪರಿಶೀಲಿಸಿ, ಭಾಷಿಕವಾಗಿ, ಪಾತ್ರಗಳ ವೈಶಿಷ್ಟ್ಯ, ಎರಡು ಕಥನಗಳ ಸನ್ನಿವೇಶ ಹಾಗೂ ಸಂದರ್ಭ ಮುಂತಾದ ಅಂಶಗಳೆಡೆಗೆ ಗಮನಹರಿಸಲಾಗಿದೆ.

#### ಆರಂಭದ ನಿರೂಪಣೆ

ಕನ್ನಡ-ತೆಲುಗು ಎರಡು ಆವೃತ್ತಿಗಳಲ್ಲಿ ಕಥನಗಳ ಪ್ರಾರಂಭದ ನಿರೂಪಣೆಯಲ್ಲಿ ವ್ಯತ್ಯಾಸ ಕಂಡುಬರದೆ ಪ್ರತಿ ಸಾಲಿನಲ್ಲಿ ಭಾಷಾಂತರ ಎಂಬಂತೆ ಚಿತ್ರಿತವಾಗಿದೆ. ಕನ್ನಡದಿಂದ ತೆಲುಗಿಗೆ, ತೆಲುಗಿನಿಂದ ಕನ್ನಡಕ್ಕೆ ಭಾಷಾಂತರವಾಗಿದೆ ಎಂಬಂತೆ ಎರಡು ಪಠ್ಯಗಳು ರಚನೆಗೊಂಡಿವೆ.

ಕನ್ನಡ: ಸಿರಿಹರಿ ವೈದೇವಿ ತಂದನಾನಾ ತಂದಾನ -೧

ಮೇಲುಗಡೆಯ ದೇಶದೊಳಗೆ ಗುರುವೆ ಮಹದೇವ

ಅಕ್ಕಡಿ ಯಾವದು ಪಟ್ನ ಇದ್ದದೇನ ಯೇ ಶಿವನೆ -೨

ಶಾಂಪುರ ಪಟ್ನ ಇದ್ದದೇನ ಮಹದೇವ -೩

ಶಮರಾಜನ ಹೆಂಡತಿ ಯಾರಪ್ಪ ಹಡೆದಮ್ಮ -೪

ತಾಯಿಯು ಪಾಂದೇವಿ ಇದ್ದಳೇನ -೫

ರಾಜನ ಹೊಟ್ಟೆಯೊಳಗೆ ಯೇ ಶಿವನೆ ಮಹಾದೇವ

ಒಬ್ಬನೇ ಕಾಂಭೋಜರಾಜ ಮಹಾರಾಜ ಗಜರಾಜ -೬

ರಾಜನಿಗೆ ಏಳು ಮಂದಿ ಹೆಂಡರು ಇದ್ದರೇನ ರಾಜ -೭

ತೆಲುಗು: ಶ್ರೀದೇವಿ ವೈದೇವಿ ತಂದನಾನಾ ತಂದಾನ -೧

ಅಕ್ಕಡಿಯಾವದಿ ಪಟ್ನಂ ಉನ್ನದೇಮ ಶಿವನೆ -೨

ಶಾಂಪುರಂ ಪಟ್ನಂ ಉನ್ನದೇಮ ಮಹದೇವ -೩

ರಾಜ ಶಮರಾಜ ಉನ್ನಡೇಮ ಗಜರಾಜ

ರಾಜಭಾರ್ಯ ಎವ್ವರು ಉನ್ನರೇಮ ಮಹಾರಾಜ -೪

ನಾಯಮ್ಮ ಪಾಂದೇವಿಗದರ ನಾ ನಾಯನ ಗಜರಾಜ -೫

ಒಕ್ಕಡೆ ಕಾಂಭೋಜರಾಜ ಗಜರಾಜ ಮಹಾರಾಜ -೬

ರಾಜಕು ಏಡುಮಂದಿ ಪೆಂಡ್ಲಾಲುಗದರ ಮಹದೇವ -೭

ಇಲ್ಲಿ ಎರಡೂ ಭಾಷೆಗಳ ಪಠ್ಯದ ಪ್ರಾರಂಭದ ನಿರೂಪಣೆಯ ಪ್ರತಿಯೊಂದು ಸಾಲನ್ನು ಪರಿಶೀಲಿಸಿದರೆ ಕನ್ನಡ ಪಠ್ಯದ ಎರಡನೇ ಸಾಲು ಹಾಗೂ ತೆಲುಗು ಪಠ್ಯದ ನಾಲ್ಕನೇ ಸಾಲು ಮಾತ್ರ ಭಿನ್ನವಾಗಿ ವ್ಯಕ್ತವಾಗಿದೆ. ಆದರೆ ಉಳಿದ ಸಾಲುಗಳಲ್ಲಿ ವ್ಯತ್ಯಾಸವಿಲ್ಲದೆ ನಿರೂಪಿಸಿದ್ದಾರೆ. ಕರ್ನಾಟಕದ ಮೇಗಡೆ ಮೇಲುಗಡೆ ಇರುವ ಪಟ್ಟಣ ಶಾಂಪುರ. ಇದು ಕನ್ನಡ ಪಠ್ಯದಲ್ಲಿ ವಿಶೇಷವಾಗಿ ಬಂದಿದೆ. ಆದರೆ ತೆಲುಗು ಪಠ್ಯದಲ್ಲಿ ಆಕಡೆ ಯಾವುದು ಶಾಂಪುರ ಪಟ್ಟಣ ಎಂದು ನೇರವಾಗಿ ಹೇಳುತ್ತಾರೆ. ಇಲ್ಲಿ ವಕ್ತೃ ಮೌಖಿಕ ಕಥನಗಳನ್ನು ಅಭಿವ್ಯಕ್ತಪಡಿಸಿದ್ದರೂ ಅವರಲ್ಲಿ ಸೃಜನಶೀಲತೆ ಕಂಡುಬರುತ್ತದೆ. 'ತಾಯಿಯು ಪಾಂದೇವಿ ಇದ್ದಳೇನ' ಎಂಬ ಸಾಲು ತೆಲುಗಿನಲ್ಲಿ 'ನಾಯಮ್ಮ ಪಾಂದೇವಿಗದರ' ಎಂಬ ಸಾಲುಗಳು ಸಹ ಭಾಷಾಂತರವಾಗಿ ಬಂದಿವೆ. 'ತಾಯಿ ಹಾಗೂ ನಾಯಮ್ಮ' ಪದಗಳನ್ನು ನೋಡಿದರೆ ಸ್ತ್ರೀಯನ್ನು ತಾಯಿಯಾಗಿ ಸಂಬೋಧನೆ ಮಾಡುವುದು ಕಂಡುಬಂದು ಅದು ಕೇಳುಗರಿಗೆ ಸಂಬಂಧವನ್ನು ಕಲ್ಪಿಸುತ್ತದೆ. ಕಾರಣ ರಾಣಿ ಎಲ್ಲರಿಗೂ ತಾಯಿ ಸಮಾನ ಎಂಬ ಅರ್ಥದಲ್ಲಿ ತಾಯಿಯ ಪಾಂದೇವಿ ಎಂದು ನಿರೂಪಣೆ ಮಾಡಿದ್ದನ್ನು ಕಾಣಬಹುದು. ಹೀಗೆ ಇಲ್ಲಿ ನಿರೂಪಿಸಿದ ಎರಡೂ ಭಾಷೆಗಳಲ್ಲಿ ಕೆಲವು ಸಾಲುಗಳನ್ನು ಬಿಟ್ಟು ಉಳಿದ ಸಾಲುಗಳು ಚಾಚೂ ತಪ್ಪದೆ ಭಾಷಾಂತರವಾಗಿ ಅನುವಾದಗೊಂಡಂತೆ ಅಭಿವ್ಯಕ್ತಪಡಿಸಿದ್ದಾರೆ. ಅನಕ್ಷರಸ್ಥರು ಮೌಖಿಕ ಕಥನಗಳನ್ನು ಭಾಷಾಂತರವಾಗಿ ಎರಡೂ ಭಾಷೆಗಳಲ್ಲಿ ಚಿತ್ರಿಸಿದ್ದನ್ನು ಕಾಣಬಹುದು.

ರಾಜನು ಜ್ಯೋತಿಷಿಯರ ಹೇಳಿಕೆಯಂತೆ ಬಾವಿ ತೋಡಿಸಿದರೆ, ಹೋಗಿ ಬರುವ ಜನರು ಬಾವಿಯಲ್ಲಿ ನೀರು ಕುಡಿದರೆ ತನ್ನ ಮನೆತನಕ್ಕೆ ಹತ್ತಿದ ಶಾಪದಿಂದ ಮುಕ್ತಿ ಪಡೆದು ಮಕ್ಕಳ ಭಾಗ್ಯ ಉಂಟಾಗುತ್ತದೆಂಬ ನಂಬಿಕೆಯಿಂದ ಊರಿಂದ ಹರದಾರಿಯಲ್ಲಿ ಬಾವಿ ತೋಡಿಸಲು ತಯಾರಾಗುತ್ತಾನೆ.

ಕನ್ನಡ: ರಾಜ ಕಚೇರಿದೊಳಗ -೧

ಏಳು ಸಾವಿರ ದಂಡಿನ ಮಂದಿನ ತಗಂಡು -೨

ದೀನಬಾಜ ಸಂಗಡ -೩

ವಡರು ಉಪ್ಪಾರ ಮಂದಿನ ತಗಂಡು -೪

ಊರಿಗೊಂದು ಹರದಾರಿ -೫

ರಾಜ ಹೊಂಟು ಬಂದ -೬

ಬಾಯಿ ಬುನಾದಿಗೆ ಪೂಜೆ ಮಾಡಿದ -೭

ಕಾಯಿ ಕರ್ಪೂರ ಹೊಡೆದು ನಮಸ್ಕಾರ ಮಾಡಿ -೮

ತೆಲುಗು: ರಾಜ ಕಚೇರಿ ಲೋಪಲ -೧

ಏಡು ಸಾವಿರಲ ದಂಡು ಮಂದಿನ ತೋಲಕೋನಿ -೨

ದೀನ ಬಾಜ ಸಂಗಟ -೩

ವಡ್ಡೆ ಉಪ್ಪಾರಲ ಮಂದಿ -೪

ಊರಿಕಿ ಒಕ್ಕ ಪರುವು ದೂರಮು -೫

ರಾಜ ಎಲ್ಲಿ ವಚ್ಚೆ -೬

ಎಲ್ಲಿ ವಚ್ಚಿ ಬಾಯಿಕಿ ಪೂಜಚೇಸೆ -೭

ಕಾಯ ಕೊಟ್ಟಿ ಕರ್ಪೂರಮು ಕಾಲ್ಚಿ -೮

ಇಲ್ಲಿ ಎರಡೂ ಭಾಷೆಗಳಲ್ಲಿ ಅಚ್ಚುಕಟ್ಟಾಗಿ ಪ್ರತಿಯೊಂದು ಸಾಲಿನಲ್ಲಿ ಪದಗಳು ಪಲ್ಲಟವಾಗದಂತೆ ಅದೇ ಪದಗಳನ್ನು ಬಳಸಿದ್ದಾರೆ. ಕಥನಗಾರರು ಒಂದು ಭಾಷೆಯಲ್ಲಿ ಹಾಡಿದ ಕಥನವು ಮತ್ತೊಂದು ಭಾಷೆಯಲ್ಲಿ ಹಾಡಿದ್ದರೂ ಕೂಡ ವ್ಯತ್ಯಾಸವಾಗದಂತೆ ಅಭಿವ್ಯಕ್ತಿ ಮಾಡಿದ್ದು ಕಂಡರೆ, ಅವರಲ್ಲಿ ಭಾಷೆಯ ಹಾಗೂ ಭಾಷಾಂತರದ ಪ್ರಭುತ್ವವು ವೇದ್ಯವಾಗುತ್ತದೆ. ಆದರೆ ಮೌಖಿಕ ಕಥನಗಳು ಒಬ್ಬರ ಬಾಯಿಂದ ಇನ್ನೊಬ್ಬರಿಗೆ ಬಂದಿರುತ್ತದೆ. ಅವರು ಕಲಿತುಕೊಂಡ ಕತೆಯನ್ನು ಎರಡೂ ಭಾಷೆಗಳಲ್ಲಿ ಹಾಡುತ್ತಾರೆ. ಅವರು ಕಲಿಯುವುದು ಯಾವುದೋ ಒಂದು ಭಾಷೆಯಲ್ಲಿ. ಗಡಿನಾಡು ಪ್ರದೇಶದಲ್ಲಿ ದ್ವಿಭಾಷಿಕರು ಇರುವುದರಿಂದ ಸ್ವತಃ ತಾವೇ ಎರಡು ಭಾಷೆಗಳಲ್ಲಿ ಕಥನವು ಹಾಡುವುದನ್ನು ಕರಗತ ಮಾಡಿಕೊಂಡಿರುತ್ತಾರೆ.

ಮುಖ್ಯವಾಗಿ ಜನಪದ ಕಥನಗಾರರು ಒಂದು ಭಾಷೆಯಲ್ಲಿದ್ದ ಕತೆಯನ್ನು ಇನ್ನೊಂದು ಭಾಷೆಗೆ ಚಾಚೂ ತಪ್ಪದೆ ಪ್ರತಿಯೊಂದು ಸಾಲುಗಳಲ್ಲಿ ಅಚ್ಚುಕಟ್ಟಾಗಿ ಭಾಷಾಂತರವಾಗಿ ಅಭಿವ್ಯಕ್ತಿ ಮಾಡಿದ್ದನ್ನು ಕಂಡರೆ ಅವರಲ್ಲಿ ಹುದುಗಿರುವ ಪ್ರತಿಭೆ ಎದ್ದು ಕಾಣಿಸುತ್ತದೆ. ಮುಖ್ಯವಾಗಿ ಅವರಲ್ಲಿ ಇರುವ ದ್ವಿಭಾಷಿಕ ಪ್ರಭುತ್ವ, ಅವರ ಭಾಷೆಯ ಹಿಡಿತವನ್ನು ಕಾಣಬಹುದು.

'ರಾಜ ಕಚೇರಿದೊಳಗ' ಎಂದು ಕನ್ನಡದಲ್ಲಿ ವ್ಯಕ್ತಪಡಿಸಿದರೆ, 'ರಾಜ ಕಚೇರಿ ಲೋಪಲ' ಎಂಬ ಸಾಲು ಭಾಷಾಂತರವಾಗಿ ಬಂದಿದೆ. ಐದನೆಯ ಸಾಲಿನಲ್ಲಿ 'ಊರಿಗೊಂದು ಹರದಾರಿ' ಎಂಬ ಸಾಲು 'ಊರಿಕಿ ಒಕ್ಕ ಪರವು ದೂರಾಮು' ಎಂದು ಅಭಿವ್ಯಕ್ತಪಡಿಸಿದ್ದಾರೆ. 'ಊರಿಗೊಂದು' ಎನ್ನುವ ಅರ್ಥವು ಭಾಷಾಂತರವಾಗಿ 'ಊರಿಕಿ ಒಕ್ಕ', 'ಹರದಾರಿ' ಎನ್ನುವ ಪದಕ್ಕೆ 'ಪರುವು' ಎಂಬ ಪದ ಬಂದಿದೆ ಈ ಎಲ್ಲಾ ಪದಗಳನ್ನು ಗಮನಿಸಿದಾಗ ಅಚ್ಚುಕಟ್ಟಾಗಿ ಭಾಷಾಂತರವಾಗಿ ಮೂಡಿಬಂದಿದ್ದನ್ನು ಕಾಣಬಹುದು. ಅಲೆಮಾರಿ ವೃತ್ತಿ ಗಾಯಕರಾದ ಮೌಖಿಕ ಕಥನಗಾರರಿಗೆ ಭಾಷಾಂತರ, ಅನುವಾದ ಎಂಬ ಪ್ರಜ್ಞೆಯೇ ಇರುವುದಿಲ್ಲ. ಆದರೆ ಎರಡೂ ಭಾಷೆಗಳಲ್ಲಿ ಕಥನಗಾರರು ಭಾಷಾಂತರ ನೆಲೆಯಲ್ಲಿ ಹಾಡಿದ್ದನ್ನು ಕಾಣುತ್ತೇವೆ.

**ಕಥನತಂತ್ರ**

ಕನ್ನಡ-ತೆಲುಗು ಎರಡೂ ಭಾಷೆಗಳಲ್ಲಿ ಒಂದೇ ಕಥನತಂತ್ರವನ್ನು ಅಳವಡಿಸಿಕೊಂಡಿದ್ದಾರೆ. ಕಾಂಭೋಜರಾಜನ ಮಕ್ಕಳ ಭಾಗ್ಯಕ್ಕಾಗಿ ಚಿಂತೆ ಮಾಡುತ್ತ ತನ್ನ ಕೈಕೆಳಗಿನವರನ್ನು ಕುರಿತು 'ಏನಪ್ಪ ಕೈ ಕೆಳಗೆ ರೈತರೇ ಐದು ಮಂದಿ ಜೋಶಿ ಬ್ರಾಹ್ಮಣರನ್ನು ಕರೆದುಕೊಂಡು ಬರ್ರಿ', ಪಂಚಾಂಗ ನೋಡಮು ಪಂಚಾಂಗದೊಳಗೆ ಏನು ಹೊಂದ್ರುತದ ಅದರಗ ಹೊಂಟಿದಂತ ಸುದ್ದಿ ನಾವು ಶುದ್ಧ ಮಾಡನ ಎಂದರು. ಕೈ ಕೆಳಗಿನ ರೈತರು ಬಂದು ಐದು ಬ್ರಾಹ್ಮಣರನ್ನು ಕರೆದುಕೊಂಡು ಬಂದರು.

ಕನ್ನಡ: ಕಚೇರಿಯೊಳಗೆ ಕುಳಿತು
ಬೆಳ್ಳಿಕಡ್ಡಿ ಹಾಕಿ ಪಂಚಾಂಗ ನೋಡಿದರೆ
ಪಂಚಾಂಗದೊಳಗ ಏನು ಹೊಂಟದ
ಏನಯ್ಯ ರಾಜ
ಈ ಪಂಚಾಂಗದೊಳಗ ಹೊಂಟಿದಂತ ಸುದ್ದಿ
ನಾವು ಹೇಳಿ ಕೊಡ್ತೀವಿ
ನೀ ಚೆನ್ನಾಗಿ ಕೇಳಬೇಕಯ್ಯ ರಾಜ
ಹಿಂದಕ ನಿಮ್ಮ ತಂದೆ ಶಮರಾಜ
ಊರು ಮುಂದ ಕಾಸುಪಾಕ ತೋಟ ಹಚ್ಚಿದ್ದ
ಆ ತೋಟಗ ಅಷ್ಟು ಪಾಬಂದಿ ಮಾಡಿದ್ದ

ಒಂದು ಮನುಷ್ಯ ಹೋಗಲಾಕ ಸಂದು ಇಲ್ಲ

ಒಂದು ಆಕಳ ಹೋಗಲಾಕ ದಾರಿ ಇಲ್ಲ

ಅಷ್ಟು ಪಾಬಂದಿ ಮಾಡಿದ್ದ

ಪರಮಾತ್ಮ ಸಲುಹಿದಂತ ಗಂಗಿಮೈಲ ಆಕಳ

ತುಂಬು ಈಯಿಲಾಕ ದಿನಗಳಾಗಿದ್ದವು

ಆ ತೋಟದ ಮ್ಯಾಲೆ ಮನಸಿಟ್ಟು

ಆ ತೋಟದೊಳಗೆ ಬಂದು

ಐದು ತುತ್ತು ನಾಗಮಲ್ಲಿಗೆ ಹೂವ ತಿಂದಿತು

ತೆಲುಗು (ಅನುವಾದ): ರಾಜ ಕಛೇರಿದೊಳಗ ಕುಳಿತು

ಬಂಗಾರದ ಪಂಚಾಂಗ ಕೈಯಲ್ಲಿ ಹಿಡಿದುಕೊಂಡು

ಬೆಳ್ಳಿ ಕಡ್ಡಿ ಹಾಕಿ ಪಂಚಾಂಗ ನೋಡಿದರೆ

ಪಂಚಾಂಗದಲ್ಲಿ ಏನೆಂದು ಹೊರಟದ

ಏನಯ್ಯ ಕಾಂಭೋಜರಾಜ ನಿಮ್ಮ ತಂದೆ ಶಮರಾಜ

ಹಿಂದಿನ ಕಾಲದಲ್ಲಿ

ಏಳು ಸಾವಿರ ಹಣ್ಣುಹಂಪಲ ತೋಟ ಮಾಡಿದ್ದ

ಆ ತೋಟದಗ ಒಂದು ಇರುವೆ ಹೋಗಲಾಕ ಸಂದು ಇಲ್ಲದಂಗ

ಪಾಬಂದಿ ಮಾಡಿದ್ದ

ಒಬ್ಬ ಮನುಷ್ಯ ಹೋಗಲಾರದಂಗ ಪಾಬಂದಿ ಮಾಡಿದ್ದ

ಪಶುಗಳು ಹೋಗಲಾರದಂಗ ಪಾಬಂದಿ ಮಾಡಿದ್ದ

ಅಂತಹ ತೋಟದಾಗ ಪರಮಾತ್ಮ ಸಲುವಿದ

ಆಕಳ ಗಂಗಿಮೈಲ

ಈಯಲು ತುಂಬ ದಿನಗಳು ಆಗಿದ್ದವು

ತೋಟದ ಮೇಲೆ ಮನಸಿಟ್ಟು

ತೋಟಕ್ಕೆ ಹೋಗಿ ಐದು ತುತ್ತು ನಾಗಮಲ್ಲಿಗೆ ಹೂವ್ವಗಳು

ಮೇಯ್ದಿತಲ್ಲ?

ಕನ್ನಡ-ತೆಲುಗು ಎರಡು ಭಾಷೆಗಳ ಈ ಕಥನಗಳ ಪಠ್ಯವನ್ನು ಪರಿಶೀಲಿಸಿದಾಗ ಕಥನದ ತಂತ್ರ ಒಂದೇ ಆಗಿದೆ. ಕಥನಗಾರರು ಜ್ಯೋತಿಷಿಯ ಮೂಲಕ ಈ ಸನ್ನಿವೇಶವನ್ನು ವ್ಯಕ್ತಪಡಿಸಿದ್ದನ್ನು ಕಾಣಬಹುದು.

ಆದರೆ ಕನ್ನಡ ಕಥನಕ್ಕಿಂತ ತೆಲುಗು ಕಥನದ ಪ್ರಭುತ್ವ ಕಥನಗಾರರಲ್ಲಿ ಎದ್ದು ಕಾಣುತ್ತದೆ. ಕಚೇರಿದೊಳಗೆ ಕುಂತು ಎನ್ನುವ ಸಾಲಿಗೆ ಕಚೇರಿಲ ಕೂಸೋನಿ ನೇರ ಅನುವಾದ ಬಂದರೆ ಬಂಗಾರು ಪಂಚಾಂಗಂ ಚೇತು ಪಟ್ಟುಕೋಸಿ(ಬಂಗಾರ ಪಂಚಾಂಗ ಕೈಯಲ್ಲಿ ಹಿಡಿದು) ಎಂಬ ಸಾಲು ಕನ್ನಡದಲ್ಲಿ ಬರದೆ ನೇರವಾಗಿ ಬೆಳ್ಳಿಕಡ್ಡಿ ಹಾಕಿ ಪಂಚಾಂಗ ನೋಡಿದರೆ ಸಾಲು ಬಂದಿದೆ, ಎಂಡಿ ಕಟ್ಟಿ ಏಸಿ ಪಂಚಾಂಗ ಚೂಸೆ ಎನ್ನುವ ಸಾಲು ಬಂದಿದೆ. ಅಂದರೆ ಬಂಗಾರು ಪಂಚಾಂಗ ಎಂಬ ಸಾಲನ್ನು ಕನ್ನಡದಲ್ಲಿ ನಿರೂಪಣೆ ಮಾಡುವ ಸಂದರ್ಭದಲ್ಲಿ ಮರೆತು ಹೋಗಿದ್ದಾರೆ ಹೊರತು ಆ ಸಾಲನ್ನು ಬಿಡಬೇಕೆಂಬ ಉದ್ದೇಶ ಇಲ್ಲ. ಅಂದರೆ ಕನ್ನಡಕ್ಕಿಂತ ತೆಲುಗಿನ ಕಥನದ ಮೇಲೆ ಅವರ ಪ್ರಭುತ್ವ ಇದ್ದುದನ್ನು ಕಾಣುತ್ತೇವೆ. ಕನ್ನಡದಲ್ಲಿ ಎಷ್ಟು ಸಾಲುಗಳು ಬಂದಿವೆ ಎಷ್ಟು ಪದಗಳು ಬಂದಿವೆ ಅಷ್ಟೇ ತೆಲುಗಿನಲ್ಲಿ ಬಂದಿದ್ದನ್ನು ಕಾಣುತ್ತೇವೆ. ಜ್ಯೋತಿಷಿಯು ಹೇಳಿದ ವಿಷಯವನ್ನು ಚೆನ್ನಾಗಿ ಕೇಳಬೇಕೆಂದು ಹೇಳುತ್ತಾನೆ. ಅಂದರೆ ಆ ವಿಷಯವನ್ನು ಕಿವಿಗೊಟ್ಟು ಕೇಳು ಎನ್ನುತ್ತಾನೆ. ತನ್ನ ತಂದೆ ಶಮರಾಜನು ಮಾಡಿದ ಕರ್ಮ ಗೋಹತ್ಯೆಯ ಪರಿಣಾಮವಾಗಿ ಮಗ ಕಾಂಭೋಜರಾಜನಿಗೆ ಕಷ್ಟ ಒದಗಿ ಬಂದಿದೆ. ಶಮರಾಜನ ತನ್ನ ತೋಟಕ್ಕೆ 'ಒಕ್ಕ ಸೀಮ ಪೋವನಿಕ ಸಂದುಲೇಕ(ಒಂದು ಇರುವೆ ಹೋಗಲು ದಾರಿ ಇಲ್ಲದಂತೆ) ಭದ್ರತೆಯನ್ನು ಒದಗಿಸಿದ್ದು ಕಾಣಿಸುತ್ತದೆ. ಈ ಎಲ್ಲಾ ವಿಷಯವನ್ನು ಜ್ಯೋತಿಷಿಯ ಮೂಲಕ ಹೇಳಿಸುವುದರಿಂದ ಕಥನದ ತಂತ್ರ ಮುಖ್ಯವಾಗಿ ಎದ್ದು ಕಾಣುತ್ತದೆ. ಈ ಕೆಲವೇ ಸಾಲುಗಳಲ್ಲಿ ಕಥನದ ಮುಖ್ಯ ವಿಷಯ ಅಡಗಿದ್ದರಿಂದ ಕೇಳುಗರಿಗೆ ಕಥನವನ್ನು ಕೇಳುವ ಕುತೂಹಲ. ಅದರಲ್ಲಿ ಅಡಗಿರುವ ಆಶಯವನ್ನು ತಿಳಿದುಕೊಳ್ಳಲು, ತುದಿಗಾಲಿನಲ್ಲಿ ನಿಂತು ಏಕಚಿತ್ತದಿಂದ ಆಲಿಸುತ್ತಾರೆ. ಹೀಗೆ ಕಥನಗಳಲ್ಲಿ ಕಥನಗಾರರು ಅವರದೇ ಕೆಲವು ತಂತ್ರಗಳನ್ನು ಬಳಸಿ ಕೇಳುಗರ ಮನಸ್ಸನ್ನು ತಮ್ಮ ಕಡೆಗೆ ಒಲಿಸಿಕೊಳ್ಳುತ್ತಾರೆ. ಕೇಳುಗರ ಮನೋಭಾವವನ್ನು ಅವರ ಇಂಗಿತವನ್ನು ಅರಿತ ಕಥನಗಾರರು ಮಧ್ಯದಲ್ಲಿ ಕೇಳುಗರಿಗೆ ಸಂಬಂಧಿಸಿದಂತೆ ಹಾಸ್ಯ, ವ್ಯಂಗ್ಯ, ಶೃಂಗಾರದ ತಂತ್ರಗಳನ್ನು ಕಥನಕ್ಕೆ ಅಳವಡಿಸಿ ಕೇಳುಗರನ್ನು ಎಚ್ಚರಿಸುತ್ತಾರೆ. ಮುಖ್ಯವಾಗಿ ಕಥನಗಾರರ ಅನುಭವ, ಅವರ ಕಾಲ್ಪನಿಕ ಪ್ರತಿಭೆ ಸೊಗಸಾಗಿ ಮೂಡಿ ಕೇಳುಗರನ್ನು ಕನಸಿನ ಲೋಕಕ್ಕೆ ತೆಗೆದುಕೊಂಡು ಹೋಗುತ್ತಾರೆ.

### ಪಾತ್ರ ಚಿತ್ರಣ

ಕಾಂಭೋಜರಾಜನ ಕತೆಯಲ್ಲಿ ಕಾಂಭೋಜರಾಜ ಸಿರಿದೇವಿ ಮತ್ತು ಶರಬಂಧರಾಜ ಪಾತ್ರಗಳು ಮುಖ್ಯವಾಗಿ ಕಾಣಿಸುತ್ತವೆ. ಇಲ್ಲಿ ಕಥನದ ಜೀವಾಳ ಕಾಂಭೋಜರಾಜ ಪಾತ್ರವಾಗಿದೆ. ಈ ಪಾತ್ರದಲ್ಲಿ ಮತದಲ್ಲಿ ಭೇದಭಾವವನ್ನು ವ್ಯಕ್ತಪಡಿಸಿದಾಗ ಎಂತಹ ಅನಾಹುತವಾಗುತ್ತದೆಂಬುದು ಗೊತ್ತಾಗುತ್ತದೆ. ಕಾಂಭೋಜರಾಜ ಗೊಲ್ಲ ಸಮುದಾಯಕ್ಕೆ ಸೇರಿದ ರಾಜನಾಗಿದ್ದಾನೆ. ಆತನು ಸರ್ವಧರ್ಮ ಸಮಾನತೆಯನ್ನು ಕಾಣದೆ, ಇನ್ನೊಂದು ಮತವನ್ನು ಹೀಯಾಳಿಸಿದಾಗ, ಅದು ಹೇಗೆ ತಿರುಗುಬಾಣವಾಗುತ್ತದೆಂಬುದು ತಿಳಿಯುತ್ತದೆ. ಇಲ್ಲಿ ಅರಿಯದೆ ತಪ್ಪು ಮಾಡಿದ್ದ ಶಮರಾಜ, ಗೋಹತ್ಯೆಯಿಂದ ಅದರ ಪಾಪದಿಂದ

ಜೀವವನ್ನು ಕೊಡುತ್ತಾನೆ. ಗೋಹತ್ಯೆಯನ್ನು ಮಾಡಿ ಅದರ ಗುಂಗಿನಲ್ಲೇ ಮನೆಗೆ ಬಂದು ಅರಮನೆಯ ಬಾಗಿಲಿಗೆ ತಲೆ ಕೊಟ್ಟು ಜೀವ ಬಿಡುವುದು, ಗೋಹತ್ಯೆ ಎಂತಹ ಘೋರ ಶಾಪ ಇರುತ್ತದೆಂಬುದು ತಿಳಿಯುತ್ತದೆ. ಅದರಿಂದ ಮುಕ್ತಿ ಪಡೆಯದೆ ಇಡೀ ಕುಟುಂಬಕ್ಕೆ ಅದು ಪಾಪವಾಗಿ ಪರಿಣಮಿಸುತ್ತದೆ. ಉರಿಯುವ ಬೆಂಕಿಗೆ ತುಪ್ಪ ಸುರಿಯುವ ಹಾಗೆ, ಇಲ್ಲಿ ಕಾಂಭೋಜರಾಜ ಜಂಗಮರಿಗೆ ಭಿಕ್ಷೆ ನೀಡದೆ ಹೀಯಾಳಿಸಿ, ಭಿಕ್ಷುಕರಿಗೆ ಭಿಕ್ಷೆ ನೀಡುವೆ ಹೊರತು ನಿಮ್ಮಂತಹ ಜಂಗಮರಿಗೆ ಅಲ್ಲ. ಅಡ್ಡನಾಮದವರಿಗೆ ಭಿಕ್ಷೆಯನ್ನು ಕೈ ಎತ್ತಿ ನೀಡುವುದಿಲ್ಲ, ಉದ್ದನಾಮದವರಿಗೆ ಮಾತ್ರ ಭಿಕ್ಷೆ ನೀಡುವುದೆಂದು ಹೇಳುತ್ತಾನೆ. ಜಂಗಮನು ವಿಭೂತಿ ಹಚ್ಚಲು ಬಂದರೆ, ಬೆನ್ನನ್ನು ಕೊಟ್ಟು ಅವಮಾನಿಸಿ ಕಾಂಭೋಜರಾಜನು ಕಷ್ಟವನ್ನು ತಾನೇ ಆಹ್ವಾನಿಸಿಕೊಳ್ಳುತ್ತಾನೆ. ಈ ಎಲ್ಲಾ ವಿಚಾರಗಳು ಎರಡು ಕನ್ನಡ-ತೆಲುಗು ಆವೃತ್ತಿಗಳಲ್ಲಿ ಸಮಾನವಾಗಿ ಮೂಡಿಬಂದಿವೆ. ಕಾಂಭೋಜರಾಜನು ಸಾಮಾನ್ಯ ವ್ಯಕ್ತಿಯಂತೆ ಚಿತ್ರಿತಗೊಂಡಿದ್ದಾನೆ. ಸಾಮಾನ್ಯ ವ್ಯಕ್ತಿಯಂತೆ ತನ್ನ ಅಳಲನ್ನು ವ್ಯಕ್ತ ಮಾಡುತ್ತಾನೆ. ಇಡೀ ಕಥನವು ಸಾಮಾನ್ಯ ಜನರ ಬದುಕಿನ ಅಂಗವಾಗಿ ಮೂಡಿ ಬಂದಿರುತ್ತದೆ.

ಕಾಂಭೋಜರಾಜನು ಜ್ಯೋತಿಷಿಗಳ ಹೇಳಿಕೆಯಂತೆ ತನ್ನ ಕರ್ಮವನ್ನು ಕಳೆಯಲು, ಬಾವಿ ತೋಡಿಸಿ, ತೋಟ ಮಾಡಿ, ಹೋಗಿ ಬರುವ ಜನರಿಗೆ ಕುಡಿಯುವ ನೀರಿನ ವ್ಯವಸ್ಥೆ, ತೋಟದಲ್ಲಿ ಪಕ್ಷಿಗಳಿಗೆ ಹಣ್ಣುಗಳನ್ನು ತಿನ್ನುವ ವ್ಯವಸ್ಥೆ ಮಾಡುತ್ತಾನೆ. ರಾಜನು ತಾನು ಬಾವಿ ತೋಡಿಸುವಾಗ ವಡ್ಡರು ಉಪ್ಪಾರರು ಎಷ್ಟೇ ಆಳವಾಗಿ ತೆಗೆದರೂ ನೀರಿನ ಸೆಲೆಯೇ ಸಿಗುವುದಿಲ್ಲ. ಬರೀ ಕಲ್ಲು ಮಾತ್ರ ಮೂಡುತ್ತದೆ. ಬಾವಿ ತೋಡುವ ವಡ್ಡರು ಉಪ್ಪಾರರು ಕೆಲಸ ಬಿಟ್ಟು ಹೊರಟು ಹೋಗಲು ತಯಾರಾಗುತ್ತಾರೆ. ಅವರು ಹೊರಟು ಹೋದ ಮೇಲೆ ರಾಜನು ಬಾವಿಯ ಗಡ್ಡೆಯ ಮೇಲೆ ಕುಳಿತುಕೊಂಡು ದುಃಖ ಮಾಡುತ್ತಾನೆ. ಈ ಸನ್ನಿವೇಶವು ಕನ್ನಡ-ತೆಲುಗು ಎರಡೂ ಆವೃತ್ತಿಗಳಲ್ಲಿ ಬಂದಿದ್ದನ್ನು ಕಾಣಬಹುದು.

ಕನ್ನಡ: ಅವರು ಹೊಂಟು ಹೋದರು
ಬಾವಿಯೊಳಗೆ ನೀರು ಬೀಳಲಿಲ್ಲ
ರಾಜಗ ಚಿಂತಿಬಿತ್ತು
ಬಾವಿಗಡ್ಡಿಮ್ಯಾಲ ಕುಂತುಕೊಂಡು
ಕೊಟ್ಟಂತಹ ಪರಮಾತ್ಮ
ನಿನಗೆ ನಾನ ಏನು ಪಾಪ ಮಾಡಿನಿ
ನನಗೆ ಎಂತಹ ಹೊತ್ತು ತಂದಿ
ಇಂತಹ ಕಷ್ಟ ಇಡಬಾರದು
ದೇವರ ಧ್ಯಾನ ಮಾಡಿ

ಚೆಂಗಿವ ಹೂವ್ವ ಚಾಲು ಕಣ್ಣಿಗೆ ಹಚ್ಚಿಕೊಂಡು

ಅಲೋಕಂಗ ದುಃಖ ಮಾಡ್ತ್ರನ

ತೆಲುಗು (ಅನುವಾದ): ಅವರ ದೇಶಕ್ಕೆ ಅವರು ಹೋದರು

ಹೋದರೆ ಕಾಂಭೋಜರಾಜ

ಏಳುಮಂದಿ ಹೆಂಡತಿಯರ ಕರೆದುಕೊಂಡು

ಬಾವಿ ಹತ್ತಿರ ಬಂದು

ಬಾವಿ ಗದ್ದೆ ಮೇಲೆ ಕುಳಿತು

ಶೇಂಗ ಹೂವ್ವಿನ ಶಾಲು

ಆ ಶಾಲು ಕಣ್ಣಿಗೆ ಇಟ್ಟುಕೊಂಡು

ಭಾಮ ನಾವು ಪಾಪಮಾಡಿ ಹುಟ್ಟಿವಿ

ನಮ್ಮ ಭಕ್ತಿ ದೇವರು ಮೆಚ್ಚಲಿಲ್ಲ

ನಮಗೆ ಸಂತಾನ ಕೊಡಲಿಲ್ಲ

ಇರಬಾರದು ನಮ್ಮ ಬಂಜೆ ಜನ್ಮ

ಗೋಳೋ ಎಂದು ಉಗುರುಕಣ್ಣೀರು ತೆಗೆದರಲ್ಲ[೨]

ಕಾಂಭೋಜರಾಜ ಕಣ್ಣೀರು ಇಡುವ ಸನ್ನಿವೇಶದಲ್ಲಿ ಅನನ್ಯತೆಯನ್ನು ಕಾಣಬಹುದು. ಕನ್ನಡ ಕಥನದಲ್ಲಿ ರಾಜನು ಒಬ್ಬನೇ ಬಾವಿ ಗದ್ದೆಯ ಮೇಲೆ ಕುಳಿತು ದೇವರನ್ನು ಶಪಿಸುತ್ತ ತನ್ನ ದುಃಖವನ್ನು ತೋಡಿಕೊಳ್ಳುತ್ತಾನೆ. ಆದರೆ ತೆಲುಗಿನಲ್ಲಿ ರಾಜನ ಜೊತೆಯಲ್ಲಿ ರಾಣಿಯರು ಸಹ ಬಂದು ಬಾವಿ ಗದ್ದೆಯ ಮೇಲೆ ಕುಳಿತುಕೊಳ್ಳುತ್ತಾರೆ. ರಾಣಿಯರನ್ನು ಕುರಿತು ಭಾಮ ಮನಮು ಪಾಪಮು ಚೇಸಿ ಪುಟ್ಟಿನಮು(ಭಾಮ ನಾವು ಪಾಪ ಮಾಡಿ ಹುಟ್ಟೇವಿ) ಮನಭಕ್ತಿ ದೇವಡು ಮೆಚ್ಚಲೇದು(ನಮ್ಮ ಭಕ್ತಿ ದೇವರು ಮೆಚ್ಚಲಿಲ್ಲ) ಮನಕಿ ಸಂತಾನಮು ಇಯ್ಯಲೇದು(ನಮಗೆ ಸಂತಾನವನ್ನು ಕೊಡಲಿಲ್ಲ) ಉಂಡರಾದು ಮನದಿ ಗೊಡ್ಡು ಜಲ್ಮಮು(ಇರಬಾರದು ನಮ್ಮ ಬಂಜೆ ಜನುಮ) ಎಂದು ಹೇಳುತ್ತಾನೆ. ಈ ಸಾಲುಗಳು ಕನ್ನಡ ಪಠ್ಯದಲ್ಲಿ ಮೂಡಿಲ್ಲ, ಕನ್ನಡದಲ್ಲಿ ದೇವರನ್ನು ಕುರಿತು ಒಬ್ಬನೇ ದುಃಖ ಮಾಡುತ್ತಾನೆ. ಈ ಸನ್ನಿವೇಶದ ಕೆಲವು ಸಾಲುಗಳಲ್ಲಿ ವ್ಯತ್ಯಾಸ ಕಂಡುಬರುತ್ತದೆ. ಮೌಖಿಕ ಕಥನವಾಗಿದ್ದರಿಂದ ಇಂತಹ ವ್ಯತ್ಯಾಸ ಸಾಮಾನ್ಯ. ಆದರೆ ಈ ಸನ್ನಿವೇಶದ ವಸ್ತುವಿನಲ್ಲಿ ಮಾತ್ರ ಬದಲಾವಣೆ ಕಂಡುಬರದೆ ಸಾಮ್ಯವನ್ನು ಗುರುತಿಸಬಹುದಾಗಿದೆ. ಮೌಖಿಕ ಕಥನ ಕ್ರಿಯೆಯಲ್ಲಿ ಇಂತಹ ವ್ಯತ್ಯಾಸವು ಕಥನಕ್ಕೆ ಕುಂದು ಉಂಟಾಗದೆ ಸುಗಮವಾಗಿ, ಸುಲಲಿತವಾಗಿ ಸಾಗಿ ಹೋಗುತ್ತದೆ.

ಸಿರಿದೇವಿ ಪಾತ್ರದಲ್ಲಿ ಸಾಮಾನ್ಯ ಮಹಿಳೆ ನೋವು-ನಲಿವು ಇದ್ದು ಬದುಕಿನ ಪ್ರತಿಬಿಂಬವಾಗಿ ಮೂಡಿದೆ. ಸಿರಿದೇವಿಯ ಭಕ್ತಿ, ಪತಿಭಕ್ತಿ ಇದ್ದು ಅದು ಸ್ತ್ರೀ ಧರ್ಮವನ್ನು ಪ್ರತಿನಿಧಿಸುತ್ತದೆ. ಕನ್ನಡ-ತೆಲುಗು ಎರಡು

ಪಠ್ಯಗಳಲ್ಲಿ ಸಮಾನವಾದ ಅಂಶಗಳು ಕಂಡುಬರುತ್ತದೆ. ಸಿರಿದೇವಿಯನ್ನು ಸ್ಮಶಾನದ ಬಂದಿಖಾನೆಯಲ್ಲಿ ಇಟ್ಟು ಹೋದ ಮೇಲೆ ಅವಳು ಜೀವಂತ ಶವವಾಗಿ ಕಷ್ಟವನ್ನು ಅನುಭವಿಸುತ್ತಾಳೆ. ಆ ಕಷ್ಟದಲ್ಲಿ ಪರಮಾತ್ಮನನ್ನೇ ನೆನೆಯುತ್ತಾಳೆ. ಪಾರ್ವತಿಯು ಅವಳ ವನವಾಸವನ್ನು ಕಂಡು ಪರಮಾತ್ಮನಿಗೆ ತನ್ನಂತೆ ಸುಖವನ್ನು ಕೊಟ್ಟು ಬರಲು ಹೇಳುತ್ತಾಳೆ. ಹಾಗೆಯೇ ಪರಮಾತ್ಮನು ಸಿರಿದೇವಿಯ ಪತಿವ್ರತಾ ಧರ್ಮ ಭಕ್ತಿಯನ್ನು ಮೆಚ್ಚಿ ಸ್ಮಶಾನದಲ್ಲಿ ಹುಟ್ಟಿ ಬರುತ್ತಾನೆ. ಸಿರಿದೇವಿ ಕಷ್ಟವನ್ನು ದೂರ ಮಾಡಿ ಐಶ್ವರ್ಯ ಅಂತಸ್ತು, ಮಕ್ಕಳ ಭಾಗ್ಯವನ್ನು ಕೊಟ್ಟು ಹೋಗುತ್ತಾನೆ.

**ಕನ್ನಡ:** ಮೆಚ್ಚಿದೆ ಮಗಳೆ ನಿನ್ನ ಧರ್ಮ ಗುಣ ಮೆಚ್ಚಿದೆ ಜೋಳಿಗಿಯೊಳಗೆ ಕೈಯಿಟ್ಟು
ಹಿಡಿಕಿ ತುಂಬ ಬೂದಿ ಕೈಯಾಗ ಹಿಡಕೊಂಡು
ಘಟಿ ಘಟಿ ಮಂತ್ರಿಸಿ
ಶರಬಂಧಿಖಾನದ ಮ್ಯಾಲೆ ಹೊಡೆದು ಬಿಟ್ಟ
ಬಂದಿಖಾನೆ ಮಾಯವಾಗಿ
ಹುಟ್ಟಿತು ಏಳಂತಸ್ತು ಮ್ಯಾಳಿಗಿ
ಬಂಗಾರು ಕನ್ನಡಿ ಮ್ಯಾಳಿಗಿ ಬಂಗಾರು ಬಿಲ್ಡಿಂಗ್
ಆ ತಾಯಿನ ಉಕ್ಕಿನ ವರುಸ
ಬಂಗಾರದ ಪಟ್ಟಿ ವರುಸಾಯಿತು
ಕಾಲಿಗೆ ಲಾಲ್‌ಬಂದ್ ಹೋಗಿ ಬಂಗಾರು ಚೈನುಗಳಾದವು
ಕೈಗೆ ಬೇಡಿ ಹೋಗಿ ಬಂಗಾರು ಗೀರುಬಳೆ ಆದವು
ತಲಿಗಿ ಉಕ್ಕಿನ ಟೊಪ್ಪಿಗೆ ಹೋಗಿ ಬಂಗಾರು ಖ್ಯಾದಿಗೆ ಹೂವು ಆದವು
ಟೊಂಕಕ ಮುದ್ರಿ ಫಲಕ ಬಂಗಾರ ಗೆಜ್ಜೆ ಡಾಬಾಯಿತು

ತೆಲುಗು (ಅನುವಾದ): ನಿನ್ನ ಧರ್ಮಗುಣ ಮೆಚ್ಚಿ
ಬಂದಿಖಾನದಂಗ ಧರ್ಮ ಇಲ್ಲೆಂದು ಶಬ್ದ ಬರಲಿಲ್ಲ
ಕೊಡ್ತಿನಿ ಎಂದು ಶಬ್ದ ಬಂತು
ಅವಗ ಪರಮಾತ್ಮನು ಐದು ಹರಳು ಕೈಯಲ್ಲಿ ಹಿಡಿದುಕೊಂಡು
ಘಟಿ ಘಟಿ ಮಂತ್ರಿಸಿ
ಬಂದಿಖಾನದ ಮೇಲೆ ಹೊಡೆದ
ತಾಯಿಯ ಸೆರೆಬಂದಿಖಾನ ಮಾಯವಾಗಿ
ಏಳಂತಸ್ತು ಬಂಗಾರದ ಮಾಳಿಗೆ ಆಯ್ತು

ಕಾಲಿಗೆ ಇದ್ದ ಬೇಡಿ ಬಂಗಾರದ ಚೈನ ಆಯ್ತು

ಕೈಗಿದ್ದ ಬೇಡಿ ಬಂಗಾರದ ಬಳೆಗಳು ಆದವು

ತಲೆಗಿದ್ದ ಟೋಪಿಗಿ ಬಂಗಾರದ ಕೇದಿಗೆ ಹೂವ್ವಾಯ್ತು

ಕಣ್ಣಿಗೆ ಇದ್ದ ಕಬ್ಬಿಣ ಕನ್ನಡಕ ಬಂಗಾರದ ಕನ್ನಡಕವಾಯ್ತು[8]

ಸಿರಿದೇವಿಯ ಆದರ್ಶ ಗುಣಗಳು ಈ ಎರಡು ಪಠ್ಯಗಳಲ್ಲಿ ಚಿತ್ರಿತವಾಗಿದೆ. ಅವಳನ್ನು ಸ್ಮಶಾನದಲ್ಲಿ ಜೀವಂತ ಶವವಾಗಿ ಇಟ್ಟು ಹೋಗಿದ್ದರೂ ಸಹ ಅವಳ ವ್ಯಕ್ತಿತ್ವ ಅವಳ ಧರ್ಮದ ಮನೋಭಾವನೆ ಆದರ್ಶಗಳಲ್ಲಿ ಯಾವುದೇ ಬದಲಾವಣೆಗಳನ್ನು ಬಿಡದೆ, ಅವಳು ಮೊದಲು ಹೇಗೆ ಇದ್ದಾಳೋ ಹಾಗೆಯೇ ತನ್ನತನವನ್ನು ಉಳಿಸಿಕೊಂಡು, ಪರಮಾತ್ಮನನ್ನು ನೆನೆಯುತ್ತಾಳೆ. ಈ ಸನ್ನಿವೇಶದಲ್ಲಿ ಪರಮಾತ್ಮನು ಸ್ಮಶಾನದಲ್ಲಿ ಜಂಗಮರೂಪಿಯಾಗಿ ಹುಟ್ಟಿ ಬರುತ್ತಾನೆ. ಸಿರಿದೇವಿಯನ್ನು ಪರೀಕ್ಷೆ ಮಾಡುತ್ತಾನೆ. ಅಲ್ಲಿಯೂ ಅವಳು ಗೆಲ್ಲುತ್ತಾಳೆ.

ಕನ್ನಡ ಪಠ್ಯದಲ್ಲಿ 'ಮೆಚ್ಚಿದೆ ಮಗಳೆ ನಿನ್ನ ಧರ್ಮ ಗುಣ ಮೆಚ್ಚಿದೆ' ಇಲ್ಲಿ ಪರಮಾತ್ಮ ಮತ್ತು ಭಕ್ತೆಯ ಸಂಬಂಧ ನಿರೂಪಣೆಗೊಂಡಿದೆ. ತನ್ನ ಭಕ್ತೆಯನ್ನು ಮಗಳು ಎಂದು ಹೇಳುವ ಮಟ್ಟಕ್ಕೆ ಹೋಗುತ್ತಾನೆ. ತೆಲುಗು ಪಠ್ಯದಲ್ಲಿ 'ನೀ ಧರ್ಮಂ ಗುಣಂ ಮೆಚ್ಚಿತಿ' ನಿನ್ನ ಧರ್ಮದ ಗುಣದಿಂದ ಮೆಚ್ಚಿದೆ ಎನುವ ಭಾವ ಇದೆ. ಕನ್ನಡದಲ್ಲಿ ಜೋಳಿಗಿಯೊಳಗೆ ಕೈಯಿಟ್ಟು ಹಿಡಿಕಿ ತುಂಬ ಬೂದಿ ಕೈಯಾಗ ಹಿಡಕೊಂಡು ಫಟ ಫಟ ಮಂತ್ರಿಸಿ ಶರಬಂಧಿಖಾನದ ಮೇಲೆ ಹೊಡೆಯುತ್ತಾನೆ. ಇಲ್ಲಿ ನೇರ ಪದಗಳು ಬಂದರೆ, ತೆಲುಗಿನಲ್ಲಿ ಭಕ್ತೆಯನ್ನು ವರ್ಣಿಸಿ ಆಶೀರ್ವಾದ ನೀಡುತ್ತಾನೆ. ಮಟ್ಯಡಂತ ಬಂಧಿಖಾನಂಲ ಧರ್ಮಂಲೇದಂಟ ಶಬ್ದಂ ರಾಲೇದು ಇಸ್ತ ಅನಿ ಶಬ್ದಂ ವಚ್ಚೆ ಅಪ್ಪುಡು ಐದು ರವ್ವಲು ಚೇತುಲ ಪಟ್ಟುಕೋನಿ ಫಟ ಫಟ ಮತ್ರಿಸಿ ಬಂದಿಖಾನಂಮೀನ ಕೊಟ್ಟೆ(ಇಂತಹ ಬಂದಿಖಾನದಲ್ಲಿ ಧರ್ಮ ಇಲ್ಲ ಎಂಬ ಶಬ್ದ ಬರಲಿಲ್ಲ, ಕೊಡ್ತಿನಿ ಎನ್ನುವ ಶಬ್ದ ಬಂತು, ಆಗ ಪರಮಾತ್ಮನು ಐದು ಹರಳನ್ನು ಕೈಯಲ್ಲಿ ಹಿಡಿದುಕೊಂಡು ಫಟ ಫಟ ಮಂತ್ರಿಸಿ ಬಂದಿಖಾನದ ಮೇಲೆ ಹೊಡೆಯುತ್ತಾನೆ). ಕನ್ನಡದಲ್ಲಿ ಬೂದಿ ಮಂತ್ರಿಸಿದರೆ, ತೆಲುಗಿನಲ್ಲಿ ಹರಳನ್ನು ಮಂತ್ರಿಸುತ್ತಾನೆ. ಕಥನಗಾರರು ನಿರೂಪಣೆಯಲ್ಲಿ ಅವರ ಕಾಲ್ಪನಿಕ ಹಿನ್ನೆಲೆಯಲ್ಲಿ ಎರಡು ಭಾಷೆಗಳಲ್ಲಿ ಭಿನ್ನ ಪದಗಳನ್ನು ಬಳಸಿದ್ದಾರೆ. ಇಲ್ಲಿ ಸಿರಿದೇವಿಗೆ ಕೊಟ್ಟ ಶಿಕ್ಷೆಯ ವಿಧಾನ ಮೂಡಿಬಂದು, ಧರ್ಮ, ಭಕ್ತಿಯಿಂದ ಅದರಿಂದ ಪಾರಾಗುವ ವಿಧಾನ ಇದೆ. ಸತ್ಯಕ್ಕೆ ಜಯ ಇದ್ದೇ ಇದೆ ಎಂಬುದು ಸಿರಿದೇವಿ ಪಾತ್ರದಲ್ಲಿ ಬಂದಿದೆ. ಸಿರಿದೇವಿಗೆ ಎಷ್ಟೇ ಕಷ್ಟ ಬಂದರೂ, ಅಧರ್ಮದ ದಾರಿ ತುಳಿಯುವುದಿಲ್ಲ. ಹೀಗಾಗಿ ಎಲ್ಲಾ ಕಷ್ಟಗಳಿಂದ ಪಾರಾಗುತ್ತಾಳೆ.

ಸಿರಿದೇವಿಯು ತನ್ನ ಮಗ ಶರಬಂಧರಾಜಕುಮಾರನನ್ನು ಸ್ಮಶಾನದ ಅರಮನೆಯಲ್ಲಿ ಪೋಷಣೆ ಮಾಡುತ್ತಾಳೆ. ಶಿವನ ವರಪ್ರಸಾದದಿಂದ ಜನಿಸಿದ 'ಶರಬಂಧ'ನು ಅತ್ಯಂತ ಚುರುಕಾಗಿರುತ್ತಾನೆ. ಪ್ರತಿಯೊಂದು

ವಿಷಯವನ್ನು ಪ್ರಶ್ನಿಸಿ ಕೇಳುವ ಮನೋಭಾವನೆ ಆ ಹುಡುಗನಲ್ಲಿ ಇರುತ್ತದೆ. ಅರಮನೆಯ ಮೇಲೆ ಬಂದಾಗ ತಾಯಿಗೆ ಆಕಾಶ, ಭೂಮಿಯ ಬಗ್ಗೆ ಕೇಳುತ್ತಾನೆ. ಈ ಸನ್ನಿವೇಶ 'ಕನ್ನಡ -ತೆಲುಗು' ಎರಡು ಪಠ್ಯಗಳಲ್ಲಿ ಮೂಡಿ ಬಂದು, ಅದರ ಅನನ್ಯತೆಯುನ್ನು ಕಾಣಬಹುದು.

ಕನ್ನಡ: ಹಡೆದಂತ ತಾಯಿ ಸಿರಿದೇವಿ

ಮನ್ಯಾಗ ನನ್ನ ಸಲುವಿದಿ

ಇವತ್ತು ದಿನದೊಳಗೆ ಆಕಾಶವೇಣಿ ಭೂ ಲಕ್ಷ್ಮಿವೇಣಿ

ನನಗೆ ತೋರಿಸಿ ಕೊಡಬೇಕು

ಜಳಕ ಮಾಡಿ ಊಟಮಾಡಿಕಂಡು

ಏಳಂತಸ್ತು ಮ್ಯಾಳಿಗಿ ಮ್ಯಾಲ ಬಂದರ

ಮ್ಯಾಲ ಇದ್ದುದು ಏನು ತಾಯಿ

ಮ್ಯಾಲ ಇರುವದು ಆಕಾಶವೇಣಿ

ಕೇಳಗೆ ಇದ್ದುದು ಭೂತಾಯಿ

ನಟ್ಟಿ ನಡಬರಕ

ನರಲೋಕ ಮಂದಿ ಕಷ್ಟ ಮಾಡಿಕೊಂಡು ಬದ್ಕುತಾರ

ಸುತ್ತ ಮುತ್ತ ನೋಡಿದಂತ ಮಗ

ಶಾಂಪುರ ಪಟ್ಟಣ ಕಣ್ಣಿಗೆ ಬಿತ್ತು

ತೆಲುಗು (ಅನುವಾದ): ತಾಯಿ ಸಿರಿದೇವಿ

ಮನೆಯಲ್ಲೆ ಸಾಕಿದ್ದಿ ಮನೆಯಲ್ಲೆ ಬೆಳೆಸಿದ್ದಿ

ಇಂದಿನ ದಿನದಂದು ಆಕಾಶವೇಣಿ ಭೂಲಕ್ಷ್ಮೀವೇಣಿ

ನನಗೆ ತೋರಿಸು ತಾಯಿ

ತಾಯಿಗೆ ಕೇಳಿದ ಮಗ

ಸಿರಿದೇವಿ ಮಗನನ್ನು ಕರೆದುಕೊಂಡು

ಏಳಂತಸ್ತು ಮಾಳಿಗೆ ಮೇಲೆ ಬಂದಳು

ತಾಯಿ ಮೇಲಿದ್ದದು ಏನು ತಾಯಿ

ಮೇಲೆ ಇದ್ದದು ಆಕಾಶವೇಣಿ ಮಗ

ಕೆಳಗೆ ಇದ್ದದು ಭೂಲಕ್ಷ್ಮೀವೇಣಿ

ನರಲೋಕದ ಜನ ಕಷ್ಟಮಾಡಿ ಬದುಕುತಾರ

ಸುತ್ತ ಮುತ್ತ ನೋಡಿದ ಮಗ

ತಂದೆ ಇದ್ದ ಊರು ಕಣ್ಣಿಗೆ ಬಿತ್ತು"

ಸಿರಿದೇವಿ ತನ್ನ ಮಗನನ್ನು ಅತ್ಯಂತ ಮುದ್ದಿನಿಂದ ಪೋಷಿಸಿರುತ್ತಾಳೆ. ಮಗನ ಚುರುಕು ಬುದ್ಧಿ, ಕೇಳಿ ತಿಳಿಯುವ ಕುತೂಹಲ, ತಾಯಿಯನ್ನು ಕುರಿತು ಪ್ರಪಂಚದ ಬಗ್ಗೆ ಭೂಮಿ ಆಕಾಶದ ಬಗ್ಗೆ ಪ್ರಶ್ನಿಸುತ್ತಾನೆ. ಮನೆಯಲ್ಲೇ ಬೆಳೆಸಿದ್ದಿ ಹೊರ ಪ್ರಪಂಚದ ಬಗ್ಗೆ ತಿಳುವಳಿಕೆಯೇ ಇಲ್ಲ. ಹೀಗಾಗಿ ಹೊರ ಪ್ರಪಂಚದ ಬಗ್ಗೆ ತಿಳಿಸಲು ಮಗನು ತಾಯಿಗೆ ಕೇಳುತ್ತಾನೆ. ಇಲ್ಲಿ ಪ್ರತಿ ಸಾಲುಗಳು ಭಾಷಾಂತರವಾಗಿ ಮೂಡಿಬಂದಿದೆ. ಭೂಮಿಯ ಮಹತ್ವವನ್ನು ಭೂಮಿಯು ಸಾಮಾನ್ಯಳಲ್ಲ, ಅವಳು ಎಲ್ಲವನ್ನೂ ತನ್ನ ಒಡಲಲ್ಲೇ ಇಟ್ಟುಕೊಂಡಿರುವಳು. ತಾಯಿಯಂತೆ ಎಲ್ಲಾ ತನ್ನಲ್ಲೇ ಗರ್ಭೀಕರಿಸಿಕೊಂಡಿದ್ದಾಳೆ. ಹಾಗೆಯೇ ಆಕಾಶವೇಣಿಯು ಸಹ ತಾಯಿಗೆ ಸಮ, ಭೂಲಕ್ಷ್ಮೀವೇಣಿ ಎಷ್ಟು ಅವಶ್ಯಕವೋ, ಆಕಾಶವೇಣಿ ಅಷ್ಟೇ ಅವಶ್ಯಕ. ಪ್ರಪಂಚದ ರಾತ್ರಿ ಹಗಲಿನ ಪ್ರಕ್ರಿಯೆಗೆ ಆಕಾಶವೇಣಿ ಅವಶ್ಯಕ ಎಂಬ ಮನವರಿಕೆಯನ್ನು ಮಾಡಿಕೊಡುತ್ತಾಳೆ. ಆಕಾಶ ಮತ್ತು ಭೂಮಿ ಮಧ್ಯದಲ್ಲಿ ಮಾನವನು ಅನೇಕ ಕಷ್ಟ-ನೋವುಗಳನ್ನು ಸಹಿಸಿಕೊಂಡು ತನ್ನ ಬದುಕನ್ನು ಸವೆಸುತ್ತಾನೆ ಎಂಬ ವಿಚಾರವು ಮಾನವ ಬದುಕಿನ ವಾಸ್ತವತೆ ಕಂಡುಬರುತ್ತದೆ. ತಾಯಿ ಮಗನ ಮಧ್ಯ ನಡೆಯುವ ಈ ಸಂವಾದವು ಮಾನವನ ಬದುಕಿನ ಅಂಶವಾಗಿ ವ್ಯಕ್ತವಾಗಿದೆ. 'ಕನ್ನಡ-ತೆಲುಗು' ಎರಡು ಪಠ್ಯದಲ್ಲಿ ಈ ಸನ್ನಿವೇಶ ಅರ್ಥವತ್ತಾವಾಗಿದೆ.

'ಕಾಂಭೋಜರಾಜಕತೆ'ಯಲ್ಲಿ ಶರಬಂಧನ ಪಾತ್ರವು ಕಥಾನಾಯಕ ಪಾತ್ರವಾಗಿದೆ. ಶರಬಂಧನ ಶೌರ್ಯ, ಸಾಹಸ, ಉದಾರ ಮನೋಭಾವ, ಸಹನೆ, ಸಹೋದರ ಮನೋಭಾವನೆ ಮುಂತಾದ ಮಾನವೀಯ ಮೌಲ್ಯಗಳೂ ಕಂಡುಬರುತ್ತವೆ. ಒಬ್ಬ ಸಾಮಾನ್ಯ ವ್ಯಕ್ತಿಯ ಕಷ್ಟ ಕಾರ್ಪಣ್ಯಗಳು ಇಲ್ಲಿ ವ್ಯಕ್ತವಾಗಿವೆ. ಅನೇಕ ಕಷ್ಟಗಳನ್ನು ಎದುರಿಸಿ ಜಯಶಾಲಿಯಾಗುವ ಧೈರ್ಯವನ್ನು ಕಾಣುತ್ತೇವೆ. ತನ್ನ ತಂದೆ ಕಾಂಭೋಜರಾಜನ ಬೆನ್ನು ಹುಣ್ಣಿನ ಮದ್ದಿಗಾಗಿ ಅರಣ್ಯವನ್ನು ಸೇರಿ ಅನೇಕ ಕಷ್ಟಗಳನ್ನು ಅನುಭವಿಸುತ್ತಾನೆ. ದಾರಿ ಕಾಯುವ 'ಮಲ್ಲಣ್ಣ'ನಿಂದ ಮದ್ದು ಸಿಗುವ ಪಟ್ಟಣದ ದಾರಿಯನ್ನು ತಿಳಿಯುತ್ತಾನೆ. ಮಧ್ಯದಲ್ಲಿ ಬರುವ ಪಟ್ಟಣಗಳ ವೈಶಿಷ್ಟ್ಯಗಳನ್ನು ತಿಳಿದುಕೊಳ್ಳುತ್ತಾನೆ. ಈ ಎಲ್ಲಾ ಸನ್ನಿವೇಶಗಳು ಕನ್ನಡ-ತೆಲುಗು ಪಠ್ಯದಲ್ಲಿ ಕಥನಗಾರರು ಸಾಮ್ಯವಾಗಿ ನಿರೂಪಿಸಿದ್ದನ್ನು ಕಾಣಬಹುದು ಎದಿನಗಂಧಿಯ ಹತ್ತಿರ ಮದ್ದನ್ನು ಪಡೆದುಕೊಂಡು ಸುಂದರಮ್ಮ ಪಟ್ಟಣದ ಸುಂದರಮ್ಮಳನ್ನು ಗೆಲ್ಲುವ ಉಪಾಯವನ್ನು ಆ ಪಟ್ಟಣದ ಬಡಿಗೇರ ಮೋನಯ್ಯನಿಂದ ತಿಳಿದುಕೊಳ್ಳುತ್ತಾನೆ. ಆ ಪಟ್ಟಣದ ಸುಂದರಮ್ಮ ಪಾತ್ರವು ಶೃಂಗಾರವಾಗಿ ಬಂದು ಆ ಸನ್ನಿವೇಶವು ಕನ್ನಡ-ತೆಲುಗು ಎರಡು ಆವೃತ್ತಿಗಳಲ್ಲಿ ಅನನ್ಯತೆ ಇದೆ.

ಕನ್ನಡ: ಸುಂದರಮ್ಮ ಮುತ್ತಾಕಿದ ಸೀರೆ ಉಟ್ಕೊಂಡು

ಮುತ್ತಾಕಿದ ಕುಬುಸ ತೊಟ್ಕೊಂಡು

ಕೂದಲಿಗೊಂದು ಮುತ್ತು ಪೋಣಿಸಿಕೊಂಡು

ವಸ್ತ್ರ ಒಡವಿ ಮೈ ತುಂಬ ಇಟಕಂಡು

ಕಾಲಿಗೆ ಗೆಜ್ಜೆ ಕಟ್ಟಿಕೊಂಡು

ತಂತಿಮ್ಯಾಲ ಡ್ಯಾನ್ಸ್ ನಡ್ದದ

ಕುಂತಲ್ಲಿ ರಾಜ ಶರಬಂಧ

ತಾಳ ಮ್ಯಾಳ ಎಲ್ಲ ಸಜ್ಜು ನಡ್ದದ

ತೆಲುಗು (ಅನುವಾದ): ಆವಗ ಸುಂದರಮ್ಮ

ಮೈ ಕಾಣುವ ಸೀರೆ ಕಟ್ಟಿಕೊಂಡು

ಮೈ ಕಾಣುವ ರವಿಕೆ ತೊಟ್ಟುಕೊಂಡು

ಕೂದಲಿಗೆ ಮುತ್ತನ್ನು ಧರಿಸಿ

ಕಾಲಿಗೆ ಗೆಜ್ಜೆಗಳು ಕಟ್ಟಿಕೊಂಡು

ಒಂದೇ ತಂತಿಯ ಮೇಲೆ ಡ್ಯಾನ್ಸ್ ಮಾಡುತ್ತ ಬರುತ್ತಿದ್ದಳು

ಕುಂತಲ್ಲಿ ಶರಬಂಧರಾಜ

ತಾಳಮೇಳ ಸಜ್ಜು ಆಗಿದೆ"

ಈ ಎರಡು ಪಠ್ಯಗಳಲ್ಲಿ 'ಸುಂದರಮ್ಮ'ನ ಪಾತ್ರವು ಸೊಗಸಾಗಿದೆ. ಕನ್ನಡ ಪಠ್ಯದಲ್ಲಿ ಮುತ್ತಾಕಿದ ಸೀರೆ ಉಟ್ಕಂಡು ಬಂದರೆ, ತೆಲುಗು ಪಠ್ಯದಲ್ಲಿ 'ಪೈ ಕಂಡ್ಲಪಡೆ ಸೀರೆ ಕಟ್ಟುಕೋನಿ:(ಮೈ ಕಾಣುವ ಸೀರೆಯನ್ನು ಕಟ್ಟಿಕೊಂಡು) ಬರುತ್ತಾಳೆ. ಹಾಗೆ ಪೈ ಕಂಡ್ಲಪಡೆ ರವಿಕೆ ತೋಡ್ಕೋನಿ(ಮೈ ಕಾಣುವ ಕುಪ್ಪಸವನ್ನು ತೊಟ್ಟುಕೊಂಡು) ಬಂದಿದ್ದಾಳೆ. ಹೀಗೆ ಕೆಲವು ಸಾಲುಗಳಲ್ಲಿ ಮಾತ್ರ ಭಿನ್ನತೆ ಕಾಣುತ್ತದೆ. ಉಳಿದ ಎಲ್ಲಾ ಸಾಲುಗಳಲ್ಲಿ ಪ್ರತಿಯೊಂದು ಪದವು ಭಾಷಾಂತರವಾಗಿ ನಿರೂಪಿತವಾಗಿದೆ.

**ಆತ್ಮವಿಮರ್ಶೆ**

ಕಾಂಭೋಜರಾಜ ಸಿರಿದೇವಿಯನ್ನು ಸ್ಮಶಾನದಲ್ಲಿ ಜೀವಂತವಾಗಿ ಇಟ್ಟು ಅರಮನೆಗೆ ಬಂದ ಮೇಲೆ ಅವಳಲ್ಲಿರುವ ವ್ಯಕ್ತಿತ್ವವನ್ನು ಆತ್ಮವಿಮರ್ಶೆ ಮಾಡಿಕೊಳ್ಳುತ್ತಾನೆ. ತಾನು ಅವಳಿಗೆ ಶಿಕ್ಷೆ ಕೊಟ್ಟಿದ್ದು ಎಷ್ಟರ ಮಟ್ಟಿಗೆ ಸರಿ ಅವಳು ನಿಜವಾಗಿ ತಪ್ಪು ಮಾಡಿದ್ದಾಳೆಯೇ? ಮುಂತಾದ ವಿಚಾರಗಳನ್ನು ಮಾಡುತ್ತ ಆತ್ಮವಿಮರ್ಶೆಯನ್ನು ಮಾಡಿಕೊಳ್ಳುತ್ತಾನೆ.

ಕನ್ನಡ: ರಾಜ ಹಿಡಿಕೆ ತುಂಬ ಮಣ್ಣು ಹಿಡಕೊಂಡು

ತಾಯಿಗಿ ಏನಂತ ದುಃಖ ಮಾಡ್ತನ

ಭಾಮ ಸಿರಿದೇವಿ

ಆರು ಮಂದಿ ಮನಿಗಿ ನಾ ಹೋಗುತ್ತಿರಲಿಲ್ಲ

ನಿನ್ನ ಮನಿಗಿ ನಾ ಬರುತ್ತಿದ್ದೆ

ನೀನೆ ನನ್ನ ಜೋಪಾನ ಮಾಡುತ್ತಿದ್ದಿ

ಇವತ್ತು ದಿನದೊಳಗ

ಅಡವಿ ಪಾಲು ಮಾಡಿ ಹೋಗುತ್ತೀನಿ

ಯಾರ ಮನೆಗೆ ಹೋಗಲಿ ನಾನು

ಎಲ್ಲಿ ನಿದ್ದೆ ಮಾಡಲಿ ನಾನು

ರಾಜ ದುಃಖ ಮಾಡ್ತನ

ತೆಲುಗು (ಅನುವಾದ): ಕಾಂಭೋಜ ಏನೆಂದು ದುಃಖ ಮಾಡ್ತನ

ಭಾಮ ಸಿರಿದೇವಿ

ಅಂಗೈಯಲ್ಲಿ ಗಿಳಿರಾಮ ಇದ್ದಂಗ

ಕಿರು ಬೆರುಳಿಗೆ ಬಂಗಾರದ ಮುತ್ತಿನ ಉಂಗುರ ಇದ್ದಂಗ

ಅಂತವಳು ಇದ್ದಿದಿ

ಮಾಡಬಾರದ ತಪ್ಪು ನೀನು ಮಾಡಿದಿಯೋ

ನಿನ್ನ ಅಕ್ಕಂದಿರೇ ಮಾಡ್ಯರೋ

ಅವರ ಮಕ್ಕಳಿಗೆ ಅವರೇ ಮದ್ದು ಇಟ್ಟುಕೊಂಡು

ನಿನ್ನ ಮೇಲೆ ಆಪಾದನೆ ಮಾಡಿದರೆ

ಈ ಸೆರೆ ಬಂದಿಖಾನೆ ಮಾಯವಾಗಿ

ನಿನಗೆ ಭಗವಂತನು ಸುಖ ಕೊಡಲಿ

ಅವರ ಮಕ್ಕಳಿಗೆ ನೀನೆ ಮದ್ದು ಇಟ್ಟಂಗ ಇದ್ದರೆ

ಈ ಬಂದಿಖಾನದಲ್ಲಿ ಹುಳ ಬಿದ್ದು ಸತ್ತು ಹೋಗುತ್ತಿ

ಇದಿಷ್ಟು ರಾಜ ಮಾತು ಹೇಳಿ

ಹಿಡಿತುಂಬ ಮಣ್ಣು ಹಿಡಿದುಕೊಂಡು

ಅಡವಿಗೆ ಮದುವೆ ಮಾಡಿ ಹೋಗುತಿನಿ ಭಾಮ

ರಾಜ ದುಃಖ ಮಾಡ್ತನ

ಹಿಡಿಕಿ ಮಣ್ಣು ಬಂದಿಖಾನದ ಮೇಲೆ ಹೊಡೆದ್

ಇಲ್ಲಿ ಕನ್ನಡಕ್ಕಿಂತ ತೆಲುಗಿನ ಪಠ್ಯದಲ್ಲಿ ವಕ್ಯವು ಭಿನ್ನವಾಗಿ ಅಭಿವ್ಯಕ್ತಿ ಮಾಡಿದ್ದಾರೆ. ಇಲ್ಲಿ ಭಿನ್ನ ಎನ್ನುವುದಕ್ಕಿಂತ ವಕ್ಯವಿನ ತೆಲುಗು ಭಾಷೆಯ ಕಥನ ಮೂಲ ಅದರ ಮಾತೃಭಾಷೆಯ ಹಿನ್ನೆಲೆಯಲ್ಲಿ ತೆಲುಗಿನಲ್ಲಿ ದೀರ್ಘವಾಗಿ ವಿಶ್ಲೇಷಣಾತ್ಮಕವಾಗಿ ವ್ಯಕ್ತವಾಗಿದೆ. ಕನ್ನಡ ಪಠ್ಯದಲ್ಲಿ 'ಆರು ಮಂದಿ ಮನಿಗಿ ನಾ ಹೋಗುತ್ತಿರಲಿಲ್ಲ' ಎನ್ನುವ ಸಾಲು ಕಾಂಭೋಜರಾಜ ಸಿರಿದೇವಿಯ ಪ್ರೀತಿಯನ್ನು ತಿಳಿಸುತ್ತದೆ. ಅತ್ಯಂತ ಅನನ್ಯವಾಗಿದ್ದ ಈ ಇಬ್ಬರು ದಂಪತಿಗಳು ಸವತಿ ಮತ್ಸರದ ಕುಟಿಲಗಳಿಗೆ ಬಲಿಯಾಗುತ್ತಾರೆ. 'ಯಾರ ಮನೆಗೆ ಹೋಗಲಿ ನಾನು, ಎಲ್ಲಿ ನಿದ್ದೆ ಮಾಡಲಿ ನಾನು' ಎಂದು 'ನೀನಿಲ್ಲದೆ ಜೀವನವೇ ಇಲ್ಲ' ಎಂದು ಪರಿತಪಿಸುತ್ತಾನೆ. 'ಅಡವಿ ಪಾಲು ಮಾಡಿ ಹೋಗುತಿನಿ' ಎಂದು ಹೇಳುವ ರಾಜ 'ನಿನ್ನನ್ನು ಅಗಲಿ ನಾನು ಹೇಗೆ ಇರಲಿ' ಎಂದು ದುಃಖಪಡುತ್ತಾನೆ. ಆದರೆ ತೆಲುಗು ಪಠ್ಯದಲ್ಲಿ ಸಿರಿದೇವಿಯನ್ನು ಅಂಗೈಯಲ್ಲಿರುವ ಗಿಳಿಗೆ ಹೋಲಿಸುತ್ತಾನೆ. 'ಅರಿಚೇತುಲ ರಾಮ ಚಿಲ್ಕ ಉನ್ನಟ್ಲ' (ಅಂಗ್ಯಯಲ್ಲಿ ಗಿಳಿ ಇದ್ದಂಗೆ) ಚೆನ್ನ ವಿಲುಕಿಬಂಗಾರಂ ಮುತ್ಯಾಲ ಉಂಗುರಂ ಉನ್ನಟ್ಲ (ಕಿರಿ ಬೆರಳಿಗೆ ಬಂಗಾರ ಮುತ್ತಿನ ಉಂಗುರ ಇದ್ದಂಗೆ) ಎಂದು ಕಿರು ಬೆರಳಿನ ಬಂಗಾರ ಮುತ್ತಿನ ಉಂಗುರ, ಅಂಗೈಯ ಗಿಳಿಗೆ ಹೋಲಿಸಿ ಸಿರಿದೇವಿಯನ್ನು ನೆನೆಯುತ್ತಾನೆ. ಒಂದು ಗಿಳಿಯು ತನ್ನ ಹತ್ತಿರ ಇದ್ದಾಗ ಎಷ್ಟು ಆತ್ಮವಿಶ್ವಾಸ ಇರುತ್ತದೆ, ಕಿರುಬೆರಳಿಗೆ ಬಂಗಾರ ಮುತ್ತು ಹೇಗೆ ಸುಂದರವಾಗಿ ಕಾಣುತ್ತದೆ ಹಾಗೆ ಇಬ್ಬರೂ ಅನನ್ಯವಾಗಿ ಇದ್ದಿದ್ದನ್ನು ನೆನಪಿಸಿಕೊಳ್ಳುತ್ತಾನೆ. ಚೆಯ್ಯದಾಗಿ ತಪ್ಪುಲು ನೂವು ಚೇಸಿನವೋ (ಮಾಡಬಾರದ ತಪ್ಪು ನೀನು ಮಾಡಿದೆಯಾ) ಮೀ ಅಕ್ಕೋಳು ಚೇಸಿನಾರೋ(ನಿನ್ನ ಅಕ್ಕಂದಿರು ಮಾಡ್ಯಾರೋ) ವಾಳಪಿಲ್ಲಲ್ಕಿಯ ವಾಳೆ ಮಂದು ಪೆಟ್ಟುಕೋನಿ(ಅವರ ಮಕ್ಕಳಿಗೆ ಅವರೇ ವಿಷ ಕೊಟ್ಟುಕೊಂಡು) ನೀ ಮೀದ ಆಪಾದಂ ಆಡಿತೆ(ನಿನ್ನ ಮೇಲೆ ಆಪಾದನೆ ಮಾಡಿದರೆ) ಈ ಸೆರೆ ಬಂದಿಖಾನಂ ಮಾಯಂ ಆಯಿ(ಈ ಸೆರೆ ಬಂದಿಖಾನ ಮಾಯವಾಗಲಿ) ನೀಕಿ ಭಗವಂತಾಡು ಸುಖಂ ಇಯ್ಯನಿ (ನಿನಗೆ ಭಗವಂತ ಸುಖ ನೀಡಲಿ) ವಾಳ ಪಿಲ್ಲಲ್ಕಿ ನೀವೆ ಮಂದು ಪೆಟ್ಟಿನಟ್ಲೆ ಉಂಟೆ(ಅವರ ಮಕ್ಕಳಿಗೆ ನೀನೇ ವಿಷ ಇಟ್ಟಂಗಾದರೆ) ಈ ಬಂಧಿಕಾನಂಲ ಪುರುವುಲು ಪಡಿ ನೂವು ಸಸ್ತವು(ಈ ಬಂದಿಖಾನದಲ್ಲಿ ಹುಳಗಳು ಬಿದ್ದು ನೀನು ಸಾಯುತ್ತಿ) ಇದಿಂತ ಮಾಟ ರಾಜ ಆಡಿ' (ಇದಿಷ್ಟು ರಾಜ ಮಾತನಾಡಿ) ಪಿಡಿಕೆಡು ನಿಂಡ ಮನ್ನು ಪಟ್ಟುಕೋನಿ(ಹಿಡಿಕಿ ತುಂಬ ಮಣ್ಣನ್ನು ಹಿಡಿದುಕೊಂಡು) ರಾಜ ದುಃಖಂಚೇಸ್ತಡು(ರಾಜ ದುಃಖ ಮಾಡ್ತನ) ಪಿಡಿಕೆಡು ಮನ್ನ ಬಂದಿಖಾನಂ ಮೀನಕೊಟ್ಟೆ(ಹಿಡಿಕಿ ಮಣ್ಣು ಬಂಧಿಖಾನದ ಮೇಲೆ ಹೊಡೆದ). ಈ ಸನ್ನಿವೇಶವು ಭಿನ್ನವಾಗಿ ಮೂಡಿ ಬಂದಿದೆ. ಕನ್ನಡ ಪಠ್ಯಕ್ಕಿಂತ ತೆಲುಗು ಪಠ್ಯವು ದೀರ್ಘವಾಗಿ ಚಿತ್ರಿತಗೊಂಡಿದೆ. ರಾಜನು ಸಿರಿದೇವಿಯ ಮೇಲೆ ಇಟ್ಟಂತ ವಿಶ್ವಾಸ, ಅವಳ ಪತಿಭಕ್ತಿ, ಅವಳ ಉದಾರ ಮನೋಭಾವನೆಯನ್ನು ಆತ್ಮವಿಮರ್ಶೆ ಮಾಡಿಕೊಳ್ಳುತ್ತಾನೆ. ಆರು ಜನ ಹಿರಿಯ ರಾಣಿಯರು ಅವರ ಮಕ್ಕಳಿಗೆ ಅವರೇ ವಿಷ ಕೊಟ್ಟು ನಿನ್ನ ಮೇಲೆ ಆಪಾದನೆ ಮಾಡಿದ್ದಾರೋ ಎಂಬ ಅನುಮಾನ ವ್ಯಕ್ತಪಡಿಸುತ್ತಾನೆ. ಅವರು ನಿನ್ನ ಮೇಲೆ ಆಪಾದನೆ

ಮಾಡಿದರೆ ಕೊಟ್ಟಂತ ಶಿಕ್ಷೆಯಿಂದ ಮುಕ್ತಿ ಪಡೆಯಲಿ, ಪರಮಾತ್ಮನೇ ಬಂದು ನಿನಗೆ ಸುಖ ನೀಡಲಿ ಎಂದು ಹಾರೈಸುತ್ತಾನೆ. ಕಾಂಭೋಜರಾಜನ ಆತ್ಮವಿವೇಚನೆ, ಸಾಮಾನ್ಯ ಜನರ ವಾಸ್ತವ ಬದುಕಿನ ವಿವೇಚನೆಯೇ ಆಗಿದೆ.

## ಬಾಲಗಿರಿರಾಜಕತೆ ಕನ್ನಡ-ತೆಲುಗು ಆವೃತ್ತಿಗಳು

ಬುರ್ರಕಥನಗಾರರಾದ ಶಂಕ್ರಮ್ಮ ಅವರು ಬಾಲಗಿರಿರಾಜಕತೆಯನ್ನು ಕನ್ನಡ-ತೆಲುಗು ಎರಡು ಭಾಷೆಗಳಲ್ಲಿ ಹಾಡಿದ್ದಾರೆ. ಒಬ್ಬರೇ ಎರಡೂ ಭಾಷೆಗಳಲ್ಲಿ ಒಂದೇ ಕಥನವನ್ನು ಹಾಡಿದ ಬಗೆಯನ್ನು ಹಾಗೂ ಕನ್ನಡ-ತೆಲುಗು ಕಥನಗಳಲ್ಲಿ ಸಾಮ್ಯ ವೈಷಮ್ಯಗಳೇನು ಎಂಬುದನ್ನು ಇಲ್ಲಿ ಪರಿಶೀಲಿಸಲಾಗಿದೆ. ಕನ್ನಡ ಪ್ರದೇಶದಲ್ಲಿ ಹಾಡುವ ಈ ಕಥನಗಾರ್ತಿಯು ತೆಲುಗಿನಲ್ಲಿ ಹಾಡುವಾಗ ಅದನ್ನು ಕನ್ನಡ ಕಥನದ ಜೊತೆ ಹೋಲಿಸಿ ನೋಡಲಾಗಿದೆ. ರಮ್ಯ ಕಥನವಾದ ಬಾಲಗಿರಿರಾಜ ಕತೆಯಲ್ಲಿ ಮಾನವೀಯ ಸಂಬಂಧಗಳು, ಶೌರ್ಯ, ಸಾಹಸ ಕಾಣುತ್ತದೆ. ಈ ಕಥನದಲ್ಲಿ ಸ್ತ್ರೀಯ ಪ್ರತಿಭಟನಾ ಮನೋಭಾವ, ಪತಿಭಕ್ತಿ ಇದ್ದು ಇಡೀ ಕಥನದಲ್ಲಿ ಸಾಮಾಜಿಕ ಕಳಕಳಿ, ಆದರ್ಶ ವಿಚಾರಗಳು ಕಂಡುಬರುತ್ತವೆ.

## ಪ್ರಾದೇಶಿಕತೆ

ಶಂಕ್ರಮ್ಮ ಅವರು ತನ್ನ ಪ್ರಾದೇಶಿಕ ನೆಲೆಯಾದ ಗುಲಬರ್ಗಾದ ಪರಿಸರದ ಕನ್ನಡದಲ್ಲಿ 'ಬಾಲಗಿರಿರಾಜಕತೆ' ಯನ್ನು ಹಾಡಿದ್ದಾರೆ. ತಾನು ವಾಸಿಸುವ ಸುತ್ತಮುತ್ತಲಿನ ಪರಿಸರವನ್ನೇ ತನ್ನ ಕಥನಕ್ಕೆ ಅಳವಡಿಸಿಕೊಂಡಿದ್ದಾಳೆ. ಕೃಷ್ಣನೀಲವೇಣಿಯ ತಪಸ್ಸು ಮೆಚ್ಚಿ ಪರಮಾತ್ಮನು ಸಂತಾನ ಫಲವನ್ನು ಕೊಡುತ್ತಾನೆ. ಅದನ್ನು ಸೇವಿಸಿದಾಗ ಕೃಷ್ಣನೀಲವೇಣಿಯಲ್ಲಿ ಗರ್ಭಿಣಿಯ ಬಯಕೆಗಳು ಉಂಟಾಗುತ್ತವೆ. ಇಲ್ಲಿ ಮೂಡಿಬಂದ ಬಯಕೆಗಳು ಕೃಷ್ಣನೀಲವೇಣಿಯ ಬಯಕೆಗಳಾದರೂ ಅವು ಕಥನಗಾರ್ತಿಯ ಪರಿಸರ, ಪ್ರಾದೇಶಿಕತೆ ಹಾಗೂ ಸಾಮಾನ್ಯ ಮಹಿಳೆಯ ಬಯಕೆಗಳನ್ನು ನಿರೂಪಿಸಿದ್ದಾರೆ.

ಕನ್ನಡ: ಒಂದು ತಿಂಗಳ ಬಾಲೆ ಒಂದೇನ ಬಗದಳ -೧

ಅಂಗಳದಲ್ಲಿ ಇರುವ ಎಳೆಬಿಸಿಲು ಬಗಿಸ್ಯಳ -೨

ಎರಡು ತಿಂಗಳ ಬಾಲೆ ಎರಡೇನ ಬಗದಳ -೩

ಎಡಗೈಯಾಗ ಉಪ್ಪು ಎಳೆ ಉಣ್ಸೆಕಾಯಿ ಬಗದಳ -೪

ಮೂರು ತಿಂಗಳ ಬಾಲ ಮೂರೇನ ಬಗದಳ -೫

ಮೊಗಿಲಗ ಇರುವುದು ಮೊಗಿ ಮಾವಿನ ಹಣ್ಣು ಬಗಿಸ್ಯಳ -೬

ನಾಲ್ಕು ತಿಂಗಳ ಬಾಲೆ ನಾಲ್ಕನೇ ಬಗದಳ -೭

ಈ ನಾಲ್ಕು ಮಲ್ಲಿಗೆ ಹೂವ ತುರುಬಿನಗ ಇಟ್ಯಾಳ -೮

ಐದು ತಿಂಗಳ ಬಾಲೆ ಐದೇನ ಬಗದಳ -೯

ಕೊಟ್ಟಂತ ಸಾಂಬಶಿವ ಆವಿಷೆ ತುಂಬ್ಯಾನ -೧೦

ತೆಲುಗುಃ ಒಕ್ಕನೆಲ ಆಯಿಂದಿ ತಲ್ಲಿ ಏಮೇಮಿ ಬಮಿಸಿಂದಿ -೧

ಅಂಗಳಂಕಿ ಉಂಡೆದಿ ತಲ್ಲಿ ಎಂಡನೇ ಬಮಿಸಿಂದಿ -೨

ರೊನ್ನೆಲ್ಲಕಿ ತಲ್ಲಿ ಏಮಿ ಬಮಿಸಿಂದಿ -೩

ಎಡ್ಮಚೇತುಲ ಉಪ್ಪು ಚಿಂತಕಾಯ ಬಮಿಸಿಂದಿ -೪

ಮೂನೆಲ್ಲಕಿ ತಲ್ಲಿ ಏಮ ಬಮಿಸಿಂದಿ -೫

ಮೋಡಂಬು ಉಂಡೆದಿ ಮುಂತ ಮಾಮಿಡಿ ಪಂಡು ಬಮಿಸಿಂದಿ -೬

ನಾಲ್ಕು ನೆಲ್ಲಕಿ ತಲ್ಲ ಏಮಿ ಬಮಿಸಿಂದಿ -೭

ನಾಲ್ಗು ಮಲ್ಲೆಪುವ್ವುಲು ಕೊಪ್ಪುಲ ಪೆಟ್ಟಿಂದಿ -೮

ಐದು ನೆಲಕಿ ತಲ್ಲಿ ಏಮಿ ಬಮಿಸಿಂದಿ -೯

ಇಚ್ಚಿನೊಕ್ಕ ಭಗವಂತುಡು ಆಯುಷ್ಯಂ ನಿಂಪಿಂಡು -೧೦

ಗರ್ಭಿಣಿಯಾದ ಸಂದರ್ಭದ ಹೆಣ್ಣೊಬ್ಬಳ ಬಯಕೆಗಳು ಇಲ್ಲಿದೆ. ಕನ್ನಡ-ತೆಲುಗು ಎರಡೂ ಕಥನಗಳ ಈ ಸನ್ನಿವೇಶವು ಪ್ರತಿಯೊಂದು ಸಾಲು ಹಾಗೂ ಪದಗಳನ್ನು ನೋಡಿದರೆ ಕನ್ನಡದಿಂದ ತೆಲುಗಿಗೆ, ತೆಲುಗಿನಿಂದ ಕನ್ನಡಕ್ಕೆ ಭಾಷಾಂತರ ಎನ್ನುವಂತೆ ನಿರೂಪಿಸಿದ್ದಾರೆ. ಕಥನಗಾರರು ಕನ್ನಡ ಹಾಗು ತೆಲುಗು ಎರಡೂ ಭಾಷೆಗಳಲ್ಲಿ ಪ್ರಭುತ್ವ ಹಾಗೂ ಹಿಡಿತ ಇಟ್ಟುಕೊಂಡಿದ್ದಾರೆ. ಇಲ್ಲಿ ಪ್ರತಿಯೊಂದು, ಪದಪುಂಜವೂ ಯಾವುದೇ ವ್ಯತ್ಯಾಸವಿಲ್ಲದಂತೆ ಅನುವಾದವಾಗಿ ನಿರೂಪಣೆಗೊಂಡಿದೆ. 'ಒಂದು ತಿಂಗಳ ಬಾಲೆ ಒಂದೇನ ಬಗದಳ' ಅದನ್ನು ತೆಲುಗಿನಲ್ಲಿ 'ಒಕ್ಕ ನೆಲ ಆಯಿಂದಿ ತಲ್ಲಿ ಏಮಿ ಬಮಿಸಿಂದಿ' ಎನ್ನುವ ಸಾಲನ್ನು ನೋಡಿದರೆ ಒಂದು ಪದ ವ್ಯಯವಾದಂತೆ ಭಾಷಾಂತರವಾಗಿ ನಿರೂಪಿಸಿದ್ದಾರೆ. ಇಲ್ಲಿ ಕನ್ನಡ ಪ್ರದೇಶದ ಪ್ರಾದೇಶಿಕವೇ ತೆಲುಗು ಪಠ್ಯದ ಪ್ರಾದೇಶಿಕವಾಗಿದೆ. ಏಕೆಂದರೆ ಕಥನಗಾರರ ಮನೆ ಭಾಷೆ ತೆಲುಗು ಹಾಗೆಯೇ ಈ ಕಥನದ ಮೂಲ ಭಾಷೆ ತೆಲುಗು. ಆದರೆ ಅವರು ವಾಸಿಸುವ ಪ್ರದೇಶ ಕನ್ನಡದ ಪ್ರದೇಶವಾಗಿದ್ದರಿಂದ ಇಲ್ಲಿ ತೆಲುಗಿನ ಕಥನದಲ್ಲಿ ಕನ್ನಡದ ಪ್ರಾದೇಶಿಕತೆಯನ್ನು ಅಭಿವ್ಯಕ್ತ ಮಾಡಿದ್ದಾರೆ.

ಬಾಲಗಿರಿರಾಜ ಮಹಿಭೂತರಾಜನು ಒಡ್ಡಿದ ಪಂತಗಳೆಲ್ಲ ಗೆದ್ದರೂ ತನ್ನ ಮಗಳಾದ ಪದ್ಮರಾಣಿಯನ್ನು ಮದುವೆ ಮಾಡಿಕೊಡಲು ಒಪ್ಪಿಕೊಳ್ಳುವುದಿಲ್ಲ. ಕೊನೆಗೆ ತನ್ನ ಆರು ಜನ ತಮ್ಮಂದಿರು ಯುದ್ಧದಲ್ಲಿ

ಕೊಲೆಯಾಗುತ್ತಾರೆ. ಇದನ್ನು ಕಂಡ ಮಹಿಭೂತರಾಜನು ಬಾಲಗಿರಿರಾಜನು ನನ್ನನ್ನೂ ಸಹ ಉಳಿಸುವುದಿಲ್ಲ ಎಂದು ಬಗೆದು, ತನ್ನ ಹೆಂಡತಿ ಜೊತೆಸೇರಿ ಅರಮನೆಯ ಅಡಿಗೆ ಕೋಣೆಯಲ್ಲಿ ಅಡಗಿಕೊಳ್ಳುತ್ತಾನೆ. ಬಾಲಗಿರಿರಾಜ ಯುದ್ಧದಲ್ಲಿ ಎಲ್ಲರನ್ನು ಕೊಂದು ರಾಜನ ಆಸ್ಥಾನಕ್ಕೆ ಬಂದು ನೋಡಿದರೆ ರಾಜರಾಣಿ ಇಬ್ಬರೂ ಇಲ್ಲದ್ದನ್ನು ಕಂಡು ಸುತ್ತ ಮುತ್ತ ನೋಡುತ್ತಾನೆ. ಆಸ್ಥಾನದೊಳಗೆ ಬಾಲಗಿರಿರಾಜ ಬಂದು, ನಿಂತುಕೊಂಡು ಎಡಕ್ಕೆ ಬಲಕ್ಕೆ ತಿರುಗಿ ನೋಡುತ್ತಾನೆ. ಆಸ್ಥಾನದೊಳಗೆ ಮಾವನು ಇಲ್ಲ, ಅಲ್ಲಿ ರೈತರೂ ಇಲ್ಲ, ಬರೀ ಕಾಲಿಕುರ್ಚಿ ಮಾತ್ರ ಇವೆ. ಬಾಲಗಿರಿರಾಜ ಆಸ್ಥಾನದ ಕುರ್ಚಿ ಮೇಲೆ ಕುಳಿತುಕೊಂಡನು. ಆಗ ಮುದುಕರು ಬಾಲಗಿರಿರಾಜನು ಬಂದನೋ ಇಲ್ಲನೋ ಎಂದು ಸಂದಿನಾಗ ಕುಂತು ಬಗ್ಗಿ ನೋಡುತ್ತಾರೆ. ಬಾಲಗಿರಿರಾಜನ ಕಣ್ಣಿಗೆ ಆ ಮುದುಕರು ಕಾಣಿಸುತ್ತಾರೆ.

ಕನ್ನಡ: ಎಲೆ ಎಲೆ ನಿಮ್ಮ ತಕ್ಕಿನಾಡ
ಮಕ್ಕಳಿರೆ ಬಗ್ಗಿ ಬಗ್ಗಿ ನೋಡ್ತಿರಿ
ಚಾಟಿಗಿ ನಿಂತಿ ನೋಡ್ತಿರಿ
ಬುದ್ದಿ ಆದ ಬುದ್ದಿ ಇಲ್ಲ ಎಂದು ಎದ್ದು ಬಂದ
ಆ ಮುದುಕರ ಬೆಲ್ಲಿಗೆ ಬಂದ
ಏ ಮುತ್ತ್ಯಂದ
ಗದಗದ ನಡಗಿಕಂತ ಮುದುಕರು ಬಂದರು
ಮಗನ ಮುಂದೆ ನಿಂತರು
ಮುತ್ತ್ಯ ನಮ್ಮಾವ ಎಕ್ಕಡಿ ಹೋಗ್ಯಾನ
ಮಗನೆ ನಿಮ್ಮಾವ ನೀ ಲಡಾಯಿ ಮಾಡಲಾಕ ಹೋದರೆ
ನಿನ್ನ ಲಡಾಯಿ ನೋಡಲಾಕ ಲಡಾಯಿ ಬೆಲ್ಲಗಿ ಹೊಂಟು ಬಂದರ
ಆ ದಂಟಿನೊಳಗೆ ನಿನ್ನ ಮಾವನ ಕಡಿದುಹಾಕಿ ಬಂದಿರಿ

ತೆಲುಗು (ಅನುವಾದ): ಮೂವರು ಮುದುಕರು ಸಂದಿನಗ ನಿಂತರ
ಬಂದನ ಇಲ್ಲಂತ ಬಗ್ಗಿ ಬಗ್ಗಿ ನೋಡ್ತರ
ಕುಂತಲ್ಲಿ ಅವರ ಮೇಲೆ ಕಣ್ಣಿಬಿತ್ತು
ಓತಾತ ಅಂದನು
ಓಯಮ್ಮ ಮೊಮ್ಮಗ ನಮ್ಮನು ನೋಡಿದನಲ್ಲ
ಏನು ಸುದ್ದಿ ಮೊಮ್ಮಗ
ತಾತ ಸಂದಿನಗ ನಿಂತು ಬಗ್ಗಿ ಬಗ್ಗಿ ಯಾಕ ನೋಡ್ತಿ

ಬರ್ರಿ ತಾತ

ಮೊಮ್ಮಗ ನೀನು ಹೊಡ್ತಿದಂತ ನಮಗ ಭಯ

ನಿಮ್ಮನ್ನು ಯಾಕೆ ಹೊಡೆಯಲಿ ತಾತ ನಿಮ್ಮನ್ನು ಹೊಡೆಯುವುದಿಲ್ಲ

ಮುದುಕರು ಬಂದು ಮುಂದೆ ನಿಂತರ

ತಾತ ಮಾವ ಎಲ್ಲಿಗಿ ಹೋಗ್ಯನ

ಮಗ ಬಾಲಗಿರಿರಾಜ ನಿಮ್ಮಾವನ ನಾವು ನೋಡಿಲ್ಲ

ಸಂಗೀತಕ್ಕೆ ಹುಣಸೆಕಾಯಿ ಉದುರಲ್ಲ

ಒಂದು ಕಟ್ಟೆಗೆನ್ನ ಕೈಯಾಗ ಹಿಡಕೊಂಡು ಗಿಡಕ್ಕೆ ಹೊಡೆದರೆ

ಹುಣಸೆಕಾಯಿ ಉದುರ್ತ್ತವ

ಈ ಮುದುಕರು ಸುಮ್ಮನೆ ಕೇಳಿದರೆ ಹೇಳಲ್ಲ

ಮುದುಕರ್ನ ಕೈಯಲ್ಲಿ ಹಿಡಕೊಂಡು

ಬಗ್ಗಿಸಿ ಮೂರು ಗುದ್ದುಗಳನ್ನ ಕೊಟ್ಟನ

ಸತ್ತೊಗ್ತಿವಿ ಬಾಲಗಿರಿರಾಜ ನಮ್ಮನ್ನ ಹೊಡೆಯಬೇಡಿ

ನಿಮ್ಮಾವ ಇದ್ದ ಸುದ್ದಿ ನಾವು ಹೇಳ್ತಿವಿ

ಎಲ್ಯಾನ ತಾತ ಹೇಳಿರಿ

ನೀನು ಲಡಾಯಿ ಮಾಡಲಿಕ್ಕೆ ಹೋದರೆ

ನೋಡಿ ಇಂತಹ ದಂಡನ್ನು ಸಂಹಾರ ಮಾಡಿಧನಲ್ಲ

ನನ್ನ ಉಳಿಸುವುದಿಲ್ಲ ನನ್ನನ್ನು ಕೊಂದುಬಿಡ್ತನ

ಈ ಎರಡೂ ಭಾಷೆಗಳ ಕಥನದ ಸನ್ನಿವೇಶವು ನೋಡಿದಾಗ ಪ್ರಾದೇಶಿಕ ಪದಗಳು ಕಂಡುಬರುತ್ತವೆ. ಎರಡೂ ಭಾಷೆಗಳ ಪ್ರಾದೇಶಿಕತೆ ಒಂದೇ ಆಗಿದೆ. ಎರಡೂ ಭಾಷೆಗಳ ಈ ಕಥನದಲ್ಲಿ ಉರ್ದುಮಿಶ್ರಿತ ಪದಗಳು ಇವೆ. ಕಥನದ ಸನ್ನಿವೇಶ ಎರಡೂ ಭಾಷೆಗಳಲ್ಲಿ ಒಂದೇ ಆಗಿದ್ದು ತೆಲುಗಿನ ಪಠ್ಯದಲ್ಲಿ ವಿಸ್ತಾರವಾಗಿದೆ. ಕನ್ನಡ ಪಠ್ಯದಲ್ಲಿ ಹನ್ನೆರಡು ಸಾಲಿನಲ್ಲೆ ವಿವರಿಸಿದರೆ, ತೆಲುಗು ಪಠ್ಯದಲ್ಲಿ ಅದೇ ಸನ್ನಿವೇಶ ಇಪ್ಪತ್ತಾರು ಸಾಲುಗಳಲ್ಲಿ ವಿಸ್ತಾರವಾಗಿದೆ.

ಕನ್ನಡದ ಪಠ್ಯದಲ್ಲಿ ಬಾಲಗಿರಿರಾಜ ಹಾಗೂ ಮುದುಕರ ಸಂಭಾಷಣೆ ನಡೆದು 'ಮುತ್ತ್ಯಾ ನಮ್ಮಾವ ಎಕ್ಕಡ ಹೋಗ್ಯಾನ' ಎಂದು ಬಾಲಗಿರಿರಾಜ ಕೇಳಿದರೆ 'ಮಗನೆ ನಿಮ್ಮಾವ ನೀ ಲಡಾಯಿ ಮಾಡಲಾಕ ಹೋದರೆ, ನಿನ್ನ ಲಡಾಯಿ ನೋಡಲಾಕ ಲಡಾಯಿ ಬೆಲ್ಲಿಗಿ ಹೊಂಟು ಬಂದರ, ಆ ದಂಡಿನೊಳಗೆ ನಿನ್ನ ಮಾವನ ಕಡಿದು ಹಾಕಿ ಬಂದಿರಿ' ಎಂದು ಮೂರೇ ಸಾಲಿನಲ್ಲೆ ಎಲ್ಲಾ ಮುಖ್ಯ ವಿಷಯವನ್ನು ನಿರೂಪಿಸಿ

ಮುಗಿಸಿದ್ದಾರೆ. ಆದರೆ ತೆಲುಗಿನ ಪಠ್ಯದಲ್ಲಿ ನಿನ್ನ ಮಾವನ ಕಡಿದು ಹಾಕಿ ಬಂದಿರಿ ಎಂಬ ವಿಷಯವು ಬಂದಿಲ್ಲ. ನಿಮ್ಮ ಮಾವನನ್ನು ನಾವು ನೋಡಿಲ್ಲ ಎಂದು ಮುದುಕರು ಹೇಳುತ್ತಾರೆ. ಆಗ ಸಂಗೀತಕ್ಕೆ ಹುಣಸೆಕಾಯಿ ಉದುರುವುದಿಲ್ಲ. ಕಟ್ಟಿಗೆಯಿಂದ ಬಡಿದಾಗ ಮಾತ್ರ ಉದುರುವುದು ಎಂದು ಮುದುಕರಿಗೆ ಮೂರು ಗುದ್ದನ್ನು ಬಾಲಗಿರಿರಾಜ ಕೊಡುತ್ತಾನೆ. ಹೀಗೆ ತೆಲುಗು ಪಠ್ಯದಲ್ಲಿ ವಿಸ್ತಾರವಾಗಿ ಕಥನಗಾರರು ಅಭಿವ್ಯಕ್ತಪಡಿಸಿದ್ದು ಕಾಣಬಹುದು. ಮುದುಕರು ನಮ್ಮನು ಹೊಡೆಯಬೇಡಿ ನಾವು ಸಾಯುತ್ತೇವೆ. ನಿಮ್ಮ ಮಾವನ ವಿಷಯ ಹೇಳುತ್ತೇವೆಂದು ತಿಳಿಸುತ್ತಾರೆ. ನೀವು ಯುದ್ಧ ಮಾಡುವಾಗ ಇಡೀ ದಂಡನ್ನು ಸಂಹಾರ ಮಾಡಿದ್ದು ಕಂಡು ನಮ್ಮನ್ನು ಉಳಿಸುವುದಿಲ್ಲ, ನಮ್ಮ ಮಗಳನ್ನು ಪಡೆದುಕೊಂಡು ಹೋಗುತ್ತಾನೆಂದು ಅಡಿಗೆ ಮನೆಯಲ್ಲಿ ಅಡಗಿಕೊಳ್ಳಲು ಹೋದರೆಂದು ತಿಳಿಸುತ್ತಾರೆ.

ತೆಲುಗು ಪಠ್ಯದಲ್ಲಿನ ಈ ವಿವರ ಕೇಳುಗರ ಕುತೂಹಲವನ್ನು ಹೆಚ್ಚಿಸಲು ಅನುವು ಮಾಡಿಕೊಡುತ್ತದೆ. ನೇರವಾಗಿ 'ಮಾವ ಅಡಗಿ ಕುಳಿತುಕೊಂಡಿದ್ದಾನೆ' ಎನ್ನುವ ಕನ್ನಡದ ನಿರೂಪಣೆಗಿಂತ 'ಕೊಂದು ಹಾಕಿದಿರಿ" ಎಂಬ ಸಂದೇಹ ಸೃಷ್ಟಿಸುವ ತೆಲುಗು ನಿರೂಪಣೆ ಕುತೂಹಲಭರಿತವಾಗಿದೆ. ಹೀಗೆ ನಿರೂಪಣೆಯಲ್ಲಿ ತೆಲುಗು ಪಠ್ಯದಲ್ಲಿ ವಿಸ್ತಾರವಾಗಿ ವ್ಯಕ್ತವಾಗಿದೆ.

### ಪಾತ್ರ ಚಿತ್ರಣ

ಕನ್ನಡ-ತೆಲುಗು ಎರಡು ಆವೃತ್ತಿಗಳ ಕಥನದಲ್ಲಿ ಬರುವ ಪಾತ್ರಗಳು ಎರಡೂ ಭಾಷೆಗಳಲ್ಲಿ ಮೂಡಿ ಬಂದ ಬಗೆಯನ್ನು ಪರಿಶೀಲಿಸಲಾಗಿದೆ.

ಕೃಷ್ಣನೀಲವೇಣಿಯು ತಪಸ್ಸಿನಿಂದ ಹುಟ್ಟಿದ ಮಗನನ್ನು ಅತ್ಯಂತ ಮುದ್ದಿನಿಂದ ಪೋಷಣೆ ಮಾಡುತ್ತಾಳೆ. ತುಂಬ ದಿನಗಳ ನಂತರ ತೀರ್ಥಯಾತ್ರೆ, ದೇವರುದಿಂಡಿರು ಎಂದು ತಿರುಗಿದ ಫಲವಾಗಿ ಕೊನೆಗೆ ಮಗು ಜನಿಸುತ್ತದೆ. ಆ ಮಗುವನ್ನು ಅತ್ಯಂತ ಜವಾಬ್ದಾರಿಯಿಂದ ಪೋಷಣೆ ಮಾಡುತ್ತಾಳೆ ಎಂಬುದನ್ನು ಗಮನಿಸಿದರೆ ಸಾಮಾನ್ಯ ಹೆಣ್ಣುಮಗಳ ಬದುಕಿನ ಭಾಗವಾಗಿ ಈ ಸನ್ನಿವೇಶ ಮೂಡಿಬಂದಿದೆ. ಇದನ್ನು ಎರಡೂ ಭಾಷೆಗಳ ಪಠ್ಯದಲ್ಲಿ ಅತ್ಯಂತ ಮನೋಜ್ಞವಾಗಿ ಕಥನಗಾರರು ನಿರೂಪಿಸಿದ್ದಾರೆ. ಕೃಷ್ಣನೀಲವೇಣಿಯು ತನ್ನ ಮಗ ಬಾಲಗಿರಿರಾಜಕುಮಾರನ ಪೋಷಣೆ ಮಾಡುತ್ತಾಳೆ.

ಕನ್ನಡಃ ಆಡಂತ ಮಗನಿಗೆ ಬೇಡಂತ ವಸ್ತ್ರವಡವಿ
ಕಂಟಿಚಂದ್ರಹಾರ ಮಗನ ಕೊರಳಗ ದರಿಸ್ಯಾಳ
ಓನ್ಮಾಲ್ ಸರಗಳು ಮಗನ ಕೊರಳಗ ಹಾಕ್ಯಾಳ
ಚೇರು ಚೇರು ಬಂಗಾರ ಕಡ್ಗಗಳು
ಚೇರು ಚೇರು ಬಂಗಾರ ಉಡುದಾರ ಟೊಂಕಕ್ಕೆ ಮಾಡಿಸ್ಯಾಳ

ಛತ್ರಿ ಶಿರ್ಪಾವು ಮಗನ ಹಣೆಗೆ ಇಟ್ಟಾಳ

ಆಡಂತ ಮಗನಿಗೆ ಬೇಡಂತ ವಸ್ತ್ರ ಮೈತುಂಬ ವಸ್ತ್ರ

ಇಲ್ಲಿ ಕನ್ನಡ ಪಠ್ಯದಲ್ಲಿ ಏಳೇ ಸಾಲಿನಲ್ಲಿ ಬಾಲಗಿರಿರಾಜನನ್ನು ವರ್ಣಿಸಿದ್ದರೆ, ತೆಲುಗಿನಲ್ಲಿ ಅದೇ ಸನ್ನಿವೇಶವನ್ನು ದೀರ್ಘವಾಗಿ ವರ್ಣಿಸಿ, ಕನ್ನಡಕ್ಕಿಂತ ತೆಲುಗಿನ ಪಠ್ಯದಲ್ಲಿ ತನ್ನ ಪ್ರತಿಭೆಯನ್ನು ಕಥನಗಾರ್ತಿಯು ತೋರಿಸಿಕೊಟ್ಟಿದ್ದಾಳೆ.

**ತೆಲುಗು (ಅನುವಾದ):** ಆಡುವಂತ  ಮಗನಿಗೆ ಬೇಡಿದಂತ ಒಡವೆಗಳು

ಕಂಟೆ ಚಂದ್ರಹಾರ ಮಗನಿಗೆ ಮಾಡಿಸ್ಯಾಳ

ಒನ್‌ಮಾಲ ದಂಡೆಗಳು ಕೊರಳಿಗೆ ಮಾಡಿಸ್ಯಾಳ

ಸೇರು ಸೇರು ಬಂಗಾರದ ಕಡ್ಗಗಳು ಮಾಡಿಸ್ಯಾಳ

ಮನಗ ಕೈಗಳಿಗೆ ಹಾಕ್ಯಳ

ಸೇರು ಸೇರು ಬಂಗಾರದ ಉಡುದಾರ ಮಾಡಿಸ್ಯಾಳ

ಮಗನ ಟೊಂಕಕ್ಕೆ ಹಾಕ್ಯಾಳ

ಏಳು ಪೆಟ್ಟಿಗೆಗಳ ಒಡವೆಗಳು

ಮಗನಿಗೆ ಮಾಡಿಸ್ಯಾಳ

ಬಂಗಾರದ ಸಿರಿಪಾವು ಮಗನ ಹಣೆಗೆ ದರಿಸ್ಯಾಳ

ಸೂರ್ಯನಿಗಿಂತ ಭಿನ್ನವಾಗಿ ಕಾಣ್ತಾನ

ಭಿನ್ನವಿಲ್ಲದ ಬಿಚಾರಿಚಾಲು ಮಗ

ಬಲಗಣ್ಣಿನಲ್ಲಿ ಕುಡುಪು

ಎಡಗಣ್ಣಿನಗ ಏಕ ಚಕ್ರವು

ಬೆನ್ನಿನಲ್ಲಿ ದೇವರ ಕಮಲ

ಮಗನಿಗೆ ಇದ್ದದ

ಅರಿಕಾಲಿಗೆ ದೇವರ ಪದ್ಮ ಇದ್ದದ

ಅಂಗೈಯಲ್ಲಿ ಮೈಕುಂಟ ಇದ್ದವನು

ಅಂತಹ ಮಗ ಚಿನ್ನ ಬಾಲಗಿರಿರಾಜ್[6]

ಪಾತ್ರ ಚಿತ್ರಣದಲ್ಲಿ ಕನ್ನಡ ಪಠ್ಯಕ್ಕಿಂತ ತೆಲುಗಿನ ಪಠ್ಯ ವೈಶಿಷ್ಟತೆಯಿಂದ ಕೂಡಿದೆ. ಕನ್ನಡದ ಪಠ್ಯದಲ್ಲಿ ಏಳು ಸಾಲುಗಳಲ್ಲಿ ವರ್ಣನೆ ಬಂದಿದೆ. ತೆಲುಗು ಪಠ್ಯದಲ್ಲಿ ಹತ್ತೊಂಬತ್ತು ಸಾಲುಗಳಲ್ಲಿ ವಿಸ್ತರಿಸಿದೆ. ಇಲ್ಲಿನ ವಿವರಣೆಯಲ್ಲಿ ಕನ್ನಡಕ್ಕಿಂತ ತೆಲುಗಿನಲ್ಲಿ ಉತ್ಪ್ರೇಕ್ಷೆ ಇದೆ. ಮಗುವನ್ನು ಸೂರ್ಯನ ಜೊತೆ

ಹೋಲಿಸಲಾಗಿದೆ. ಅಲ್ಲದೆ ಅವನ ವಿವಿಧಾಂಗಗಳಿಗೆ ವಿವಿಧ ಆಭರಣಗಳನ್ನು ಸಹ ತೆಲುಗು ಪದ್ಯದಲ್ಲಿ ವಿವರಿಸಲಾಗಿದೆ. ಆ ಮಗುವು ಸಾಮಾನ್ಯ ಮಗುವಲ್ಲ, ವರದಿಂದ ಜನಿಸಿದ್ದರಿಂದ ರಾಜನಿಗೆ ಇರುವ ಲಕ್ಷಣಗಳು ಇವೆ ಎಂದು ವ್ಯಕ್ತವಾಗಿದೆ. ಸಾಮಾನ್ಯ ಮಹಿಳೆಯು ತನ್ನ ಮಗನು ಹೇಗೆಯೇ ಇರಲಿ ಆ ಮಗುವನ್ನು ದೇವರಿಗೆ, ರಾಜನಿಗೆ ಹೋಲಿಸಿ ಹೊಗಳುವಂತಹದು ಸಾಮಾನ್ಯ. ಈ ಹಿನ್ನೆಲೆಯಲ್ಲಿ ಕಥನಗಾರರು ಆ ಮಗುವನ್ನು ಚಿತ್ರಿಸಿದ್ದಾರೆ. ಆ ಸಂದರ್ಭದ ಚಿತ್ರಣವು ಸೃಜನಶೀಲವಾಗಿ ಬಂದು, ಕವಿತಾಶಕ್ತಿ ಇಲ್ಲಿ ವ್ಯಕ್ತವಾಗಿದೆ. ಇಲ್ಲಿ ಮೌಖಿಕ ಕಥನವು ಅನಕ್ಷರಸ್ಥರಾದ್ದರಿಂದ ಹಾಗೂ ಅಲೆಮಾರಿ ಜನಾಂಗವಾಗಿದ್ದರಿಂದ ಅವರ ನಿರೂಪಣೆಯಲ್ಲಿ ಅಲ್ಪಸ್ವಲ್ಪ ವ್ಯತ್ಯಾಸವನ್ನು ಬಿಟ್ಟರೆ ಇವರ ಮಾತುಗಾರಿಕೆ, ಶಬ್ದಜೋಡಣೆ, ವಾಕ್ಯವಿನ್ಯಾಸ ಮುಂತಾದವು ಅವರ ಕಥನದಲ್ಲಿ ಸೊಗಸಾಗಿ ಕಾಣುತ್ತೇವೆ. ಇವರು ಮನರಂಜನೆಗಾಗಿ ಕಥನವನ್ನು ಹೇಳುವುದುಂಟು, ತಮ್ಮ ಬದುಕಿನ ಉಪಜೀವನಕ್ಕಾಗಿ ಕಥನ ಹೇಳುವುದುಂಟು ಆದರೆ, ಅವರ ಕಥನ ವಿಧಾನ, ಅದರ ನಿಷ್ಠೆಯು ಒಂದು ಕಥನದ ಸಂದೇಶವನ್ನು ಸಾಮಾನ್ಯ ಜನರಿಗೆ ತಲುಪಿಸುವುದೇ ಆಗಿದೆ.

ಕನ್ನಡ-ತೆಲುಗು ಎರಡು ಕಥನಗಳಲ್ಲಿ ನಿರೂಪಣೆಯು ಭಾಷಾಂತರವಾಗಿ ಬಂದಿರುವುದನ್ನು ಕಾಣಬಹುದು. ಆದರೆ ಕನ್ನಡದ ಒಂದು ಕತೆಯನ್ನು ಒಮ್ಮೆ ಹಾಡಿಸಿ, ಮತ್ತೊಮ್ಮೆ ಅದೇ ಕತೆಯನ್ನು ಹಾಡಿಸಿದಾಗ ಪ್ರತಿ ಸಂದರ್ಭದಲ್ಲೂ ಇವುಗಳ ರಚನಾವಿನ್ಯಾಸ ಮತ್ತು ಭಾಷೆಯ ಬಳಕೆ ಹೊಸದು ಎನ್ನುವಂತಿರುತ್ತದೆ. ಆದರೆ ಇಲ್ಲಿ ಸಂಗ್ರಹಿಸಿದ ಬಾಲಗಿರಿರಾಜಕತೆಯ ಕನ್ನಡ-ತೆಲುಗು ಎರಡು ಆವೃತ್ತಿಗಳಲ್ಲಿ ಭಿನ್ನತೆಯನ್ನು ಕಾಣುವುದಿಲ್ಲ. ಬಾಲಗಿರಿರಾಜ ಪಾತ್ರವು ಮುಖ್ಯಪಾತ್ರವಾಗಿ ಚಿತ್ರಿತಗೊಂಡಿದ್ದರಿಂದ ಆ ಪಾತ್ರದ ಶೌರ್ಯ, ಸಾಹಸ, ಸಹನೆ, ಕ್ಷಮಾಗುಣ ಮುಂತಾದ ಗುಣಗಳನ್ನು ಪಡೆದಿದ್ದು ಮಾನವೀಯ ಮೌಲ್ಯ ಅಭಿವ್ಯಕ್ತಗೊಂಡಿದೆ. ಬಾಲಗಿರಿರಾಜಕುಮಾರನನ್ನು ಶಾಲೆಗೆ ಹಾಕುವ ಸನ್ನಿವೇಶ ಇದ್ದು ಎರಡೂ ಕಥನಗಳಲ್ಲಿ ಗುರ್ರಣ್ಣ ಮೇಷ್ಟ್ರು ಬರುತ್ತಾನೆ. ಕಥನಗಾರರಿಗೆ ಶಾಲೆಯ ಪ್ರಜ್ಞೆ ಇದ್ದದ್ದರಿಂದ ಈ ಸನ್ನಿವೇಶವನ್ನು ಎರಡೂ ಕಥನಗಳಲ್ಲಿ ಅಭಿವ್ಯಕ್ತ ಮಾಡಿದ್ದಾರೆ. ಕನ್ನಡದ ರಾಮಾಯಣ, ಜೈಮಿನಿ ಭಾರತ ಪುಸ್ತಕಗಳನ್ನು ತೆಲುಗು ಪದ್ಯದಲ್ಲೂ ಸಹ ಅಭಿವ್ಯಕ್ತಪಡಿಸಿದ್ದಾರೆ. ಉದಯ, ಕಳಿಂಗ ರಾಜರುಗಳನ್ನು ಸಹ ತೆಲುಗು ಪದ್ಯದಲ್ಲಿ ತಂದಿದ್ದಾರೆ. ಕನ್ನಡ ಪ್ರದೇಶದಲ್ಲಿ ಹಾಡುವುದರಿಂದ ಕನ್ನಡ-ತೆಲುಗು ಪದ್ಯವು ಒಂದೇ ತೆರನಾಗಿ ವ್ಯಕ್ತವಾಗಿದೆ.

ಮಾಸ್ತರ ಗುರ್ರಣ್ಣ ಮಗನೆ ಸಣ್ಣ ಬಾಲರಾಜ ಪಾಟಿ ಕೊಡಪ್ಪ, ಪಾಟಿ ಮಾಸ್ತರ ಕೈಗೆ ಕೊಟ್ಟ ಮಾಸ್ತರ ಕೈಯಾಗ ಹಿಡಿದುಕೊಂಡು ಬರೆದುಕೊಡುತ್ತಾನೆ.

ಕನ್ನಡಃ ಪಾಟಿ ಮ್ಯಾಲ ಏನ ಬರದು ಕೊಡ್ತನ

ಓನಾಮ ಸರಸ್ವತಿ ಎರಡು ಅಕ್ಷರಗಳು ಬರೆದು

ಮಗನ ಕೈಗೆ ಕೊಟ್ಟ

ಮಗನೆ ಬಾಲಗಿರಿರಾಜ

ಓ ಅಂತ ಬರಿಬೇಕು ಮಗನೇ

ನಾ ಅಂತ ಬರಿಬೇಕು ಮಗನೇ

ಮಾಸ್ತರ ಹೇಳಿಕೊಟ್ಟ

ಸಣ್ಣ ಬಾಲಗಿರಿರಾಜ ಪಾಟಿ ಕೈಯಾಗ ಹಿಡಕೊಂಡು

ನಾ ಅಂತ ಬರಿಲಾಕ ನಾದನಿ ಸೂಳಿಮಗ ನಾನಲ್ಲ

ಓ ಅಂತ ಬರಿಲಾಕ ಒಡೆಹೋಗ ಸೂಳಿಮಗ ನಾನಲ್ಲ

ಮಾಸ್ತರ

ರಾಮಾಯಣ ಪುಸ್ತಕಗಳು ಜೈಮಿನಿ ಭಾರತ ತಂದು ಕೊಡು

ಒಂದು ತಾಸೊತ್ತಿನಗ ಓದಿ ನಾ ಹೋಗ್ತೀನಿ

ಮಗನೆ ಸಣ್ಣ ಬಾಲಗಿರಿರಾಜ

ಉದಯ ಕಳಿಂಗ ಚಕ್ರವರ್ತಿ ರಾಜದವರು

ಅಂತಹವರ ಕೈಲಿ ಆಗಿಲ್ಲ

ತೆಲುಗು (ಅನುವಾದ): ಮೇಸ್ತ್ರು ಪಾಟಿ ಕೈಲಿ ಹಿಡಕೊಂಡು

ಭೂಮಿಗಿಂತ ಮೊದಲ ಏನು ಹುಟ್ಟಿದೆ

ಓ ನಾಮ ಸರಸ್ವತಿ ಎರಡು ಪದಗಳು

ಪಾಟಿಮ್ಯಾಲ ಬರೆದು ಮಗನ ಕೈಗೆ ಕೊಟ್ಟನ

ಮಗ ಪಾಟಿ ಕೈಯಲ್ಲಿ ಹಿಡಿಕೊಂಡು ಓದಿ ನೋಡಿದ

ಮೇಸ್ತ್ರು ನಮೋ ನಮಸ್ಕಾರಂ ತಂದೆ

ಓ ಅಂತ ಬರೆಯೋಕೆ ಓಡಿ ಹೋಗ ಮಗನಲ್ಲ

ನಾ ಅತಿ ಬರೆಯೋಕೆ ನಾದನಿ ಮಗನಲ್ಲ

ರಾಮಾಯಣ ಪುಸ್ತಕಗಳು ಜೈಮಿನಿ ಭಾರತ

ಕಿರಿಯಬಾಲ ಹಿರಿಯಬಾಲ ಶಿಕ್ಷ

ಈ ಪುಸ್ತಕಗಳು ನನಗೆ ತರಿಸಿಕೊಡ್ರಿ

ಒಂಬತ್ತು ಗಂಟೆಯಲ್ಲಿ ಓದಿ ನಾನು ಹೊಗ್ತೀನ್

ಮಾಸ್ತರ ಗುರ್ರಣ್ಣ ಹಾಗೂ ಬಾಲಗಿರಿರಾಜಕುಮಾರನ ಮಧ್ಯ ಇಲ್ಲಿ ಸಂವಾದ ಇದೆ. ಎರಡೂ ಕಥನಗಳಲ್ಲಿ ಶಿಕ್ಷಣ ವ್ಯವಸ್ಥೆ ಯಾವ ನೆಲೆಯಲ್ಲಿ ಇತ್ತೆಂದು ಈ ಸನ್ನಿವೇಶಗಳು ಸೂಚಿಸುತ್ತದೆ. ಕತೆಗಾರರ

ಸಮಕಾಲೀನ ಶಿಕ್ಷಣ ಪದ್ಧತಿ ಅಭಿವ್ಯಕ್ತಗೊಂಡಿದೆ. ವಿದ್ಯಾರ್ಥಿಗಳ ವಿದ್ಯಾಭ್ಯಾಸದ ಮೊದಲು ಓ ನಾಮ ಸರಸ್ವತಿ ಮೊದಲು ಬರೆಯಬೇಕಾಗಿತ್ತು. ಈ ಪದಗಳನ್ನು ಕಲಿತ ನಂತರ ಮುಂದಿನ ವಿದ್ಯಾಭ್ಯಾಸ ನಡೆಯುತ್ತಿತು. ಹೀಗಾಗಿ ಭೂಮಿಗಿಂತ ಮೊದಲು ಓ ನಾಮ ಎರಡು ಅಕ್ಷರಗಳು ಹುಟ್ಟಿದ್ದವೆಂದು ಕಥನಗಾರರ ಕಲ್ಪನೆಯಲ್ಲಿ ವ್ಯಕ್ತವಾಗಿದೆ. ಇದರಿಂದ ಮೇಷ್ಟ್ರು ಗುರ್ರಣ್ಣ ಮೊದಲು ಓ ನಾಮ ಎರಡು ಅಕ್ಷರಗಳನ್ನು ಪಾಟಿಯ ಮೇಲೆ ಬರೆದುಕೊಡುತ್ತಾನೆ. ಆದರೆ ಬಾಲಗಿರಿರಾಜಕುಮಾರನು ಓ ಅಂತ ಬರೆಯಲು ಓಡಿ ಹೋಗುವ ಮಗ ನಾನಲ್ಲ ನಾ ಅಂತ ಬರೆಯಲು ನಾದನಿ ಸೂಳಿಮಗ ನಾನಲ್ಲ ಎಂದು ವ್ಯಂಗ್ಯವಾಗಿ ಹೇಳುತ್ತಾನೆ. ಅಂದರೆ ಓ ನಾಮ ಕಲಿಯಲು ನಾನು ಬುದ್ದು ಅಲ್ಲ, ಬೇಕಾದರೆ ರಾಮಾಯಣ ಪುಸ್ತಕಗಳು ಜೈಮಿನಿ ಭಾರತ ಪುಸ್ತಕಗಳನ್ನು ತಂದುಕೊಡು ಒಂಬತ್ತು ಗಂಟೆಯಲ್ಲಿ ಓದಿ ಮುಗಿಸುತ್ತೇನೆಂದು ಹೇಳುತ್ತಾನೆ. ಇವನ ಮಾತುಗಳಲ್ಲಿ ಅಸಾಮಾನ್ಯ ಪ್ರತಿಭೆ ಕಂಡುಬರುತ್ತದೆ. ಕಥನಗಾರರ ಅನುಭವದ ಹಿನ್ನೆಲೆಯಲ್ಲಿ ಇಂತಹ ಪುಸ್ತಕಗಳನ್ನು ಹೆಸರಿಸಿದ್ದನ್ನು ಕಾಣಬಹುದು. ಮುಖ್ಯವಾಗಿ ಕನ್ನಡ-ತೆಲುಗು ಎರಡು ಪಠ್ಯಗಳಲ್ಲಿ ಈ ಸನ್ನಿವೇಶದ ಅನನ್ಯತೆ ಕಂಡುಬರುತ್ತದೆ.

ಪದ್ಮರಾಣಿಯನ್ನು ಗೆಲ್ಲಲು ಬಾಲತೇಜು ಪಟ್ಟಣದ ಸಮೀಪ ಬರುತ್ತಾನೆ. ಅಲ್ಲಿ ಜೀರ್ಲನಾಗಮ್ಮ ಗಂಡ ಕುರುಡ ಈರಣ್ಣ ಮಕ್ಕಳ ಭಾಗ್ಯವಿಲ್ಲದೆ ಪಟ್ಟಣ ಅಗಸೆ ಸಮೀಪ ಗುಡಿಸಲಿನಲ್ಲಿ ಈ ಮುದಿಜೀವಿಗಳು ವಾಸಿಸುತ್ತಿದ್ದವು. ಬಾಲಗಿರಿರಾಜನು ಇವರಿಂದ ಪದ್ಮರಾಣಿ ಹಾಗೂ ಆಕೆಯ ತಾಯಿ ತಂದೆಯ ವಿವರಗಳನ್ನು ತಿಳಿದುಕೊಳ್ಳುತ್ತಾನೆ. ಜೀರ್ಲನಾಗಮ್ಮ ಪಾತ್ರವು ಬಾಲಗಿರಿರಾಜಕುಮಾರನಿಗೆ ಮುಖ್ಯ ಸಂದರ್ಭದಲ್ಲಿ ಸಹಾಯ ಮಾಡುತ್ತದೆ. ಜೀರ್ಲನಾಗಮ್ಮ ಈರಣ್ಣ ಪಾತ್ರಗಳು ಕಥನದ ಮುಖ್ಯ ಸನ್ನಿವೇಶಗಳಲ್ಲಿ ಈ ಪಾತ್ರಗಳು ಬರುತ್ತವೆ. ಪತ್ರೋಳಿಗಳನ್ನು ಹೊಲಿದು ಮಾರಿ ಜೀವನ ಸಾಗಿಸುವ ಜೀರ್ಲನಾಗಮ್ಮಳು.ಮಹಿಭೂತರಾಜ ಅಡಗಿ ಮನೆಯಲ್ಲಿ ಕುಳಿತಾಗ, ಪತ್ರೋಳಿಗಳಲ್ಲೇ ತಿನ್ನುವ ಈ ಮರಾಠಿ ರಾಜನು ಬಳಸುವ ಎಲ್ಲ ಪತ್ರೋಳಿ ಮುಗಿದಾಗ ಜೀರ್ಲನಾಗಮ್ಮನನ್ನು ಬಯ್ಯುವ ಸನ್ನಿವೇಶ, ಅದೇ ಸಂದರ್ಭದಲ್ಲಿ ಜೀರ್ಲನಾಗಮ್ಮ ಅಲ್ಲಿಗೆ ಬಂದು ಕೇಳಿ ಸಂವಾದ ನಡೆಯುವ ಸನ್ನಿವೇಶ ಕುತೂಹಲವಾಗಿದೆ. ಪತ್ರೋಳಿ ಹೊಲಿದುಕೊಂಡು ಹೋಗಲು ಬಾಲಗಿರಿರಾಜ ಇದ್ದ ಗಿಡಕ್ಕೆ ಬಂದು, ಅದೇ ಗಿಡದಿಂದ ಎಲೆಗಳನ್ನು ಕೀಳುವಾಗ, ಬಾಲಗಿರಿರಾಜ, ಅಜ್ಜಿಯನ್ನು ಗುರುತು ಹಿಡಿದು ಗಿಡದ ಮೇಲಿಂದ ಎಲೆಗಳನ್ನು ಒಂದೊಂದು ಕೆಳಗೆ ಬೀಸುತ್ತಾನೆ. ಗಾಳಿಗೆ ಬಿದ್ದಿವೆ ಎಂದು ತಿಳಿದ ಅಜ್ಜಿ ಎಲ್ಲ ಆರಿಸಿಕೊಂಡು ಕುಂಚಿಗೆಯನ್ನು ಗಂಟು ಹಾಕಿ ತಲೆ ಮೇಲೆ ಇಟ್ಟುಕೊಂಡು ಒಂದು ಹೆಜ್ಜೆ ಮುಂದೆ ಹೋಗುವಷ್ಟರಲ್ಲಿ ನಾ ಬರ್ತೀನಿ ಈರಮ್ಮ ಎಂದ ಕೂಡಲೇ, ಓಯಮ್ಮ ದೆವ್ವ ಇದೆ ಎಂದು ಕೆಳಗೆ ತಲೆ ಮೆಲೆ ಇದ್ದ ಗಂಟನ್ನು ಕೆಳಗೆ ಹಾಕಿ, ಕಟ್ಟಿಗೆ ತೆಗೆದುಕೊಂಡು ಒಂದೊಂದು ಎಲೆಯನ್ನು ಸರಿಸುತ್ತಾ ದೆವ್ವ ಹೋದೆಯಾ ಇಲ್ಲ ಎಂದು ಹೇಳುವ ಸನ್ನಿವೇಶ ಹಾಸ್ಯವಾಗಿ ಇದೆ. ಈ ಪಾತ್ರವು ಕನ್ನಡ-ತೆಲುಗು ಎರಡು ಪಠ್ಯಗಳಲ್ಲಿ ಅತ್ಯಂತ ಸೊಗಸಾಗಿ ಬಂದು ಕಥನಕ್ಕೆ ಹೊಸ ಕಳೆಯನ್ನು ನೀಡಿದೆ.

ಬಾಲಗಿರಿರಾಜಕುಮಾರನು ಜೀರ್ಲನಾಗಮ್ಮ ಅಜ್ಜಿಯಿಂದ ಪದ್ಮರಾಣಿಯ ವಿಷಯವನ್ನು ತಿಳಿದುಕೊಂಡು ನೇರವಾಗಿ ಮಹಿಭೂತರಾಜನ ಆಸ್ಥಾನಕ್ಕೆ ಲಗ್ಗೆ ಇಡುತ್ತಾನೆ. ಈ ಕಥನದಲ್ಲಿ ಮುಖ್ಯವಾಗಿ ಹೆಣ್ಣನ್ನು ಗೆಲ್ಲುವುದೇ ಪ್ರಮುಖ ಘಟ್ಟವಾಗಿದೆ. ಬಾಲಗಿರಿರಾಜಕುಮಾರನು ಒಬ್ಬನೇ ಹೋರಾಡುವ ಸನ್ನಿವೇಶ, ಅವನ ಧೈರ್ಯ, ಶೌರ್ಯ, ಸಾಹಸ, ಸಹನೆ ಮುಂತಾದ ಅಂಶಗಳು ಇಲ್ಲಿ ವ್ಯಕ್ತವಾಗಿವೆ. ಹೆಣ್ಣನ್ನು ಮದುವೆಯಾಗಬೇಕಾದರೆ ಹೆಣ್ಣಿನ ತಂದೆ ಆಹ್ವಾನಿಸಿದ ಪಂಥದಲ್ಲಿ ಗೆದ್ದರೆ ಮಾತ್ರ ಹೆಣ್ಣನ್ನು ಕೊಟ್ಟು ಮದುವೆ ಮಾಡುವ ಪ್ರಸಂಗವನ್ನು ಪುರಾಣ, ಮಹಾಕಾವ್ಯಗಳಲ್ಲಿ ಕಾಣಬಹುದು. ಹಾಗೆಯೇ ಇಲ್ಲಿಯೂ ಸಹ ಅಂತಹ ಪ್ರಸಂಗವೇ ಮುಖ್ಯ ವಿಷಯವಾಗಿದೆ. ಹೆಣ್ಣನ್ನು ಪಡೆಯುವುದಕ್ಕಾಗಿ ಬಾಲಗಿರಿರಾಜನು ಯುದ್ಧ ಮಾಡುವ ಪ್ರಸಂಗ ಎರಡೂ ಪಠ್ಯಗಳಲ್ಲಿ ವ್ಯಕ್ತವಾಗಿದೆ.

ಕನ್ನಡ: ಬಳೆ ಬಳೆ ಬಳಲೇನು ಬಳಲೇಡು

ದಂಡಿನ ಒಳಗೇನು ಮಗ ಕುಪ್ಪಳಿಸಿ ಎಗರ್‍ಯಾನ

ಬಾಲನೆ ಹಿಡಿತಾನ ಗರಗರ ತಿರುಗುತಾನ

ನೆಲಕೆ ಹಾಕಿ ಹೊಡಿತನ

ಎದಿಮ್ಯಾಲ ಕಾಲಿಟ್ಟು ರುಂಡನೆ ತೆಗಿತಾನ ಚಂಡಾಡುತನ

ಎಡಕೆ ಕಡಿದರೆ ಬಲಕೆ ಬರ್‍ತವ

ಬಲಕೆ ಕಡಿದರೆ ಎಡಕೆ ಬರ್‍ತವ

ಏಟಿಗೆ ಮನಗಾರ ಸಾವಿರ ಆನೆಗಳ ಕಲಾಸ್ ಆಗ್ತವ

ಆನೆಗಳ ರಕ್ತೇನ ಹಳ್ಳಾಗಿ ಹರಿತಾವ

ಆ ರಕ್ತ ಒಳಗೆ ಈಸಾಡಿ ಬರ್‍ತನ

ಒಂಬತ್ತು ತಾಸಿನಗ ಒಂಬತ್ತು ಗಳಿಗನಗ

ಏಳು ಸಾವಿರ ದಂಡು ಕಲಾಸ್ ಮಾಡ್ಯಾನ

ಮಾವನ ಕಚೇರಿದೊಳಗೆ ಮಗ ಕುಪ್ಪಳಿಸಿ ಎಗರ್‍ಯಾನ

ನಮಸ್ತೆ ಏ ಮಾವ ಹೆಣ್ಣು ಕೊಡು ಏ ಮಾವ

ತೆಲುಗು (ಅನುವಾದ): "ಬಳೆ ಬಳೆ ಬಳಲೇನು ತಾನ ತಂದನ ತಾನ

ಆನೆ ದಂಡಿನಲಿ ಕುಪ್ಪಳಿಸಿ ಎಗರ್‍ಯಾನ

ಬಾಲಗಳ ಹಿಡಕೊಂಡು ಗರಗರ ತಿರುಗುತಾನ

ನೆಲಕ್ಕೆ ಹೊಡಿತಾನ ಕೊರಳನ್ನು ಕುಯ್ಯುತಾನ

ಎಡಗಡೆಗೆ ಕಡಿದರೆ ಬಲಗಡೆಗೆ ಬರ್‍ತವ

ಬಲಗಡೆಗೆ ಕಡಿದರೆ ಎಡಗಡೆಗೆ ಬರ್‍ತವ

ಒಂದೊಂದು ಏಟಿಗಿ ಸಾವಿರ ಆನೆಗಳು ಕಲಾಸ್ ಆಗ್ಯಾವ

ಒಂಬತ್ತು ಗಂಟೆಯಲ್ಲಿ ಒಂಬತ್ತು ಗಳಿಗ್ಯಾಗತನಕ

ಏಳು ಸಾವಿರ ದಂಡು ಮಗ ಕಡಿದಾನ

ಆನೆಗಳ ರಕ್ತವು ಹಳ್ಳಾಗಿ ಹರಿತದ

ಆ ರಕ್ತದಲ್ಲಿ ಮಗ ಈಜಾಡಿ ಬರ್‍ತನ

ದಂಡು ಸಂಹಾರ ಮಾಡಿ ಮಾವ ಕಚೇರಿಯೊಳಗ

ಮಗ ಇನ್ನು ಏಗರ್‍ಯಾನ

ನಮಸ್ಕಾರ ಓ ಮಾಮ ಹುಡುಗಿನ ಕೊಡು ಓ ಮಾಮ[೧೦]

ಕಥನಗಾರರು ಬಾಲಗಿರಿರಾಜನ ಯುದ್ಧ ಸನ್ನಿವೇಶವನ್ನು ಆ ಸಂದರ್ಭಕ್ಕೆ ತಕ್ಕಂತೆ ಭಾವವನ್ನು ವ್ಯಕ್ತಪಡಿಸಿದ್ದಾರೆ. ಬಳಿ ಬಳಿ ಬಳಲೇನು ಬಳಲೇಡು ಎಂಬ ಸಾಲುಗಳು ಎರಡು ಪಠ್ಯಗಳಲ್ಲಿ ಯುದ್ಧದ ಪ್ರಸಂಗವನ್ನು ಧ್ವನಿಸುತ್ತದೆ. ಪ್ರತಿಯೊಂದು ಸಾಲು ಭಾಷಾಂತರವಾಗಿ ಬಂದಿದ್ದನ್ನು ಕಾಣಬಹುದು. ಬಾಲಗಿರಿರಾಜಕುಮಾರ ಯುದ್ಧದ ಸನ್ನಿವೇಶ, ಶೌರ್ಯ, ಸಾಹಸವು ಇಲ್ಲಿ ಚಿತ್ರಣಗೊಂಡಿದೆ. ಇಂತಹ ಯುದ್ಧದ ಸನ್ನಿವೇಶವು ಕುದುರೆ, ಒಂಟೆ, ನಾಯಿ, ಹಣ್ಣಿನ ತೋಟ ಹಾಗೂ ಮಹಿಭೂತರಾಜ ತಮ್ಮಂದಿರ ದಂಡು ಎಲ್ಲಾ ದಂಡುಗಳನ್ನು ಸಂಹಾರ ಮಾಡುವ ಸನ್ನಿವೇಶ ಹಾಗೂ ಬಾಲಗಿರಿರಾಜಕುಮಾರನ ಪಾತ್ರವು ಎರಡು ಪಠ್ಯಗಳಲ್ಲಿ ಸಾಮ್ಯವಿದೆ.

ಬಾಲಗಿರಿರಾಜನು ಎಲ್ಲಾ ಯುದ್ಧಗಳಲ್ಲಿ ಗೆದ್ದರೂ ಮಹಿಭೂತರಾಜ ಮಗಳನ್ನು ಕೊಡುವುದಿಲ್ಲ. ಆದರೆ ಜೀರ್ಲನಾಗಮ್ಮನ ಸಹಾಯದಿಂದ ಪದ್ಮರಾಣಿಯ ಅರಮನೆಯನ್ನು ಪ್ರವೇಶಿಸುತ್ತಾನೆ. ಆದರೆ ಚಕ್ರವ್ಯೂಹದಂತ ಭದ್ರತೆಯ ಮನೆಯ ಆಯುಧಗಳಲ್ಲಿ ಒಂದೊಂದೇ ಅಂಗವನ್ನು ಕಳೆದುಕೊಂಡು ತನ್ನ ಜೀವ ಕೋಡುವ ಸನ್ನಿವೇಶ ಬಂದಿದೆ.

ಕನ್ನಡಃ ಏಳೆ ಕೊಮ್ಮ ಪದ್ಮರಾಣಿ

ಆಗ ಕೊಡ್ರಿ ಭೋಗ ಕೊಡ್ರಿ

ರಾಜ ಕೇಳ್ತನ

ಒಳ್ಳಿ ಒಳ್ಳಿ ಬೇಸತ್ತುಕೊಂಡ

ತಾಯಿಗಿ ನಿದ್ದಿ ಹೊಂಟದ

ನನ್ನ ಹೆಂಡತಿಗಿ ಕೈಯಿಟ್ಟು ನಾ ಎಬ್ಬಿಸ್ತಿನಿ

ನನಗೇನು ಭಯ

ಯತಾರ್ಥ ಮಗ ಬಲಗ್ಗೆ ತೆಗೆದು ಆಯುದ್ದೊಳಗ ಇಟ್ಟನ

ಹೆಣ್ತಿಗಿ ಎಬ್ಬಿಸಲ್ಕ ಹೋಗ್ಯಾನಾ

ಚಂದ್ರಾಯುಧಗಳು ಬಲಗ್ಗೆ ಅಲ್ಲಿಗೆ ಕತ್ರಿಸಿಕೊಂಡವ

ರಾಜಗ ಆವಾಗ ತಿಳಿದುಬಂತು

ಬಿಚ್ಚಾಯುಧಗಳು ಬಿಲ್ಲು ಆಯುಧಗಳು

ಆಯ್ದು ಒಳಗ ಬಲಗ್ಗೆ ಹೋದ ಮ್ಯಾಲೆ

ಈ ಜಲ್ಮ ಇದ್ದು ಏನು ಸಾರ್ಥಕ

ಎಡಗ್ಗೆ ತೆಗೆದು ಆಯ್ದು ದೊಳಗ ಇಟ್ಟನ

ಎಡಗ್ಗೆ ಕತ್ರಿಸಿಕೊಂಡು ಬಿದ್ದದ

ತೆಲಗು (ಅನುವಾದ): ಏಳೇ ಕೊಮ್ಮ ಪದ್ಮರಾಣಿ ಏಳೇ ಕೊಮ್ಮ ಪದ್ಮರಾಣಿ

ಮದಮತ್ಸರಗಳು ಕಣ್ಣಿಗೆ ಬಂದವ

ಕಾಮಕ್ರೋದ ತಲೆಗೆ ಏರಿದೆ

ಆಗ ಕೊಡು ನನಗೆ ಭೋಗ ಕೊಡು

ನಿನ್ನ ನೋಡಿ ತಾಳಲಾರೆನು ನಿನ್ನ ನೋಡಿ ನಿಲ್ಲಲಾರೆನು

ತಾಯಿಗಿ ಎಬ್ಬಿಸಿ ಎಬ್ಬಿಸಿ ಆಯಾಸಗೊಂಡನ

ಎಬ್ಬಿಸಲಾರದ ಆಯಾಸಗೊಂಡನ

ತಾಯಿ ಏಳಲಿಲ್ಲ

ನನ್ನ ಹೆಂಡ್ತಿನ ನಾನು ಕೈ ಹಿಡಿದು ಎಬ್ಬಿಸ್ತಿನಿ

ನನಗೇನು ತಪ್ಪಿಲ್ಲೆಂದು

ಏಳಂತಸ್ತು ಮಾಳಿಗೆ ಮೇಲೆ

ಬಂಗಾರದ ಕತ್ತಿಗಳು ಇದ್ದವು ಗೊತ್ತಿಲ್ಲ

ಮನುಷ್ಯ ಹೋದರೆ ಮನುಷ್ಯನ ಕತ್ತರಿಸುತ್ತವೆ

ಇರುವೆ ಹೋದರೆ ಇರುವೆ ಕತ್ತರಿಸ್ತವೆ

ಅಂತಹ ಆಯುಧಗಳು ಇದ್ದವು ಮಗನಿಗೆ ಗೊತ್ತಿಲ್ಲ

ಬಲಗ್ಗೆ ತೆಗೆದು ಕತ್ತಿಗಳಲ್ಲಿ ಇಟ್ಟಾನ

ಹೆಂಡತಿನ ಎಬ್ಬಿಸಲಿಕ್ಕೆ ಹೋಗ್ಯಾನ

ಬಲಗ್ಗೆ ಅಲ್ಲಿಗೆ ಕತ್ತರಿಸಿ ತಾಯಿ ಹಾಸಿಗೆ ಮ್ಯಾಲೆ ಬಿದ್ದದ

ತಲೇಲಿದ್ದ ಮದ ಇಳಿದು ಹೋಗ್ಯದ[೧೧]

ಕನ್ನಡ-ತೆಲುಗು ಎರಡು ಪಠ್ಯಗಳಲ್ಲಿ ಪದ್ಮರಾಣಿಯನ್ನು ಪಡೆಯಲು ಬಾಲಗಿರಿರಾಜನು ಹೋದ ಸನ್ನಿವೇಶವನ್ನು ಕಥನಗಾರರು ಭಿನ್ನವಾಗಿ ನಿರೂಪಿಸಿದ್ದಾರೆ. ಕನ್ನಡ ಪಠ್ಯದಲ್ಲಿ ನಿನಗಾಗಿ ಬಂದಿನಿ ಎಂದು ಪದ್ಮರಾಣಿಯನ್ನು ಕರೆದು ಕರೆದು ಬೇಸತ್ತುಕೊಳ್ಳುತ್ತಾನೆ. ಆದರೆ ತೆಲುಗು ಪಠ್ಯದಲ್ಲಿ ಎದ್ದೇಳು ಪದ್ಮರಾಣಿ ಎಂದು ಹೇಳುತ್ತ ಪದ್ಮರಾಣಿಯನ್ನು ನೋಡಿದ ಕೂಡಲೇ(ಮದಮತ್ಸರಲು ಕಂಡ್ಲಕೊಚ್ಚಿನದಿ) ಮದಮತ್ಸರಗಳು ಕಣ್ಣು ತುಂಬಿ ಬಂದಿವೆ(ಕಾಮಕ್ರೋಧಂ ನೆತ್ತಿಕೆ ಎಕ್ಕಿಂದಿ) (ಕಾಮ ಕ್ರೋಧವು ತಲೆಗೆ ಏರಿದೆ) ಇದರಿಂದ ನಿನ್ನನ್ನು ನೋಡಿ ನಾ ತಾಳೆನು ಎಂದು ಕರೆದು ಕರೆದು ಬೇಸರಗೊಳ್ಳುತ್ತಾನೆ. ಆದರೆ ಮುಂದಿನ ಸಾಲುಗಳಲ್ಲಿ ಮತ್ತೆ ಸಾಮ್ಯ ಕಾಣಬಹುದು. ಎರಡು ಕಥನಗಳಲ್ಲಿ ನನ್ನ ಹೆಂಡತಿಯನ್ನು ನಾನು ಕೈ ಇಟ್ಟು ಎಬ್ಬಿಸುತ್ತೇನೆ. ಅದರಲ್ಲೇನು ಭಯ ಎಂದು ತನ್ನ ಬಲಗೈಯನ್ನು ಇಟ್ಟ ಕೂಡಲೇ ಪದ್ಮರಾಣಿಯನ್ನು ಸುತ್ತುವ ಆಯುಧಗಳು ಕೈಯನ್ನು ಕತ್ತರಿಸುತ್ತವೆ. ತೆಲುಗು ಪಠ್ಯದಲ್ಲಿ ಇನ್ನೂ ವಿಸ್ತಾರವಾಗಿ ಮೂಡಿಬಂದಿದ್ದು ಪದ್ಮರಾಣಿಯ ಬಂಗಾರದ ಅರಮನೆಯ ಒಳಗೆ ಪದ್ಮರಾಣಿಯ ಸುತ್ತ ತಿರುಗುವ ಬಂಗಾರದ ಕತ್ತಿಗಳು, ಆಯುಧಗಳು, ಇರುವೆ ಹೋದರೂ ಕತ್ತರಿಸುವ ಸೂಕ್ಷ್ಮತೆಯ ವ್ಯವಸ್ಥೆ ಇರುತ್ತದೆ. ಬಾಲಗಿರಿರಾಜನ ಕತ್ತರಿಸಿದ ಕೈ ಪದ್ಮರಾಣಿಯ ಹಾಸಿಗೆಯ ಮೇಲೆ ಬೀಳುತ್ತದೆ ಹೀಗೆ ಈ ಸನ್ನಿವೇಶ ಕನ್ನಡಕ್ಕಿಂತ ತೆಲುಗು ಪಠ್ಯದಲ್ಲಿ ಭಿನ್ನವಾಗಿದೆ.

ಮಾರು ಮರಾಠಿ ಮಹಿಭೂತರಾಜನ ಹೆಂಡತಿ ಸೂರ್ಯವತಿ ಇವರಿಗೆ ಒಬ್ಬಳೇ ಮಗಳು ಪದ್ಮರಾಣಿ. ವರದಿಂದ ಜನಿಸಿದ ಇವಳು ಐದು ನಾಗಮಲ್ಲಿಗೆ ಹೂವಿನ ತೂಕದವಳು ಮಗಳು ಮದುವೆಯ ವಯಸ್ಸಿಗೆ ಬಂದಿದ್ದರಿಂದ ಮಗಳನ್ನು ಮದುವೆ ಮಾಡಿಕೊಡಲು ವರಗಳಿಗೆ ಪಂಥಗಳಲ್ಲಿ ಗೆದ್ದು ಪಡೆಯಲು ಆಹ್ವಾನಿಸಿರುತ್ತಾನೆ. ಪದ್ಮರಾಣಗಾಗಿ ವಿಶೇಷವಾದ ಮನೆಯನ್ನು ಕಟ್ಟಿಸಿದ್ದಾನೆ. ಈ ಸನ್ನಿವೇಶವು ಕನ್ನಡ ತೆಲುಗು ಎರಡು ಪಠ್ಯಗಳಲ್ಲಿ ಕಥನ ನಿರೂಪಣೆಯಲ್ಲಿ ಸ್ವಲ್ಪ ಭಿನ್ನವಾಗಿದೆ. ಆದರೆ ಸನ್ನಿವೇಶದ ಉದ್ದೇಶ ಮಾತ್ರ ಸಾಮ್ಯತೆ ಕಂಡುಬರುತ್ತದೆ.

ಕನ್ನಡ: ಅಕ್ಕಡಿ ಯಾವುದು ಪಟ್ನ ಇದ್ದದಲ್ಲ
ಬಾಲಟೇಜುಲ ಪಟ್ನ ಇದ್ದದಲ್ಲ
ರಾಜ ಮಹಿಭೂತರಾಜ ಮಾರು ಮರಾಠಿಯವನು
ರಾಜನ ಹೆಂಡತಿ ಯಾರು ಇದ್ದಳಲ್ಲ
ಸೂರ್ಯವತಿ ಎನ್ನ ಇದ್ದಳಲ್ಲ
ರಾಜನ ಹೊಟ್ಟೆಯೊಳಗೆ ಒಬ್ಬಳೆ ಮಗಳು
ಮಲ್ಲಿಗೆ ಹೂವ್ವ ತೋಟದಾಗ ಹುಟ್ಟಿದಾಕಿ
ಐದು ನಾಗ ಮಲ್ಲಿಗೆ ತೂಕ ಪದ್ಮರಾಣಿ

ತೆಲುಗು (ಅನುವಾದ): ಅಕ್ಕಡಿ ಯಾವುದು ಪಟ್ಟಣಂದರೆ

ಬಾಲಟೇಬುಲ ಪಟ್ನ

ಮಾರು ಮರಾಠಿಯುವ ಮಹಿಭೂತರಾಜ

ರಾಜನ ಹೆಂಡತಿ ಸೂರ್ಯವತಿ

ರಾಜನ ಹೊಟ್ಟ್ಯಾಗ ಒಬ್ಬಳೇ ಮಗಳು

ಗಂಗಮ್ಮ ವರದಿಂದ ಹುಟ್ಟ್ಯಾಳ

ಮಲ್ಲಿಗೆ ಹೂವಿನ ತೋಟದಲ್ಲಿ ಹುಟ್ಟಿದ್ದಾಳ

ಐದು ನಾಗಮಲ್ಲಿಗೆ ಹೂವಿನ ತೂಕದವಳು

ಮರಾಠೋರು ಏಳು ಮಂದಿ ಅಣ್ಣತಮ್ಮರು

ಆರು ಮಂದಿ ಹೊಟ್ಟೆಯಲ್ಲಿ ಮಕ್ಕಳಿಲ್ಲ

ದೊಡ್ಡವ ಮಹಿಭೂತರಾಜನ ಹೊಟ್ಟ್ಯಾಗ ಒಬ್ಬಳೇ ಮಗಳು[೧]

ಈ ಸನ್ನಿವೇಶ ಕನ್ನಡ ತೆಲುಗು ಎರಡು ಪಠ್ಯಗಳಲ್ಲಿ ಭಾಷಾಂತರವಾಗಿ ಬಂದಿದೆ. ಇಲ್ಲಿ ಕನ್ನಡಕ್ಕಿಂತ ತೆಲುಗು ಪಠ್ಯದಲ್ಲಿ ಸ್ವಲ್ಪ ವಿಸ್ತಾರವಾಗಿ ನಿರೂಪಿತವಾಗಿದೆ. ಕನ್ನಡ ಪಠ್ಯದಲ್ಲಿ ಪದ್ಮರಾಣಿ ಮಲ್ಲಿಗೆ ಹೂವಿನ ತೋಟದಲ್ಲಿ ಐದು ನಾಗಮಲ್ಲಿಗೆ ತೂಕದವಳು ಎಂದು ಚಿತ್ರಿಸಿದ್ದಾರೆ. ತೆಲುಗಿನಲ್ಲಿ ಗಂಗದೇವಿ ವರದಿಂದ ಪದ್ಮರಾಣಿ ಹುಟ್ಟಿದ್ದಾಳೆಂದು ಚಿತ್ರಿಸಿದ್ದಾರೆ. ಇನ್ನೂ ವಿಸ್ತಾರವಾಗಿ ಮರಾಠಿ ರಾಜರು ಏಳು ಮಂದಿ ಅಣ್ಣ ತಮ್ಮಂದಿರೆಂದು ಆರು ಜನರ ಹೊಟ್ಟೆಯಲ್ಲಿ ಮಕ್ಕಳಿಲ್ಲ. ದೊಡ್ಡವ ಮಹಿಭೂತರಾಜನ ಹೊಟ್ಟೆಯಲ್ಲಿ ಒಬ್ಬಳೇ ಮಗಳೆಂದು ಅಭಿವ್ಯಕ್ತಿಸಿದ್ದಾರೆ. ಮುಂದೆ ಪದ್ಮರಾಣಿಯ ವರ್ಣನೆಯು ಎರಡು ಪಠ್ಯಗಳಲ್ಲಿ ಸೊಗಸಾಗಿ ವಿಸ್ತಾರವಾಗಿದೆ.

ಬಾಲಗಿರಿರಾಜಕತೆಯಲ್ಲಿ ಕುರುಡಿ ಪೋಲವ್ವ ಪಾತ್ರ ಹಾಸ್ಯವಾಗಿ ಬಂದಿದೆ. ಪೋಲವ್ವ ಯಮನಂದಗಿರಿ ಪಟ್ಟಣದ ಕುಂಬಾರ ಗಂಡಯ್ಯನ ಹೆಂಡತಿ. ಏಳು ಜನ ಮಕ್ಕಳು ಸೊಸೆಯರು ಇದ್ದರೂ ಕೂಡ ಅವಳಿಗೆ ಗಂಜಿ ಹಾಕದೇ ಇದ್ದರಿಂದ ಊರು ಹೊರಗೆ ಮಗಿಗಳನ್ನು ತಯಾರು ಮಾಡಿ ಜೀವನ ಸಾಗಿಸುತ್ತಾರೆ. ಆದರೆ ಪದ್ಮರಾಣಿ ಬಾವಿಗೆ ನೀರು ತರಲು ಹೋದಾಗ ಬಟ್ಟೆ ಒಗೆಯಲು ಅದೇ ಬಾವಿಗೆ ಬಂದಾಗ ಪದ್ಮರಾಣಿಯ ವಿಷಯವೆಲ್ಲಾ ಅವಳ ಬಾಯಿಂದಲೇ ತಿಳಿದುಕೊಂಡು ಬಾಲಗಿರಿರಾಜನ ತಾಯಿ ಎಂದು ಸುಳ್ಳು ಹೇಳಿ, ಅವಳನ್ನು ಬಾವಿಗೆ ತಳ್ಳಿ, ಪದ್ಮರಾಣಿ ವೇಷ ತೊಟ್ಟು ತಾನೇ ಪದ್ಮರಾಣಿ ಎಂದು ಬಾಲಗಿರಿರಾಜನಿಗೆ ಹೇಳುತ್ತಾಳೆ. ಈ ಪಾತ್ರವು ಕನ್ನಡ-ತೆಲುಗು ಎರಡು ಪಠ್ಯದಲ್ಲಿ ನಿರೂಪಣೆಗೊಂಡಿದೆ.

ಕನ್ನಡ: ಪೋಲವ್ವ ನೋಡಿ ಏನಂತಳ

ಯಮನಂದಗಿರಿರಾಜ ನನ್ನ ಗಂಡ

ಬಾಲಗಿರಿರಾಜ ನನ್ನ ಮಗ

ನನ್ನ ಹೆಸರು ಕೃಷ್ಣನೀಲವೇಣಿ

ನನ್ನ ಸೊಸಿ ಇದ್ಯಮ್ಮ ಪದ್ಮರಾಣಿ

ಅತ್ತೆ ನಿನ್ನ ಮಗ ನೋಡಿದರೆ ಏಟು ಚಂದಾನ

ನೀಮು ನೋಡಿದರೆ ಎಂಗಿದ್ದಿ

ತೆಲುಗು (ಅನುವಾದ): ಪೋಲಮ್ಮ ಇದಿಷ್ಟು ಕೇಳಿಕೊಂಡು

ನನ್ನ ಮಗ ಬಾಲಗಿರಿರಾಜ

ನನ್ನ ಸೊಸೆ ನೀನು ಪದ್ಮರಾಣಿ

ಅತ್ತೆ ನಿನ್ನ ಮಗ ನೋಡಿದರೆ ಹ್ಯಾಂಗ ಆನ

ನೀನು ಹೋಡಿದರೆ ಹೀಂಗ ಇದ್ದಿದಲ್ಲ[೧೩]

ಪದ್ಮರಾಣಿಯ ಚರಿತ್ರೆಯನ್ನು ತಿಳಿದುಕೊಂಡ ಪೋಲವಳು ಬಾಲಗಿರಿರಾಜ ನನ್ನ ಮಗ ಎಂದು ಹೇಳುತ್ತಾಳೆ. ಕನ್ನಡದ ಪಠ್ಯದಲ್ಲಿ ಗಂಡನ ಹೆಸರನ್ನು ಸಹ ಹೇಳುತ್ತಾಳೆ. ಆದರೆ ಉಳಿದ ಎರಡು ಪಠ್ಯಗಳ ಸಾಲುಗಳನ್ನು ನೋಡಿದಾಗ ಭಾಷಾಂತರವಾಗಿ ಅಭಿವ್ಯಕ್ತಗೊಂಡಿದ್ದನ್ನು ಕಾಣಬಹುದು.

ಕುರುಡಿ ಪೋಲವ್ವ ತಾನೇ ರಾಣಿಯಾಗಿ ಮೆರೆಯುತ್ತಾಳೆ. ಬಾಲಗಿರಿರಾಜಕುಮಾರನನ್ನೇ ಅಂಜಿಸಿ ತನ್ನ ಬಯಕೆಗಳನ್ನು ಪೂರೈಸಿಕೊಳ್ಳುತ್ತಾಳೆ. ಅವಳೇ ಇಲ್ಲಿ ಪದ್ಮರಾಣಿಯಾಗಿ ಮಿಂಚುತ್ತಾಳೆ. ಕೊನೆಗೆ ಪದ್ಮರಾಣಿ ಮತ್ತೆ ಬದುಕಿ ಬಂದಾಗ ಅವಳ ಬಣ್ಣ ಬಯಲಾಗಿ ರಾಜ ಯಮುನಂದಗಿರಿರಾಜ ಅವಳಿಗೆ ಶಿಕ್ಷೆ ಕೊಡುತ್ತಾನೆ. ಎರಡೂ ಪಠ್ಯಗಳಲ್ಲಿ ಸಾಮ್ಯ ಇರುವುದನ್ನು ಕಾಣಬಹುದು.

ಹಾಗೆಯೇ ಜೀರ್ಲಲಚಮಣ್ಣ ಮತ್ತು ಜೀರ್ಲಈರಮ್ಮ ಪಾತ್ರಗಳು ಸಹ ಮುಖ್ಯ ಪಾತ್ರಗಳಾಗಿ ಕನ್ನಡ-ತೆಲುಗು ಎರಡು ಪಠ್ಯಗಳಲ್ಲಿ ಚಿತ್ರಿತಗೊಂಡಿವೆ. ಪದ್ಮರಾಣಿಯನ್ನು ಜೀರ್ಲಲಚಮಣ್ಣನ ಬಾವಿಯಲ್ಲಿ ಪೋಲವ್ವ ದಬ್ಬಿ ಹೋದಾಗ ಅದರೊಳಗೆ ದೇವರ ಕಮಲದ ಹೂವಾಗಿ ಇರುತ್ತಾಳೆ. ಲಚಮಣ್ಣ ತೋಟಕ್ಕೆ ನೀರನ್ನು ಮೋಟೆ ಹೊಡೆಯುವಾಗ ನೀರಿನಲ್ಲಿ ಹೊರಗೆ ಬಂದು ಅಣ್ಣ ತಂಗಿಯಾಗಿ ಅನ್ಯೋನ್ಯವಾಗಿ ತೋಟದಲ್ಲೆ ವಾಸಿಸುತ್ತಾರೆ. ಇಲ್ಲಿ ಪದ್ಮರಾಣಿಯ ಪೋಷಕರಾಗಿ ಲಚಮಣ್ಣ, ಈರಮ್ಮ ಕಾಣಿಸುತ್ತಾರೆ.

ಕನ್ನಡ: ಬಾವಿಯೊಳಗೆ ಬಿದ್ದಂತ ಪದ್ಮರಾಣಿ

ದ್ಯಾವರ ಕಮಲ ಹೂವಾಗಿ

ಬಾವ್ಯಾಗ ತಿರುಗುಲಕತ್ತ್ಯಳ

ಎಂಟು ದಿನ ಹೋತ್ತಾಯ್ತು

ಜೀರ್ಲಲಚಮಣ್ಣ

ಬಾವಿ ತೋಟಕ ನೀರು ತಿರುವುಬೇಕಂತ

ಬೆಳಗ ಮುಂಜಾಲಿ ಎರಡು ಎತ್ತು ಕಟ್ಟಿ

ಬಾವಿಯೊಳಗೆ ಮೋಟೆ ಬಿಟ್ಟು

ನೀರು ಹೊಡಿಲ ಕತ್ತಿದ

ಹೂವ್ವ ತಿರುಗಾಡಿಕಂತ ತಿರುಗಾಡಿಕಂತ

ಆ ಮೋಟೆಯೊಳಗ ಬಂದು ಬಿತ್ತು

ಜೀರ್ಲಲಚಮಣ್ಣ ಹೊರಗೆ ತೆಗೆದ

ನೀರು ಕಾಲುವೆಯೊಳಗೆ ಬಂದು ತಾಯಿ ಬಿದ್ದಳು

ತೆಲುಗು (ಅನುವಾದ): ಬಾವಿಯಲ್ಲಿ ಬಿದ್ದ ಉದ್ಮರಾಣಿ

ದೇವರ ಕಮಲ ಹೂವಾಗಿ ಬಾವಿ ತುಂಬ ತಿರುಗುತ್ತಿದ್ದಳಲ್ಲ

ಹೂಗಾರ ಲಚಮಣ್ಣ

ತೋಟಕೆ ನೀರು ಬಿಡಬೇಕೆಂದು

ಬೆಳಗ ಮುಂಜಾನೆ ನೀರು ಮೋಟೆ ಹೊಡೆಯುತ್ತಿದ್ದ

ಮೋಟ್ಯಾಗ ತಾಯಿ ಹೂವಾಗಿ ಬಿದ್ದಳಲ್ಲ

ತಾಯಿನ ಹೂವಾಗಿ ತೆಗೆದರಲ್ಲ

ನೀರಿನ ಕಾಲುವ್ಯಾಗ ಹೂವಾಗಿ ಬಿದ್ದಳಲ್ಲ

ಹೂವು ಮಾಯವಾಗಿ ಪದ್ಮರಾಣಿಯಾಗಿ ಹುಟ್ಟಳಲ್ಲ[೧೪]

ಜೀರ್ಲಲಚಮಣ್ಣನ ಬಾವಿಯಲ್ಲಿ ಬಿದ್ದಿದ್ದ ಪದ್ಮರಾಣಿ ದೇವರ ಕಮಲವಾಗಿ ಪರಿವರ್ತನೆ ಹೊಂದಿದ್ದಳು. ತೋಟಕ್ಕೆ ನೀರನ್ನು ಮೋಟೆ ಹೊಡೆಯುವಾಗ ನೀರಿನಲ್ಲಿ ಹೊರಗೆ ಬಿದ್ದು ಪದ್ಮರಾಣಿಯಾಗಿ ಹುಟ್ಟುತ್ತಾಳೆ. ಅವಳನ್ನು ತಂಗಿಯಾಗಿ ಸ್ವೀಕರಿಸಿದ ಲಚಮಣ್ಣ ಅವಳನ್ನು ಪೋಷಣೆ ಮಾಡುತ್ತಾಳೆ. ಇಲ್ಲಿಯೂ ಸಹ ಎರಡು ಪಠ್ಯಗಳು ಒಂದು ಇನ್ನೊಂದರ ಭಾಷಾಂತರದಂತಿದೆ. ಜೀರ್ಲಲಚಮಣ್ಣನ ಹೆಂಡತಿ ಈರಮ್ಮಳು ಹೂವನ್ನು ಕಟ್ಟಿ ಮಾರುತ್ತಾಳೆ. ಪದ್ಮರಾಣಿ ಇವಳಿಗೆ ಎಲ್ಲಾ ತರಹದ ಕೆಲಸದಲ್ಲಿ ಸಹಾಯ ಮಾಡುತ್ತಿರುತ್ತಾಳೆ. ಪದ್ಮರಾಣಿ ಬಂದ ಮೇಲೆ ಗಿಡದ ತುಂಬ ಹೂ ಅರಳುತ್ತವೆ. ಅವಳು ಬರುವುದಕ್ಕಿಂತ ಮೊದಲು ಗಿಡಕ್ಕೆ ಒಂದೆರಡು ಹೂ ಮಾತ್ರ ಅರಳುತ್ತಿರುತ್ತವೆ. ಹೀಗಾಗಿ ಪದ್ಮರಾಣಿಯನ್ನು ಮುದ್ದಿನಿಂದ ಪೋಷಿಸುತ್ತಾರೆ.

## ಸ್ತ್ರೀ ಚಿಂತನೆಗಳು

ಸ್ತ್ರೀಗೆ ಹೆಚ್ಚಿನ ಪ್ರಾತಿನಿಧ್ಯ ಕೊಟ್ಟಿರುವದನ್ನು ಪ್ರಾಚೀನ ಸಂಸ್ಕೃತ ಕವಿಗಳಲ್ಲಿ ಕಾಣಬಹುದು. ಆ

ಕವಿಗಳು ಪುರುಷ ಪಾತ್ರಗಳಿಗಿಂತ ಸ್ತ್ರೀ ಪಾತ್ರಗಳನ್ನು ಮನಮೋಹಕವಾಗಿ ಚಿತ್ರಿಸಿದ್ದನ್ನು ಕಾಣುತ್ತೇವೆ. ಮುಖ್ಯವಾಗಿ ವಾಲ್ಮೀಕಿ, ವ್ಯಾಸ, ಭಾಸ, ಕಾಳಿದಾಸ ಮುಂತಾದವರು ಸ್ತ್ರೀಯರನ್ನು ಗೌರವಿಸಿ ಅವರ ಶ್ರೇಯೋಭಿವೃದ್ಧಿಗೆ ಶ್ರಮಿಸಿ ಸ್ತ್ರೀಯನ್ನು ಉನ್ನತ ಸ್ಥಾನದಲ್ಲಿ ನಿಲ್ಲುವಂತೆ ಮಾಡಿದ್ದಾರೆ. ಹಾಗೆಯೇ ಜನಪದ ಕವಿಗಳಲ್ಲಿ ಅಂತಹ ಮನೋಭಾವನೆ ಕಾಣಬಹುದು. ಬುಡ್ಗಜಂಗಮರು ಹಾಡಿದ ಬಾಲಗಿರಿರಾಜ ಕತೆಯಲ್ಲಿ ಸ್ತ್ರೀ ಚಿಂತನೆಗಳು ಅಭಿವ್ಯಕ್ತಗೊಂಡಿದ್ದು ಕಾಣುತ್ತೇವೆ. ಪದ್ಮರಾಣಿ ಪಾತ್ರದ ಮೂಲಕ ಆ ಚಿಂತನೆಗಳು ಲಭಿಸಿವೆ. ಬಾಲಗಿರಿರಾಜಕತೆಯಲ್ಲಿ ಪದ್ಮರಾಣಿಯ ಪಾತ್ರವು ಕಥನದ ಮುಖ್ಯ ಪಾತ್ರವಾಗಿ ಚಿತ್ರಿತವಾಗಿದೆ. ಪದ್ಮರಾಣಿಯ ಪಾತ್ರದಲ್ಲಿ ಸ್ತ್ರೀಯ ಪ್ರತಿಭಟನೆ ಮನೋಭಾವ ಚಿತ್ರಿತವಾಗಿದ್ದು ಆ ನೆಲೆಯಲ್ಲಿ ಸ್ತ್ರೀಯರು ಚಿಂತನೆಯಲ್ಲಿ ತೊಡಗಲು ಅನುಕೂಲಿಸಿದೆ. ಸ್ತ್ರೀಯ ಚಿಂತನೆಗಳಾದ ಪತಿಧರ್ಮ, ಭಕ್ತಿ, ಪರಂಪರೆ, ಸಂಪ್ರದಾಯ ಮುಂತಾದ ಅಂಶಗಳು ಎದ್ದು ಕಾಣುತ್ತವೆ. ಈ ಚಿಂತಔಪಗಳು ಕನ್ನಡ-ತೆಲುಗು ಎರಡೂ ಭಾಷೆಯ ಪಠ್ಯಗಳಲ್ಲಿ ಇದೆ. ಪ್ರತಿಕೂಲ ಪರಿಸ್ಥಿತಿಯಲ್ಲಿ ಎದೆಗುಂದದೆ ದೃಢಸಂಕಲ್ಪದಿಂದ ತಾನು ಕೈಗೊಂಡಿದ್ದನ್ನು ಸಾಧನೆ ಮಾಡಬೇಕೆಂಬ ಛಲ ಆದರ್ಶಗುಣಗಳು ಪದ್ಮರಾಣಿಯ ಪಾತ್ರದಲ್ಲಿ ಹಾಸುಹೊಕ್ಕಿವೆ. ಇಲ್ಲಿ ಪದ್ಮರಾಣಿ ಪಾತ್ರದಲ್ಲಿ ಸ್ತ್ರೀ ಶಕ್ತಿ ಇದ್ದು ಸಾಮಾಜಿಕ ಕಳಕಳಿ ವ್ಯಕ್ತವಾಗಿದೆ. ಹಾಗೆಯೇ ಸ್ತ್ರೀಯು ಪುರುಷನ ಹಿಡಿತದಿಂದ ಹೊರಬಂದು ಸ್ವತಂತ್ರ ವಿಚಾರಗಳನ್ನು ಮಾಡಿ, ತಾನು ಕೈಗೊಂಡ ಕಾರ್ಯವನ್ನು ಸಾಧಿಸುವುದನ್ನು ಕಾಣುತ್ತೇವೆ. ಸ್ತ್ರೀಯ ಬಗ್ಗೆ ಕಳಕಳಿಯನ್ನು ಕೀರ್ತನಕಾರರಲ್ಲಿ, ವಾಚನಕಾರರಲ್ಲಿ ಹಾಗೂ ತತ್ವಪದಕಾರರಲ್ಲೂ ಕಾಣುತ್ತೇವೆ. ಮುಖ್ಯವಾಗಿ ಜನಪದ ಕಥನಗಾರರು ಸ್ತ್ರೀಗೆ ಪುರುಷನಷ್ಟೇ ಸಮಾನತೆಯನ್ನು ಅಭಿವ್ಯಕ್ತಿಸಿದ್ದಾರೆ. ಪದ್ಮರಾಣಿ ಪಾತ್ರದಲ್ಲಿ ಸಾಮಾಜಿಕ ಸಮಾನತೆ, ಸಹಬಾಳ್ವೆ, ಸ್ತ್ರೀತ್ವ, ವೈಚಾರಿಕತೆಯನ್ನು ಕಾಣಬಹುದು.

ಪದ್ಮರಾಣಿ ತನ್ನ ರಕ್ಷಣೆಯ ಶಸ್ತ್ರಾಗಾರದಲ್ಲಿ ಬಿದ್ದು ಸತ್ತ ಬಾಲಗಿರಿರಾಜನ ದೇಹದ ಭಾಗಗಳನ್ನು ಬುಟ್ಟಿಯಲ್ಲಿ ಹಾಕಿಕೊಂಡು, ತನಗಾಗಿ ಬಂದವನು ತನಗಾಗಿ ಸತ್ತವನು ತನ್ನ ಗಂಡನೆಂದು ಬಗೆದು ತಂದೆಯ ಹತ್ತಿರ ಹೋಗಿ ಸತ್ತ ಗಂಡನಿಗೆ ಮದುವೆ ಮಾಡಲು ಕೇಳಿಕೊಳ್ಳುತ್ತಾಳೆ. ತಂದೆ ಮಹಿಭೂತರಾಜ ನಿರಾಕರಿಸಿದಾಗ, ತಂದೆಯ ವಿರುದ್ಧ ಪ್ರತಿಭಟಿಸಿ ಗಂಡನ ದೇಹದ ತುಂಡುಗಳನ್ನು ಬುಟ್ಟಿಯಲ್ಲಿ ಹಾಕಿಕೊಂಡು ಗಂಡನ ದೇಶವನ್ನು ಹುಡುಕುತ್ತ ಹೊರಡುವಳು. ತಲೆ ಮೇಲೆ ಹೊತ್ತುಕೊಂಡ ಪತಿಯ ದೇಹ ಬುಟ್ಟಿ ಒಳಗಿನಿಂದ ಸೋರುತ್ತದೆ. ಸೋರುವ ದೇಹದ ರಸವನ್ನು ತನ್ನ ತಲೆಯ ಕೂದಲಿಗೆ ಒರೆಸಿಕೊಳ್ಳುವಳು. ಇಲ್ಲಿ ಗಂಡ ಹೆಂಡತಿಯ ಪವಿತ್ರ ಪ್ರೇಮ ವ್ಯಕ್ತವಾಗಿದೆ.

ಕನ್ನಡಃ ಬ್ಯಾಸಿಗಿ ದಿನ ಕಂಡ ಕತ ಕತ ಕುದ್ದು
ಹುಳಿನೀರು ಸೋರುಲಕತ್ತ್ಯದ
ನೀರು ಸೋರಿದರೆ ತಾಯಿ ಪದ್ಮರಾಣಿ

ನನ್ನ ಗಂಡನ ಮಧುಮಾಂಸ ಕೆಳಗೆ ಬಿದ್ದರೆ

ಆರು ತಿಂಗಳ ಆವಿಷ್ಟೆ ಕಡಿಮೆ ಆಗ್ತದ

ಏಳು ಗಜ ಕೂದಲು ಬಿಚ್ಚು ಕೂದಲ್ಗಿ ಹಾಕಿ ಒರಸಿಕಂಡಳ

ಮಲ್ಲಿಗೆ ಹೂವಿನ ನಾತ ಬರ್ತದ

ತೆಲುಗು (ಅನುವಾದ): ಬಿಸಿಲಿಗಿ ಮಾಂಸ ಕತಕತ ಕುದಿದ್ದಿತ್ತಲ್ಲ

ಹುಳಿನೀರಾಗಿ ಸೋರುತದಲ್ಲ

ಪದ್ಮರಾಣಿ ನೋಡಿ ನನ್ನ ಗಂಡನ ಮಧುಮಾಂಸ ಕೆಳಗೆ ಬಿಟ್ಟರೆ

ಆರು ತಿಂಗಳ ಆವಿಷ್ಟ ಕಡಿಮೆ ಆಗ್ತದ

ಆ ತಾಯಿಯ ಏಳು ಗಜದ ಕೂದಲ ಬಿಟ್ಟಳಲ್ಲ

ನನ್ನ ಕೂದಲಿಗೆ ಎಣ್ಣೆ ಆಗ್ತದಲ್ಲ

ಕೂದಲಿಗಿ ತಾಯಿ ಹಚ್ಚಿಕೊಳ್ಳುತಳಲ್ಲ

ಎಂತಹ ಸಿಹಿ ವಾಸನೆ ಹೊರಡುತದಲ್ಲ

ಅತ್ತರೆಣ್ಣೆ ವಾಸನೆ, ಮಲ್ಲಿಗೆ ಹೂವ್ವಿನ ವಾಸನೆ”

ಇಲ್ಲಿ ಎರಡು ಪಠ್ಯಗಳನ್ನು ನೋಡಿದಾಗ ಪದ್ಮರಾಣಿಯು ಪತಿ ಮೇಲೆ ಇಟ್ಟ ಪ್ರೀತಿ ವ್ಯಕ್ತವಾಗಿದೆ. ಗಂಡನೇ ದೇವರೆಂದು ನಂಬಬೇಕೆಂಬುದು ಇಲ್ಲಿಯ ಸನ್ನಿವೇಶದ ಆಶಯ. ಗಂಡನೇ ಹೆಣ್ಣಿಗೆ ಮುಕ್ತಿದಾಯಕ. ಅವನು ಹೇಗೇ ಇರಲಿ ಮನಸ್ಸನ್ನು ಅರ್ಪಿಸಿದರೆ ಸಾಕು ಅವನೇ ಗಂಡ, ಉಳಿದವರು ಸಹೋದರರಿಗೆ ಸಮಾನ ಎಂಬ ಭಾವನೆ ಇಲ್ಲಿ ವ್ಯಕ್ತವಾಗಿದೆ. ಗಂಡನ ದೇಹವು ಬಿಸಿಲಿಗೆ ಸೋರಿದರೂ ಅದು ಅವಳಿಗೆ ಸುವಾಸನೆಯಾಗಿ ಕಾಣುತ್ತದೆ. ಮುಖ್ಯವಾಗಿ ಸ್ತ್ರೀಯ ಪತಿಧರ್ಮ ಇಲ್ಲಿ ಅಭಿವ್ಯಕ್ತಗೊಂಡಿದ್ದನ್ನು ಕಾಣಬಹುದು. ತೆಲುಗಿನ ಆರು ಮತ್ತು ಎಂಟನೇ ಸಾಲು ಕನ್ನಡಕ್ಕಿಂತ ನನ್ನ ಕೂದಲಿಗೆ ಎಣ್ಣೆ ಇಲ್ಲೆಂದು ಎಂತಹ ಸುವಾಸನೆಭರಿತ ವಾಸನೆ ಎಂದು ತನ್ನ ಗಂಡನಿಂದ ಸೋರುತ್ತಿದ್ದ ರಸವನ್ನು ಕುರಿತು ಹೇಳುತ್ತಾಳೆ. ಈ ಸಾಲು ಮಾತ್ರ ಭಿನ್ನವಾಗಿದೆ. ಉಳಿದ ಸಾಲುಗಳು ಭಾಷಾಂತರ ಎಂಬಂತೆ ಬಂದಿವೆ.

ಕುರುಡಿ ಪೋಲವ್ವಳ ಕುತಂತ್ರದಿಂದ ಜೀರ್ಣ ಲಚಮಣ್ಣ ತೋಟದಲ್ಲಿ ಇದ್ದ ಪದ್ಮರಾಣಿಯನ್ನು ದೆವ್ವ ಇದೆ ಎಂದು ಬಾಲಗಿರಿರಾಜನಿಗೆ ತಿಳಿಸಿ ಕಟುಕರಿಂದ ಕಡಿದು ಬರಲು ಸೂಚಿಸುತ್ತಾಳೆ. ಬಾಲಗಿರಿರಾಜನ ಪದ್ಮರಾಣಿ ವೇಷದ ಪೋಲವ್ವ ಮಾತನ್ನ ಕೇಳಿ ನಂಬಿ ಕಟುಕರನ್ನು ಕಳಿಸುತ್ತಾನೆ. ಆಗ ಕಟುಕರು ಪದ್ಮರಾಣಿಯನ್ನು ಹೊತ್ತುಕೊಂಡು ಬಂದು ಕಡಿಯುವಾಗ ಗಂಡ ಬಾಲಗಿರಿರಾಜನನ್ನು ನೆನೆಯುವುದನ್ನು ಕಾಣುತ್ತೇವೆ. ಕನ್ನಡ-ತೆಲುಗು ಎರಡು ಪಠ್ಯಗಳಲ್ಲಿ ಈ ಸನ್ನಿವೇಶದ ಸಾಮ್ಯವನ್ನು ಕಾಣಬಹುದು.

ಕನ್ನಡ: ಹೊತ್ತುಕೊಂಡು ಧನದ ಕಟುಕರು ಬಂಡಿಗಿ ಬಂದ್ರು

ತಾಯಿನ ಕೆಳಗೆ ಇಳಿಸಿ ಗಂಟು ಬಿಚ್ಚಿದರು

ಗಂಟು ಬಿಚ್ಚಿ ಕೊಡ್ಡಿನ ಮ್ಯಾಲೆ ತಲೆ ಇಟ್ಟರು

ನೆನೆಸಮ್ಮ ನಿನ್ನ ತಾಯಿ ತಂದೀನ

ನೆನೆಸಮ್ಮ ಮನೆದೇವ್ರುನ

ತಾಯಿನ ನೆನ್ಸಲಿಲ್ಲ ದೇವ್ರುನ ನೆನ್ಸಲಿಲ್ಲ

ನಿನಗೇನ ಪಾಪ ಮಾಡಿದಿ ಸಣ್ಣ ಬಾಲಗಿರಿರಾಜ

ದನದ ಕಟುಕರ ಕೈಗಿ ನನ್ನ ಕೊಟ್ಟೆ

ನಿನ್ನ ಮೋಹ ನನಗ ಹೋಗಲಿಲ್ಲ

ನನ್ನ ಮೋಹ ನಿನಗ ಹೋಗಲಿಲ್ಲ

ಅದ್ದುಮುದ್ದು ಅಡವಿ ಪಾಲಾಯ್ತು

ತೆಲುಗು (ಅನುವಾದ): ಕಟುಗರು ಹೊತ್ತುಕೊಂಡು ಬಂದರಲ್ಲ

ದನ ಕಡಿಯುವ ಬಂಡೆ ಮೇಲೆ ತಾಯಿನ ಮಲಗಿಸಿದರಲ್ಲ

ನೆನೆಯಮ್ಮ ನಿನ್ನ ತಾತ ದೊಡ್ಡವರನ್ನ ನೆನೆಯಮ್ಮ

ನಿನ್ನ ಮನೆ ದೇವರನ್ನ ನೆನೆ ತಾಯಿ

ದೇವರನ್ನು ನೆನೆಯಲಿಲ್ಲ

ಸಣ್ಣ ಬಾಲಗಿರಿರಾಜ

ನನ್ನ ಮೋಚಾರ ನಿನಗ ಹೋಗಲಿಲ್ಲ

ನಿನ್ನ ಮೋಚಾರ ನನಗೆ ಹೋಗಲಿಲ್ಲ

ಅದ್ದುಮುದ್ದು ಅಡವಿ ಪಾಲಾಯ್ತಲ್ಲ[೧೬]

ಇಲ್ಲಿ ಎರಡು ಪಠ್ಯಗಳನ್ನು ಪರಿಶೀಲಿಸಿದಾಗ ತೆಲುಗು ಪಠ್ಯಕ್ಕಿಂತ ಕನ್ನಡದ ಪಠ್ಯವು ವಿಸ್ತಾರವಾಗಿದೆ. 'ಗಂಟು ಬಿಚ್ಚಿ ಕೊಡ್ಡಿನ ಮ್ಯಾಲೆ ಇಟ್ಟರು' ದನದ ಕಟುಕರ ಕೈಗೆ ನನ್ನ ಕೊಟ್ಟೆ ಈ ಸಾಲುಗಳು ಮೂರನೇ ಸಾಲು ಎಂಟನೇ ಸಾಲು ಹೆಚ್ಚಿಗೆ ಇದೆ. ಉಳಿದ ತೆಲುಗಿನ ಪಠ್ಯದ ಸಾಲುಗಳು ಭಾಷಾಂತರವಾಗಿ ಮೂಡಿಬಂದಿವೆ. ಕಥನದುದ್ದಕ್ಕೂ ಸಿರಿದೇವಿಯ ಪಾತ್ರದಲ್ಲಿ ಕನ್ನಡ-ತೆಲುಗು ಎರಡೂ ಭಾಷೆಗಳು ಕಥನದಲ್ಲಿ ಸ್ತ್ರೀಯ ವಾಸ್ತವ ಬದುಕು, ಸ್ತ್ರೀಯ ಸಂಪ್ರದಾಯ, ಭಕ್ತಿ ಪಾತಿವ್ರತ್ಯ ಮುಂತಾದ ಅಂಶಗಳು ವ್ಯಕ್ತವಾಗಿದ್ದು ಕಥನವನ್ನು ಕೇಳುಗರಿಗೆ ಸ್ತ್ರೀಯ ಆದರ್ಶ ಗುಣಗಳನ್ನು ಮನವರಿಕೆ ಮಾಡಿದಂತಾಗಿದೆ.

## ಸಾಮಾಜಿಕ ಮೌಲ್ಯ

ಬಾಲಗಿರಿರಾಜಕತೆಯ ಕನ್ನಡ-ತೆಲುಗು ಎರಡು ಆವೃತ್ತಿಗಳಲ್ಲಿ ಸಾಮಾಜಿಕ ಮೌಲ್ಯಯುತವಾದ ನಿರೂಪಣೆ ಇದೆ. ಅದರ ಮೂಲಕ ಕಷ್ಟ, ನೋವು ನಲಿವುಗಳ ಸಂದರ್ಭದಲ್ಲಿ ಬದುಕನ್ನು ಅರ್ಥಪೂರ್ಣವಾಗಿ ಸುಂದರಮಯವಾಗಿ ಹೇಗೆ ಕೊಂಡೊಯ್ಯಬೇಕೆಂಬುದರ ಸಂದೇಶವನ್ನು ಕಥನಗಾರರು ಈ ಕತೆಗಳಲ್ಲಿ ನಿರೂಪಿಸಿದ್ದಾರೆ. ವಕ್ತೃವು ಸಾಮಾಜಿಕ ಮೌಲ್ಯವನ್ನು ತನ್ನ ಕಾಲದ ಬದುಕಿನ ವಿವರಗಳನ್ನು ಹೇಗೆ ಕಾಣುತ್ತಾರೋ ಹಾಗೆಯೇ ವಾಸ್ತವವನ್ನು ಕಥನಕ್ಕೆ ಕಟ್ಟಿಕೊಡಲು ಬಯಸುತ್ತಾರೆ. ಆ ನೆಲೆಯಲ್ಲಿ ಈ ಕನ್ನಡ-ತೆಲುಗು ಕಥನಗಳು ಅಭಿವ್ಯಕ್ತಗೊಂಡಿವೆ. ಹಾಗೆಯೇ ಕಥನಗಾರರು ತನ್ನ ಪರಿಸರಕ್ಕೆ ಅನುಗುಣವಾಗಿ ತನ್ನ ಪ್ರಜ್ಞೆ, ಅನುಭವ, ಅರಿವು ಆದರ್ಶಗಳ ಮೂಲಕ ಸಾಮಾಜಿಕ ಜೀವನದಲ್ಲಿ ಸಂಭವಿಸುವ ಸೂಕ್ಷ್ಮ ವಿವರಗಳನ್ನು ಭೂತ ವರ್ತಮಾನದೊಂದಿಗೆ ಭವಿಷ್ಯತ್ತಿನ ಕಡೆಗೆ ಹಾದು ತನ್ನ ಕಥನದ ಮೂಲಕ ಅಭಿವ್ಯಕ್ತಪಡಿಸಿರುವುದನ್ನು ಕಾಣಬಹುದು. ಸಮಕಾಲೀನ ಬದುಕಿನ ಗಾಢವಾದ ಅನುಭವ, ಸಾಮಾಜಿಕ ಧರ್ಮಪ್ರಜ್ಞೆ, ಆದರ್ಶಗಳ ಹಂಬಲ ಮುಂತಾದ ಅಂಶಗಳು ಕಥನದಲ್ಲಿ ಹೊಕ್ಕು ಕಥನವು ಮೌಲ್ಯಯುತ ವಾಗಿದೆ.

ವಕ್ತೃಗಳು ಕಥನವನ್ನು ಅಭಿವ್ಯಕ್ತ ಮಾಡುವಾಗ ಕಥನ ಹಾಗೂ ಸಮಾಜ ಸಂಬಂಧ ಕಲ್ಪಿಸಿ ನಿರೂಪಣೆ ಮಾಡಿರುತ್ತಾರೆ. ಆ ಕಥನವು ಸಾಮಾಜಿಕ ಪರಿಸರದಲ್ಲಿ ಘಟಿಸುವ ಒಂದು ಕ್ರಿಯೆಯಾಗಿ ರೂಪುಗೊಳ್ಳುತ್ತದೆ. ಕಥನವನ್ನು ನಿರೂಪಿಸುವಾಗ ಆ ಸಂದರ್ಭದಲ್ಲಿ ವಸ್ತುವಿನ ಆಯ್ಕೆ ಮಾಡಿಕೊಂಡು ಸಮಾಜಕ್ಕೆ, ಅಲ್ಲಿನ ಶ್ರೋತೃಗಳಿಗೆ ಅತ್ಯುತ್ತಮವಾದ ಆಲೋಚನೆಗಳು ಮತ್ತು ಅತ್ಯಂತ ಗಹನವಾದ ಅನುಭವಗಳನ್ನು ತನ್ನ ಸುತ್ತಮುತ್ತಲಿನ ಪರಿಸರದ ಪ್ರಭಾವವನ್ನು ಪಡೆದೇ ಕಥನವನ್ನು ಹೊರಹೊಮ್ಮಿಸುವುದನ್ನು ಕಾಣಬಹುದು. ಅದರಿಂದ ಅವರದೇ ಆದ ಬದುಕು ಹಾಗೂ ಕತೆ ಎಂಬಂತೆ ಅಲ್ಲಿ ಬರುವ ಸಾಮಾಜಿಕ ಮೌಲ್ಯಗಳನ್ನು ಶ್ರೋತೃಗಳು ಸ್ವೀಕರಿಸುತ್ತಾರೆ. ಹೀಗೆ ವಕ್ತೃ ಹಾಗೂ ಶ್ರೋತೃಗಳ ಮಧ್ಯೆ ಅಪೂರ್ವ ಸಾಮಾಜಿಕ ಸಂಬಂಧ ಏರ್ಪಡುವುದನ್ನು ಬಾಲಗಿರಿರಾಜಕತೆಯಲ್ಲಿ ಕಾಣಬಹುದು.

ಬಾಲಗಿರಿರಾಜನು ಎಲ್ಲಾ ಯುದ್ಧಗಳಲ್ಲಿ ಗೆದ್ದಿದ್ದರೂ ಮಗಳನ್ನು ಕೊಡದೆ ಅರಮನೆಯ ಅಡಿಗೆಯ ಮನೆಯಲ್ಲಿ ಮಹಿಭೂತರಾಜನ ಹೆಂಡತಿ ಸೂರ್ಯವತಿ ಅಡಗಿಕೊಳ್ಳುತ್ತಾರೆ. ಆದರೆ ಬಾಲಗಿರಿರಾಜ ಅಡಿಗೆಯ ಮನೆ ಹೊಕ್ಕು ಅತ್ತೆ ಮಾವನನ್ನು ಹೊರಗೆ ಎಳೆದರೆ ಸಮಾಜದ ದೃಷ್ಟಿಯಲ್ಲಿ ಅದು ಕೆಟ್ಟದ್ದೆಂದು ಭಾವಿಸಿ, ಅವರು ಹೊರಗೆ ಬರುವತನಕ ಇಲ್ಲೇ ಕೂಡುತ್ತೇನೆಂದು ಮಹಿಭೂತರಾಜನ ಆಸ್ಥಾನದಲ್ಲಿ ಕುಳಿತುಕೊಳ್ಳುತ್ತಾನೆ. ಈ ಸನ್ನಿವೇಶವು ತೆಲುಗಿನ ಕಥನದಲ್ಲಿ ಮಾತ್ರ ನಿರೂಪಣೆಗೊಂಡಿದೆ.

ತೆಲುಗು (ಅನುವಾದ): ಏಳಂತಸ್ತು ಮಾಳಿಗಿ

ನನಗೇನು ಅಡ್ಡ ಆಗದು

ಎಡಗಾಲಿಂದ ಒದ್ದು ಮನೆಯೆಲ್ಲ ಬೀಳಾಕಿ

ಅತ್ತೆ ಮಾವನ ಎಳೆದುಕೊಂಡು ಬಂದು

ಇಬ್ಬರ ಜೀವತಿಂದು ಮಗಳನ್ನ ತೆಗೆದುಕೊಂಡು ಹೋಗ್ತಿನಿ

ನೋಡಿದ ಜನ ಏನಂತರ

ಊರಿಗೆ ಬಂದು ಹನ್ನೆರಡು ವರ್ಷತನ ಇದ್ದು ಕಷ್ಟ ಪಡೆದು

ಕೊನೆಗೆ ಅತ್ತೆ ಮಾಮ ಜೀವತಿಂದು ಹುಡುಗಿನ ತೊಗಂಡು ಹೋದ

ರಂಡೆ ಮಗ ಎಂದು ಹೇಳ್ತಾರ

ಈ ಮಾತನ್ನು ನಾನು ಅನುಸಿಕೊಳ್ಳುವುದಿಲ್ಲ

ಕೊಡಲಿ ಮಾಮ ಎಷ್ಟು ದಿವಸ ಮನ್ಸಾಗ ಕೊಡ್ತನ

ನಾನು ಕಚೇರಿದಗ ಕೊಡ್ತಿನಿ[೯೭]

ಈ ಸನ್ನಿವೇಶವು ತೆಲುಗಿನ ಕಥನದಲ್ಲಿ ಅಭಿವ್ಯಕ್ತಗೊಂಡಿದೆ. ಆದರೆ ಕನ್ನಡ ಕಥನದಲ್ಲಿ ಅಭಿವ್ಯಕ್ತಗೊಂಡದ್ದರಿಂದ ಶ್ರೋತೃಗಳಿಗೆ ಈ ಸನ್ನಿವೇಶದ ಸಮಾಜದ ಅರಿವಿನ ಕೊರತೆಯುಂಟಾಗಿ ಕಥನದ ಆಶಯಕ್ಕೆ ಧಕ್ಕೆ ಉಂಟಾಗಿದ್ದನ್ನು ಕಾಣಬಹುದು. ಇದು ಜನಪದ ಮೌಖಿಕ ಕಥನವಾಗಿದ್ದರಿಂದ ವಕ್ತೃವು ಈ ಸನ್ನಿವೇಶವನ್ನು ನಿರೂಪಣೆ ಮಾಡುವುದರಲ್ಲಿ ಮರೆವು ಉಂಟಾಗಿರಬಹುದು. ಏಕೆಂದರೆ ಒಬ್ಬರೇ ವಕ್ತೃವಿನಿಂದ ಹಾಡಿಸಿದ ಈ ಕಥನವು ತೆಲುಗಿನಲ್ಲಿದೆ. ಆದರೆ, ಬಾಲಗಿರಿರಾಜನು ಮಾನವೀಯತೆ ಯನ್ನು ಮರೆದು, ತಾನು ಸಮಾಜದ ದೃಷ್ಟಿಯಲ್ಲಿ ಕೆಟ್ಟವನೆಂದು ತೋರಿಸಿಕೊಳ್ಳಬಾರದೆಂದು ಅತ್ತೆ ಮಾವ ಹೊರಗೆ ಬರುವ ತನಕ ಕಾಯ್ದುಕೊಂಡು ಮಹಿಭೂತರಾಜನ ಆಸ್ಥಾನದಲ್ಲಿ ಕುಳಿತುಕೊಂಡು ವಿಚಾರ ಮಾಡುತ್ತಾನೆ. ಬಾಲಗಿರಿರಾಜ ಇಲ್ಲಿ ಸಮಾಜಕ್ಕೆ ತಲೆಬಾಗುತ್ತಾನೆ ಹೊರತು ಅತ್ತೆ ಮಾವನಿಗೆ ಅಲ್ಲ. ಹೀಗಾಗಿ ಆತನಲ್ಲಿ ಇರುವ ಮಾನವೀಯತೆ ಇಲ್ಲಿ ಅಭಿವ್ಯಕ್ತಗೊಂಡಿದೆ.

ಬಾಲಗಿರಿರಾಜನ ಕಷ್ಟವನ್ನು ನೋಡಿದ ಪಟ್ಟಣದ ಹೆಂಗಸರು ಮಾನವೀಯತೆಯನ್ನು ತೋರ್ಪಡಿಸುತ್ತಾರೆ. ಮಹಿಭೂತರಾಜನ ದುಷ್ಟತನವನ್ನು ಖಂಡಿಸಿ ಬಾಲಗಿರಿರಾಜನಿಗೆ ಬುದ್ಧಿಮಾತನ್ನು ಹೇಳುತ್ತಾರೆ. ಇಲ್ಲಿ ಪಟ್ಟಣದ ಹೆಂಗಸರಲ್ಲಿ ಸಾಮಾಜಿಕ ಕಳಕಳಿಯನ್ನು ಕಾಣಬಹುದು.

ಕನ್ನಡಃ ಊರಗ ಹೆಣ್ಣುಮಕ್ಕಳೆಲ್ಲ ನೋಡಿ

ಮಗನೇ ಸಣ್ಣಬಾಲಗಿರಿರಾಜ

ನಿನ್ನ ಉಸುರು ಅವನಿಗೆ ಹತ್ತಲಿ

ನಿನ್ನ ಕಣ್ಣೀರು ಅವನಿಗೆ ಹತ್ತಲಿ

ನೀನು ಮಾಡಿದ ಕಷ್ಟ ನಿನ್ನ ಕೈಗೆ ಹತ್ತಲಿಲ್ಲ

ಅವನು ಕೊಡಲಾರದ ಜಟ್ಟಿ ನೀನು ಬಿಡಲಾರದ ಜಟ್ಟಿ

ತೆಲುಗು (ಅನುವಾದ): ಊರಗ ಹೆಣ್ಣುಮಕ್ಕಳು ಕಣ್ಣಿಂದ ನೋಡ್ಯರಲ್ಲ

ಮಗನೆ ಸಣ್ಣಬಾಲಗಿರಿರಾಜ

ಎಷ್ಟುದಿನ ಕಾದಕೊಂಡು ಕೂಡುತ್ತಿ

ಅವನು ಕೊಡಲಾರದವ ಆದನು

ನೀನು ಮಾಡಿಕೊಳ್ಳುವವ ಆದವ್[15]

ಕನ್ನಡ ಪಠ್ಯದ ಸಾಲುಗಳಲ್ಲಿ ಪಟ್ಟಣದ ಹೆಂಗಸರು ಬಾಲಗಿರಿರಾಜನ ಕಷ್ಟ ನೋಡಿ ಕನಿಕರದಿಂದ ಸಂತೈಸಿ ನಿನಗ ಬಂದ ಕಷ್ಟ ಮಹಿಭೂತರಾಜನಿಗೆ ಬರಲೆಂದು ಶಾಪ ಹಾಕುತ್ತಾರೆ. ಆದರೆ ತೆಲುಗು ಪಠ್ಯದಲ್ಲಿ ಇದು ನೇರ ಮಾತುಗಳಲ್ಲಿ ವ್ಯಕ್ತವಾಗಿದೆ. ಕನ್ನಡ ಪಠ್ಯದಲ್ಲಿ 'ಅವನು ಕೊಡಲಾರದ ಶೆಟ್ಟಿ ನೀನು ಬಿಡಲಾರದ ಜಟ್ಟಿ' ಎಂಬ ನಾಣ್ಣುಡಿಯನ್ನು ಬಳಸಿ ಮಹಿಭೂತರಾಜನ ಕಠಿಣ ಹೃದಯ, ಅವನ ಜಿಪುಣತನವು ವ್ಯಕ್ತವಾಗಿದೆ. ಹಾಗೆಯೇ ಬಾಲಗಿರಿರಾಜನ ಶೌರ್ಯ, ಸಾಹಸ, ಛಲ, ಧೈರ್ಯ ಮುಂತಾದ ಅಂಶಗಳು ಜಟ್ಟಿ ಪದದಲ್ಲಿ ಅಡಗಿದೆ. ಆದರೆ ತೆಲುಗು ಪಠ್ಯದಲ್ಲಿ ಅವನು ಕೊಡಲಾರದವ ನೀನು ಮಾಡಿಕೊಳ್ಳಲಾರದವ ಎಂದು ನಿರೂಪಿಸಿದ್ದಾರೆ. ತೆಲುಗು ಪಠ್ಯಕ್ಕಿಂತ ಕನ್ನಡ ಸಾಲುಗಳು ಅರ್ಥಗರ್ಭಿತವಾಗಿವೆ. ಅವನು ಕೊಡಲಾರದ ಶೆಟ್ಟಿ ಎನ್ನುವುದು ಶೆಟ್ಟರು ಎಷ್ಟು ಜಿಪುಣರು ಇರುತ್ತಾರೋ, ಅಷ್ಟೇ ಜಿಪುಣ ನಿನ್ನ ಮಾವ, ನೀನು ಸಾಧಿಸಿಯೇ ತೀರಬೇಕೆಂಬ ಛಲ, ಅದನ್ನು ಗೆಲ್ಲೆ ಗೆಲ್ಲುತ್ತೇನೆಂಬ ಜಟ್ಟಿಯು ನೀನು ಎಂಬ ಭಾವ ವ್ಯಕ್ತವಾಗಿದೆ.

ಪದ್ಮರಾಣಿ ವೇಷ ತೊಟ್ಟು ಬಾಲಗಿರಿರಾಜನಿಗೆ ಮೋಸ ಮಾಡಿದ್ದನ್ನು ಕಂಡು ಯಮನಂದಗಿರಿರಾಜನು ಪೋಲವ್ವಳಿಗೆ ಶಿಕ್ಷೆಯನ್ನು ವಿಧಿಸುತ್ತಾನೆ. ಸಮಾಜದಲ್ಲಿ ಮೋಸ ವಂಚನೆ ಮಾಡಿದವರಿಗೆ ಶಿಕ್ಷೆಯನ್ನು ಕೊಡುವುದು ರಾಜನ ಕರ್ತವ್ಯ. ಹೀಗಾಗಿ ಒಳ್ಳೆಯ ಸಮಾಜಕ್ಕೆ ಸಮಾಜದ ಒಳಿತಿಗಾಗಿ ಶಿಕ್ಷೆ ವಿಧಿಸಲಾಗುತ್ತದೆ.

ಕನ್ನಡ: ಪೋಲವ್ವ ನಿನ್ನ ಮ್ಯಾಲೆ ಮಣ್ಣು ಸುರುವಲಿ

ಏಳು ಮಂದಿ ಮಕ್ಕಳು

ಏಳು ಮುದಿ ಸೊಸೆಯರು ಇಟ್ಟುಕೊಂಡು

ಮಕ್ಕಳಿಗೆ ಇಂಥ ವನವಾಸ ಇಟ್ಟೆ ನೀನು

ಹಜಾಮರ್‍ನ ಕರಕೊಂಡು ಬಂದು

ಆಕೆಯ ತಲೆಬೋಳಿಸಿ

ಕ್ಯಾರಳ ತಂದು ಕ್ಯಾರಳದ ನಾಮ ಹಚ್ಚಿ

ಕರಿಕತ್ತೆಯ ಮ್ಯಾಲೆ ಕೂಡಿಸಿ

ಇಂತಹವರು ಊರಗೆ ಇದ್ದರೆ ಇವಳ ಗುಣ ಇನ್ನೊಬ್ಬರು ಕಲಿತರ

ಇರಬಾರದು ಏನ್ನ ಜಲ್ಮ

ಹಲಿಗಿ ಸಂಗಟ ಉರೆಲ್ಲ ಮೆರವಣಿಗಿ ಮಾಡಿ

ಊರಿಗೊಂದು ಹರದಾರಿಗೆ ಬಂದು

ಸುಣ್ಣದ ಬಟ್ಟಿಯಲ್ಲಿ ಹಾಕಿದರು

ಸುಟ್ಟು ಸುರಮಂಡಲಾಗಿ ಹೊಂಟು ಹೋದಳು

ತೆಲುಗು (ಅನುವಾದ): ಕೈಕೆಳಗಿನ ರೈತರ

ಹಜಾಮರ್‍ನ ಕರದುಕೊಂಡು ಬಾರಪ್ಪ

ಕೈಕೆಳಗಿನ ರೈತರು ಹೋಗಿ

ಹಜಾಮರ ಮನೆಕೆ ಹೋಗಿ ಹಜಾಮರ್‍ನ ಕರೆದುಕೊಂಡು ಬಂದರಲ್ಲ

ಪೋಲವ್ವ ತಲೆ ಬೋಳಿಸಿ

ಮೂರು ಉಳ್ಳಗಡ್ಡೆಗಳು ತಲೆಗೆ ಕಟ್ಟಿ

ಕ್ಯಾರೆಳ್ಳು ತಂದು ಕ್ಯಾರೆಳ್ಳು ನಾಮ ಹಚ್ಯಾರ

ಕರಿ ಕತ್ತೆ ತಂದು ಕತ್ತೆ ಮ್ಯಾಲೆ ಕೂಡಿಸಿ

ಒಂದು ಮೆದೆ ಬಿದಿರು ಬಡಿಗೆಗಳಿಂದ ಹೊಡೆಯುತ್ತ

ದೀನಬಾಜದಿಂದ ಧ್ವನಿ ಮಾಡಿಕೊಂಡು

ಊರು ಸುತ್ತ ಏಳು ಸುತ್ತಾಕಿ

ಊರಿಗೊಂದು ಹರದಾರಿ ಬಂದು

ಸುಣ್ಣದ ಬಟ್ಟಿಗೆ ತಂದು ಸುಣ್ಣದ ಬಟ್ಟಿಯಲ್ಲಿ ಹಾಕ್ಯರಲ್ಲ

ಸುಣ್ಣ ಬಟ್ಟಿಯಲ್ಲಿ ಸುಟ್ಟು ಹೋಗ್ಯಾಳ್

ಮೋಸ, ವಂಚನೆ, ಮಾಡಿದರೆ ಎಂತಹ ಶಿಕ್ಷೆ ವಿಧಿಸಬೇಕೆಂಬ ಸಂದೇಶ ಇಲ್ಲಿ ವ್ಯಕ್ತವಾಗಿದೆ. ಇಲ್ಲಿ ಕನ್ನಡ-ತೆಲುಗು ಎರಡು ಕಥನಗಳಲ್ಲಿ ಸನ್ನಿವೇಶ ಒಂದೇ ಆದರೂ ಎರಡು ಭಾಷೆಗಳಲ್ಲಿ ಭಿನ್ನವಾಗಿ ನಿರೂಪಣೆಗೊಂಡಿದೆ. ಕನ್ನಡ ಪಠ್ಯದಲ್ಲಿ ಯಮನಂದಗಿರಿರಾಜ ನೇರವಾಗಿ ಪೋಲವ್ವಳನ್ನು ಜರಿಯುತ್ತಾನೆ. ಹಜಾಮರನ್ನು ಕರೆಸಿ ತಲೆ ಬೋಳಿಸಿ ಕರಿ ಕತ್ತೆಯ ಮೇಲೆ ಕೂಡಿಸಿ ಮೆರವಣಿಗೆ ಮಾಡಿಸಿದ್ದರೆ, ತೆಲುಗು ಪಠ್ಯದಲ್ಲಿ ತನ್ನ ಕೈಕೆಳಗಿನ ಸಹಾಯಕರಿಗೆ ಹೇಳಿ ಹಜಾಮರನ್ನು ಕರಿಸುತ್ತಾನೆ. ಇಲ್ಲಿ ಹಜಾಮರು ತಲೆ

ಬೋಳಿಸಿ ಈರುಳ್ಳಿ ಗಡ್ಡೆಗಳನ್ನು ಕಟ್ಟಿ ಕ್ಯಾರೆಳ್ಳಿನಿಂದ ಹಣೆಗೆ ನಾಮ ಹಚ್ಚುವುದಾಗಿದೆ. ಇಲ್ಲಿ ಬಿದಿರು ಬಡಿಗೆಗಳಿಂದ ಹೊಡೆಯುತ್ತಾ ಕರಿ ಕತ್ತೆಯ ಮೇಲೆ ಮೆರವಣಿಗೆ ನಡೆಯುತ್ತದೆ. ಆದರೆ ಕೊನೆಯ ನಾಲ್ಕು ಸಾಲುಗಳಲ್ಲಿ ಎರಡು ಕಥನಗಳಲ್ಲಿ ಸಾಮ್ಯತೆ ಇದೆ. ಕೊನೆಗೆ ಸುಣ್ಣದ ಬಟ್ಟಿಯಲ್ಲಿ ಹಾಕುತ್ತಾರೆ. ಹೀಗೆ ಎರಡು ಕಥನಗಳಲ್ಲಿ ಶಿಕ್ಷೆಯ ವಿಧಾನವನ್ನು ವ್ಯಕ್ತಪಡಿಸಿದ್ದಾರೆ.

## ಭೂಲಕ್ಷ್ಮೀಕತೆ ಕನ್ನಡ-ತೆಲುಗು ಆವೃತ್ತಿಗಳು

ಶಂಕ್ರಮ್ಮ ಅವರಿಂದ ಸಂಗ್ರಹಿಸಿದ ಭೂಲಕ್ಷ್ಮೀಕತೆಯು ಕನ್ನಡ-ತೆಲುಗು ಎರಡು ಭಾಷೆಗಳಲ್ಲಿ ನಿರೂಪಣೆ ಸಾಮ್ಯ ಇದೆ. ಈ ಕಥನವು ಸ್ತ್ರೀ ಪ್ರಧಾನವಾದ ರಮ್ಯ ಕತೆಯಾಗಿದ್ದು ಸ್ತ್ರೀಯ ದೃಷ್ಟಿಕೋನಗಳು ವ್ಯಕ್ತವಾಗಿವೆ. ಈ ಕಥನವು ಒಂದು ಕೌಟುಂಬಿಕ ಹಿನ್ನೆಲೆಯಲ್ಲಿ ರೂಪುಗೊಂಡಂತೆ ಕಂಡುಬರುತ್ತದೆ. ಸ್ತ್ರೀಯ ಬಂಜೆತನದ ಅಳಲು, ಸವತಿ ಮಕ್ಕಳ ಮತ್ಸರವು ಸಾಮಾನ್ಯ ಜನರ ಬದುಕಿನ ಭಾಗವಾಗಿ ವ್ಯಕ್ತವಾಗಿದೆ. ನವಭೋಜರಾಜ ಹೆಂಡತಿ ಮಾಣಿಕ್ಯಲದೇವಿಯ ನಡುವಿನ ವಿರಸ, ಗುದ್ದಾಟ, ಹುಲಿಯಾಗಿ ಬೇಟೆಯಾಡುವ-ಹುಲಿರಾಜನ ಮಾನವೀಯ ಮೌಲ್ಯ, ಅನ್ನಲಕ್ಕಮ್ಮ ಅಕ್ಕನ ಮಕ್ಕಳ ಮೇಲಿನ ಮಮತೆ ಮುಂತಾದ ವಿಷಯಗಳು ಎರಡು ಪಠ್ಯಗಳಲ್ಲಿ ಮನೋಜ್ಞವಾಗಿ ಚಿತ್ರಿತಗೊಂಡಿದೆ.

### ಪ್ರಾದೇಶಿಕತೆ

ಭೂಲಕ್ಷ್ಮೀ ಕಥನದಲ್ಲಿ ಪ್ರಾದೇಶಿಕ ಭಾಷೆ, ಪದಗಳು ಕನ್ನಡದ ಪ್ರಾದೇಶಿಕವೇ ತೆಲುಗಿನ ಪ್ರಾದೇಶಿಕತೆಯಾಗಿ ನಿರೂಪಿಸಿದ್ದಾರೆ. ಕಥನಗಾರರು ಕರ್ನಾಟಕದಲ್ಲಿ ವಾಸಿಸಿರುವುದರಿಂದ ತೆಲುಗು ಪಠ್ಯದಲ್ಲೂ ಸಹ ಕನ್ನಡ ಭಾಷೆಯ ಪ್ರದೇಶದ ಪರಿಸರ ಕಾಣುತ್ತದೆ. ಪರಮಾತ್ಮನನ್ನು ಕುರಿತು ಮಕ್ಕಳ ಭಾಗ್ಯಕ್ಕಾಗಿ ತಪಸ್ಸು ಮಾಡಿದ ಭೂಲಕ್ಷ್ಮೀಯನ್ನು ಕುರಿತು ವಿಚಾರಿಸುತ್ತಾನೆ. ಆಗ ತನಗೆ ಸಂತಾನ ಕೊಡಬೇಕಾಗಿ ಕೇಳುತ್ತಾಳೆ.

ಕನ್ನಡ: ನೀ ಕೊಟ್ಟಿದು ಬ್ರತ್ಕುಭಾಗ್ಯ ಮಸ್ತಾದ
ಏನು ಇದ್ದರೆ ಏನು ಮಾಡಬೇಕು
ನನ್ನ ಹೊಟ್ಟೆಯೊಳಗೆ ಮಕ್ಕಳಿಲ್ಲ
ಇಲ್ಲದ ಸಲುವಾಗಿ ನಿನ್ನ ಒಂದು ಸ್ಥಳಕ್ಕೆ ಬಂದಿನಿ
ನನ್ನ ಸ್ಥಳಕ್ಕೆ ಬಂದರೆ ಪರವಾಗಿಲ್ಲ ಮಗಳೆ
ನಿನಗೆ ಸಂತಾನ ಕೊಡ್ತಿನಿ ತಪಬಿನ್ನ ಮಾಡು
ತೆಳಗ್ಗೆ ಬಾ ಮಗಳೆ
ತಾಯಿ ತಪಭಿನ್ನ ಮಾಡಿ ಕೆಳಗೆ ಬಂದಳ

ತೆಲುಗು (ಅನುವಾದ): ನೀವು ಕೊಟ್ಟ ಬತ್ಕು ಭಾಗ್ಯ ತುಂಬ ಇದೆ
ಮುತ್ತು ಇದೆ ರತ್ನಗಳು ಇವೆ

ಆನೆಗಳು ಕುದುರೆಗಳಿವೆ

ತುಂಬ ದ್ರವ್ಯವು ಇದ್ದರೆ ಏನು ಮಾಡಬೇಕು

ಹೊಟ್ಟೆಯಲ್ಲಿ ಸಂತಾನವಿಲ್ಲ

ಸಂತಾನಕ್ಕಾಗಿ ನಿನ್ನ ಸ್ಥಳಕ್ಕೆ ಬಂದಿನಿ

ನನಗೆ ಸಂತಾನವು ಕೊಡಬೇಕು ಪರಮಾತ್ಮ

ಸಂತಾನವು ಕೊಡ್ತಿನಿ ತಪ ಬಿಟ್ಟು ಬಾ

ಗಟ್ಟಿ ಕೊಡ್ತಿದೇನು ದೇವ ಅಂತಳ

ಗಟ್ಟಿ ಕೊಡ್ತಿನಮ್ಮ

ತಪ ಬಿಟ್ಟು ಕೆಳಗೆ ಬಂದಳ[20]

ಇಲ್ಲಿ ಕಥನಗಾರರ ಪ್ರದೇಶದ ಪರಿಸರ ಅಭಿವ್ಯಕ್ತಗೊಂಡಿದೆ. ನೀ ಕೊಟ್ಟಿದ್ದು ಬ್ರತ್ಕು ಭಾಗ್ಯ ಮಸ್ತಾದ ಕನ್ನಡ-ತೆಲುಗಿನಲ್ಲಿ ಬಂದಿದೆ. ಬ್ರತ್ಕು(ಬದುಕು) ಮಸ್ತಾದ(ಬಹಳ ಇದೆ) ಎಂಬ ಪದಗಳು ಅಲ್ಲಿನ ಪ್ರಾದೇಶಿಕತೆಯನ್ನು ಸೂಚಿಸುತ್ತವೆ. ಈ ಪಠ್ಯವನ್ನು ಪರಿಶೀಲಿಸಿದಾಗ ಪ್ರಾದೇಶಿಕತೆ ಕಾಣುತ್ತದೆ. ಇಲ್ಲಿ ಕನ್ನಡಕ್ಕಿಂತ ತೆಲುಗು ಪದ್ಯದಲ್ಲಿ ವಿಸ್ತಾರವಾಗಿ ಮೂಡಿಬಂದಿದೆ. ಮುತ್ತು, ರತ್ನ, ಕುದುರೆ, ಆನೆ, ದ್ರವ್ಯ ಮುಂತಾದವು ಇವೆ. ಅದರಿಂದ ಉಪಯೋಗವಿಲ್ಲ ಎಂಬ ಈ ಸಾಲುಗಳು ಹೆಚ್ಚಾಗಿ ಬಂದಿವೆ. ಉಳಿದ ಸಾಲುಗಳು ಹೊಟ್ಟೆಯಲ್ಲಿ ಸಂತಾನವಿಲ್ಲ ಅದಕ್ಕಾಗಿ ತಪಸ್ಸಿಗೆ ಬಂದನೆಂದು ಹೇಳುವ ಸಾಲುಗಳು ಎರಡು ಪಠ್ಯಗಳಲ್ಲಿ ಇದೆ. ಇಲ್ಲಿ ತಪಸ್ಸನ್ನು ಭಿನ್ನ ಮಾಡಿ ಅಂದರೆ ತಪಸ್ಸನ್ನು ಬಿಟ್ಟು ಕೆಳಗೆ ಬಂದರೆ ವರವನ್ನು ಕೊಡುತ್ತೇನೆಂದು ಪರಮಾತ್ಮನು ಹೇಳುತ್ತಾನೆ. ಹೀಗಾಗಿ ಒಂದು ಕಥನವು ಪ್ರಾದೇಶಿಕತೆ ಕಥನಗಾರರು ವಾಸಿಸುವ ಪ್ರದೇಶ, ಅವರ ಪರಿಸರವನ್ನ ಅವಲಂಬಿಸುತ್ತದೆ. ಆ ನೆಲೆಯಲ್ಲಿ ಈ ಕಥನವು ಅಭಿವ್ಯಕ್ತಗೊಂಡಿದೆ.

### ಸವತಿ ಮತ್ಸರ

ಕನ್ನಡ-ತೆಲುಗು ಎರಡು ಆವೃತ್ತಿಗಳಲ್ಲಿ ಮಾಣಿಕ್ಯಲದೇವಿಯ ಸವತಿ ಮತ್ಸರ ಇದೆ. ತನ್ನ ವೈಯಕ್ತಿಕ ಬಯಕೆಗಳ ಈಡೇರಿಕೆಗಾಗಿ ಮತ್ಸರ ಉಂಟಾಗಿ ಮಕ್ಕಳಿಗೆ ವಿಷ ಕೊಟ್ಟು ಕೊಲ್ಲುತ್ತಾಳೆ. ಗಂಡನನ್ನು ತನ್ನ ವಶ ಮಾಡಿಕೊಳ್ಳುವುದಕ್ಕಾಗಿ ತಾಯಿಯಿಂದ ಸಲಹೆ ಪಡೆದು, ಗಿಡಮೂಲಿಕೆಗಳನ್ನು ಗಂಡನ ಮೇಲೆ ಪ್ರಯೋಗಿಸುತ್ತಾಳೆ. ಗಂಡನು ತನ್ನ ಹತೋಟಿಗೆ ಬರದೆ ಹೋದಾಗ, ಗಂಡನನ್ನು ಅಂಜಿಸಿ, ಮಕ್ಕಳನ್ನು ಕಾಡಿನಲ್ಲಿ ಬಿಟ್ಟು ಬರುವಂತೆ ಮಾಡುತ್ತಾಳೆ. ಹೀಗೆ ಎರಡು ಕಥನಗಳಲ್ಲಿ ಮಾಣಿಕ್ಯಲದೇವಿಯ ಮತ್ಸರ ಧೋರಣೆಗಳು ವ್ಯಕ್ತವಾಗಿದೆ.

ಮಾಣಿಕ್ಯಲದೇವಿಯು ಸವತಿ ಮಕ್ಕಳನ್ನು ಪೋಷಣೆ ಮಾಡುತ್ತಾಳೆ. ಆ ಮಕ್ಕಳು ದಿನಾಲು ಆಟವಾಡಿ ಮನೆಗೆ ಹಿಂತಿರುಗುತ್ತಾರೆ. ಆ ಮಕ್ಕಳ ಮೇಲೆ ಅವಳ ವಕ್ರದೃಷ್ಟಿ ಬೀಳುತ್ತದೆ. ಗಂಡ ನವಭೋಜರಾಜನ ಮೇಲೆ ಸಿಟ್ಟು ಮೂಡುತ್ತದೆ. ಗಂಡನನ್ನು ತನ್ನ ಹತೋಟಿಯಲ್ಲಿಟ್ಟುಕೊಳ್ಳಲು ಪ್ರಯತ್ನಿಸುತ್ತಾಳೆ.

ಕನ್ನಡ: ಮಲತಾಯಿ ಮಾಣಿಕ್ಯಲದೇವಿ

ಈ ಮಕ್ಕಳ ಮೇಲೆ ಮಣ್ಣು ಸುರುವಲಿ

ರಾಜನ ಮೇಲೆ ಕಲ್ಲಾಕಲಿ

ರಾಜ ಮಕ್ಕಳ ಮ್ಯಾಲೆ ಏನು ಜೀವಾನ

ಮಕ್ಕಳು ಮಕ್ಕಳಂತೆ ರಾಜ ಸಾಯ್ತನ

ನನ್ನ ಮೇಲೆ ಜೀವ ಇಲ್ಲ

ತೆಲುಗು (ಅನುವಾದ): ಈ ರಾಜ ಆ ಕಡೆ ಹೋಗ್ತನ ಈ ಕಡೆ ಹೋಗ್ತನ

ಮನೆಗೆ ಬರ್ತನ

ಮಕ್ಕಳು ಮಕ್ಕಳು ಎಂದು ಕೇಳುತಾನ

ಮಕ್ಕಳ ಮ್ಯಾಲೆ ಜೀವಾನ

ನನ್ನ ಮ್ಯಾಲೆ ಜೀವ ಇಲ್ಲ[೩೦]

ಮಕ್ಕಳು ದಿನಾಲು ಊಟ ಮಾಡಿ ಆಡಲಿಕ್ಕೆ ಹೋಗಿ ಮನೆಗೆ ಬರುತ್ತಿರುತ್ತಾರೆ. ಹೀಗೆ ಪ್ರತಿದಿನ ನೋಡಿ ಮಾಣಿಕ್ಯಲದೇವಿಗೆ ಹೊಟ್ಟೆಯಲ್ಲಿ ಬೆಂಕಿ ಇಟ್ಟಂತೆ ಆಗುತ್ತದೆ. ಮಕ್ಕಳ ಆಟ-ಪಾಠ ನೋಡಲಾರದೆ ಮತ್ಸರವುಂಟಾಗುತ್ತದೆ. ಗಂಡನು ಬಂದ ಕೂಡಲೇ ಮಕ್ಕಳ ಬಗ್ಗೆಯೇ ವಿಚಾರಿಸುತ್ತಾನೆ. ಇದರಿಂದ ಇನ್ನಷ್ಟು ಮಕ್ಕಳ ಮೇಲೆ ದ್ವೇಷ ಹುಟ್ಟುತ್ತದೆ. ಮಕ್ಕಳನ್ನು ದ್ವೇಷಿಸಿ ತನ್ನನ್ನು ಪ್ರೀತಿಸಲು ಉಪಾಯ ಹೂಡುತ್ತಾಳೆ. ಕನ್ನಡ-ತೆಲುಗು ಆವೃತ್ತಿಗಳ ಈ ಮೇಲಿನ ಸನ್ನಿವೇಶದಲ್ಲಿ ಭಿನ್ನವಾಗಿ ಇದೆ. ಕನ್ನಡದಲ್ಲಿ ಮಕ್ಕಳನ್ನು ರಾಜನನ್ನು ಶಪಿಸುತ್ತಾಳೆ. ತೆಲುಗು ಆವೃತ್ತಿಯಲ್ಲಿ ನೇರವಾಗಿ ರಾಜನು ಮಕ್ಕಳ ಮಕ್ಕಳೆಂದೇ ಕೇಳುತ್ತಾನೆ, ನನ್ನ ಮೇಲೆ ಜೀವ ಇಲ್ಲ ಎಂದು ವ್ಯಕ್ತವಾಗಿದೆ. ಈ ಸಾಲುಗಳು ಮಾತ್ರ ಕನ್ನಡ-ತೆಲುಗು ಕಥನಗಳಲ್ಲಿ ಒಂದೆ ತೆರನಾಗಿ ಬಂದಿದೆ. ಇಲ್ಲಿ ಕನ್ನಡ ಪಠ್ಯದ ಮೊದಲು ಮೂರು ಸಾಲುಗಳು ಭಿನ್ನವಾಗಿ ಬಂದಿದೆ ಉಳಿದ ಸಾಲುಗಳು ಸಮಾನವಾಗಿವೆ.

ಮಲತಾಯಿ ಮಾಣಿಕ್ಯಲದೇವಿ ತನ್ನ ಸವತಿ ಭೂಲಕ್ಷ್ಮಿಯ ಏಳು ಜನ ಮಕ್ಕಳನ್ನು ಮತ್ಸರದಿಂದ ಕೊಲ್ಲಲು ಉಪಾಯ ಹೂಡುತ್ತಾಳೆ. ಗಂಡ ನವಭೋಜರಾಜನು ತನ್ನ ವಶಮಾಡಿಕೊಂಡು ಮಕ್ಕಳ ಮೇಲೆ ಪ್ರೀತಿ ಇಲ್ಲದ ಹಾಗೆ ಮಾಡಲು ಪ್ರಯತ್ನಿಸಿ ವಿಫಲವಾಗಿ ಮಕ್ಕಳನ್ನು ಕೊಲ್ಲಲು ಮುಂದಾಗುತ್ತಾಳೆ. ಏನು ಅರಿಯದ ಮುಗ್ಧ ಏಳು ಜನ ಹೆಣ್ಣುಮಕ್ಕಳು ಮಲತಾಯಿಯ ಕುತಂತ್ರಕ್ಕೆ ಬಲಿಯಾಗುತ್ತಾರೆ.

ಕನ್ನಡ: ಏನು ತಿಳಿಲಾರದ ಸಣ್ಣ ಮಕ್ಕಳು

ಬಂದಂತ ಮಕ್ಕಳಿಗೆ ತಂಬಿಗಿ ತುಂಬ ನೀರು ಕೊಟ್ಟಳ

ಕಾಲುಮುಖ ಚನ್ನಾಗಿ ತಕ್ಕೊಂಡರ

ಮಕ್ಕಳಿಗೆ ಹೊರಗೆ ನೀಡಿದರೆ ಕೂನ ಇಡಿತರಂತ

ಕತ್ತಲ ಮನೆಗೆ ಕರಕಂಡು ಬಂದಳ

ಏಳು ಮಂದಿ ಮಕ್ಕಳಿಗೆ ಏಳು ಗಂಗಳಗಳು ಕೊಟ್ಟರೆ

ಗಂಗಳಗಳಿಗೆ ವಿಷ ಏರುತದ ಗಂಗಳ ಕೊಡಬಾರದು

ಹೂಗಾರ ಮನೆಗೆ ಹೋಗಿ ಏಳು ಪತ್ರೋಳು ತಂದು

ಏಳು ಪತ್ರೋಳು ಹಾಕಿ

ತಲೆಗೆ ತುತ್ತು ಅನ್ನ ನೀಡ್ಯಾಳ

ಅನ್ನದ ಮ್ಯಾಲೆ ಏನೇನು ಹಾಕ್ಯಳ

ಕಾರಂತ ಸಿಂಬಳಕಾರ

ಬೇಣ್ಣಂತ ಹೊಸುಸುಣ್ಣ ಮಕ್ಕಳಿಗೆ ಹಾಕ್ಯಳ

ಏನು ತಿಳಿಲಾರದ ಸಣ್ಣಮಕ್ಕಳು

ನಾಲ್ಕು ಮೂಲ್ಕಗ ಅನ್ನ ಕಲಿಸಿಕೊಂಡು

ಉಂಡಾಗ ಚೆನ್ನಾಗಿ ಊಟ ಮಾಡಿದರು

ಕಲಿಸಿದ ಒಂದು ತಾಸಿಗೆ

ಕಲಿಸಿದ ಕೈ ಗುಳ್ಳಿಬಂದವ

ಉಂಡಂತ ನಾಲಿಗೆ ಚರ್ಮ ಸುಲಿದದ

ಹೊಟ್ಟಿಯೊಳಗ ಅರ್ಭಟ ಬಂದವ

ತೆಲುಗು (ಅನುವಾದು): ಬಂದ ಮಕ್ಕಳ್ನ ಕರಕೊಂಡಳ

ಬಂಗಾರದ ಬಚ್ಚಲಿಗೆ ಬಂದು

ಮಕ್ಕಳ್ನ ಸ್ನಾನ ಮಾಡಿಸಿದಳು

ಬಟ್ಟೆ ಹಾಕಿಕೊಂಡು ಊಟಕ್ಕೆ ಕುಂತ್ರು ಮಕ್ಕಳು

ಹೊರಗೆ ಇಟ್ಟರೆ ಮಂದಿ ನೋಡ್ತರ

ಮಕ್ಕಳ ಊಟಕ್ಕೆ ಒಳಗೆ ಕತ್ತಲ ಮನೆಯೊಳಗೆ ಕರೆದುಕೊಂಡು ಬಂದಳ

ಮಕ್ಕಳಿಗೆ ಗಂಗಳದಗ ಅನ್ನ ಇಟ್ಟರೆ

ಆ ಗಂಗಳಕೆ ವಿಷ ಏರುತದ

ಏಳು ಪತ್ರೋಳು ತಂಗೊಂಡು ಬಂದಳ

ಏಳು ಮಂದಿ ಮಕ್ಕಳಿಗೆ ಹಾಕ್ಯಳ

ಮಾಡಿದ ಅನ್ನ ಏಳು ಮಂದಿಗಿ ತಲೆಗಿಷ್ಟು ತುತ್ತು ನೀಡ್ಯಾಳ
ಅನ್ನದ ಮ್ಯಾಲೆ ತುಪ್ಪ ಎಂದು ಕ್ಯಾರೆಳ್ಳು ಎಣ್ಣೆ ಸುರುವ್ಯಾಳ
ಏನು ಅರಿಯದ ಸಣ್ಣ ಮಕ್ಕಳು
ನಾಲ್ಕು ದಿಕ್ಕಿಗೆ ಅನ್ನ ಕಲಿಸಿಕೊಂಡು ಮಕ್ಕಳು ತಿಂದರಲ್ಲ
ತಿಂದ ಒಂದು ಗಂಟೆಯ ಹೊತ್ತಿಗೆ ಕಲಿಸಿದ ಕೈಗಳು
ಗುಳ್ಳೆ ಬಂದವಲ್ಲ
ತಿಂದ ಬಾಯಿಗೆ ಬುಗ್ಗೆಗಳು ಬಂದವಲ್ಲ
ಹೊಟ್ಟೆಯಲ್ಲಿ ಅರ್ಭಟ ಬಂದಿದೆ''

ಮಲತಾಯಿ ಮಾಣಿಕ್ಯಲದೇವಿಯ ಮತ್ಸರ, ಅವಳ ಕುತಂತ್ರ ಕನ್ನಡ-ತೆಲುಗು ಎರಡು ಪಠ್ಯಗಳಲ್ಲಿ ಬಂದಿದೆ. ಈ ಸನ್ನಿವೇಶವನ್ನು ಅವಲೋಕಿಸಿದಾಗ ಪ್ರಾರಂಭದ ಕನ್ನಡ ಪಠ್ಯದಲ್ಲಿ ಮಾಣಿಕ್ಯಲದೇವಿ ಮುಗ್ಧ ಮಕ್ಕಳನ್ನು ಕರೆದು ಕೈಕಾಲು ಮುಖ ತೊಳೆಯಲು ನೀರನ್ನು ಕೊಟ್ಟು ಮಕ್ಕಳಿಗೆ ಮೋಸ ಮಾಡುತ್ತಾಳೆ. ಆದರೆ ತೆಲುಗು ಪಠ್ಯದ ಪ್ರಾರಂಭದ ಸಾಲುಗಳಲ್ಲಿ ಮಕ್ಕಳು ಮನೆಗೆ ಬಂದ ಕೂಡಲೆ ಸ್ನಾನದ ಮನೆಗೆ ಕರೆದುಕೊಂಡು ಹೋಗಿ ಸ್ನಾನ ಮಾಡಿಸುತ್ತಾಳೆ. ಇಲ್ಲಿ ಎರಡು ಸನ್ನಿವೇಶವು ಭಿನ್ನವಾಗಿ ನಿರೂಪಣೆ ಇದ್ದರೂ ಅದರ ಮೂಲ ಉದ್ದೇಶವು ಮಾತ್ರ ಒಂದೇ. ಇನ್ನು ಉಳಿದ 'ಮಕ್ಕಳಿಗೆ ಹೊರಗೆ ನೀಡಿದರೆ ಕೂನ ಇಡಿತರಂತ, ಕತ್ತಲ ಮನೆಗೆ ಕರಕಂಡು ಬಂದಳ' ಸಾಲುಗಳಿಂದ ಈ ಪದ್ಯದ ಕೊನೆಯವರೆಗೆ ಎರಡೂ ಸಮಾನವಾಗಿವೆ. ತೆಲುಗು ಪಠ್ಯದಲ್ಲಿ ಹದಿನೆಂಟು ಸಾಲುಗಳಿದ್ದರೆ, ಕನ್ನಡ ಪಠ್ಯದಲ್ಲಿ ಇಪ್ಪತ್ತು ಸಾಲುಗಳು ಬಂದಿವೆ. ಕನ್ನಡ ಪಠ್ಯ ಪ್ರಾರಂಭದ ಎರಡು ಸಾಲುಗಳು ಹೆಚ್ಚಿಗೆ ಬಂದಿವೆ. ಕಥನಗಾರರು ನಿರೂಪಿಸಿದ ಎರಡು ಪಠ್ಯಗಳು ಸೃಜನಾತ್ಮಕವಾಗಿ ಅಭಿವ್ಯಕ್ತ ಮಾಡಿದ್ದಾರೆ. ಇಲ್ಲಿ ಮಾಣಿಕ್ಯಲದೇವಿಯು ಮತ್ಸರದಿಂದ ಮಕ್ಕಳು ದೊಡ್ಡವರಾದ ಮೇಲೆ ತನಗೆ ಮಾರಕ(ವೈರಿ) ಆಗುತ್ತಾರೆಂಬ ಭಾವನೆಯಿಂದ, ಗಿಡ ಹೆಮ್ಮರವಾಗುವುದಕ್ಕಿಂತ ಮೊದಲೇ ಚಿವುಟಿದ ಹಾಗೆ ಮಕ್ಕಳನ್ನು ಕೊಲ್ಲಲು ಮುಂದಾಗುತ್ತಾಳೆ. ಇಂತಹ ಮತ್ಸರವು ಕೌಟುಂಬಿಕವಾಗಿ ನಡೆಯುವಂತಹುದು. ಮಲತಾಯಿ ತನ್ನ ಸವತಿ ಮಕ್ಕಳನ್ನು ಹೇಗೆ ನಡೆಸಿಕೊಂಡು ಹೋಗುತ್ತಾಳೆಂಬುದು ಇಲ್ಲಿ ವ್ಯಕ್ತವಾಗಿದೆ. ಆ ಮಕ್ಕಳ ಮೇಲೆ ದ್ವೇಷ, ಅಸೂಯೆ ಮತ್ಸರ ಯಾವ ರೀತಿ ಇರುತ್ತದೆಂಬುದು ಮಲತಾಯಿಯ ಪಾತ್ರದಲ್ಲಿ ಎರಡೂ ಪಠ್ಯಗಳಲ್ಲಿ ನಿರೂಪಣೆಗೊಂಡಿದೆ. ಕಥನಗಾರರ ಅನುಭವ ಅವರು ಪ್ರತಿನಿತ್ಯ ನೋಡುವ ಕೌಟುಂಬಿಕ ಕಲಹವನ್ನು ಅಭಿವ್ಯಕ್ತ ಮಾಡಿದ್ದಾರೆ. ಮುಖ್ಯವಾಗಿ ಸ್ತ್ರೀಪ್ರಧಾನವಾದ ಈ ಕಥನವು ಸ್ತ್ರೀಯನ್ನು ಸ್ತ್ರೀಯೇ ಶೋಷಣೆ ಮಾಡುವುದು ವ್ಯಕ್ತಗೊಂಡಿದೆ.

ಸವತಿ ಭೂಲಕ್ಷ್ಮೀ ಮಕ್ಕಳು ಮತ್ತೆ ಬದುಕಿ ಬಂದುದನ್ನು ಕಂಡು ಮಾಣಿಕ್ಯಲದೇವಿ ಇನ್ನಷ್ಟು ಉರಿದುಹೋಗುತ್ತಾಳೆ. ಒಳಗೊಳಗೆ ಕುದಿಯುತ್ತಾಳೆ. ಈ ಮಕ್ಕಳನ್ನು ತಂದೆಯಿಂದ ದೂರ ಮಾಡಬೇಕು ತಂದೆಯಿಂದಲೇ ಮಕ್ಕಳನ್ನು ನಾಶ ಮಾಡಬೇಕೆಂಬ ಉದ್ದೇಶದಿಂದ ಉಪಾಯ ಕಂಡುಕೊಳ್ಳುತ್ತಾಳೆ. ಮನೆಗೆ ಬಂದ ಗಂಡನನ್ನು ಅತ್ಯಂತ ಆದರದಿಂದ ಬರಮಾಡಿಕೊಂಡು ತನ್ನ ವಯ್ಯಾರ ಮಾತುಗಳಿಂದ ಗಂಡನನ್ನು ಗೆಲ್ಲಲು ಪ್ರಯತ್ನಿಸುತ್ತಾಳೆ. ಗಂಡನಿಂದಲೇ ಮಕ್ಕಳನ್ನು ಕಾಡಿಗೆ ಅಟ್ಟಿಸುತ್ತಾಳೆ.

ಕನ್ನಡ: ರಾಜ ಕಚೇರಿ ಬಿಟ್ಟು ಊಟದೊತ್ತಿಗೆ ಮನೆಗೆ ಬಂದ
ಬಂದಂತಹ ರಾಜಗ ಬಿಸಿಬಿಸಿ ನೀರು ಹಾಕಿ
ಬಟ್ಟೆ ಭೂಷಣ ಕೊಟ್ಟು
ಹಾಲು ಅನ್ನ ಊಟ ಮಾಡಕ ಕೊಟ್ಟ
ಊಟ ಮಾಡ ರಾಜಗೆ ಹ್ಯಾಂಗ ಹೇಳ್ತಳ ಚಾಡಿ
ರಾಜ ನವಭೋಜರಾಜ
ಈ ಏಳು ಮಂದಿ ಮಕ್ಕಳು ಸಲುವುದು ನನ್ನ ಕೈಲಿ ಆಗಲ್ಲ
ಏಳು ಮಂದಿ ಮಕ್ಕಳು ಕರಕೊಂಡು
ಅರ್ರಂಡದಗ ಬಿಟ್ಟು ಬಂದರೆ
ನಿನ್ನ ಮನ್ಯಾಗ ಸಂಸಾರ ಮಾಡ್ತಿನಿ
ಇಲ್ಲಂದರೆ ನನ್ನ ತವರು ಮನೆಗೆ ಹೊಂಟು ಹೋಗ್ತಿನಿ
ಭಾಮ ಮಕ್ಕಳ ಮ್ಯಾಲೆ ನಿನಗ ಏಟು ಕಸಿವಿಸಿ ಆಗಲಕತ್ತ್ಯದ
ಮಕ್ಕಳು ದೊಡ್ಡವರಾದರೆ
ಒಂದು ಮನೆಗೆ ಕೊಟ್ಟರೆ ಮಕ್ಕಳ ಹೋಗ್ತರ
ಮಕ್ಕಳ ಬಿಟ್ಟು ಬಾ ಅಂತ ಹೇಳುತ್ತಿದ್ದಲ್ಲ ಭಾಮ

ತೆಲುಗು (ಅನುವಾದ): ರಾಜ ಕಚೇರಿ ಬಿಟ್ಟು ಹೆಂಡತಿ ಮನೆಗೆ ಬಂದ
ಬಂದ ರಾಜಗ ಬಿಸಿಬಿಸಿ ನೀರು ಹಾಕಿ
ಒಗೆದ ಬಟ್ಟೆಗಳು ಕೊಟ್ಟಳು
ಮಕ್ಕಳೂಟ ಮಾಡಲು ಕೊಟ್ಟು
ಏನಯ್ಯ ರಾಜ
ನಿನ್ನ ಮಕ್ಕಳ ಮ್ಯಾಲೆ ಬಹಳ ಪ್ರಾಣವಿಟ್ಟಿದ್ದಿ
ನನ್ನನ್ನು ಊಟ ಮಾಡಿದಂತ ಕೇಳಲ್ಲ

ನನಗ ಜ್ವರ ಬಂದಿದಂತ ಕೇಳಲ್ಲ
ಮಕ್ಕಳ ಮ್ಯಾಲೆ ಬಹಳ ಪ್ರಾಣ
ಈ ಏಳು ಮಂದಿ ಮಕ್ಕಳ್ನ
ದಟ್ಟ ಅಡವಿದಗ ಬಿಟ್ಟು ಬಂದರೆ
ನಿನ್ನ ಮನ್ಯಾಗ ಸಂಸಾರ ಮಾಡ್ತೀನಿ
ಮಕ್ಕಳಿಗಿ ಬಿಟ್ಟು ಬರದಿದ್ದರೆ
ಸೀರೆ ಕುಪ್ಪಸ ಕೈಯಲ್ಲಿ ಹಿಡಿದುಕೊಂಡು
ನನ್ನ ತಾಯಿ ಮನೆಗೆ ನಾನು ಹೊರಟು ಹೋಗ್ತೀನಿ
ಭಾಮ ಮಾಣಿಕ್ಯಲದೇವಿ
ಅಂತಹ ಮಾತು ಆಡಬಾರದ ಭಾಮ
ಮಕ್ಕಳು ದೊಡ್ಡವರಾದ ಮ್ಯಾಲೆ
ಬೇರೆ ಮನೆಗೆ ಕೊಟ್ಟರೆ ಹೋಗ್ತರ
ನಮ್ಮ ಮನೆಯ ದೀಪವಲ್ಲ ಮಕ್ಕಳು
ಆ ಮಕ್ಕಳ ಮ್ಯಾಲೆ ಯಾಕ ಇಷ್ಟು ಹೊಟ್ಟೆಕಿಚ್ಚು[೨೩]

ರಾಜ ನವಭೋಜ ಏಳು ಜನ ಹೆಣ್ಣುಮಕ್ಕಳ ಮೇಲೆ ಜೀವ ಇದ್ದಿದ್ದರಿಂದ ಮಲತಾಯಿ ಮಾಣಿಕ್ಯಲದೇವಿಗೆ ಹೊಟ್ಟೆಕಿಚ್ಚು ಉಂಟಾಗುತ್ತದೆ. ಆ ಮಕ್ಕಳಿಗೆ ವಿಷ ಕೊಟ್ಟು ಕೊಂದು ಹಾಳು ಬಾವಿಯಲ್ಲಿ ಹಾಕಿದ್ದರೂ ಮತ್ತೆ ಬದುಕಿ ಬಂದಿರುತ್ತಾರೆ. ತನ್ನ ಗಂಡನನ್ನು ಒಲಿಸಿಕೊಳ್ಳಲು ಮರಳು ಮಾತಂಗಿ ಗಿಡ ಗೆಂಡನ ತಲೆಗೆ ಹಚ್ಚಿದ್ದರೂ ಉಪಯೋಗವಾಗುವುದಿಲ್ಲ. ರಾಜನಿಗೆ ಮಕ್ಕಳ ಮೇಲೆ ಪ್ರೀತಿ ಇರುತ್ತದೆ. ತಾನು ಉಪಯೋಗಿಸಿದ ಎಲ್ಲಾ ತಂತ್ರಗಳಲ್ಲಿ ಸೋಲುತ್ತಾಳೆ. ಕೊನೆಗೆ ಗಂಡನಿಗೆ ನೇರವಾಗಿ ಆ ಮಕ್ಕಳನ್ನು ದಟ್ಟ ಅಡವಿಯಲ್ಲಿ ಬಿಟ್ಟು ಬಂದರೆ ಮಾತ್ರ ಮನೆಯಲ್ಲಿ ಇರುತ್ತೇನೆ ಇಲ್ಲದಿದ್ದರೆ ತವರು ಮನೆಗೆ ಹೊರಟು ಹೋಗುತ್ತೇನೆಂಬ ಬೆದರಿಕೆ ಹಾಕುತ್ತಾಳೆ. ಈ ಸನ್ನಿವೇಶವು ಕನ್ನಡ-ತೆಲುಗು ಎರಡು ಆವೃತ್ತಿಗಳಲ್ಲಿ ಬಂದಿದೆ. ಇಲ್ಲಿ ಕನ್ನಡ ಪಠ್ಯಕ್ಕಿಂತ ತೆಲುಗು ಪಠ್ಯವು ದೀರ್ಘವಾಗಿದೆ. 'ಬಂದಂತಹ ರಾಜಗ ಬಿಸಿಬಿಸಿ ನೀರು ಹಾಕಿ ಬಟ್ಟೆ ಭೂಷಣ ಕೊಟ್ಟು ಹಾಲು ಅನ್ನ ಊಟಕ್ಕೆ ಕೊಟ್ಟು' ಮಾಣಿಕ್ಯಲದೇವಿ ಗಂಡನಿಗೆ ಚಾಡಿ ಹೇಳುತ್ತಾಳೆ. ಇದು ಎರಡು ಪಠ್ಯಗಳಲ್ಲಿದೆ. ಆದರೆ ತೆಲುಗು ಪಠ್ಯದಲ್ಲಿ ವಿಸ್ತಾರವಾಗಿದ್ದು 'ನಿನ್ನ ಮಕ್ಕಳ ಮ್ಯಾಲೆ ಬಹಳ ಪ್ರಾಣವಿಟ್ಟೆ, ನನ್ನನ್ನು ಊಟ ಮಾಡಿದಂತ ಕೇಳಲ್ಲ, ನನಗ ಜ್ವರ ಬಂದಿದಂತ ಕೇಳಲ್ಲ ಮಕ್ಕಳ ಮ್ಯಾಲೆ ಬಹಳ ಪ್ರಾಣ' ಎಂದು ತನ್ನನ್ನು ಅವಗಣೆಸುವುದನ್ನು ಆಕೆ ಸಹಿಸುವುದಿಲ್ಲ. ಎರಡು ಪಠ್ಯಗಳಲ್ಲಿ ಹೆಣ್ಣುಮಕ್ಕಳು ದೊಡ್ಡವರಾದರೆ ಬೇರೆಯವರ ಮನೆಗೆ ಕೊಟ್ಟರೆ ಹೋಗುವವರು.

ಪರರ ಮನೆಯನ್ನು ಬೆಳಗುವರು ಎಂದು ವ್ಯಕ್ತವಾಗಿದೆ. ಅದಕ್ಕಿಂತ ಮುಂದೆ ಹೋಗಿ ತೆಲುಗು ಪದ್ಯದಲ್ಲಿ ಹೆಣ್ಣುಮಕ್ಕಳು ನಮ್ಮಮನೆಯ ದೀಪವಲ್ಲ ಎಂದು ಬಂದಿದೆ. ಗಂಡನು ಕೊನೆಗೆ ಹೆಂಡತಿಗೆ ನಿನಗೆ ಆ ಮಕ್ಕಳ ಮೇಲೆ ಏತಕ್ಕೆ ಮತ್ಸರ ಎಂದು ಪ್ರಶ್ನಿಸುತ್ತಾನೆ. ಕಥನಗಾರರು ಚಿತ್ರಿಸಿದ ಈ ಸನ್ನಿವೇಶವು ಸಾಮಾನ್ಯ ಜನರ ಕೌಟುಂಬಿಕ ವ್ಯವಸ್ಥೆಯಲ್ಲಿ ಇಂಥ ಘಟನೆಗಳು ಸಾಮಾನ್ಯವಾಗಿ ಕಂಡುಬರುತ್ತದೆ. ಮುಖ್ಯವಾಗಿ ಮಲತಾಯಿಯ ಇದ್ದಾಗ ಮಕ್ಕಳ ಪರಿಸ್ಥಿತಿ ಯಾವ ಸ್ಥಿತಿಗೆ ತಲುಪುತ್ತವೆಂಬ ಅಂಶವು ಇಲ್ಲಿ ವ್ಯಕ್ತಗೊಂಡಿದೆ. ಹಾಗೆ ಗಂಡನಾದವನು ಮಕ್ಕಳು ಇದ್ದಾಗಲೂ ಮತ್ತೊಂದು ಮದುವೆಯಾದಾಗ ಎಂತಹ ಪರೀಕ್ಷೆ ಎದುರಿಸಬೇಕಾಗುತ್ತೆಂಬ ಅಂಶವು ಸಹ ಸ್ಪಷ್ಟವಾಗುತ್ತದೆ.

### ಪಾತ್ರ ಚಿತ್ರಣ

ಈ ಕಥನದಲ್ಲಿ ಬರುವ ಪಾತ್ರಗಳಲ್ಲಿ ಸ್ತ್ರೀ ಪಾತ್ರಗಳೇ ಪ್ರಧಾನವಾಗಿ ಕಂಡುಬರುತ್ತವೆ. ಭೂಲಕ್ಷ್ಮೀ, ಮಾಣಿಕ್ಯಲದೇವಿ, ಭೂಲಕ್ಷ್ಮೀಯ ಏಳು ಜನ ಹೆಣ್ಣುಮಕ್ಕಳು ಗಿರಿಜಾವತಿ, ಅನ್ನಲಕ್ಕಮ್ಮ ಪಾಂದೇವಿ, ಪಾತ್ರಗಳಿದ್ದು ಮಾಣಿಕ್ಯಲದೇವಿ ಪಾತ್ರವೇ ಪ್ರಮುಖವಾಗಿ ಎದ್ದು ಕಾಣುತ್ತದೆ. ಪುರುಷ ಪಾತ್ರಗಳು ನವಭೋಜರಾಜ, ಚಂದ್ರವತಿರಾಜ, ಹುಲಿರಾಜ ಉದಿಬದ್ದಿರಾಜ ಆತನ ಏಳು ಜನ ಗಂಡುಮಕ್ಕಳು ಇದ್ದರೂ ಸ್ತ್ರೀ ಪಾತ್ರಗಳೇ ಮುಖ್ಯವಾಗಿ ಕಂಡುಬರುತ್ತವೆ.

ಭೂಲಕ್ಷ್ಮೀ ಪಾತ್ರವು ಕಥನದ ಶೀರ್ಷಿಕೆಯು ಕಥನದ ಆರಂಭ ಹಾಗೂ ಕಥನವನ್ನು ಬೆಳೆಸಿಕೊಂಡು ಹೋಗುತ್ತದೆ. ಭೂಲಕ್ಷ್ಮೀಯ ಏಳು ಜನ ಹೆಣ್ಣುಮಕ್ಕಳನ್ನು ಪರಮಾತ್ಮನ ವರದಿಂದ ಪಡೆದುಕೊಳ್ಳುತ್ತಾಳೆ. ಪರಮಾತ್ಮನು ಮಕ್ಕಳ ಭಾಗ್ಯ ಕೊಡುವಾಗ ನಾಗರಹಾವಾಗಿ ಬಂದು ತನ್ನ ಜೀವ ಪಡೆದುಕೊಂಡು ಹೋಗುತ್ತೇನೆಂದು ವಚನ ಪಡೆದಿರುತ್ತಾನೆ. ಹಾಗೆಯೇ ಭೂಲಕ್ಷ್ಮಿಗೆ ನಾಗರಹಾವಾಗಿ ಬಂದು ಕಚ್ಚುತ್ತಾನೆ. ಇಲ್ಲಿ ಭೂಲಕ್ಷ್ಮೀ ತನ್ನ ಮಕ್ಕಳ ಕಷ್ಟ ಕಂಡು ಸತ್ತ ಮಕ್ಕಳನ್ನು ಬದುಕಿಸಿ ಆಕಳಾಗಿ ಮಕ್ಕಳಿಗೆ ಹಾಲುಣಿಸುವಲ್ಲಿ ತಾಯಿಯ ಮಮತೆ ಇದೆ.

ಭೂಚಕ್ರ ಪಟ್ಟಣದ ರಾಜನ ಹೆಂಡತಿ ಭೂಲಕ್ಷ್ಮಿಗೆ ಸಿರಿ ಸಂಪತ್ತು ಇದೆ. ಆದರೆ ಮಕ್ಕಳಿಲ್ಲದೆ ಕೊರಗುತ್ತಾರೆ. ರಾಜನವಭೋಜರಾಜ ಮಕ್ಕಳ ಭಾಗ್ಯಕ್ಕಾಗಿ ದೇಶ ಸುತ್ತಾಡಿದರೂ ದೇವರು ಮಕ್ಕಳ ಭಾಗ್ಯ ಕೊಟ್ಟಿಲ್ಲ. ಹೆಂಡತಿ ಭೂಲಕ್ಷ್ಮೀ ದಟ್ಟ ಅಡವಿ ಸೇರಿ ತಾನೇ ಮಕ್ಕಳ ಸಂತಾನಕ್ಕಾಗಿ ತಪಸ್ಸು ಮಾಡುತ್ತಾಳೆ. ಪರಮಾತ್ಮನು ಇವಳ ಭಕ್ತಿಗೆ ಮೆಚ್ಚಿ ಪ್ರತ್ಯಕ್ಷನಾಗಿ ಸಂತಾನ ಫಲವನ್ನು ಕೊಡುತ್ತಾನೆ.

ಕನ್ನಡ: ತಾಯಿ ತಪ ಭಿನ್ನ ಮಾಡಿ ಕೆಳಗೆ ಬಂದಳು
ಕೊಡಪ್ಪ ದೇವರೆ ಮುತ್ತಿನೋಟು ಉಡಿ ಚಾಚಿಕೊಂಡಳು
ಪರಮಾತ್ಮನ ಮುಂದೆ ನಿಂತಳು
ಪರಮಾತ್ಮ ನೋಡಿ ಮಗಳೇ ನಿನಗೆ ಸಂತಾನ ನಾ ಕೊಡ್ತೀನಾಗಲಿ

ನಾ ಒಂದು ವಚನ ಕೇಳ್ತೀನಿ

ಆ ವಚನ ನೀ ಕೊಡಬೇಕು

ಅದು ಎಂತ ವಚನ ಕೇಳುತ್ತಿದ್ದಿ ಕೇಳಪ್ಪ

ಪರಮಾತ್ಮ

ನಾ ಕೊಡ್ತೀನಿ ಕೈ ಮುಟ್ಟಿ ಫಲಸಂತಾನ ಕೊಡದಿಲ್ಲ

ಕಾಸುಪಾಕ ತೋಟದೊಳಗೆ ಮಲ್ಲಿಗೆ ಹೂ ಗಿಡ ಆದ

ಮಲ್ಲಿಗೆ ಹೂ ಗಿಡಕ್ಕೆ ಹೋಗಿ

ಹೆಚ್ಚಿಗೆ ಬ್ಯಾಡ ಕಡಿಮೆ ಬ್ಯಾಡ

ಏಳು ಹೂವ್ವ ಅರ್ಸ್ಯಬೇಕು

ನಿನಗೆ ಮಕ್ಕಳ ಕೊಟ್ಟೇನಿ

ಮಕ್ಕಳು ಹುಟ್ಟಿದ ಒಂಬತ್ತು ದಿನಕ್ಕೆ

ನಾಗರ ಹಾವಾಗಿ ನಾ ಬರ್‍ತೀನಿ ಕಾಟುಕೊಟ್ಟು ಹೋಗ್ತೀನಿ

ಭೂಲಕ್ಷ್ಮೀ ನಿನ್ನ ಜಲ್ಮ ನನ್ನ ಬೆಲ್ಲಿ

ನಿನ್ನ ಮಕ್ಕಳು ನಿನ್ನ ಗಂಡನ ಬೆಲ್ಲಿ

ಇದೇ ವಚನ ನಾ ಕೇಳಿದ್ದು

ತೆಲುಗು (ಅನುವಾದ): ತಪ ಭಿನ್ನ ಮಾಡಿ ಇಳಿದಳ

ಮುತ್ತಿನ ಸೆರಗು ಹಿಡಿದುಕೊಂಡು

ಕೊಡುದೇವ ನನಗೆ ಸಂತಾನ

ನಿನಗೆ ಸಂತಾನವು ಕೊಡ್ತೀನಿ

ನಿನಗೆ ಒಂದ ವಚನವು ಕೇಳುತೀನಿ

ಆ ವಚನಕ್ಕೆ ನನಗೆ ವಚನವು ಕೊಡಬೇಕು

ಏನು ಕೇಳುತ್ತಿದ್ದಿ ಕೇಳು ದೇವರೆ

ಏಳು ಮಕ್ಕಳ ಸಂತಾನ ನಿನಗೆ ಕೊಡ್ತೀನಿ

ಮಕ್ಕಳು ಹುಟ್ಟಿದ ಒಂಬತ್ತು ದಿನಕ್ಕೆ

ಏಳು ತಲೆಯ ನಾಗೇಂದ್ರ ಬರ್‍ತನ

ಬಂದು ನಿನಗೆ ಕಾಟುಕೊಟ್ಟು ನಿನ್ನ ತೆಗೆದುಕೊಂಡು ಬರ್‍ತನ

ನಿನ್ನ ಜಲ್ಮ ನನ್ನ ಹತ್ತಿರ

ನಿನ್ನ ಮಕ್ಕಳು ಏಳು ಮಂದಿ ನಿನ್ನ ಗಂಡನ ಹತ್ತಿರ

ಕೈಮುಟ್ಟಿ ಕೊಡುವುದಿಲ್ಲ

ತೋಟಕ್ಕೆ ಹೋಗಿ

ಮಲ್ಲಿಗೆ ಹೂವ್ವಿನ ಗಿಡಗಳಲ್ಲಿ ಏಳು ಮಲ್ಲಿಗೆ ಹೂವು ಕಿತ್ತುಕೋ[೨೨]

ಭೂಲಕ್ಷ್ಮೀ ಪಾತ್ರವು ಕಥನದ ಜೀವಾಳ. ಭೂಲಕ್ಷ್ಮೀ ಮಕ್ಕಳ ಭಾಗ್ಯಕ್ಕಾಗಿ ತಪಸ್ಸಿಗೆ ನಿಂತಾಗ ಪರಮಾತ್ಮನು ವರ ನೀಡುತ್ತಾನೆ. ಎರಡು ಪಠ್ಯಗಳಲ್ಲಿ ಈ ಸನ್ನಿವೇಶದಲ್ಲಿ ಕೆಲವು ಸಾಲುಗಳಲ್ಲಿ ಭಿನ್ನವಾಗಿ ಕಂಡುಬರುತ್ತದೆ. ಕೆಲವು ಸಾಲುಗಳು ಎರಡು ಪಠ್ಯಗಳಲ್ಲಿ ಮೇಲೆ ಕೆಳಗೆ ಪಲ್ಲಟವಾಗಿ ಬಂದಿವೆ ಹೊರತು ಅದರ ವಸ್ತುವಿನಲ್ಲಿ ವ್ಯತ್ಯಾಸ ಕಾಣುವುದಿಲ್ಲ. ಪರಮಾತ್ಮನು ವರವನ್ನು ನೀಡುವಾಗ ಷರತ್ತನ್ನು ಹಾಕುತ್ತಾನೆ. 'ಮಕ್ಕಳು ಹುಟ್ಟಿದ ಒಂಬತ್ತು ದಿನಕ್ಕೆ ನಾಗರ ಹಾವಾಗಿ ನಾ ಬರ್ತೀನಿ ಕಾಟು ಕೊಟ್ಟು ಹೋಗ್ತೀನಿ' ಕನ್ನಡ ಪಠ್ಯದಲ್ಲಿ ಈ ಸನ್ನಿವೇಶ ಕೊನೆಯಲ್ಲಿ ಬಂದರೆ, ತೆಲುಗು ಪಠ್ಯದಲ್ಲಿ ಮಕ್ಕಳು ಹುಟ್ಟಿದ ಒಂಬತ್ತು ದಿನಕ್ಕೆ ಏಳು ತಲೆಯ ನಾಗೇಂದ್ರ ಬರ್ತನ, ಬಂದು ನಿನಗ ಕಾಟು ಕೊಟ್ಟು ನಿನ್ನ ತೆಗೆದುಕೊಂಡು ಬರ್ತನ' ಎಂದು ಈ ಸನ್ನಿವೇಶದ ಮಧ್ಯದಲ್ಲಿ ವ್ಯಕ್ತವಾಗಿದೆ. ಆದರೆ ಇಲ್ಲಿ ಅಭಿವ್ಯಕ್ತಗೊಂಡಿದ್ದು ಉದ್ದೇಶ ಮಾತ್ರ ಒಂದೆ, ಕನ್ನಡದಲ್ಲಿ ನಾಗರ ಹಾವಾಗಿ ಬಂದರೆ ತೆಲುಗಿನಲ್ಲಿ ಏಳು ತಲೆಯ ನಾಗೇಂದ್ರನಾಗಿ ಬರುತ್ತಾನೆ. ಆದರೆ ಅದರ ಆಶಯವು ಮಾತ್ರ ಒಂದೇಯಾಗಿದ್ದನ್ನು ಕಾಣುತ್ತೇವೆ. ಎರಡು ಕಥನಗಳಲ್ಲಿ ಮಲ್ಲಿಗೆ ಹೂವಿನ ತೋಟದಲ್ಲಿ ಏಳೇ ಹೂವನ್ನು ಆರಿಸಿಕೊಳ್ಳಬೇಕೆಂದು ನಿರೂಪಣೆಗೊಂಡಿದೆ. ಪರಮಾತ್ಮನು ನೇರವಾಗಿ ವರವನ್ನು ಕೊಡುವುದಿಲ್ಲ ಅವಳ ಕೈಯಿಂದಲೇ ಪಡೆಯಲು ಸೂಚಿಸುತ್ತಾನೆ. ಪರಮಾತ್ಮನು ವಚನಕ್ಕೆ ಒಪ್ಪಿ ಮಕ್ಕಳ ಭಾಗ್ಯವನ್ನು ಪಡೆಯುತ್ತಾಳೆ. ತನ್ನ ಜೀವ ಹೋದರೂ ಪರವಾಗಿಲ್ಲ ಮಕ್ಕಳನ್ನು ಪಡೆಯಬೇಕೆಂಬ ಹೆಣ್ಣಿನ ಆಶೆಯು ವ್ಯಕ್ತವಾಗಿದೆ. ಹೆಣ್ಣುಮಕ್ಕಳನ್ನು ಹೆತ್ತಾಗ ಮಾತ್ರ ಹೆಣ್ಣಾಗಿ ಹುಟ್ಟಿದ್ದಕ್ಕೆ ಸಾರ್ಥಕ ಎಂಬುದನ್ನು ಅರಿತ ಭೂಲಕ್ಷ್ಮೀ ತಪಸ್ಸಿನಿಂದ ಮಕ್ಕಳು ಪಡೆದು ತನ್ನ ಜೀವವನ್ನು ಕೊಡುತ್ತಾಳೆ.

ಭೂಲಕ್ಷ್ಮೀ ಕಥನದ ಮಾಣಿಕ್ಯಲದೇವಿ ಪಾತ್ರವು ಕಥನದ ಮುಖ್ಯಪಾತ್ರವಾಗಿದೆ. ಸ್ತ್ರೀ ಪ್ರಧಾನವಾದ ಕಥನವಾಗಿದ್ದರಿಂದ ಈ ಪಾತ್ರವು ಮುಖ್ಯವೆನಿಸುತ್ತದೆ. ದ್ವೇಷ, ಅಸೂಯೆ, ಮತ್ಸರ, ಸವತಿ ಮತ್ಸರ, ಅಹಂಭಾವ ಮುಂತಾದ ಗುಣಗಳುಳ್ಳ ಮಾಣಿಕ್ಯಲದೇವಿ ಪಾತ್ರ ಕೊನೆಗೆ ದುರಂತದಲ್ಲಿ ಕೊನೆ ಗೊಳ್ಳುತ್ತದೆ. ನವಭೋಜರಾಜ ಭೂಲಕ್ಷ್ಮೀ ಸ್ವರ್ಗಸ್ಥರಾದ ಮೇಲೆ ಪಟ್ಟಣದ ಹಿರಿಯರ ಒತ್ತಾಯದ ಮೇರೆಗೆ ಮಾಣಿಕ್ಯಲದೇವಿಯನ್ನು ಮದುವೆಯಾಗುತ್ತಾನೆ. ಮಾಣಿಕ್ಯಲದೇವಿ ಮನೆಯಲ್ಲಿ ಇದ್ದ ಸವತಿ ಮಕ್ಕಳನ್ನು ಕಂಡು ಹೊಟ್ಟೆಕಿಚ್ಚು ಹುಟ್ಟುತ್ತದೆ.

ಕನ್ನಡ: ಏಳು ಮಂದಿ ಮಕ್ಕಳ ಕಡೆಗೆ ನೋಡಿದಳು

ನೋಡಿದ ಗಳಿಗೆ ಆಕೆಗೆ ಹೊಟ್ಟೆಬ್ಯಾನಿ ಸುರುವಾಯ್ತು

ಈ ಸವತಿ ಮಕ್ಕಳಿಗೆ ಯಾರು ಸಲುವ್ರ ಬೇಕು

ಮನಸ್ಸಿನಗ ಅಂದುಕಂತ ಕುಂತಳು

ತೆಲುಗು (ಅನುವಾದ): ಆ ಏಳು ಮಂದಿ ಮಕ್ಕಳು ನೋಡಿ

ಈ ಸವತಿ ಮಕ್ಕಳ್ನ ಯಾರು ಸಾಕಬೇಕು

ಯಾರು ಜೋಪಾನ ಮಾಡಬೇಕು

ಕಣ್ಣುಕೆಂಪಾದವು ಮಲತಾಯಿಗೆ[39]

ಮದುವೆಯಾಗಿ ಮನೆಗೆ ಬಂದ ಕೂಡಲೆ ಸವತಿ ಮಕ್ಕಳನ್ನು ಕಂಡು ಉರಿದು ಬೀಳುತ್ತಾಳೆ. ಇಲ್ಲಿ ಎರಡು ಸನ್ನಿವೇಶಗಳನ್ನು ನೋಡಿದಾಗ ಎರಡು ಪಠ್ಯಗಳಲ್ಲಿ ಮಾಣಿಕ್ಯಲದೇವಿ ಪಾತ್ರವನ್ನು ಕಥನಗಾರರು ಒಂದೇ ನೆಲೆಯಲ್ಲಿ ನಿರೂಪಿಸಿದ್ದಾರೆ. ಕೊನಯು ಸಾಲಿನಲ್ಲಿ ಕನ್ನಡ ಪಠ್ಯದಲ್ಲಿ ಈ ಸವತಿ ಮಕ್ಕಳನ್ನು ಯಾರು ಸಲುವುಬೇಕು ಎಂದು 'ಮನಸ್ಸಿನಗ ಅಂದುಕಂತ ಕುಳಿತಳು' ಎಂಬುದು ತೆಲುಗಿನ ಯಾರು ಜೋಪಾನ ಮಾಡಬೇಕು, ಕಣ್ಣು ಕೆಂಪಾದವು ಮಲತಾಯಿಗೆ ಎಂಬ ಸಾಲುಗಳ ಆಶಯ ಒಂದೆ. ಕೊನೆಯ ಎರಡು ಸಾಲುಗಳ ಈ ಸನ್ನಿವೇಶದ ಅಂಶವು ಅಡಗಿದೆ. ಹೀಗೆ ಎರಡು ಕಥನಗಳಲ್ಲಿ ಮಾಣಿಕ್ಯಲದೇವಿಯ ಪಾತ್ರವು ಅಸೂಯೆಯಿಂದ ಕೂಡಿದೆ.

ಮಾಣಿಕ್ಯಲದೇವಿ ತನ್ನ ಸವತಿ ಮಕ್ಕಳು ತನಗೆ ಮುಂದೆ ಮಾರಕ ಆಗುತ್ತಾರೆಂಬ ದ್ವೇಷದಿಂದ ಮಕ್ಕಳಿಗೆ ವಿಷಕೊಟ್ಟು ಹಾಲು ಬಾವಿಯಲ್ಲಿ ಹಾಕಿ ಬಂಡೆ ಮುಚ್ಚುತ್ತಾಳೆ.

ಕನ್ನಡ: ಏಳು ಮಂದಿ ಮಕ್ಕಳ ಬಾವಿಯೊಳಗೆ ಹಾಕಿ

ದೊಡ್ಡದೊಂದು ಬಂಡೆ ತಂದು

ಬಾವಿ ಮೇಲೆ ಮುಚ್ಚಿ

ಬಾರಿಬೇಲಿ ತಂದು ಬಾವಿಗೆ ಬಡಿದು

ಹಿಂದಕೆ ತಿರುಗಿ ನೋಡಲಾರದಂಗ ಮನೆಗೆ ಬಂದು

ಮನೆಯಲ್ಲಿ ಸಾರಿಸಿಕೊಂಡು

ಹೋಳಿಗಿ ಅನ್ನ ಮಾಡಿಕೊಂಡು

ಚಂಡಿಗಿ ಸ್ಯಾವಿಗಿ ಮಾಡಿಕೊಂಡು

ಹೊಟ್ಟೆತುಂಬ ತುಂಬ ಊಟ ಮಾಡಿದಳು

ಇಲ್ಲಿಗೆ ಸವತಿ ಪೀಡ ಹೋಳಾಯ್ತು

ತೆಲುಗು (ಅನುವಾದ): ಬಾವ್ಯಾಗ ಹಾಕ್ಯಾಳ ಏಳು ಮಂದಿ ಮಕ್ಕಳ್ನ

ದೊಡ ಬಂಡೆ ತಂದಳ

ಬಾವಿ ಮ್ಯಾಲೆ ಬಂಡೆ ಮುಚ್ಚ್ಯಳ

ಬಾರಿಮುಳ್ಳ ತಂದಳ

ಬಾವಿ ಮ್ಯಾಲೆ ಬಾರಿಮುಳ್ಳ ಹೊದ್ದಳ

ಮನೆಗೆ ಬಂದಳ

ಮನೆಯೆಲ್ಲ ಸಾರಿಸ್ಯಾಳ

ಸಾರಿಸಿಕೊಂಡು ಬಂಗಾರದ ಬಚ್ಚಲಲ್ಲಿಗೆ ಬಂದಳ

ತಲೆಸ್ನಾನ ಮಾಡ್ಯಾಳ

ಅಡಿಗೆಗೆ ಹೋಳಿಗಿ ಮಾಡಿಕೊಂಡಳ

ಹಾಲು ಅನ್ನ ಮಾಡಿಕೊಂಡಳ

ಮಕ್ಕಳ ಊಟ ಮಾಡಿಕೊಂಡಳ

ಸವತಿ ಪೀಡೆ ಇಲ್ಲಿಗೆ ಮುಗಿಯಿತು[31]

ಮಾಣಿಕ್ಯಲದೇವಿ ಮಕ್ಕಳನ್ನು ಬಾವಿಗೆ ಯಾರು ನೋಡದಂತೆ ಹಾಕಿರುತ್ತಾಳೆ. ಬಾವಿಯ ಮೇಲೆ ಕಲ್ಲನ್ನು ಹಾಕಿ, ಅಲ್ಲಿಗೆ ಯಾರು ಹೋಗಬಾರದೆಂದು ಬಾರಿ ಮುಳ್ಳನ್ನು ಹಾಕಿರುತ್ತಾಳೆ. ಮಕ್ಕಳ ಪೀಡೆ ಇಲ್ಲಿಗೆ ಮುಗಿಯಿತು ಎಂದು ಮನೆಗೆ ಬಂದು ಹೋಳಿಗಿ ಮಾಡಿಕೊಂಡು ತಿನ್ನುವುದನ್ನು ಕಂಡರೆ ಅವಳಲ್ಲಿ ಇರುವ ಅಸೂಯೆ ವ್ಯಕ್ತವಾಗುತ್ತದೆ. ಮಕ್ಕಳ ಮೇಲೆ ಎಷ್ಟರ ಮಟ್ಟಿಗೆ ದ್ವೇಷ ಇಟ್ಟುಕೊಂಡಿದ್ದಳೆಂಬುದು ಗೊತ್ತಾಗುತ್ತದೆ. ಕೊನೆಗೆ ಇಲ್ಲಿಗೆ ಸವತಿ ಪೀಡೆ ದೂರವಾಯಿತು ಎಂದು ನಿಟ್ಟುಸಿರು ಬಿಡುತ್ತಾಳೆ. ಮಾಣಿಕ್ಯಲದೇವಿ ಪಾತ್ರವನ್ನು ನೋಡಿದಾಗ ಸವತಿ ಮಕ್ಕಳ ಮೇಲಿನ ದ್ವೇಷ ಅದನ್ನೇ ಸಾಧಿಸುವ ಹೆಣ್ಣಿನ ಅಂತರಾಳ ಎಂತದೆಂಬುದು ತಿಳಿಯುತ್ತದೆ. ಕಥನದುದ್ದಕ್ಕೂ ಕನ್ನಡ-ತೆಲುಗು ಎರಡು ಪಠ್ಯಗಳಲ್ಲಿ ಗಂಡನನ್ನು ತನ್ನ ಹತೋಟಿಯಲ್ಲಿ ಇಟ್ಟುಕೊಳ್ಳಲು ಹಂಬಲಿಸುವ ರೀತಿ, ಅದರಿಂದ ಸೋತಾಗ ಗಂಡನಿಂದಲೇ ಮಕ್ಕಳನ್ನು ದೂರ ತಳ್ಳುವ ಪರಿ ಇವೆಲ್ಲಾ ಮಾಣಿಕ್ಯಲದೇವಿ ಪಾತ್ರದಲ್ಲಿ ಮನೆ ಮಾಡಿವೆ. ಕೊನೆಗೆ ಇವಳ ಕುತಂತ್ರ ಬಯಲಾಗಿ ಗಂಡನಿಂದಲೇ ಶಿಕ್ಷೆಗೆ ಒಳಪಡುತ್ತಾಳೆ.

ಈ ಕಥನದಲ್ಲಿ ನವಭೋಜರಾಜ ಪಾತ್ರವೇ ಪುರುಷ ಪಾತ್ರವಾಗಿ ಎದ್ದು ಕಾಣುತ್ತದೆ. ಒಂದು ಕಡೆ ಮೊದಲ ಹೆಂಡತಿ ಭೂಲಕ್ಷ್ಮೀ ತನ್ನನ್ನು ಅಗಲಿದ ಚಿಂತೆ, ಹೀಗಾಗಿ ತನ್ನ ಏಳು ಜನ ಹೆಣ್ಣುಮಕ್ಕಳೇ ತನ್ನ ಜೀವ ಎಂದು ತಿಳಿದುಕೊಂಡಿರುತ್ತಾನೆ. ಎರಡನೆಯ ಮದುವೆಯಾಗಿದ್ದ ಮಾಣಿಕ್ಯಲದೇವಿಯ ಚಾರಿತ್ರ್ಯ, ಅವಳಲ್ಲಿರುವ ದುಷ್ಟಗುಣ, ಸ್ವಾರ್ಥಗುಣದಿಂದ ರೋಸಿ ಹೋಗುತ್ತಾನೆ. ಅವಳಿಂದಲೇ ತನ್ನ ಸಿರಿಸಂಪತ್ತು ರಾಜ್ಯವನ್ನು ಕಳೆದುಕೊಳ್ಳುತ್ತಾನೆ. ಅವಳಿಂದ ಮಕ್ಕಳನ್ನು ದೂರ ತಳ್ಳುತ್ತಾನೆ. ಕೊನೆಗೆ ತನ್ನ ಮಕ್ಕಳಿಂದಲೇ ಸಿರಿ ಸಂಪತ್ತು, ರಾಜ್ಯವನ್ನು ಗಳಿಸುತ್ತಾನೆ. ಕನ್ನಡ-ತೆಲುಗು ಎರಡು ಆವೃತ್ತಿಗಳಲ್ಲಿ ಈ ಪಾತ್ರ ಮುಖ್ಯವಾಗಿಯೇ ಬಂದಿದೆ.

ನವಭೋಜರಾಜನ ಹೆಂಡತಿ ಸಂತಾನಭಾಗ್ಯ ಪಡೆದು ಪರಮಾತ್ಮನಿಂದ ವಚನ ಪಡೆದು ಬಂದಿರುತ್ತಾಳೆ. ತನ್ನ ಹೆಂಡತಿಯನ್ನು ಉಳಿಸಿಕೊಳ್ಳಲು ಹರಸಾಹಸ ಮಾಡುತ್ತಾನೆ. ಹೆಂಡತಿಯನ್ನು ಉಳಿಸಿಕೊಳ್ಳಲು ಯೋಚನಾ ಮಗ್ನನಾಗುತ್ತಾನೆ. ಭೂಲಕ್ಷ್ಮಿಗೆ ಭದ್ರತೆ ಒದಗಿಸುತ್ತಾನೆ.

ಕನ್ನಡ: ರಾಜ ಕುಂತಲ್ಲಿ ಯೋಚನ ಮಾಡ್ತನ
ಒಂಬತ್ತು ದಿನಕ ನಾಗರ ಹಾವಾಗಿ ಬರ್‍ತದ
ಕಾಟುಕೊಟ್ಟು ಭೂಲಕ್ಷ್ಮೀದೇವಿಗೆ ಹೋಯ್ತನ
ಮನೆ ಸುತ್ತಮುತ್ತ ಬೆಂಕಿನ ಗುಂಡ ಅಗುಳಿಸಬೇಕು
ಮಂದಿನ ಕರಕಂಡು ಭೂಲಕ್ಷ್ಮೀ ಮನೆಗೆ ಬಂದ
ಮನಿ ಸುತ್ತಮುತ್ತ ಬೆಂಕಿನ ಗುಂಡ ಅಗುಳಿಸಿದ
ಸಿರಿಗಂಧ ಸೆಕ್ಕಿ ಹಾಕಿ ಬೆಂಕಿ ಹಚ್ಚಿದ
ಇರವಿ ಹೋಗಲಾಕ ಸಂದು ಇಲ್ಲ
ಒಂದು ಮನುಷ್ಯ ಹೋಗಕ ದಾರಿ ಇಲ್ಲ
ಮನೆ ಸುತ್ತಮುತ್ತ ಪಾಬಂದಿ ಮಾಡಿ

ತೆಲುಗು (ಅನುವಾದ): ನವಭೋಜರಾಜ ಕಚೇರಿದೊಳಗ ಕುಳಿತು
ಯೋಚನ ಮಾಡುತ್ತಿದ್ದ
ಒಂಬತ್ತು ದಿನಕ್ಕೆ ನಾಗರಾಜ ಬರ್‍ತನ
ಭೂಲಕ್ಷ್ಮಿಗೆ ಕಾಟುಕೊಟ್ಟು ಭೂಲಕ್ಷ್ಮಿನ ಹೊಯ್ತನ
ಮನೆ ಸುತ್ತಮುತ್ತ ಅಗ್ನಿಗುಂಡ ತೋಡಿಸುತ್ತಾನ
ರೈತರನ ಕರೆದುಕೊಂಡು ಬಂದು ಅಗುಳಿಸಿದನು
ಅಗುಳಿ ಸಿರಿಗಧ ಸೆಕ್ಕಿಗಳು ಹಾಕಿ
ಅಗ್ನಿಗುಂಡವು ಸುರು ಮಾಡಿದ
ಮನೆ ಸುತ್ತಮುತ್ತ ಧಗ ಧಗ ಉರಿಯುತ್ತಿದೆ
ಇರವಿ ಹೋಗಲಾಕ ಸಂದು ಇಲ್ಲ
ಸಂದು ಇಲ್ಲದಂತ ಅಗ್ನಿಕುಂಡ ತಯಾರು ಮಾಡಿದ[೨೨]

ಇಲ್ಲಿ ತನ್ನ ಹೆಂಡತಿ ಬಗ್ಗೆ ಕಾಳಜಿಯನ್ನು ವ್ಯಕ್ತಪಡಿಸುತ್ತಾನೆ. ಭೂಲಕ್ಷ್ಮಿ ಮಕ್ಕಳನ್ನು ಹೆತ್ತ ಒಂಬತ್ತು ದಿನಗಳಲ್ಲಿ ನಾಗರಹಾವು ಬಂದು ಕಚ್ಚುತ್ತೆಂಬ ಉದ್ದೇಶದಿಂದ ಭೂಲಕ್ಷ್ಮೀ ವಾಸವಿದ್ದ ಮನೆಯ ಸುತ್ತಮುತ್ತ ಗುಂಡಿ ತೋಡಿಸಿ, ಅದರಲ್ಲಿ ಸಿರಿಗಂಧದ ಬೆಂಕಿಯನ್ನ ಉರಿಸುತ್ತಾನೆ. ಅಗರಬತ್ತಿ ಹಚ್ಚಿದರೆ ಹಾವುಗಳು

ಬರುವುದಿಲ್ಲ ಎಂಬ ಮನೋಭಾವದಿಂದ, ಸಿರಿಗಂಧದ ಸೆಕ್ಕಿಯನ್ನು ಇಲ್ಲಿ ಅಭಿವ್ಯಕ್ತ ಮಾಡಿದ್ದಾರೆ. ಸಿರಿಗಂಧದ ಸೆಕ್ಕಿಯ ಸುಗಂಧ ವಾಸನೆಗೆ ಹಾವು ಹತ್ತಿರ ಸುಳಿಯುವುದಿಲ್ಲ ಎಂಬ ಅಂಶವು ವ್ಯಕ್ತಗೊಂಡಿದೆ. ಹಾಗೆಯೇ ಇರುವೆ ಕೂಡಾ ಒಳಗೆ ನುಸುಳದಂತ ಭದ್ರತೆ ವ್ಯವಸ್ಥೆ ಭೂಲಕ್ಷ್ಮಿಗೆ ರಾಜನು ಮಾಡಿದ್ದಾನೆ. ಇಲ್ಲಿ ಪ್ರತಿಯೊಂದು ಸಾಲು ಎರಡೂ ವ್ಯತ್ಯಾಸವಾಗಿಲ್ಲ.

ನವಭೋಜರಾಜನಿಗೆ ತನ್ನ ಹೆಂಡತಿ ಭೂಲಕ್ಷ್ಮಿಯನ್ನು ಉಳಿಸಿಕೊಳ್ಳಲು ಆಗುವುದಿಲ್ಲ. ಮಾಣಿಕ್ಯಲದೇವಿಯನ್ನು ಮರುಮದುವೆ ಮಾಡಿಕೊಡು ಪಡಲಾರದ ಬವಣೆಯನ್ನು ಪಡೆಯುತ್ತಾನೆ. ಒಂದು ಕಡೆ ತನ್ನ ಏಳು ಜನ ಹೆಣ್ಣುಮಕ್ಕಳ ಮೇಲಿನ ಪ್ರೀತಿ, ಇನ್ನೊಂದು ಕಡೆ ಹೆಂಡತಿ ಮಾಣಿಕ್ಯಲದೇವಿಯ ಮೇಲೆ ಪ್ರೀತಿ ಹೀಗೆ ಇವರ ಮಧ್ಯದಲ್ಲಿ ಸಿಲುಕಿ ವಿಲಿವಿಲಿ ಒದ್ದಾಡುತ್ತಾನೆ. ಹೀಗೆ ಎರಡೂ ಆವೃತ್ತಿಗಳಲ್ಲಿ ನವಭೋಜರಾಜನ ಪಾತ್ರವು ಮುಳ್ಳಿನ ಹಾಸಿಗೆಯಂತೆ ವ್ಯಕ್ತಗೊಂಡಿದೆ.

ರಾಜನ ಏಳು ಜನ ಹೆಣ್ಣುಮಕ್ಕಳು ಮಲತಾಯಿ ಮಾಣಿಕ್ಯಲದೇವಿಯ ಕೈಯಲ್ಲಿ ಸಿಕ್ಕಿ ಶಿಕ್ಷೆ ಅನುಭವಿಸಬೇಕಾಗುತ್ತದೆ. ಆದರೆ ಈ ವಿಷಯ ತಂದೆ ನವಭೋಜರಾಜನಿಗೆ ಹೇಳದೆ ಅದರ ನೋವನ್ನು ನುಂಗಿ ಬಾಳುತ್ತಾರೆ. ಈ ಮಕ್ಕಳು ಸತ್ತಾಗ ಭೂಲಕ್ಷ್ಮಿ ಸ್ವರ್ಗದಿಂದ ಬಂದು ಬದುಕಿಸಿ ಆಕಳಾಗಿ ಹಾಲನ್ನು ಉಣಿಸುವುದು ಕರುಣಾಜನಕವಾಗಿದೆ. ತಂದೆ ಮಕ್ಕಳನ್ನು ಅರಣ್ಯದಲ್ಲಿ ಬಿಟ್ಟು ಬಂದರು. ಅವರಿಗೆ ಒಳ್ಳೆಯದೇ ಆಗುತ್ತದೆ. ಭೂಲಕ್ಷ್ಮಿ ತಂಗಿ ಅನ್ನಲಕ್ಕಮ್ಮ ಈ ಮಕ್ಕಳನ್ನ ಸಲಹುತ್ತಾಳೆ. ಹುಲಿರಾಜ ಕ್ರೂರಿಯಾದರೂ, ಮಕ್ಕಳ ಮೇಲೆ ಪ್ರೀತಿ ತೋರಿಸುವ ರೀತಿಯಲ್ಲಿ ಆತನ ಔದಾರ್ಯ ಕಾಣುತ್ತದೆ. ಪಾನ್‌ಗಲ್ ಪಟ್ಟಣದ ಉದಿಬದ್ದಿರಾಜನ ಏಳು ಜನ ಗಂಡುಮಕ್ಕಳ ಜೊತೆ. ಏಳು ಜನ ಹೆಣ್ಣುಮಕ್ಕಳು ಮದುವೆಯಾಗುತ್ತಾರೆ. ಆದರೆ ಹೆಣ್ಣುಮಕ್ಕಳಿಗೆ ಮಾಡಿದ ದ್ರೋಹ ಅವರ ಶಾಪದಿಂದ ನವಭೋಜರಾಜ ಮಾಣಿಕ್ಯಲದೇವಿ ಸಿರಿಸಂಪತ್ತು ರಾಜ್ಯ ಕಳೆದುಕೊಳ್ಳುತ್ತಾರೆ. ಕಟ್ಟಿಗೆ ಮಾರಿ ಜೀವನ ಸಾಗಿಸುತ್ತ ನೇರವಾಗಿ ಇವರ ಮದುವೆಗೆ ಬರುತ್ತಾರೆ. ಚಿಕ್ಕ ಮಗಳು ಬಾಲನಾಗಮ್ಮ ತಂದೆಯನ್ನು ಗುರುತು ಹಿಡಿಯುತ್ತಾಳೆ. ತಂದೆಗೆ ಮತ್ತೊಂದು ಮದುವೆ ಮಾಡುತ್ತಾರೆ. ಮತ್ತೆ ಅವರ ರಾಜ್ಯ ಅಧಿಕಾರ ಅಂತಸ್ತು ಮರಳಿ ಬರುತ್ತದೆ. ತಂದೆ ನವಭೋಜರಾಜನು ಮಾಣಿಕ್ಯಲದೇವಿಯ ಅಂತರಂಗವನ್ನು ಅರಿತು ಅವಳಿಗೆ ಶಿಕ್ಷೆ ವಿಧಿಸುತ್ತಾನೆ. ಹೀಗೆ ಕತೆಯ ಅಂತ್ಯದಲ್ಲಿ ಕೆಟ್ಟವರಿಗೆ ಶಿಕ್ಷೆಯಾಗುತ್ತದೆ. ಒಳ್ಳೆಯವರಿಗೆ ಸುಖವಾಗುತ್ತದೆ ಎಂಬ ಸದಾಶಯದಿಂದ ಕೊನೆಯಾಗುತ್ತದೆ.

**ಮಮತೆ**

ಭೂಲಕ್ಷ್ಮೀ ಕಥನದ ಎರಡು ಆವೃತ್ತಿಗಳಲ್ಲಿ ಭೂಲಕ್ಷ್ಮಿಯ ವಾತ್ಸಲ್ಯ, ನವಭೋಜರಾಜನ ಮಕ್ಕಳ ಮಮತೆ, ಅನ್ನಲಕ್ಕಮ್ಮಳ ತಂಗಿ ಮಕ್ಕಳ ಮೇಲಿನ ಮಮತೆ ಹುಲಿರಾಜನ ಕರುಣೆ ಮುಂತಾದ ಅಂಶಗಳು

ನಿರೂಪಣೆಗೊಂಡಿವೆ. ಮುಖ್ಯವಾಗಿ ಇವರೆಲ್ಲರ ಮುಖ್ಯ ಆಶಯ ಮುದ್ದು ಮಕ್ಕಳನ್ನು ಮಮತೆಯಿಂದ ಪೋಷಿಸುವುದಾಗಿದೆ.

ಭೂಲಕ್ಷ್ಮೀ ತನಗೆ ನಾಗರಹಾವು ಕಚ್ಚಿ ಸಾಯುವಾಗ ತನ್ನ ಮಕ್ಕಳ ಬಗ್ಗೆ ಕಾಳಜಿ ವಹಿಸಲು ಗಂಡನಿಗೆ ಸೂಚಿಸುತ್ತಾಳೆ.

ಕನ್ನಡಃ ಏಳು ಮಂದಿಮಕ್ಕಳು ನಿನ್ನ ಕೈಯಾಗ

ಈ ಮಕ್ಕಳು ಚೊಲ ಹೊತ್ತಿನಗ ನೀ ಜೋಪಾನ ಮಾಡು

ರಾಜಗೆ ಹೇಳ್ಯಾಳ

ರಾಜಗೆ ಹೇಳಿ ರಾಜನ ತೊಡೆಯ ಮೇಲೆ ತಲೆ ಇಟ್ಟಳ

ತಾಯಿಯಾದರೆ ನೀನು ತಂದೆಯಾದರೆ ನೀನು

ಬಂದು ಬಳಗ ನೀನೆ ಅಂತಳ

ರಾಜಗೆ ಹೇಳಿ ಕಣ್ಣೀರ ತೆಗೆದಳ

ಪಟ್ಟನೆ ಜಲ್ಮ ತಾಯಿ ಕೊಟ್ಟಾಳ

ತೆಲುಗು (ಅನುವಾದ)ಃ ನನ್ನ ಪ್ರಾಣ ಹೋಗ್ತದ ನಾನು ಸಾಯ್ತೀನಿ

ಏಳುಮಂದಿ ಮಕ್ಕಳ್ನ ಚೆನ್ನಾಗಿ ಜೋಪಾನ ಮಾಡು

ಮಕ್ಕಳ ಅದ್ದುಮುದ್ದು ಅಡವಿ ಪಾಲಾಯ್ತು

ಮಕ್ಕಳ ಮೋಚಾರ ನಾನು ನೋಡಲಿಲ್ಲ

ನಿನ್ನ ಮಕ್ಕಳು ನಿನ್ನ ಕೈಯಾಗ ರಾಜ

ರಾಜನ ತೊಡೆಯ ಮ್ಯಾಲೆ ಭೂಲಕ್ಷ್ಮೀ ತಲೆ ಇಟ್ಟು

ಪಳ್ಳಪಳ್ಳ ಕಣ್ಣೀರು ತೆಗೆದು ಪ್ರಾಣ ಕೊಟ್ಟಳ[೨೯]

ಇಲ್ಲಿ ಎರಡು ಆವೃತ್ತಿಗಳಲ್ಲಿ ಈ ಸನ್ನಿವೇಶ ಇದೆ. ಭೂಲಕ್ಷ್ಮಿ ಗಂಡನಿಗೆ ಮಕ್ಕಳನ್ನು ಜೋಪಾನ ಮಾಡಲು ಕೇಳಿಕೊಳ್ಳುತ್ತಾಳೆ. ಕನ್ನಡ ಪಠ್ಯದಲ್ಲಿ ಈ ಮಕ್ಕಳಿಗೆ 'ತಾಯಿ ತಂದೆ ಬಂಧು ಬಳಗ' ನೀನು ಎನ್ನುತ್ತಾಳೆ. ಆದರೆ ತೆಲುಗು ಪಠ್ಯದಲ್ಲಿ ಮಕ್ಕಳ ಮುದ್ದು ನೋಡಲಿಲ್ಲ, ಅವರ ಮೋಚಾರ ನೋಡಲಿಲ್ಲ, ಅದು ಸಿಗದೆ ಅಡವಿ ಪಾಲಾಯ್ತು ಎಂದು ಹೇಳುತ್ತಾಳೆ. ಕೊನೆಗೆ ಮಕ್ಕಳ ಬಗ್ಗೆ ಗಂಡನಿಗೆ ಹೇಳಿ ಜೀವ ಕೊಡುತ್ತಾಳೆ. ಕೆಲವು ಸಾಲುಗಳು ಭಿನ್ನವೆನಿಸಿದ್ದರೂ ಅವರ ಆಶವು ಒಂದೇ ಆಗಿದೆ.

ಅನ್ನಲಕ್ಕಮ್ಮ ಹುಲಿರಾಜನಲ್ಲೂ ಸಹ ಮಕ್ಕಳ ಮೆಲಿನ ಮಮತೆ ವ್ಯಕ್ತವಾಗಿದೆ. ಹಾಗೆಯೇ ಆ ಏಳು ಜನ ಹೆಣ್ಣುಮಕ್ಕಳು ಸಹ ತಂದೆ ನವಭೋಜರಾಜನ ಮೇಲಿನ ಪ್ರೀತಿ ಇದ್ದು ತಾವು ಕೆಟ್ಟರೂ ತಂದೆ

ಚೆನ್ನಾಗಿ ಇರಬೇಕೆಂಬ ಆಶಯವು ಮಕ್ಕಳಲ್ಲಿ ಕಾಣುತ್ತದೆ. ನವಭೋಜರಾಜ ಮಕ್ಕಳನ್ನು ಹುಡುಕಿ ಹುಡುಕಿ ಬೇಸತ್ತುಕೊಂಡು ತನ್ನ ಆಸ್ಥಾನದಲ್ಲಿ ಅನ್ನ ನೀರು ಬಿಟ್ಟು ಮಕ್ಕಳನ್ನೇ ನೆನೆದು ಚಿಂತಿಸುತ್ತಾನೆ. ಆದರೆ ಏಳು ಜನ ಮಕ್ಕಳು ಬಜಾರದಲ್ಲಿ ಆಡುತ್ತ ಪಾಡುತ್ತ ಬಂದುದನ್ನು ಕಂಡ ಊರ ಜನರು ರಾಜನಿಗೆ ತಿಳಿಸುತ್ತಾರೆ. ಆಗ ರಾಜನಿಗೆ ಹೊಸಜೀವ ಬಂದಂತೆ ಆಗುತ್ತದೆ. ಇಲ್ಲಿ ರಾಜನ ಮಕ್ಕಳ ಮೇಲಿನ ಮಮತೆ ಇದೆ.

ಕನ್ನಡಃ ರಾಜಗ ಆನೋಟು ಶಕ್ತಿ ಬಂತು
ಕುದುರೋಟು ಲಘು ಬಂತು
ಎಲ್ಲ್ಯಾರಮ್ಮ ತಾಯಿದವರೆ
ರಾಜ ಅಲ್ಲಿ ಬರ್ತರ ಏಳು ಮಂದಿ ಮಕ್ಕಳು
ರಾಜಗ ತೋರಿಸ್ತರ
ಮಕ್ಕಳ ಕಡೆಗೆ ನೋಡಿ ಓಡುತ್ತ ಓಡುತ್ತ ಹೊಡೆ ಬಂದನ
ಮಕ್ಕಳ ಕಾಲಿನ ಮ್ಯಾಲೆ ಬೋರ್ಲ ಬಿದ್ದನ

ತೆಲುಗು (ಅನುವಾದ): ಕುದುರೆಯಷ್ಟು ಲಘು ಬಂದದ
ಆನೆಯಷ್ಟು ಶಕ್ತಿ ಬಂದದ
ಎಲ್ಲ್ಯಾರಮ್ಮ ತಾಯಿ ನನ್ನ ಮಕ್ಕಳ ತೋರ್ಸಿರಿ
ನಿಮ್ಮ ಕಾಲಿಗೆ ಬೀಳ್ತಿನಿ
ಬಂದು ಅವರ ಕಾಲಿಗೆ ಬಿದ್ದನ
ರಾಜ ನಮ್ಮ ಕಾಲಿಗಿ ಯಾಕ ಬೀಳ್ತಿದ್ದಿ
ಬಾ ಕರೆದುಕೊಂಡು ಹೋಗ್ತೀನಿ
ಹಿಂದ ಇಟ್ಕೊಂಡು ಪಗಡಿ ಬಜಾರಿಗೆ ಬಂದರ
ಮಕ್ಕಳು ಆಡುತ್ತ ಬರುತ್ತಾರ ನೋಡುರಾಜ
ಮಕ್ಕಳ್ನ ತೋರಿಸಿ ಅವರ ತಿರುಗಿ ಹೋದರು
ಮಕ್ಕಳು ನೋಡಿದ ಕೂಡಲೆ ಓಡಿ ಓಡಿ ಬಂದನ
ಮಕ್ಕಳ ಹತ್ತಿರ ಬಂದು ಕಾಲಿನ ಮ್ಯಾಲೆ ಬೋರ್ಲಬಿದ್ದನ್[೫]

ಇಲ್ಲಿ ಕನ್ನಡಕ್ಕಿಂತ ತೆಲುಗು ಪಠ್ಯದಲ್ಲಿ ವಿಸ್ತಾರವಾಗಿ ಬಂದಿದೆ. ರಾಜನಿಗೆ ತನ್ನ ಮಕ್ಕಳನ್ನು ಕಂಡು ಹಾಸಿಗೆ ಹಿಡಿದಿದ್ದ ರಾಜನಿಗೆ ಆನೆಯಷ್ಟು ಶಕ್ತಿ ಬರುತ್ತದೆ. ಕುದುರೆಯಷ್ಟು ಚುರುಕಾಗುತ್ತಾನೆ. ಕನ್ನಡದಲ್ಲಿ ಏಳು ಸಾಲಿನಲ್ಲಿ ಬಂದ ವಿಷಯವು ತೆಲುಗಿನಲ್ಲಿ ಹನ್ನೆರಡು ಸಾಲುಗಳಲ್ಲಿ ಅಭಿವ್ಯಕ್ತಗೊಂಡಿದೆ. ಆದರೆ

ತೆಲುಗಿನ ಪದ್ಯದ ಮಧ್ಯದಲ್ಲಿ ಅದೇ ವಿಷಯ ವಿಸ್ತಾರವಾಗಿದೆ. ಇಲ್ಲಿ ಊರಿನ ಹೆಣ್ಣುಮಕ್ಕಳೇ ರಾಜನನ್ನು ಮಕ್ಕಳು ಇದ್ದ ಕಡೆಗೆ ಕರೆದುಕೊಂಡು ಹೋಗುತ್ತಾರೆ. ಆ ಹೆಣ್ಣುಮಕ್ಕಳಿಗೆ ರಾಜ ಸಾಮಾನ್ಯನಂತೆ ಅವರ ಕಾಲಿಗೆ ಬೀಳುತ್ತೇನೆಂದು ಹೇಳುತ್ತಾನೆ. ರಾಜನ ಪಾತ್ರವು ಸಾಮಾನ್ಯ ವ್ಯಕ್ತಿಯಂತೆ ವಾಸ್ತವ ಬದುಕಿನ ಬಿಂಬವಾಗಿ ಬಂದಿದೆ.

### ಮೌಲ್ಯಗಳು

ಈ ಕಥನಗಳಲ್ಲಿ ಮುಖ್ಯವಾಗಿ ಮಾನವೀಯ ಮೌಲ್ಯಗಳು ಎದ್ದು ಕಾಣುತ್ತವೆ. ಒಂದು ಕಡೆ ಮಾಣೆಕ್ಕಲದೇವಿಯ ಕ್ರೂರತನ, ಅಸೂಯೆ, ಅಹಂಭಾವ ಕಂಡು ಬಂದರೆ ಉಳಿದ ಪಾತ್ರಗಳಲ್ಲಿ ಮಾನವೀಯತೆ ಇದೆ. ಭೂಲಕ್ಷ್ಮೀ ತಾನು ಸತ್ತು ಸ್ವರ್ಗ ಸೇರಿದ್ದರೂ ಮಕ್ಕಳ ಕಷ್ಟ ಕಂಡು ಮಕ್ಕಳ ಮೇಲಿನ ಮಮತೆಯಿಂದ ಅವರನ್ನು ಬದುಕಿಸಿ, ಆಕಳಾಗಿ ಹಾಲು ಉಣಿಸುತ್ತಾಳೆ. ಅನ್ನಲಕ್ಕಮ್ಮ ಏಳು ಜನ ಹೆಣ್ಣುಮಕ್ಕಳನ್ನು ತನ್ನ ಸ್ವಂತ ಮಕ್ಕಳಿಗಿಂತ ಹೆಚ್ಚಾಗಿ ಪೋಷಿಸುತ್ತಾಳೆ. ಹುಲಿಯಾಗಿ ಬೇಟೆಯಾಡುವ ಹುಲಿರಾಜನಲ್ಲೂ ಸಹ ಮಾನವೀಯತೆ ಇದ್ದು ಆ ಮಕ್ಕಳನ್ನು ಕಂಡು ಮರುಗುತ್ತಾನೆ. ಈ ರೀತಿಯಾಗಿ ಈ ಕಥನದ ಎರಡು ಆವೃತ್ತಿಗಳಲ್ಲಿ ನಿರೂಪಣೆಗೊಂಡಿದೆ.

ಭೂಲಕ್ಷ್ಮಿ ತನ್ನ ಮಕ್ಕಳ ಹೊಟ್ಟೆಯಲ್ಲಿ ವಿಷ ಇದ್ದುದು ಕಂಡು ಆಕಳಾಗಿ ನಿಂತು ಹಾಲು ಉಣಿಸಿ, ನಂತರ ಮಕ್ಕಳನ್ನು ತನ್ನ ತೆಕ್ಕೆಗೆ ಹಾಕಿಕೊಂಡು ದುಃಖ ಮಾಡುತ್ತಾಳೆ.

ಕನ್ನಡ: ತಾಯಿ ಭೂಲಕ್ಷ್ಮಿ ಹುಟ್ಟಿ ಬಂದು
ಮಕ್ಕಳು ತೆಕ್ಕಿಗಾಕಿಕೊಂಡು
ತಾಯಿ ಕಣ್ಣೀರು ತೆಗೀತಾಳ
ನಾ ಸಾಯಬೇಕು ಮಕ್ಕಳೆ ನಿಮಗಿಂತ ಕಷ್ಟ ಬರಬೇಕು
ಹಡೆದು ಮಂದಿ ಕೈಗೆ ಕೊಟ್ಟು ಹೋಗೀನಿ
ಮಕ್ಕಳ ಇಟಕೊಂಡು ದುಃಖ ಮಾಡಿದಳು

ತೆಲುಗು (ಅನುವಾದ): ಹಡೆದ ತಾಯಿ ಭೂಲಕ್ಷ್ಮಿ
ನಿಜ ರೂಪವಾಗಿ ಭೂಲಕ್ಷ್ಮಿ ನಿಂತಳ
ತಾಯಿಕಡೆ ಮಕ್ಕಳು ನೋಡ್ಯಾರ
ನೋಡಿ ಮಕ್ಕಳು ತಾಯಿ ಪಾದಗಳ ಮ್ಯಾಲೆ ಬಿದ್ದಾರ
ದುಃಖ ಮಾಡ್ತರ
ಹಡೆದ ತಾಯಿ ಭೂಲಕ್ಷ್ಮಿ ಹಡೆದು ಮಂದಿ ಕೈಗಿ ಇಟ್ಟು ಹೋಗಿದಮ್ಮ[೩೦]

ಭೂಲಕ್ಷ್ಮಿ ಸತ್ತು ಸ್ವರ್ಗದಿಂದ ಬಂದು ಸತ್ತ ಮಕ್ಕಳನ್ನು ಬದುಕಿಸಿ ಸಂತೈಸುತ್ತಾಳೆ. ಕನ್ನಡ-ತೆಲುಗು ಎರಡು ಪಠ್ಯಗಳಲ್ಲಿ ಭಿನ್ನವಾಗಿ ನಿರೂಪಣೆ ಕಾಣುತ್ತದೆ. ಕನ್ನಡ ಪಠ್ಯದಲ್ಲಿ ಭೂಲಕ್ಷ್ಮಿ ತನ್ನ ಮಕ್ಕಳನ್ನು ತೆಕ್ಕೆಗಾಕಿಕೊಂಡು ದುಃಖ ಮಾಡಿದರೆ, ತೆಲುಗು ಪಠ್ಯದಲ್ಲಿ ಮಕ್ಕಳ ಮುಂದೆ ತನ್ನ ನಿಜರೂಪವನ್ನು ತೋರಿಸುತ್ತಾಳೆ. ನಾ ಸಾಯಬೇಕು ನಿಮಗೆ ಕಷ್ಟ ಬರಬೇಕಾಗಿತ್ತೆಂದು ಕನ್ನಡದಲ್ಲಿದ್ದರೆ, ತೆಲುಗಿನ ಪಠ್ಯದಲ್ಲಿ ಮಕ್ಕಳು ತಾಯಿಯನ್ನು ನೋಡಿ ಅವಳ ಪಾದದ ಮೇಲೆ ಬಿದ್ದು ದುಃಖಪಡುತ್ತಾರೆ. ಕೊನೆಯ ಸಾಲಿನಲ್ಲಿ ನಾ ಹಡೆದು ಪರರ ಕೈಗೆ ಕೊಟ್ಟು ಹೋಗೀನಿ ಎಂದು ಕನ್ನಡದ ಪಠ್ಯದಲ್ಲಿ ವ್ಯಕ್ತವಾದರೆ ತೆಲುಗು ಪಠ್ಯದಲ್ಲಿ ಮಕ್ಕಳೇ ತಾಯಿಗೆ ಹಡೆದು ಪರರ ಕೈಗೆ ಕೊಟ್ಟು ಹೋಗಿದಮ್ಮ ಎಂದು ದುಃಖಪಡುತ್ತಾರೆ. ಇಲ್ಲಿ ಮುಖ್ಯವಾಗಿ ಭೂಲಕ್ಷ್ಮಿಯ ಮಾನವೀಯತೆ ಕಾಣುತ್ತದೆ. ತಾಯಿ ಮಕ್ಕಳ ಸಂಬಂಧ ವ್ಯಕ್ತಗೊಂಡಿದ್ದು ಮಾನವೀಯತೆ ಮೇಲ್ಮೆ ಪಡೆದಿದೆ.

ನವಭೋಜರಾಜ ಅರಮನೆಗೆ ಬಂದು ಹೆಂಡತಿ ಮಾಣಿಕ್ಯಲದೇವಿಯನ್ನು ಇಂದು ಮಕ್ಕಳು ಕಾಣಿಸುತ್ತಿಲ್ಲ ಎಲ್ಲಿಗೆ ಹೋಗಿದ್ದಾರೆಂದು ವಿಚಾರಿಸುತ್ತಾನೆ. ನನ್ನ ಬಗ್ಗೆ ಕೇಳುವುದಿಲ್ಲ ನಿನ್ನ ಮಕ್ಕಳ ಬಗ್ಗೆ ಮಾತ್ರ ಕೇಳುತ್ತೀಯಾ, ನಿನ್ನ ಮಕ್ಕಳು ನನಗೆ ಗೊತ್ತಿಲ್ಲ ಎಂದಾಗ, ರಾಜನಿಗೆ ಸಿಟ್ಟು ಬಂದು ಹೆಂಡತಿಯನ್ನು ಹೊಡೆದು ಬಡಿದು ಮಕ್ಕಳನ್ನು ಅರಸುತ್ತ ಹೋಗುತ್ತಾನೆ. ರಾಜನ ಮಕ್ಕಳ ಮೇಲಿನ ಪ್ರೀತಿ, ಮಾನವೀಯತೆ ಇಲ್ಲಿ ವ್ಯಕ್ತವಾಗಿದೆ. ಮಲಹೆಂಡತಿಗಿಂತ ಮಕ್ಕಳ ಮೇಲೆ ತುಂಬ ಪ್ರೀತಿ ಇರುತ್ತದೆ.

ಕನ್ನಡಃ ಎಕ್ಕಡಿ ಹೋದಿರಮ್ಮ ಮಕ್ಕಳೆ ನನ್ನ ಬಿಟ್ಟು
ಯಾ ದೇಶಕ್ಕೆ ಹೊಂಟು ಹೋದಿರಿ
ಊರಡಲ ಮಕ್ಕಳ ಮಕ್ಕಳಂತ ತಿರುಗಿ ನೋಡಿದ
ತಾಯಿದವರೆ ನನ್ನ ಮಕ್ಕಳನ್ನ ನೋಡಿದಿರೇನಮ್ಮ
ಮಂದಿಗಿ ಕೇಳುತಾನ
ಯಪ್ಪಾ ಮಕ್ಕಳು ನೋಡಿಲ್ಲ
ಮಕ್ಕಳ ಸುಳಿವು ಇವತ್ತು ಇಲ್ಲ
ಎಕ್ಕಡಿ ಹೋಗ್ಯಾರೇನೋ ಗೊತ್ತಿಲ್ಲ
ಊರು ಮಂದಿ ಹೇಳ್ತಾರ
ರಾಜ ಇಳಿಯೋ ಬಾವಿ ಇಳಿದು ನೋಡ್ತನ
ಸೇದೆಬಾವಿ ಸೇದಿ ನೋಡ್ತನ
ಬೆಟ್ಟ ಬೆಟ್ಟ ತಿರುಗಿ ನೋಡ್ತನ
ಗಿಡ ಗಿಡ ತಿರುಗಿ ಹತ್ತಿ ನೋಡ್ತನ

ಎಲ್ಲಿ ನೋಡಿದರೂ ಮಕ್ಕಳು ಕಾಣಬರಲಿಲ್ಲ

ಮಕ್ಕಳೆ ನನ್ನ ಪರದೇಶಿ ಮಾಡಿ ಹೋದಿರಮ್ಮ

ನನ್ನ ಏಗಿ ಜೋಗಿನ ಮಾಡಿ ಹೋದಿರಲ್ಲಮ್ಮ

ಮಕ್ಕಳು ಮಕ್ಕಳಂತ ರಾಜ ಕಣ್ಣೀರ ತೆಗೀತಾನ

ತೆಲುಗು (ಅನುವಾದ): ಎಲ್ಲಿಗೆ ಹೋದಿರಿ ಯಾ ದಿಕ್ಕಿಗೆ ಹೋದಿರಿ ನೀವು

ಹಸಿ ಪರದೇಶಿ ಮಾಡಿ ಹೋದಿರಿ

ಏಗಿ ಜೋಗಿ ಮಾಡಿ ಹೋದಿರಿ

ಬಜಾರ ಬಜಾರ ತಿರುಗಿ ನೋಡ್ತನ

ಊರೆಲ್ಲ ತಿರುಗಿ ನೋಡ್ಯಾನ

ಎಲ್ಲಿ ನೋಡಿದರೂ ಮಕ್ಕಳಿಲ್ಲ

ಗಿಡ ಗಿಡ ತಿರುಗಿ ನೋಡ್ತನ

ಬೆಟ್ಟ ಬೆಟ್ಟ ತಿರುಗಿ ನೋಡ್ತನ

ಎಲ್ಲಿ ಬಾವಿ ಇದ್ದರೆ ಅಲ್ಲಿ ಇಳಿದು ನೋಡ್ತನ

ಸೇದಿ ಬಾವಿ ಸೇದಿ ನೋಡ್ತನ

ಎಲ್ಲಿನೋಡಿದರೂ ಮಕ್ಕಳು ಕಣ್ಣಿಗೆ ಕಾಣರು

ಆಕಾಶವೇಣೆ ಐಕ್ಯ ಮಾಡಿಕೊಂಡಿದ್ಯ

ಭೂಲಕ್ಷ್ಮಿದೇವಿ ಬಚ್ಚಿಟ್ಟುಕೊಂಡಿದ್ಯ

ಎಲ್ಲಿಗೆ ಹೋದಿರಮ್ಮ ಮಕ್ಕಳಿರಾ

ರಾಜ ದುಃಖಮಾಡ್ತನ[೬೧]

ರಾಜ ನವಭೋಜರಾಜನು ತನ್ನ ಮಕ್ಕಳು ಮನೆಯಲ್ಲಿ ಇಲ್ಲದ್ದನ್ನು ಕಂಡು ಎರಡನೇ ಹೆಂಡತಿ ಮಾಣಿಕ್ಯಲದೇವಿಯ ಕುತಂತ್ರವನ್ನು ಅರಿತು ಮಕ್ಕಳನ್ನು ಹುಡುಕುವ ಪರಿಯು ಕರುಣಾಜನಕವಾಗಿ ಕನ್ನಡ-ತೆಲುಗು ಎರಡೂ ಪಠ್ಯದಲ್ಲಿ ವ್ಯಕ್ತವಾಗಿದೆ. ಈ ಮೇಲಿನ ಸನ್ನಿವೇಶದ ನಿರೂಪಣೆ ಸಂದರ್ಭದಲ್ಲಿ ಕನ್ನಡ ಪಠ್ಯದಲ್ಲಿ ಬಂದ ಸಾಲುಗಳೇ ತೆಲುಗು ಪಠ್ಯದಲ್ಲೂ ಕೊನೆಯಲ್ಲಿ ಬಂದಿದೆ. ಕೇವಲ ಸಾಲುಗಳಲ್ಲಿ ಹಿಂದೆ ಮುಂದೆ ಆಗಿದೆ ಹೊರತು ವಸ್ತುವಿನಲ್ಲಿ ವ್ಯತ್ಯಾಸವಿಲ್ಲ. ಆದರೆ ಇಲ್ಲಿ ತೆಲುಗು ಪಠ್ಯದಲ್ಲಿ 'ಆಕಾಶವೇಣೆ ಐಕ್ಯ ಮಾಡಿ ಕೂಡಿದ್ಯ, ಭೂಲಕ್ಷ್ಮಿದೇವಿ ಬಚ್ಚಿಟ್ಟುಕೊಂಡಿದ್ಯ' ಎಂಬ ಸಾಲುಗಳು ಮಾತ್ರ ಹೆಚ್ಚಿಗೆ ಬಂದಿದೆ. ರಾಜನು ತನ್ನ ಮಕ್ಕಳನ್ನು ಅರಸುತ್ತ ಎಲ್ಲೂ ಕಾಣದೇ ಹೋದ ಸಂದರ್ಭದಲ್ಲಿ ಈ ಮಾತುಗಳನ್ನು ಆಡುತ್ತಾನೆ. ಅಂದರೆ ಮಕ್ಕಳು ಸತ್ತು ಅವರ ಜೀವ ಆಕಾಶದಲ್ಲಿ ಹಾರಾಡುತ್ತಿದ್ದೆವೊ

ಎಂದು ಪ್ರಶ್ನಿಸುತ್ತಾನೆ. ಹಾಗೆಯೇ ಸತ್ತ ಮಕ್ಕಳನ್ನು ಭೂಗರ್ಭದಲ್ಲಿ ಇಟ್ಟುಕೊಂಡೆಯಾ ಎಂದು ವಿಚಾರ ಮಗ್ನನಾಗುತ್ತಾನೆ. ರಾಜನು ಕಂಡು ಕಂಡವರಿಗೆ ಮಕ್ಕಳ ಬಗ್ಗೆ ವಿಚಾರಿಸುತ್ತಾನೆ. ಬೆಟ್ಟ ಗುಡ್ಡ ಅಲೆದಾಡುತ್ತಾನೆ. ಬಾವಿಗಳನ್ನು ಇಳಿದು ನೋಡುತ್ತಾನೆ. ಎಲ್ಲೂ ಕಾಣದಿದ್ದ ಸಂದರ್ಭದಲ್ಲಿ ತನ್ನನ್ನು ಏಕಾಂಗಿ ಮಾಡಿ ಹೋದಿರಲ್ಲ ಮಕ್ಕಳೆ ಎಂದು ದುಃಖ ಮಾಡುತ್ತಾನೆ. ಇಲ್ಲಿ ಸಾಮಾನ್ಯ ಜನರ ದುಃಖ ವ್ಯಕ್ತವಾಗಿದೆ. ರಾಜನ ಮಾನವೀಯತೆ ಇಲ್ಲಿ ನಿರೂಪಣೆಗೊಂಡಿದೆ.

ಅನ್ನಲಕ್ಕಮ್ಮ ಗಂಡ ಹುಲಿರಾಜ ರಾತ್ರಿ ಹುಲಿಯಾಗಿ ಬೇಟೆಯಾಡುತ್ತಾನೆ. ಕ್ರೂರಿ ಮನೋಭಾವದ ಹುಲಿರಾಜನಲ್ಲೂ ಸಹ ಮಾನವೀಯತೆ ಇದೆ. ಅನ್ನಲಕ್ಕಮ್ಮ ಅಕ್ಕ ಭೂಲಕ್ಷ್ಮಿಯ ಏಳು ಜನ ಮಕ್ಕಳು ಅನಾಥರಾಗಿ ತನ್ನ ಮನೆ ಸೇರಿದ್ದಾರೆ. ಆ ಮಕ್ಕಳನ್ನು ಜೋಪಾನ ಮಾಡಲು ಹೇಳುತ್ತಾನೆ. ಆ ಮಕ್ಕಳ ಕಷ್ಟವನ್ನು ಕಂಡು ದುಃಖಪಡುತ್ತಾನೆ. ಆತನಲ್ಲೂ ಮಾನವೀಯ ಮೌಲ್ಯ ಇದೆಯೆಂದು ಅರಿಯಬಹುದು. ಕನ್ನಡ-ತೆಲುಗು ಎರಡೂ ಕಥನಗಳಲ್ಲೂ ಹುಲಿರಾಜನ ಒಳ್ಳೆತನವು ವ್ಯಕ್ತವಾಗಿದೆ.

ಹಾಗೆಯೇ ನವಭೋಜರಾಜನ ಏಳು ಜನ ಹೆಣ್ಣುಮಕ್ಕಳು ಪಾನಗಲ್ ಪಟ್ಟಣದ ಏಳು ಜನ ರಾಜಕುಮಾರರ ಜೊತೆ ಅದ್ದೂರಿಯಾಗಿ ಮದುವೆಯಾಗುತ್ತಿರುತ್ತದೆ. ಇತ್ತ ತಂದೆ ನವಭೋಜರಾಜ ಮಲತಾಯಿ ಮಾಣಿಕ್ಯಲದೇವಿ ಅವರು ಮಾಡಿದ ಕರ್ಮದಿಂದ ಸಿರಿ ಸಂಪತ್ತು ಅಧಿಕಾರ ಅಂತಸ್ತು ರಾಜ್ಯವನ್ನು ಕಳೆದುಕೊಂಡು ಅದೇ ಪಟ್ಟಣಕ್ಕೆ ಕಟ್ಟಿಗೆ ಮಾರಲು ಬರುತ್ತಾರೆ. ಚಿಕ್ಕಮಗಳು ಬಾಲನಾಗಮ್ಮ ತಂದೆಯನ್ನು ಕಂಡು ಹಿಡಿದು ತಾಯಿತಂದೆ ಕಷ್ಟಕೊಟ್ಟರೂ ಮಾನವೀಯತೆಯಿಂದ ಅವರಿಗೆ ಸತ್ಕಾರವನ್ನು ಮಾಡುತ್ತಾಳೆ. ಇಲ್ಲಿ ಏಳು ಹೆಣ್ಣುಮಕ್ಕಳಲ್ಲಿ ಚಿಕ್ಕವಳಾದರೂ ದೊಡ್ಡಗುಣ ವ್ಯಕ್ತವಾಗಿದೆ. ಕನ್ನಡ-ತೆಲುಗು ಎರಡೂ ಪಠ್ಯಗಳಲ್ಲಿ ಈ ಸನ್ನಿವೇಶವು ಬಂದಿದೆ.

## ೪.೩. ಒಂದೇ ಕತೆಯ ಬೇರೆ ಬೇರೆ ನಿರೂಪಕರ ಕನ್ನಡ-ತೆಲುಗು ಭಾಷೆಗಳ ಆವೃತ್ತಿಗಳು

### ಶಿವಕುಮಾರ ಕತೆಯ ಕನ್ನಡ-ತೆಲುಗು ಆವೃತ್ತಿಗಳು

ಕನ್ನಡ ಭಾಷೆಯ ಶಿವಕುಮಾರ ಕತೆಯನ್ನು ಅದೇ ಕತೆಯನ್ನು ತೆಲುಗು ಭಾಷೆಯಲ್ಲಿ ಸಂಗ್ರಹಿಸಲಾಗಿದೆ. ಎರಡೂ ಆವೃತ್ತಿಗಳ ಶೀರ್ಷಿಕೆ ಹಾಗೂ ಕತೆಯ ವಸ್ತು ಒಂದೇ ಇದೆ. ಆದ್ದರಿಂದ ಎರಡು ಭಿನ್ನ ಭಾಷೆಯ ಪಠ್ಯಗಳಲ್ಲಿ ಸಾಮ್ಯ ವ್ಯತ್ಯಾಸಗಳ ಹೇಗೆ ಅಭಿವ್ಯಕ್ತಗೊಂಡಿವೆ ಎಂಬುದನ್ನು ಪರಿಶೀಲಿಸಬಹುದು. ಈ ಕತೆಗಳಲ್ಲಿ ಕೆಲವು ಸನ್ನಿವೇಶಗಳಲ್ಲಿ ಕನ್ನಡ ಪಠ್ಯ ದೀರ್ಘವಾಗಿದ್ದರೆ ಕೆಲವು ಸನ್ನಿವೇಶಗಳಲ್ಲಿ ತೆಲುಗು ಪಠ್ಯ ದೀರ್ಘವಾಗಿ ನಿರೂಪಣೆಗೊಂಡಿದೆ. ಅದರ ನಿರೂಪಣೆಯಲ್ಲಿ ಹೇಗೆ ಭಿನ್ನತೆ ಇದೆ ಎಂಬುದನ್ನು ಇಲ್ಲಿ ಪರಿಶೀಲಿಸಲಾಗಿದೆ.

ಎರಡೂ ಪಠ್ಯಗಳಲ್ಲಿ ಸ್ತುತಿಪದ್ಯವು ಆದಿಶಕ್ತಿ ದೇವತೆಗಳನ್ನು ನೆನೆಯುವುದರ ಮೂಲಕ ಪ್ರಾರಂಭವಾಗುತ್ತದೆ. ಎಲ್ಲಾ ಕತೆಗಳಂತೆಯೇ ಮುಖ್ಯವಾಗಿ ಎರಡೂ ಪಠ್ಯಗಳಲ್ಲಿ ತೆಲುಗು ಭಾಷೆಯಲ್ಲೇ ನಿರೂಪಿಸಿದ್ದು ವಿಶೇಷವಾಗಿ ಕಂಡುಬರುತ್ತದೆ.

ತೆಲುಗು (ಅನುವಾದ): ಶರಣು ಶರಣು ಶಾರದಂಭ

ಹುಟ್ಟಿದಮ್ಮ ಬಿಜವಾಡದಗ

ನೆಲೆನಿಂತ ಮಹೇಶ್ವರಿ

ಬೀದಿ ಬೀದಿ ತಿರುಗುವ ತಾಯಿ

ಬಿಜವಾಡದಗ ನಿಂತಿವಮ್ಮ[೮]

ತೆಲುಗು (ಅನುವಾದ): ಶರಣು ಶರಣು ಶರಣು ಓ ತಾಯಿ

ತಾಯಿ ಮಧುರಾಂಭ

ಶರಣ ಮಾಡುವ ಭಾರ ನನ್ನದಮ್ಮ

ತಾಯಿ ಮಧುರಾಂಭ

ಕಂಕುಳ ಕೂಸುಗಳಿಂದ

ಬರ್‍ತೀವಮ್ಮ ನಿನ್ನ ಸೇವೆಗೆ

ಗುಡಿಯಲ್ಲಿ ಬಂಡಾರದ ತಾಯಿ

ಗುಡಿಸುತ್ತ ಬೇವಿನ ಎಲೆಗಳು

ನಿಮ್ಮ ಗುಡಿಗಿ ನಾವು ಬರ್‍ತೀವಮ್ಮ

ನಿನ್ನ ಸೇವೆ ಮಾಡ್ತಿವಮ್ಮ

ಬಿಳಿ ಸೀರೆಯಿಂದ ಬಿಳಿ ರವಿಕೆಯಿಂದ

ತಲೆಯ ಜೋತಿಯಿಂದ ಹೋತುಗಳಿಂದ

ಬರ್‍ತೀವಮ್ಮ ನಿನ್ನ ಸೇವೆಗೆ

ಕಂಕುಳ ಕೂಸುಗಳಿಂದ

ತುಂಬಿದ ಕೊಡಗಳಿಂದ

ತಲೆ ಜೋತಿಗಳಿಂದ ಬರ್‍ತೀವಮ್ಮ ನಿನ್ನ ಸೇವೆಗೆ[೧೧]

ಎರಡೂ ಪಠ್ಯಗಳಲ್ಲಿ ಕತೆಯ ಪ್ರಾರಂಭದಲ್ಲಿ ತೆಲುಗು ಭಾಷೆಯಲ್ಲೇ ನಿರೂಪಿಸಿದರೂ, ಅದರಲ್ಲಿ ವೈಶಿಷ್ಟ್ಯವಿದೆ. ಮೊದಲು ಸರಸ್ವತಿಯನ್ನು ನೆನೆಯುತ್ತಾರೆ. ಸರಸ್ವತಿಗೆ ವಂದಿಸುತ್ತಾರೆ. ನಂತರ ವಿಜಯವಾಡದಲ್ಲಿ ನೆಲೆನಿಂತ ಮಹೇಶ್ವರಿಯನ್ನು ನೆನೆಯುತ್ತಾರೆ. ಅಲ್ಲದೆ ಆ ತಾಯಿ ಬೀದಿ ಬೀದಿ ತಿರುಗಿ ತನ್ನ ಭಕ್ತರಿಗೆ ಆಶೀರ್ವಾದ ನೀಡಿ ಒಂದು ಕಡೆ ಇದ್ದಳೆಂಬುದನ್ನು ವ್ಯಕ್ತಪಡಿಸಿದ್ದಾರೆ. ಮುಖ್ಯವಾಗಿ ಆದಿಶಕ್ತಿ ದೇವತೆಗಳನ್ನು ನೆನೆಯುವುದರ ಮೂಲಕ ಆದಿಶಕ್ತಿಯೇ ತಮ್ಮ ಶುಭಕಾರ್ಯಗಳಿಗೆ ಅಭಯಹಸ್ತ ನೀಡುವಳೆಂಬ ಅರ್ಥದಲ್ಲಿ ಹೇಳಿದ್ದಾರೆ. ಕನ್ನಡ ಪಠ್ಯದಲ್ಲಿ ಕೆಲವೇ ಸಾಲುಗಳಲ್ಲಿ ಮೂಡಿ ಬಂದರೂ, ತೆಲುಗು ಪಠ್ಯದಲ್ಲಿ ಅತ್ಯಂತ

ದೀರ್ಘವಾಗಿ ಬಂದಿದೆ. ಇಲ್ಲಿಯೂ ಸಹ ಮೊದಲು ಸ್ತ್ರೀ ದೇವತೆಗಳನ್ನು ಸ್ತುತಿಸಿದ್ದಾರೆ. ನಿನಗೆ ವಂದಿಸುವ ಭಾರ ಮಾತ್ರ ನನ್ನದು. ಪ್ರತಿಫಲವನ್ನು ಕೊಡುವುದು, ಬಿಡುವುದು ನಿನಗೆ ಬಿಟ್ಟಿದು ಎಂಬ ಭಾವ ಇದೆ. ಮಾತೆಯೇ ಸೇವೆಗೆ ಕಂಕುಳಲ್ಲಿ ಚಿಕ್ಕ ಕೂಸುಗಳನ್ನು ಇಟ್ಟುಕೊಂಡು ಬರುತ್ತೇವೆಂದು ಹೇಳುತ್ತಾರೆ. ಗುಡಿಯಲ್ಲಿ ಭಂಡಾರ, ಗುಡಿಸುತ್ತ ಬೇವಿನ ಎಲೆಗಳು ಎಂದು ಹೇಳುವ ಅವರ ಮಾತಿನಲ್ಲಿ ದೇವತೆಗೆ ಪೂಜಿಸುವ ವಿಧಾನವನ್ನು ಅಭಿವ್ಯಕ್ತ ಮಾಡಿದ್ದಾರೆ.

ಇಲ್ಲಿ ಮುಖ್ಯವಾಗಿ ಗಮನ ಸೆಳೆಯುವುದು ಕತೆಗಾರರು ಪೂಜಿಸುವ ದೇವತೆ ವಿಜಯವಾಡದಲ್ಲಿ ನೆಲೆನಿಂತಿರುವ ಮಹೇಶ್ವರಿ ಅಥವಾ ಶಾರದಾಂಭವನ್ನು ಉದ್ದೇಶಿಸಿ ಹಾಡಿರುವುದು. ಇನ್ನೊಂದು ಪದ್ಯದಲ್ಲಿ ಒಂದು ನಿರ್ದಿಷ್ಟ, ಆದರೆ ಆಕೆ ಜಗದಂಬೆ ದೇವತೆಯನ್ನು ಉಲ್ಲೇಖಿಸಿಲ್ಲ ಹಾಗೂ ಬುರ್ರಕತೆಗಾರರಿಗೆ ವಿಜಯವಾಡದ ದೇವಿಗೂ ಇರುವ ಸಂಬಂಧದ ಸ್ವರೂಪ ಯಾವ ಬಗೆಯದು ಎಂಬುದು ಕುತೂಹಲವಾದ ಸಂಗತಿಯಾಗಿದೆ. ಜಗದಂಬೆಯನ್ನು ಪೂಜಿಸುವ ಬುರ್ರಕತೆಗಾರರ ಮನೋಧರ್ಮ ವಿಶ್ವವ್ಯಾಪಕವಾದುದು ಎಂಬುದು ಅಷ್ಟೇ ಗಮನಾರ್ಹವಾದ ವಿಷಯ.

ನಿನ್ನ ಸೇವೆಗಾಗಿ ನಾವು ಸದಾ ಸಿದ್ದರಿದ್ದೇವೆಂದು ಹೇಳುತ್ತಾರೆ. ಕಷ್ಟದ ಪರಿಹಾರಕ್ಕಾಗಿ ಬಿಳಿಸೀರೆ ಬಿಳಿರವಿಕೆಯಿಂದ ತಲೆ ಮೇಲೆ ಜ್ಯೋತಿ ಇಟ್ಟುಕೊಂಡು ಬರ್ತೀವೆಂದು ಕತೆಗಾರರು ಹೇಳುತ್ತಾರೆ. ಬಿಳಿಯ ವಸ್ತ್ರಗಳು ಪ್ರೀತಿ, ನಂಬಿಕೆ ಸ್ವಚ್ಛ ಮನಸಿನ ಸಂಕೇತವಾಗಿ ಬಂದಿವೆ. ಹಾಗೆಯೇ ಜ್ಯೋತಿಯನ್ನು ಹೊತ್ತುಕೊಂಡು ಬಂದು ಸೇವೆ ಮಾಡುತ್ತೇವೆಂದು ಕತೆಗಾರರು ಹೇಳುತ್ತಾರೆ. ಜ್ಯೋತಿ ತನ್ನ ಬದುಕಿನ ಸಂಸಾರದ ಬೆಳಕಿನ ಸಂಕೇತವಾಗಿ ವ್ಯಕ್ತವಾಗಿದೆ. ಇಲ್ಲಿಯು ಸಹ ಶರಣ ಶರಣ ಶಾರದಂಭ ಮಾಯಮ್ಮ ಶಾರದಂಭ ಎಂದು ಹೇಳುವಲ್ಲಿ ಸರಸ್ವತಿಯೇ ತನ್ನ ಕತೆಯ ಹಾಡಿಗೆ ಸ್ಫೂರ್ತಿ ಎಂದು ಹೇಳುವ ಭಾವ ಇದೆ. ನಂತರ ಜಗದಂಭವನ್ನು ನೆನೆದು ಅವಳ ಮಹಿಮೆಯನ್ನು ಕೊಂಡಾಡುತ್ತಾರೆ. ನಿನ್ನ ಪೂಜೆ ಎಂದರೆ ತುಂಬ ಇಷ್ಟ ಸಂತೋಷ, ನಿನ್ನ ಗುಡಿಗೆ ಬಂದು ದರ್ಶಿಸುವುದೇ ಸಂತೋಷ ಎನ್ನುವರು. ಅಲ್ಲದ ವಿಶೇಷವಾಗಿ ಪುರುಷ ದೇವತೆಗಳನ್ನು ಸಹ ಸ್ತುತಿಸಿದ್ದಾರೆ.

ಶ್ರೀ ಆಂಜನೇಯ
ನಮ್ಮನ್ನು ಕಾಪಾಡಿರಿ

ಎಂದು ಹೇಳುತ್ತಾರೆ. ಆಂಜನೇಯ ಸ್ವಾಮಿಯು ರಾಮಸೀತೆಗೆ ತನ್ನನ್ನು ಅರ್ಪಿಸಿಕೊಂಡ ಬಗೆಯನ್ನು ಹೇಳಿ, ನಮ್ಮನ್ನು ರಕ್ಷಿಸಬೇಕೆಂದು ಕೇಳಿಕೊಳ್ಳುತ್ತಾರೆ. ಆದರೆ ನಿನ್ನ ಸೇವೆ ಮಾಡುವ ಭಾರ ನಮ್ಮದೆಂದು ಹೇಳುತ್ತಾರೆ. ಅಂದರೆ ಆಂಜನೇಯಸ್ವಾಮಿ ಸಹ ಕಷ್ಟಗಳನ್ನು ದೂರ ಮಾಡಿ, ಮಾಡುವ ಕೆಲಸ ಕಾರ್ಯಗಳು ಸುಗಮವಾಗಿ ಸಾಗಲು ಅನುವು ಮಾಡಿಕೊಡುತ್ತಾನೆಂಬ ಅರ್ಥವು ವ್ಯಕ್ತವಾಗಿದೆ.

ಎರಡೂ ಪಠ್ಯಗಳಲ್ಲಿ ಬಂಜೆತನದ ಅಳಲು ಇದೆ. ಆದರೆ ಬಂಜೆತನದ ನಿವಾರಣೆಗಾಗಿ ಕೈಗೊಳ್ಳುವ ಕಾರ್ಯ ಭಿನ್ನವಾಗಿ ಬಂದಿದೆ. ಕನ್ನಡ ಪಠ್ಯದಲ್ಲಿ ಧರ್ಮಸೇನರಾಜನು ಪುತ್ರ ಸಂತಾನಕ್ಕಾಗಿ ತಪಸ್ಸಿಗೆ ಹೊರಡುತ್ತಾನೆ. ಅಡವಿಯಲ್ಲಿ ಶಂಭುಲಿಂಗ ಗುಡಿಯನ್ನು ಕಂಡ ರಾಜನು ಅಲ್ಲೇ ತಪಸ್ಸಿಗೆ ಕುಳಿತುಕೊಂಡಾಗ, ಶಂಭುಲಿಂಗತಾತ ಪ್ರತ್ಯಕ್ಷನಾಗಿ ವರವನ್ನು ಬೇಡಲು ಹೇಳುತ್ತಾನೆ. ಆಗ ಧರ್ಮಸೇನರಾಜನು

ಕನ್ನಡಃ ನನಗೆ ಬಂಗಾರ ಬೇಕಿಲ್ಲ ಬೆಳ್ಳಿ ಬೇಕಾಗಿಲ್ಲ
ಹೊಟ್ಟೆಯೊಳಗೆ ಫಲಸಂತಾನವಿಲ್ಲ
ಫಲಸಂತಾನ ಬೇಕು ಪರಮಾತ್ಮ
ಮಗನೇ ಧರ್ಮಸೇನ ಮಹಾರಾಜ
ನಿನಗ ಕೊಡುವ ಸಂತಾನ ನಾ ಕೊಡ್ತೀನಿ

ಎಂದು ಪರಮಾತ್ಮನು ಹೇಳುತ್ತಾನೆ. ಧರ್ಮಸೇನರಾಜನು ಪ್ರತ್ಯಕ್ಷನಾದಾಗ ಸಿರಿಸಂಪತ್ತಿಗಿಂತ ತನ್ನ ವಂಶೋದ್ಧಾರಕ್ಕಾಗಿ ಸಂತಾನ ಭಾಗ್ಯ ಬೇಕೆನ್ನುವ ಆಶಯವು ಧರ್ಮಸೇನನಲ್ಲಿ ಕಾಣುತ್ತದೆ. ಇಲ್ಲಿ ತಪ್ಪಸಿನಿಂದ ಧರ್ಮಸೇನ ಮಹಾರಾಜ ಪುತ್ರ ಸಂತಾನ ಪಡೆದರೆ, ತೆಲುಗು ಪಠ್ಯದಲ್ಲಿ ಧರ್ಮಸೇನನ ಹೆಂಡತಿ ತಪಸ್ಸಿಗೆ ಹೋಗಿ ಪುತ್ರ ಸಂತಾನ ಪಡೆಯುತ್ತಾಳೆ. ಭಾಗೀರಥಿದೇವಿಗೆ ಪ್ರತ್ಯಕ್ಷನಾದ ಪರಮಾತ್ಮನು

ತೆಲುಗು (ಅನುವಾದ)ಃ ತಾಯಿ ನಿನಗ ಏನು ಬೇಕು
ಸ್ವಾಮಿ ನನಗ ಬೇಕಾಗಿದ್ದು ಸಂತಾನ
ಹಿಡಿ ತಾಯಿ ಅಂತಹ ಬಯಕೆ ಇದ್ದಿದಲ್ಲ
ಸಂತಾನ ಕೊಡ್ತೀನಿ
ಸ್ವಾಮಿ ಸಂತಾನ ಕೊಟ್ಟೆಯಾ
ಒಂದು ಬಾಳೆ ಹಣ್ಣು ಎರಡು ಬಳ್ಳಿ ಮಲ್ಲಿಗೆ
ಅವಳ ಹುಡಿಯಲ್ಲಿ ಹಾಕ್ಯಾನ[೩೪]

ಪುತ್ರ ಸಂತಾನವನ್ನು ಪಡೆಯುವ ಪಾತ್ರಗಳು ಭಿನ್ನವಾಗಿ ಬಂದಿದ್ದರೂ ಅವರು ವ್ಯಕ್ತಪಡಿಸಿದ ಅಭಿಪ್ರಾಯಗಳು ಒಂದೇ ತೆರನಾಗಿವೆ. ಇಬ್ಬರು ಕೇಳುವುದು ಸಂತಾನ ಭಾಗ್ಯ ಇಲ್ಲಿ ಭಿನ್ನವಾಗಿ ವ್ಯಕ್ತವಾಗಿದ್ದಕ್ಕೆ ಮುಖ್ಯವಾಗಿ ಬುರ್ರಕತೆಗಳು ಒಬ್ಬರ ಬಾಯಿಂದ ಮತ್ತೊಬ್ಬರ ಬಾಯಿಗೆ ಹರಿದು ಬಂದು ಅವರ ಕಲ್ಪನೆ ಅನುಭವಗಳ ನೆಲೆಯಲ್ಲಿ ಹೊಸ ಸ್ವರೂಪ ಪಡೆದು ಅಲ್ಪ ವ್ಯತ್ಯಾಸವಾಗಿ ಹೊರಹೊಮ್ಮಿದೆ. ಹಾಗೆಯೇ ಕನ್ನಡ ತೆಲುಗು ಪಠ್ಯಗಳ ವಕ್ತೃಗಳ ರಾಜ್ಯಗಳು ಬೇರೆ ಬೇರೆಯಾಗಿದ್ದರಿಂದ ಭಿನ್ನವಾಗಿ ಹಾಡಿರಬಹುದು. ತೆಲುಗು ಪಠ್ಯದಲ್ಲಿ ಪುತ್ರ ಸಂತಾನಕ್ಕಾಗಿ ಸ್ತ್ರೀಯನ್ನೇ ಅಭಿವ್ಯಕ್ತ ಮಾಡಿದ್ದರಿಂದ ಸ್ತ್ರೀ ಸಂಪ್ರದಾಯವನ್ನು ವ್ಯಕ್ತ ಮಾಡಿದ್ದಾರೆ. ಕನ್ನಡ ಪಠ್ಯದಲ್ಲಿ ಕೇವಲ ಸಂತಾನ ಕೊಡ್ತೀನಿ ಎಂದು ಹೇಳಿದರೆ ತೆಲುಗು ಪಠ್ಯದಲ್ಲಿ

ಒಂದು ಬಾಳೆಹಣ್ಣು ಎರಡು ಮಲ್ಲಿಗೆ ಹೂಗಳನ್ನು ಕೊಡುತ್ತಾನೆ. ಬಾಳೆ ಹಣ್ಣು ಸಂತಾನದ ಸಂಕೇತವಾಗಿ, ಮಲ್ಲಿಗೆ ಹೂಗಳು ಸ್ತ್ರೀಯ ಮುತ್ತೈದತನವನ್ನು ತೋರಿಸುತ್ತವೆ. ಇಲ್ಲಿ ಕನ್ನಡಕ್ಕಿಂತ ತೆಲುಗು ಪಠ್ಯ ಅರ್ಥಗರ್ಭಿತವಾಗಿದೆ. ಸ್ತ್ರೀಯೇ ಕುಟುಂಬದ ಜವಾಬ್ದಾರಿ ಹೊರುವಂತಹವಳು, ಮಕ್ಕಳ ಪಾಲನೆ ಗಂಡಿಗಿಂತ ಹೆಣ್ಣಿಗೆ ಜವಾಬ್ದಾರಿ ಇರುತ್ತದೆಂಬ ಸ್ತ್ರೀಪರವಾದ ಧ್ವನಿಯು ವ್ಯಕ್ತವಾಗಿದೆ. ಆದರೆ ಕನ್ನಡ ಪಠ್ಯದಲ್ಲಿ ರಾಜನು ಪುತ್ರ ಸಂತಾನವನ್ನು ಪಡೆಯುವುದು ಪುರುಷಪ್ರಧಾನ ಕುಟುಂಬದ ಹಿನ್ನೆಲೆಯಲ್ಲಿ ಅಭಿವ್ಯಕ್ತಗೊಂಡಿದೆ.

ಪರಮಾತ್ಮನ ವಚನವನ್ನು ಪರಿಪಾಲಿಸಲು ತನ್ನ ಮುಕ್ತಿಗಾಗಿ ಧರ್ಮಸೇನರಾಜ ಊರು ಮುಂದೆ ಬಾವಿ ತೋಡಿಸುತ್ತಾನೆ. ಬಾವಿಯಲ್ಲಿ ನೀರಿನ ಸೆಲೆ ಕಾಣದೆ ಬರೀ ಕಲ್ಲಿನ ಬಂಡೆ ಕಾಣುತ್ತದೆ. ಅದರ ಪರಿಹಾರಕ್ಕಾಗಿ ರಾಜನು ಜ್ಯೋತಿಷಿಯನ್ನು ಕುರಿತು

ಕನ್ನಡ: ಜೋಶಿಬ್ರಾಹ್ಮಣ ಈ ಬಾವ್ಯಾಗ
ಏನು ಆದೋ ಏನು ಇಲ್ಲೋ
ಪಂಚಾಂಗ ನೋಡಬೇಕು
ಜೋಶಿಬ್ರಾಹ್ಮಣ ಪಂಚಾಂಗ ನೋಡ್ತನ
ಏನಯ್ಯ ಧರ್ಮಸೇನರಾಜ
ಈ ಬಾವ್ಯಾಗ ಕೆಟ್ಟ ಬ್ರಹ್ಮರಾಕ್ಷಸಿ ಆದ
ಆ ರಾಕ್ಷಸಿಗಿ ಆಗಾರ ಕೊಡಬೇಕು
ಬಾವಿಗಿ ಶಾಂತಿ ಆಗ್ತದ
ಬಾವ್ಯಾಗ ನೀರು ಬೀಳ್ತವ
ಪಂಚಾಂಗ ಹೇಳಿದನಲ್ಲ ಬ್ರಾಹ್ಮಣ
ಏನಯ್ಯ ಬ್ರಾಹ್ಮಣ
ಏನಂತ ಆಹುತಿ ಕೊಡಬೇಕು
ಪಂಚಾಂಗದಲ್ಲಿ ಹೊಂಟಿದ್ದು ನಾ ಮಾಡ್ತಿನಿ

ಎಂದು ಹೇಳುವ ರಾಜ ಮತ್ತು ಜ್ಯೋತಿಷಿಗಳ ಮಧ್ಯ ಸಂಭಾಷಣೆ ಇದೆ. ರಾಜನು ಬಾವಿಯಲ್ಲಿ ನೀರು ಬೀಳದೆ ಇದ್ದುದನ್ನು ಕಂಡು ಕಂಗಾಲಾಗಿ ಜ್ಯೋತಿಷಿಗಳಿಗೆ 'ಈ ಬಾವ್ಯಾಗ ಏನು ಆದೋ ಏನು ಇಲ್ಲೋ' ಎಂದು ಹೇಳುವ ಮೂಲಕ ಬಾವಿಯಲ್ಲಿ ಏನೋ ಇದೆ ಎಂಬ ಆತಂಕ ಇರುತ್ತದೆ. ಜ್ಯೋತಿಷಿಯು ಬಾವಿಯಲ್ಲಿ ಕೆಟ್ಟ ಬ್ರಹ್ಮರಾಕ್ಷಸಿ ಇದೆ ಎಂದು ಹೇಳಿದಾಗ ರಾಜ ಇನ್ನಷ್ಟು ಆತಂಕಕ್ಕೆ ಒಳಗಾಗುತ್ತಾನೆ. ಬಾವಿಗೆ ಆಹುತಿ ಕೊಡಬೇಕೆಂದು ಹೇಳಿದಾಗ ಪಂಚಾಂಗದಲ್ಲಿ 'ಹೊಂಟಿದ್ದು ನಾ ಮಾಡ್ತಿನಿ' ಎಂದು ಹೇಳುವಲ್ಲಿ ತಾನು ಪರಮಾತ್ಮನಿಗೆ ಕೊಟ್ಟ ವಚನದ ಭಯದ ನೆರಳಲ್ಲಿ ಇರುತ್ತಾನೆ. ಸಾಮಾನ್ಯವಾಗಿ

ಜನರು ಒಬ್ಬ ಜ್ಯೋತಿಷಿಗಳ ಹತ್ತಿರ ಹೋಗಿ ತಮಗೆ ಒದಗಿದ ಕಷ್ಟವನ್ನು ಮೊದಲೇ ವ್ಯಕ್ತಪಡಿಸುತ್ತಾರೆ. ಅವರ ಹೇಳಿಕೆಯನ್ನು ಅನುಸರಿಸಿ ಜೋತಿಷ್ಯವನ್ನು ಹೇಳುವಂತೆ, ಇಲ್ಲಿ ರಾಜ ಮತ್ತು ಜ್ಯೋತಿಷಿಗಳ ಮಧ್ಯೆ ಸಂವಾದ ನಡೆಯುತ್ತದೆ. ಜ್ಯೋತಿಷಿಗಳು ಬಾವಿಗೆ ಆಹುತಿಗಾಗಿ ಖಂಡಗ ಕುರಿ, ಆಡು, ಕೋಣ, ಬಂಡಿ ಟೆಂಗು, ಕುಂಬಳಕಾಯಿ, ಖಂಡಗ ಭಂಡಾರ, ಕುಂಕುಮ ಎಂದು ಹೇಳುವ ವಿಧಾನ ಇದೆ. ಆದರೆ ತೆಲಗು ಪಠ್ಯದಲ್ಲಿ ಈ ಸನ್ನಿವೇಶ ಭಿನ್ನವಾಗಿ ಅಭಿವ್ಯಕ್ತಗೊಂಡಿದೆ. ಸಂತಾನ ಭಾಗ್ಯ ಪಡೆದ ಭಾಗೀರಥಿದೇವಿ ಪರಮಾತ್ಮನಿಗೆ ತನ್ನ ಗಂಡ ಸತ್ಯವಂತನು ಇಲ್ಲ ಎಂಬ ಶಬ್ದ ಆಡುವವನಲ್ಲ ಎಂದಿದ್ದರಿಂದ ಗಂಡನನ್ನು ಪರೀಕ್ಷಿಸಲು ಬಾವಿ ತೋಡಿಸಿದಾಗ ಅದರಲ್ಲಿ ಶನಿಮಾತ್ಮನನ್ನು ಬಿಡುತ್ತಾನೆ. ಇಲ್ಲಿ ಜ್ಯೋತಿಷಿಗಳು ಬರುವುದಿಲ್ಲ. ಏಳು ಬಾವಿಗಳನ್ನು ತೆಗೆಸಿದರೂ ನೀರಿನ ಸೆಲೆ ಕಾಣುವುದಿಲ್ಲ. ಕನ್ನಡ ಪಠ್ಯದಲ್ಲಿ ಬ್ರಹ್ಮರಾಕ್ಷಸಿ ಬಂದರೆ, ತೆಲುಗು ಪಠ್ಯದಲ್ಲಿ ಶನಿಮಾತ್ಮನನ್ನು ನಿರೂಪಿಸಿದ್ದಾರೆ. ಶನಿಮಾತ್ಮ ಮತ್ತು ಬ್ರಹ್ಮರಾಕ್ಷಸಿ ಮುಖ್ಯವಾಗಿ ರಾಜನನ್ನು ಸಂಕಷ್ಟಕ್ಕೆ ಒಳಪಡಿಸುವುದಾಗಿದೆ. ಕನ್ನಡ ಪಠ್ಯದಲ್ಲಿ ಜ್ಯೋತಿಷಿಗಳು ಬಾವಿಗೆ ಆಹುತಿ ಕೊಡುವ ವಿಧಾನವನ್ನು ಹೇಳಿದ್ದರೆ, ತೆಲುಗು ಪಠ್ಯದಲ್ಲಿ ಬಾವಿಗೆ ರಾಜನೇ ಆಹುತಿ ಕೊಡುತ್ತಾನೆ. ಆಗ ಪರಮಾತ್ಮನು ಶನಿಮಾತ್ಮನನ್ನು ಬಾವಿಗೆ ಬಿಟ್ಟು

ತೆಲುಗು (ಅನುವಾದ): ಕೋಳಿ ಆಹುತಿ ಕೊಟ್ಟರೆ ಕೋಳಿ ತಿನ್ನ

ಆಡು ಆಹುತಿ ಕೊಟ್ಟರೆ ಆಡು ತಿನ್ನು

ಜಲ ಬಂದಂಗ ನೀರು ಕುಡಿದು

ಬಂಡೆಯಾಗಿ ಬೀಳಬೇಕು[೩೯]

ಎಂದು ಪರಮಾತ್ಮನೇ ಹೇಳುತ್ತಾನೆ. ಕೋಳಿ ಆಹುತಿ ಕೊಟ್ಟರೆ ಕೋಳಿ ತಿನ್ನು, ಆಡು ಆಹುತಿ ಕೊಟ್ಟರೆ ಆಡು ತಿನ್ನು ಎಂದು ಹೇಳುವ ಪರಮಾತ್ಮನು ಶನಿಮಾತ್ಮನ ಮೂಲಕ ರಾಜನನ್ನು ಪರೀಕ್ಷೆಗೆ ಒಳಪಡಿಸುತ್ತಾನೆ. ಸತ್ಯ ಹರಿಶ್ಚಂದ್ರ ಮಹಾರಾಜನನ್ನು ವಿಶ್ವಾಮಿತ್ರನು ಸುಳ್ಳುಗಾರನಾಗಿ, ವಚನಭ್ರಷ್ಟನಾಗಿ ಮಾಡುವುದಕ್ಕಾಗಿ ಪರೀಕ್ಷೆಗೆ ಗುರಿಪಡಿಸುವಂತೆ, ಧರ್ಮಸೇನ ಮಹಾರಾಜನನ್ನು ವಚನಭ್ರಷ್ಟನನ್ನಾಗಿ ಮಾಡಲು ಶನಿಮಾತ್ಮನು ಅನೇಕ ಕಷ್ಟ ಕೊಡುತ್ತಾನೆ. ಕತೆಗಾರರಿಗೆ ಸತ್ಯ ಹರಿಶ್ಚಂದ್ರ ಮಹಾರಾಜ ಕತೆಯ ಪ್ರೇರಣೆ ಇರಬಹುದು.

ಧರ್ಮಸೇನ ಮಹಾರಾಜನ ಬಾವಿಗೆ ಏನೇ ಆಹುತಿ ಕೊಟ್ಟರೂ ಬಾವಿಯಲ್ಲಿ ನೀರಿನ ಸೆಲೆ ಕಾಣದೆ, ಬರೇ ಬಂಡೆಕಲ್ಲನ್ನು ಕಂಡು ಭಯಭೀತರಾದ ರಾಜನು ಮತ್ತೆ ಜ್ಯೋತಿಷಿಗಳನ್ನು ಕರೆದು ಪಂಚಾಂಗ ತೆಗೆಸುತ್ತಾನೆ. ಆಗ ಜ್ಯೋತಿಷಿಗಳು

ಕನ್ನಡ: ಏನಯ್ಯ ರಾಜ

ಈ ಬ್ರಹ್ಮರಾಕ್ಷಸಿಗಿ

ಏನು ಮಾಡಿದರೂ ಆಗಾರ ಸಾಲದು

ನಿನ್ನ ಹೊಟ್ಟೆಯೊಳಗೆ ಪುತ್ರ ಸಂತಾನ ಆಗ್ಯದ

ನಿನ್ನ ಮಗ ಲವುತರಾಜಗ

ಬಾವಿಗೆ ಆಗಾರ ಕೊಡಬೇಕು

ಆವಾಗ ನೀರು ಬೀಳ್ತವ

ಎಂದು ಜ್ಯೋತಿಷಿಗಳು ರಾಜನಿಗೆ ತಿಳಿಸುತ್ತಾನೆ. ಕನ್ನಡ ಪಠ್ಯದಲ್ಲಿ ಜ್ಯೋತಿಷಿಗಳ ಪಾತ್ರವೇ ಮುಖ್ಯವಾಗಿ ಕಂಡುಬರುತ್ತದೆ. ರಾಜನು ತನ್ನ ಪ್ರತಿಯೊಂದು ಕಾರ್ಯಕ್ಕೆ ಜ್ಯೋತಿಷಿಗಳನ್ನೇ ಅವಲಂಬಿಸಿರುವುದು ರಾಜನ ಸಂಪ್ರದಾಯ, ನಂಬಿಕೆಯನ್ನು ತಿಳಿಸುತ್ತದೆ. ಜ್ಯೋತಿಷಿಗಳ ರಾಜನ ಮಗನನ್ನೇ ಬಾವಿಗೆ ಆಹುತಿ ಕೊಡಬೇಕೆಂದು ಹೇಳುವುದು ಜನಪದರ ನಂಬಿಕೆಯ ಭಾಗ ಕನ್ನಡ ತೆಲುಗು ಎರಡೂ ಪಠ್ಯಗಳಲ್ಲಿ ಬ್ರಹ್ಮ ವಿಷ್ಣು, ಮಹೇಶ್ವರ ಬಾವಿಯಲ್ಲಿ ನೀರು ಬಿದ್ದ ಮೇಲೆ ನೀರು ಕುಡಿದು ಮುಕ್ತಿ ಕೊಟ್ಟು ಹೋಗುತ್ತಾರೆಂಬ ಆಶಯ ವ್ಯಕ್ತವಾಗಿದೆ. ಆದರೆ ಕನ್ನಡಕ್ಕಿಂತ ತೆಲುಗು ಪಠ್ಯದಲ್ಲಿ ಭಿನ್ನವಾಗಿ ನಿರೂಪಣೆಗೊಂಡಿದೆ. ಇಲ್ಲಿ ನೇರವಾಗಿ ಬ್ರಹ್ಮ ವಿಷ್ಣು, ಈಶ್ವರ ಬಂದು ರಾಜನ ಜೊತೆ ಸಂವಾದ ಮಾಡುತ್ತಾರೆ. ತ್ರಿಮೂರ್ತಿಗಳು ಧರ್ಮಸೇನ ಮಹಾರಾಜನನ್ನು ಕುರಿತು-

ತೆಲುಗು (ಅನುವಾದ): ಏನಯ್ಯ ಧರ್ಮಸೇನರಾಜ

ನೀವು ತೋಡಿದ ಬಾವ್ಯಾಗ ನೀರು ಬಳಸಿ

ಸ್ನಾನ ಮಾಡಿ ಮುಕ್ತಿ ಫಲಕೊಟ್ಟು ಹೋಗ್ತೀವಿ

ಇಲ್ಲದಿದ್ದರೆ ಹೊಂಟು ಹೋಗ್ತೀವಿ

ಸ್ವಾಮಿ ಏನು ಮಾಡಬೇಕು

ಏಳು ಬಾವಿ ತೋಡಿಸಿ

ಎಷ್ಟೇ ಬಾವಿ ತೋಡಿದರು ಬಂಡೆನೆ ಬಿದ್ದಿದೆ

ನೀವು ಇಲ್ಲ ಎಂದು ಹೇಳಿದರೆ ನಾವು ಹೋಗ್ತೀವಿ

ಸ್ವಾಮಿ ನನಗೆ ಇಲ್ಲ ಎಂಬ ಶಬ್ದ ನನ್ನ ಬಾಯಿಂದ ಬರದು

ಆದ್ರೆ ಇಲ್ಲೆಂಬ ಶಬ್ದ ನಿನ್ನ ಬಾಯಿಂದ ಬರಲ್ಲೇನು

ನಿನ್ನ ಮಗನ ತಂದು ಬಾವಿಗೆ ಆಹುತಿ ಕೊಡು[೬೬]

ಕನ್ನಡ ಪಠ್ಯದಲ್ಲಿ ಜ್ಯೋತಿಷಿಗಳೇ ರಾಜನಿಗೆ ಮಾರ್ಗ ತೋರಿಸಿದರೆ, ಇಲ್ಲಿ ತ್ರಿಮೂರ್ತಿಗಳು ಬಂದು ರಾಜನಿಗೆ ಮಾರ್ಗವನ್ನು ಸೂಚಿಸುತ್ತಾರೆ. ತೆಲುಗು ಪಠ್ಯದಲ್ಲಿ ಒಂದೊಂದು ಏಳು ಬಾವಿ ತೋಡಿಸಿದರೂ ನೀರಿನ ಸೆಲೆ ಕಾಣದೆ ಬರೇ ಬಂಡೆಗಲ್ಲನ್ನು ಕಾಣುತ್ತಾನೆ. ಕನ್ನಡದ ಪಠ್ಯದಲ್ಲಿ ಒಂದೇ ಬಾವಿ ಬಂದಿದ್ದು ಬ್ರಹ್ಮರಾಕ್ಷಸಿ ಬಂಡೆಗಲ್ಲಾಗಿ ಕಾಣುತ್ತದೆ. ತೆಲುಗಿನಲ್ಲಿ ಶನಿಮಾತ್ಮನು ಬಂಡೆಗಲ್ಲಾಗಿ ಕಾಣುತ್ತಾನೆ. ಇಲ್ಲಿ

ಎರಡು ಪಕ್ಷಗಳು ಭಿನ್ನದಾರಿಯಲ್ಲಿ ಹೋದರೂ ಕೊನೆಗೆ ಒಂದೇ ಕಡೆಗೆ ಸೇರುತ್ತವೆ. ಇಲ್ಲಿ ರಾಜ ಮತ್ತು ತ್ರಿಮೂರ್ತಿಗಳ ಮಧ್ಯೆ ಸಂವಾದ ಇದೆ. 'ನೀವು ಇಲ್ಲೆಂದು ಹೇಳಿದರೆ ನಾವು ಹೋಗ್ತೀವಿ' ಎನ್ನುವ ದೇವತೆಗಳಿಗೆ ರಾಜನು 'ಸ್ವಾಮಿ ನನಗೆ ಇಲ್ಲ ಎಂಬ ಶಬ್ದ ನನ್ನ ಬಾಯಿಂದ ಬರದು' ಎಂದು ಹೇಳುವಲ್ಲಿ ರಾಜನ ಸತ್ಯ, ನಿಷ್ಠೆ, ಸ್ವಾಮಿ ಭಕ್ತಿ ಇದೆ. 'ದೇವತೆಗಳು ಆದ್ರೆ ಇಲ್ಲೆಂಬ ಶಬ್ದ ನಿನ್ನ ಬಾಯಿಂದ ಬರಲ್ಲೇನು? ಎಂದು ನಿನ್ನ ಮಗನ ತಂದು ಬಾವಿಗೆ ಆಹುತಿ ಕೊಡು' ಎನ್ನುವ ಪರೀಕ್ಷೆಯನ್ನು ನೋಡಿದರೆ ಭಕ್ತನಿಗೆ ಒದಗುವ ಕಷ್ಟಗಳ ಅಗಾಧತೆ ತಿಳಿಯುತ್ತದೆ. ದೇವತೆಗಳ ಮತ್ತು ರಾಜನಲ್ಲಿ ಕಂಡುಬರುವ ಸಂವಾದವು ನೆಪ ಮಾತ್ರವಾಗಿದೆ. ಆದರೆ ಇಲ್ಲಿನ ತಾತ್ಪರ್ಯವು ರಾಜನೇ ಆಗಲಿ ಸಾಮಾನ್ಯ ಜನರೇ ಆಗಲಿ ಎಷ್ಟೇ ಕಷ್ಟ ಬಂದರೂ ತನ್ನ ಸ್ವಾಮಿ ನಿಷ್ಠೆಯನ್ನು ಬಲಿಕೊಡಬಾರದೆಂಬ ಭಾವವಿದೆ.

ಧರ್ಮಸೇನ ಮಹಾರಾಜನು ವಚನಕ್ಕೆ ತಕ್ಕಂತೆ ನಡೆಯುವವನು. ಮಾತಿಗೆ ಪ್ರಾಣ ಕೊಡುವವನು. ಹೀಗಾಗಿ ಹೆತ್ತ ಮಗನಾದ ಲವುತರಾಜಕುಮಾರನನ್ನು ಬಾವಿಗೆ ಆಹುತಿ ಕೊಡಲು ಕೈಕೆಳಗಿನ ಬಂಟರನ್ನು ಕುರಿತು-

ಕನ್ನಡಃ ಏನಪ್ಪ ರೈತರೆ

ನನ್ನ ಅರಮನೆಗೆ ಹೊಂಟು ಹೋಗ್ರಿ

ನನ್ನ ಮಗನ ಕರಕಂಡುಬರ‍್ರಿ

ಬಾವಿಗಿ ಆಗಾರ ಕೊಡ್ತೀನಿ

ನಾಲ್ಕು ಮಂದಿ ರೈತರು

ರಾಜನ ವಚನ ಕೇಳಿಕೊಂಡು

ಅವರ ಅರಮನೆಗೆ ಹೊಂಟು ಬಂದರಲ್ಲ

ಏನಮ್ಮ ಭಾಗೀರಥಿದೇವಮ್ಮ

ಪಂಚಾಂಗದೊಳಗ ನಿನ್ನ ಮಗ ಲವುತರಾಜಗ

ಬಾವಿ ಆಗಾರ ಕೇಳ್ಯಾದಮ್ಮ

ತೆಲುಗು (ಅನುವಾದ)ಃ ಏನಯ್ಯ ರೈತರೆ

ನೀವು ಹೋಗಿ ನನ್ನ ಮಗನ ತಂದು

ಬಾವಿಗೆ ಆಹುತಿ ಕೊಡಲಿಕ್ಕೆ

ನನ್ನ ಹೆಂಡ್ತಿಗಿ ಹೇಳಿರಿ

ರೈತರು ಬಂದರಲ್ಲ

ಅಮ್ಮ ಭಾಗೀರಥಿದೇವಿ

ಭಗವಂತನು ಬಂದು ನಿನ್ನ ಗಂಡಗ

ನಿನ್ನ ಮಗನಂತ ಬಾವಿಗೆ ಆಹುತಿಕೊಡಂತ

ಹೇಳ್ಯನಂತಮ್ಮ[24]

ಇಲ್ಲಿ ಎರಡು ಪಠ್ಯಗಳಲ್ಲಿ ಧರ್ಮಸೇನ ಮಹಾರಾಜನು ತನ್ನ ಕೈಕೆಳಗಿನ ಬಂಟರಿಗೆ ಬಾವಿಗೆ ಆಹುತಿ ಕೊಡಲು ಮಗನನ್ನು ಕರೆತರಲು ಅರಮನೆಗೆ ಕಳಿಸುತ್ತಾನೆ. ಈ ಪದ್ಯಗಳ ಮೊದಲ ಭಾಗದಲ್ಲಿ ನಿರೂಪಣೆ ಹಾಗೂ ವಸ್ತುವಿನಲ್ಲಿ ಒಂದೇ ತೆರನಾಗಿ ಬಂದಿದೆ. ಆದರೆ ಕೊನೆಯ ಎರಡು ಸಾಲುಗಳಲ್ಲಿ ವ್ಯತ್ಯಾಸ ಬಂದಿದೆ. ಎರಡು ಪಠ್ಯಗಳಲ್ಲಿ ರೈತರೇ ಮಗನನ್ನು ಕರೆತರಲು ಹೋಗುತ್ತಾರೆ. ಆದರೆ ಕನ್ನಡ ಪಠ್ಯದಲ್ಲಿ 'ಪಂಚಾಂಗದೊಳಗ ನಿನ್ನ ಮಗ ಲವುತರಾಜಗ ಬಾವಿ 'ಆಗಾರ ಕೇಳಾದ್ಯಮ್ಮ' ಅಂತ ಬಂದರೆ ತೆಲುಗು ಪಠ್ಯದಲ್ಲಿ ಭಗವಂತನು ಬಂದು ನಿನ್ನ ಗಂಡಗ ನಿನ್ನ ಮಗನಂತ ಬಾವಿಗೆ ಆಹುತಿಕೊಡಂತ' ಎಂದು ಬಂದಿದೆ. ತೆಲುಗು ಪಠ್ಯದಲ್ಲಿ ನೇರವಾಗಿ ಪರಮಾತ್ಮನೇ ಬಾವಿಗೆ ಆಹುತಿ ಕೊಡಲು ಹೇಳಿದ್ದನ್ನು ನೆನಪಿಸುತ್ತಾರೆ. ಭಗವಂತ ಮತ್ತು ಜ್ಯೋತಿಷಿ ಪಾತ್ರಗಳು ಭಿನ್ನವಾಗಿ ಬಂದಿದ್ದರೂ ಆ ಪಾತ್ರಗಳ ಆಶಯ ಮಾತ್ರ ಒಂದೆ. ತೆಲುಗು ಪಠ್ಯಕ್ಕಿಂತ ಕನ್ನಡ ಪಠ್ಯವು ಕಾವ್ಯಾತ್ಮಕವಾಗಿ ಬಂದಿದೆ. ಪ್ರತಿಯೊಂದು ಸಾಲುಗಳು ಅಚ್ಚುಕಟ್ಟಾಗಿ ಬಂದಿವೆ. ತೆಲುಗು ಪಠ್ಯದಲ್ಲಿ ಆಡುಮಾತಿನ ಸೊಗಸು ಕಾಣುತ್ತವೆ.

ಸತ್ಯಕ್ಕಾಗಿ ಅನೇಕ ಕಷ್ಟಗಳನ್ನು ಎದುರಸಬೇಕಾಗುತ್ತದೆಂಬ ನಿಲುವು ಇಲ್ಲಿ ಸ್ಪಷ್ಟವಾಗಿ ಕಾಣುತ್ತದೆ. ಹರಿಶ್ಚಂದ್ರ ಮಹಾರಾಜನು ಸತ್ಯಕ್ಕಾಗಿ ಅನೇಕ ಕಷ್ಟಗಳನ್ನು ಎದುರಿಸಿ ಸತ್ಯಬಲದಿಂದ ಅದನ್ನು ದಾಟಬಹುದೆಂಬುದನ್ನು ತೋರಿಸಿಕೊಟ್ಟನು. ಭಕ್ತ ಸಿರಿಯಾಳ ಕಷ್ಟವನ್ನು ದಾಟಿ ಗೆಲ್ಲುತ್ತಾಳೆ. ಪುರಾಣ, ಕತೆಗಳಲ್ಲಿ, ಕಾವ್ಯಗಳಲ್ಲಿ ಸತ್ಯನಿಷ್ಠೆಯ ಗೆಲುವನ್ನು ಕಾಣುತ್ತೇವೆ. ಇಲ್ಲಿ ಗಿರಿಯಾವತಿ ಮತ್ತು ಲವುತರಾಜನಿಗೆ ಅನೇಕ ಕಷ್ಟಗಳು ಒದಗುತ್ತವೆ. ಇವರನ್ನು ಪರೀಕ್ಷೆ ಮಾಡಲು ಪರಮಾತ್ಮನು ಸತಿ ಪತಿಯರನ್ನು ಅಗಲಿಸುತ್ತಾನೆ. ಈ ಸನ್ನಿವೇಶ ಕನ್ನಡ-ತೆಲುಗು ಪಠ್ಯಗಳಲ್ಲಿ ನಿರೂಪಿಸಿದ್ದಾರೆ.

ಕನ್ನಡಃ ತಂದೆ ಪರಮಾತ್ಮ

ಇವರ ಗುಣ ನೋಡಬೇಕಂತಂದು

ಗಂಡ ಹೆಂಡತಿಗಿ ಅಗಲಿಸಿ ನೋಡಬೇಕೆಂದು

ಆಮು ಹುಟ್ಟಿತಲ್ಲ

ಉಗುರಿನೋಟು ವಿಭೂತಿ ತೆಗೆದನಲ್ಲ

ಗಿರಿಯಾವತೆಮ್ಮನ ಮ್ಯಾಲೆ ಒಗೆದನಲ್ಲ

ತಾಯಿ ಗಿರಿಯಾವತಿಗಿ ನೀರು ಧಾಮಾಯ್ತಲ್ಲ

ಏನಯ್ಯ ರಾಜ ಲವುತರಾಜ

ನೀರು ಧಾಮು ತಾಳವಲ್ಲೆ

ನೀರು ಹುಡ್ಕಿಕೊಂಡು ಬಾ ರಾಜ

ತೆಲುಗು (ಅನುವಾದ): ಗಂಡ ಹೆಂಡತಿ ಕೂಡಿಕೊಂಡು

ಹನ್ನೆರಡು ಹರದಾರಿ ನಡದರಲ್ಲ

ಆ ಬಾವ್ಯಾಗಿದ್ದ ಶನಿಮಾತ್ಮನು

ಮತ್ತೆ ಹಿಂದೆ ಬಿದ್ದನಲ್ಲ

ಶನಿಮಾತ್ಮ ಇವರ ಹಿಂದೆ ಬಿದ್ದನಲ್ಲ

ಎಲ್ಲಿಲ್ಲದ ನೀರಡಿಕೆ ಆಯ್ತಲ್ಲ

ಶನಿಮಾತ್ಮ ಆ ತಾಯಿಯ ಹೊಟ್ಟ್ಯಾಗ ಹೋಗ್ಯನಲ್ಲ

ನೀರಡಿಕೆ ತಾಳಲಾರಳಲ್ಲ

ಅಯ್ಯ ನನ್ನ ಪ್ರಾಣನಾಥ ನೀರಡಿಕೆ ತಾಳಲಾರೆ

ಧಾಮುಗೆ ತಾಳಲಾರೆನು[೩೦]

ಇಲ್ಲಿ ಎರಡು ಪಠ್ಯಗಳಲ್ಲಿ ಗಿರಿಯಾವತಿ ಲವುತರಾಜನನ್ನು ದೂರ ಮಾಡಿ ಕಷ್ಟ ಕೊಡುವ ಉದ್ದೇಶ ಇದೆ. ಆದರೆ ನಿರೂಪಣೆಯಲ್ಲಿ ಗಮನಾರ್ಹವಾದ ಬದಲಾವಣೆ ಕಾಣುತ್ತದೆ. ಕನ್ನಡ ಕತೆಯಲ್ಲಿ ಪರಮಾತ್ಮನೇ ಸತಿ-ಪತಿಯರನ್ನು ದೂರ ಮಾಡುವ ತಂತ್ರ ಉಪಯೋಗಿಸಿದ್ದಾನೆ. ತೆಲುಗು ಕತೆಯಲ್ಲಿ ಬಾವಿಯಲ್ಲಿದ್ದ ಶನಿಮಾತ್ಮನೇ ಇವರನ್ನು ಅಗಲಿಸುತ್ತಾನೆ. ಇಲ್ಲಿ ವಿಧಿಯ ಆಟವನ್ನು ಅಭಿವ್ಯಕ್ತ ಮಾಡಿದ್ದಾರೆ. ಶನಿಮಾತ್ಮನು ಆ ತಾಯಿಯ ಹೊಟ್ಟ್ಯಾಗ ಹೋಗ್ಯಾನ ಅವರ ಹಿಂದೆ ಇನ್ನೂ ಶನಿ ಇದೆ. ಅವರು ಎಲ್ಲಿಗೆ ಹೋದರೂ ಬಿಡುವುದಿಲ್ಲ ಎಂಬ ಆಶಯವು ಇದೆ.

ಕನ್ನಡ-ತೆಲುಗು ಎರಡು ಆವೃತ್ತಿಗಳಲ್ಲಿ ಲವುತರಾಜನು ಹೆಂಡತಿಗೆ ನೀರನ್ನು ತರಲು ಹೋಗುವ ಪ್ರಸಂಗ ಬಂದಿದೆ. ಎರಡೂ ಪಠ್ಯಗಳಲ್ಲಿ ಈ ಸನ್ನಿವೇಶ ಭಿನ್ನವಾಗಿ ನಿರೂಪಣೆಗೊಂಡಿದೆ. ಲವುತರಾಜನು ನೀರನ್ನು ಅರಸುತ್ತ ಬಾವಿ ಹತ್ತಿರ ಹೋದಾಗ-

ಕನ್ನಡ: ಆ ಬ್ರಹ್ಮರಾಕ್ಷಸಿ ಏನಂತದ

ರಾಜಂದರೇ ರಾಜ ಅಲ್ಲ

ಏನು ಅಪರೂಪದ ರಾಜ ಆನ

ಈ ರಾಜಗ ನುಂಗಿದರೆ

ರಾಜನ ಹೆಂಡತಿ ಲಗ್ನ ಆಗಬೇಕು

ಬ್ರಹ್ಮರಾಕ್ಷಸಿ ಮಾಯ ಮೋಹನಾಂಗಿಯಾಗಿ

ವೇಷ ತಾಳಿಕೊಂಡಿತಲ್ಲ

ರಾಜ ಬಾವಿ ಕಟ್ಟೆಯ ಮ್ಯಾಲ ಬಂದ

ಏನಮ್ಮ ಹೆಣ್ಣುಮಗಳೆ

ನನ್ನ ಹೆಣ್ತಿಗಿ ಆರಾಮ ಇಲ್ಲ

ಹೊಟ್ಟೆಲಿದ್ದ ಹೆಣ್ಣುಮಗಳು

ಹಡಿಲಾಕ ದಿನದಾಗ ಅಂತಂದ್ದು ರಾಜ ಹೇಳಿದಾನ

ಬಾರಯ್ಯ ರಾಜ ನಾ ಬರ್ತೀನಿ

ಬಾವ್ಯಾಗ ನೀರು ತುಂಬಿಕೊಂಡು ಬರಮು

ರಾಜ ಪಾವಂಟಿಗೆ ಇಳಿದು

ಬಾವಿಬೆಲ್ಲಿಗೆ ಬರೋಟಿಗೆ.

ನೀರಿನೊಳಗೆ ಬ್ರಹ್ಮರಾಕ್ಷಸ ಆಗ್ಯದಲ್ಲ

ರಾಜನ ಗಳಂಗನಂತ ನುಂಗಿತು

ತೆಲುಗು (ಅನುವಾದ): ರಾಜ ಬ್ರಹ್ಮರಾಕ್ಷಸ ಇದ್ದ ಬಾವಿಗೆ ಬಂದ

ಆ ಬ್ರಹ್ಮರಾಕ್ಷಸಿ

ಆಹಾ ಎಂತಹ ಮಹಾರಾಜ

ಇಂತಹ ನಾಲ್ಕು ರಾಜ್ಯದ ಮಂದಿಗಿ ನುಂಗಿದ್ಯ

ಆದರೆ ಇಂತಹ ರಾಜ ಎನ್ನುವವನು

ಮೋಡದಾಗ ಮಿಂಚು ಕಂಡಂತೆ ಕಾಣ್ತಾನ

ರಾಜನ ನುಂಗಿದರೆ

ಬಂಗಾರದ ಖಡ್ಗವಾಗಿ ಇರ್ತನಲ್ಲ

ನನಗೆ ಹಸಿವು ನೀರಡಿಕೆ ದೂರವಾಗ್ತದಲ್ಲ

ರಾಜನ ನುಂಗ್ತಿನಂದು ಗಡಗಡಂತ ಹೊರಗ ಬಂದದಲ್ಲ

ರಾಜನ ಕೈಲಿ ಖಡ್ಗ ಇಲ್ಲ ಕಠಾರ ಇಲ್ಲ

ರಾಜ ಒಂದು ಗಂಟಿತನ

ಬ್ರಹ್ಮರಾಕ್ಷಸ ಜೊತೆ ಯುದ್ಧ ಮಾಡ್ಯನಲ್ಲ

ರಾಜಗ ಗಳಂಗನಂತ ನುಂಗ್ಯದ[೨೯]

ಕನ್ನಡ ಪಠ್ಯದಲ್ಲಿ ರಾಜ ಮತ್ತು ಹೆಣ್ಣಿನ ರೂಪ ಧರಿಸಿದ ರಾಕ್ಷಸ ನಡುವೆ ಸಂಭಾಷಣೆಯು ಸ್ವಾರಸ್ಯಕರವಾಗಿ ಬಂದಿದೆ. ಬಾವಿಯ ಹತ್ತಿರ ಬಂದ ಲವುತರಾಜನನ್ನು ಕಂಡ ರಾಕ್ಷಸ ರಾಜನ ಬಣ್ಣವನ್ನು ನೋಡಿ ರೂಪವನ್ನು ನೋಡಿ ನುಂಗಬೇಕೆಂಬ ಆಸೆ ಹುಟ್ಟುತ್ತದೆ. ಅಲ್ಲದೆ ರಾಜನೇ ಇಷ್ಟು ಸುಂದರವಾಗಿರಬೇಕಾದರೆ, ಹೆಂಡತಿ ಇನ್ನೆಷ್ಟು ಸುಂದರಿ ಇರಬಹುದೆಂಬುದನ್ನು ಯೋಚಿಸಿ, ರಾಜನ ಹೆಂಡತಿಯನ್ನು ಮದುವೆ ಆಗಬೇಕೆಂದು ಮನದಲ್ಲಿ ಹೊಂಚುಹಾಕಿ ಮಾಯ ಮೋಹನಾಂಗಿ ರೂಪ ಧರಿಸುತ್ತದೆ. ರಾಜನು ಬಾವಿ ಹತ್ತಿರ ಬಂದಾಗ ಸುಂದರ ಸ್ತ್ರೀರೂಪದ ಹೆಣ್ಣನು ಕಂಡು, ತನ್ನ ಹೆಂಡತಿಯ ಬಗ್ಗೆ ಹೇಳುತ್ತಾನೆ. ಇಲ್ಲಿ ಸ್ತ್ರೀಗೆ ಸ್ತ್ರೀಯ ನೋವು ಗೊತ್ತಿರುತ್ತದೆಂಬ ಆಶೆಯಿಂದ ರಾಜನು ಹೇಳುವುದರಲ್ಲಿ ಪ್ರೀತಿ ಇದ್ದರೆ, ಮಾಯ ಮೋಹಿನಿ 'ಬಾರಯ್ಯ ರಾಜ ನಾನು ಬರ್ತೀನಿ' ಎಂದು ಹೇಳುವಲ್ಲಿ ಮೋಸ ಅಡಗಿರುತ್ತದೆ. ಅದರ ಮೋಸ ಅರಿಯದೆ, ಬಾವಿಯೊಳಗೆ ಇಳಿಯುವಾಗಲೇ ರಾಕ್ಷಸರೂಪ ಧರಿಸಿ ಲವುತರಾಜನನ್ನು ನುಂಗುತ್ತದೆ. ತೆಲುಗು ಪಠ್ಯದಲ್ಲಿ ರಾಜನನ್ನು ಕಂಡ ರಾಕ್ಷಸ ರಾಜನ ರೂಪ, ಲಾವಣ್ಯವನ್ನು ಕಂಡು ವರ್ಣಿಸುತ್ತದೆ. 'ಮೋಡದಾಗ ಮಿಂಚು ಕಂಡಂತೆ ಕಾಣ್ತಾನ' ಎಂದು ವ್ಯಕ್ತವಾದ ಈ ಸಾಲಿನಲ್ಲಿ ರಾಜನನ್ನು ಮೋಡದ ನಡುವೆ ಕಾಣುವ ಮಿಂಚಿಗೆ ಹೋಲಿಸಲಾಗಿದೆ. ಅಂದರೆ ಆ ಮಿಂಚಿನಂತೆ ಹೊಳೆಯುತ್ತಾನೆಂಬ ಭಾವ ಇದೆ. ಮಳೆಯ ಸಂದರ್ಭದಲ್ಲಿ ಮೋಡದಲ್ಲಿ ಮಿಂಚು, ಬೆಳಕು ಹೊರಹೊಮ್ಮಿ ಸಿಡಿಲು ಬೀಳುವುದು ಸಾಮಾನ್ಯ. ಆ ಸಿಡಿಲು ಬಂಗಾರದಿಂದ ಕೂಡಿರುತ್ತದೆಂಬ ನಂಬಿಕೆ. ಆ ನಂಬಿಕೆಯ ಹಿನ್ನೆಲೆಯಲ್ಲಿ ಮಿಂಚಿನಂತೆ ಕಂಡ ರಾಜನನ್ನು ನುಂಗಿದರೆ ಹೊಟ್ಟೆಯಲ್ಲಿ ಬಂಗಾರದ ಖಡ್ಗವಾಗಿ ಇರುತ್ತದೆಂಬ ಆಶಯವನ್ನು ವ್ಯಕ್ತ ಮಾಡಿದ್ದಾರೆ. ಇದರಿಂದ ನನಗೆ ಹಸಿವು ನೀರಡಿಕೆ ದೂರವಾಗುತ್ತದೆ ಎನ್ನುವುದರಲ್ಲಿ ಸಂತೃಪ್ತಿಯ ಭಾವವು ಇರುತ್ತದೆ. ಈ ಪದ್ಯದ ಕೊನೆಯ ಸಾಲುಗಳಲ್ಲಿ ಕನ್ನಡಕ್ಕಿಂತ ತೆಲುಗು ಪಠ್ಯದಲ್ಲಿ ಬೇರೆಯಾಗಿದೆ. ಕನ್ನಡ ಕತೆಯಲ್ಲಿ ರಾಕ್ಷಸರೂಪ ತಾಳಿ ರಾಜನನ್ನು ಕೂಡಲೇ ನುಂಗುತ್ತದೆ. ಇಲ್ಲಿ ರಾಜ ಮತ್ತು ರಾಕ್ಷಸ ನಡುವೆ ಯುದ್ಧದ ವರ್ಣನೆ ವ್ಯಕ್ತವಾಗಿಲ್ಲ. ತೆಲುಗಿನಲ್ಲಿ ರಾಜ ಮತ್ತು ರಾಕ್ಷಸ ಮಧ್ಯ ಯುದ್ಧವಾಗುತ್ತದೆ. ಕೊನೆಗೆ ರಾಕ್ಷಸ ಕೈ ಮೇಲಾಗಿ ರಾಜನನ್ನು ನುಂಗುತ್ತದೆ. ಕೊನೆಯ ಸಾಲಿನಲ್ಲಿ ರಾಜನ ಗಳಂಗನಂತ ನುಂಗಿತು ಎಂದು ಎರಡು ಪಠ್ಯಗಳಲ್ಲಿ ಭಾಷಾಂತರ ಎಂಬಂತೆ ಬಂದಿದೆ. ಇಬ್ಬರು ವಕ್ತೃಗಳು ಹಾಡಿದ ಈ ಕತೆಯಲ್ಲಿ ಕೆಲವು ಸನ್ನಿವೇಶದಲ್ಲಿ ರೂಪಾಂತರ ಎಂಬಂತೆ ನಿರೂಪಿಸಿದ್ದನ್ನು ಕಾಣಬಹುದು.

ಕನ್ನಡ ಪಠ್ಯದಲ್ಲಿ ದಾಸರಹಾವು, ಕೊರವರ ಎಲ್ಲಪ್ಪ ಪಾತ್ರಗಳು ವಿಶೇಷವಾಗಿ ಅಭಿವ್ಯಕ್ತಗೊಂಡಿವೆ. ಈ ಪಾತ್ರಗಳ ವೈಶಿಷ್ಟ್ಯವನ್ನು ಕನ್ನಡ ಕತೆಯ ವಿಶ್ಲೇಷಣೆಯಲ್ಲಿ ವಿವರಿಸಲಾಗಿದೆ. ಈ ಪಾತ್ರಗಳು ತೆಲುಗು ಪಠ್ಯದಲ್ಲಿ ವ್ಯಕ್ತವಾಗಿಲ್ಲ. ಇಲ್ಲಿ ಗಿರಿಯಾವತಿ ತನ್ನ ಗಂಡನನ್ನು ಕಳೆದುಕೊಂಡು ನೇರವಾಗಿ ಪಗಡಾಲ ಬಂಡೆಗೆ ಬಂದಾಗ, ಅಲ್ಲಿ ನೆಲೆಸಿರುವ ಚೆಂಚು ಸಮುದಾಯವನ್ನು ಸೇರಿಕೊಂಡಾಗ-

ತೆಲುಗು (ಅನುವಾದ): ಸೀರೆ ಇಲ್ಲ, ರವಿಕೆ ಇಲ್ಲ

ಎರಡು ಟೇಕು ಎಲೆ ತೆಗೆದುಕೊಂಡಳ

ಹೊಟ್ಟೆ ಮೇಲೆ ಒಂದು ಎಲೆ ಕಟ್ಟಿಕೊಂಡಳ

ಹಿಂದೆ ಒಂದು ಎಲೆ ಕಟ್ಟಿಕೊಂಡಳ

ತಿರುಗುತ್ತ ಪಗಡಾಲ ಬಂಡೆಗೆ ಬಂದಳಲ್ಲ

ಆ ಬಂಡೆ ಮೇಲೆ ಯಾರಂದ್ರೆ ಚೆಂಚರು

ಅವರು ಏಳೂ ಮಂದಿ ಹೆಣ್ಣುಮಕ್ಕಳ[೬೦]

ಗಿರಿಯಾವತಿ ಗಂಡನನ್ನು ಹುಡುಕುತ್ತ ಅಡವಿ ತಿರುಗುತ್ತ ತನ್ನ ಮೈ ಮೇಲೆ ಇದ್ದ ಬಟ್ಟೆಗಳು ಮುಳ್ಳುಗಳಿಗೆ ಸಿಕ್ಕು ಬರಿ ಮೈಯಲ್ಲಿ ಇದ್ದಾಗ ಟೇಕು ಎಲೆಗಳನ್ನು ಮಾನ ಮುಚ್ಚಲು ಕಟ್ಟಿಕೊಂಡಿದ್ದು ಶತಮಾನಗಳಿಂದ ಅಡವಿಯಲ್ಲಿ ವಾಸಿಸುತ್ತಿದ್ದ ಕಾಡು ಜನರನ್ನು ನೆನಪಿಸುತ್ತದೆ. ಹಾಗೆ ಅವಳು ಅಡವಿಯಲ್ಲಿ ವಾಸಿಸುವ ಚೆಂಚು ಸಮುದಾಯವನ್ನು ಸೇರುವುದು ಕಾಡು ಜನರ ಜೀವನದ ವೈಶಿಷ್ಟ್ಯವನ್ನು ತೋರಿಸುತ್ತದೆ. ಇಲ್ಲಿ ಮುಖ್ಯವಾಗಿ ಕಾಡು ಮತ್ತು ನಾಡಿನ ಜನರ ಬೆಸುಗೆ ಕಾಣಿಸುತ್ತದೆ. ಆದರೆ ಕನ್ನಡ ಪಠ್ಯದಲ್ಲಿ ಗಮನಾರ್ಹವಾದ ವ್ಯತ್ಯಾಸವು ವ್ಯಕ್ತವಾಗಿದೆ. ದಾಸರಹಾವು ಬಲೆಗೆ ಸಿಕ್ಕಿಕೊಂಡ ಗಿರಿಯಾವತಿ ಕೊರವರ ಎಲ್ಲಪ್ಪನಿಂದ ರಕ್ಷಿಸಲ್ಪಟ್ಟು, ಕೊನೆಗೆ ಅವಳ ರೂಪಕ್ಕೆ ಮನಸೋತ ಕೊರವರ ಎಲ್ಲಪ್ಪ ಅವಳ ಕೈ ಹಿಡಿದಾಗ-

ಕನ್ನಡ: ಕೊರವರ ಎಲ್ಲಪ್ಪ ಕೈಯಾಗಲಿಂದ ಬಿಡಿಸಿಕೊಂಡು

ಓಡೋಡಿ ಹೋಗುತ್ತಿದ್ದಳಲ್ಲ

ತಾಯಿ ಗಿರಿಯಾವತಿ ಮುಂದೆ ಮುಂದೆ

ಕೊರವರ ಎಲ್ಲಪ್ಪ ಹಿಂದೆ ಹಿಂದೆ

ಈ ಕಡೆ ಏಳು ಮಂದಿ

ಚೆಂಚರ ಹೆಣ್ಣುಮಕ್ಕಳು ಬ್ಯಾಟಿ ಮಾರ್ಗ ಹೊಂಟರಲ್ಲ

ಇಲ್ಲಿ ಗಿರಿಯಾವತಿಯು ತನ್ನ ಮೇಲಿನ ದೌರ್ಜನ್ಯವನ್ನು ಕಾಪಾಡಿಕೊಳ್ಳಲು ಓಡಿ ಹೋಗುವ ಮನಸ್ಥಿತಿಯು, ಸ್ತ್ರೀ ಶೀಲವೇ ಪಾವಿತ್ರ್ಯವೆಂಬ ಮನೋಭಾವವು ಇದೆ. ಕೊರವರ ಎಲ್ಲಪ್ಪ ಗಿರಿಯಾವತಿಯ ಹಿಂದೆ ಹಿಂದೆ ಓಡುವುದು ದುಷ್ಟ ಸ್ವಭಾವವು ಮೂಡಿ ಬಂದಿದೆ. ಗಿರಿಯಾವತಿ ಮಾನ ಕಾಪಾಡಲೆಂದೇ ಬಂದಂತೆ ಅದೇ ದಾರಿಯಲ್ಲಿ ಚೆಂಚು ಸಮುದಾಯದ ಹೆಣ್ಣುಮಕ್ಕಳು ಬೇಟೆ ಆಡಲು ಹೊರಟಿರುತ್ತಾರೆ. ಆ ಚೆಂಚು ಸಮುದಾಯದ ಸ್ತ್ರೀಯರು ನೊಂದ ಸ್ತ್ರೀಯ ರಕ್ಷಕರಾಗಿ ಕಂಡುಬರುತ್ತಾರೆ. ಮುಖ್ಯವಾಗಿ ಕನ್ನಡ-ತೆಲುಗು ಎರಡು ಆವೃತ್ತಿಗಳಲ್ಲಿ ಚೆಂಚು ಸಮುದಾಯದ ಸ್ತ್ರೀಯರೇ ಗಿರಿಯಾವತಿಯನ್ನು ರಕ್ಷಿಸುವುದನ್ನು ನಿರೂಪಿಸಿದ್ದಾರೆ.

ಕನ್ನಡ-ತೆಲುಗು ಎರಡು ಪಠ್ಯಗಳಲ್ಲಿ ಚೆಂಚು ಸಮುದಾಯದ ಹಟ್ಟಿಯಲ್ಲಿ ಗಿರಿಯಾವತಿಗೆ ಶಿವರಾತ್ರಿ ದಿವಸ ಮಗ ಹುಟ್ಟುತ್ತಾನೆ. ಆ ಮಗುವಿಗೆ 'ಶಿವಕುಮಾರ' ಎಂದು ನಾಮಕರಣ ಮಾಡುತ್ತಾರೆ. ಹಾಗೆಯೇ ಎರಡೂ ಕತೆಗಳಲ್ಲಿ ತಾಯಿ ಗಿರಿಯಾವತಿಯು ಲವುತರಾಜ ವೇಷದ ರಾಕ್ಷಸನ ಮಾತನ್ನು ನಂಬಿ ಮಗ ಶಿವಕುಮಾರನನ್ನು ಸಾಯಿಸಲು ಪ್ರಯತ್ನಿಸುತ್ತಾಳೆ. ತಾಯಿಯ ದಣಿವಿಗೆ ಕುದಿಯಲಾರದ ಸುಣ್ಣ ಮಾತಾಡುವ ಎಲೆಯನ್ನು ತರಲು ಹೊರಟಾಗ, ಚೆಂಚು ತಾಯಂದಿರು ಅದರ ಉಪಾಯವನ್ನು ಹೇಳುತ್ತಾರೆ. ಆದರೆ ತೆಲುಗು ಪಠ್ಯದಲ್ಲಿ ತಾನೆ ಅದರ ದಾರಿ ಕಂಡುಕೊಳ್ಳುತ್ತಾನೆ. ಚೆಂಚು ದೊಡ್ಡ ತಾಯಂದಿರು ಹೇಳಿದಂತೆ-

ಕನ್ನಡಃ ಮಗ ಶಂಭುಲಿಂಗ ಗುಡಿಗೆ ಬಂದನಲ್ಲ

ದೊಡ್ಡಮ್ಮನವರು ಹೇಳಿದ ಪ್ರಕಾರ

ಗದ್ದಿಗೆ ನೀರು ಹಾಕ್ಯನಲ್ಲ

ಎರಡು ಒಲೆಗುಂಡು ಕೂಡಿಸಿದನಲ್ಲ

ತನ್ನ ಮೊಣಕಾಲೊಂದು ಹಚ್ಚಿದ

ಬೆಂಕಿ ಪುಟುವು ಮಾಡಿದನಲ್ಲ

ಮೊಣಕಾಲಿಗೆ ಸೆಕೆ ಹತ್ತಪಟಗೆಲ್ಲ

ಮೊಣಕಾಲು ಹಿಂದಕ್ಕೆ ತೆಗೆದನಲ್ಲ

ಗಡಿಗಿ ಬೋರ್ಲ ಬಿದ್ದದಲ್ಲ

ಇದರಂತೆಯೇ ಎರಡು ಮೂರು ಸಲ ಮಾಡಿದನಲ್ಲ

ಶಂಭುಲಿಂಗ ಲಿಂಗಯ್ಯ ಪ್ರತ್ಯಕ್ಷನಾದನಲ್ಲ

ತೆಲುಗು (ಅನುವಾದ): ಮಗ ಹನ್ನೆರಡು ಹರದಾರಿ ನಡೆದು ಬಂದ

ಆಕಡೆ ಮನುಷ್ಯ ತಿರುಗದ ಸ್ಥಳಕ್ಕೆ ಬಂದ

ಆಂಜನಯ್ಯ ಗುಡಿ ಕಾಣಿಸಿತು

ಆ ಗುಡಿಯಲ್ಲಿ ಮಲಗಿದ

ನಡೆದು ನಡೆದು ಬೇಸರಗೊಂಡಿದ್ದ

ಅನ್ನವಿಲ್ಲ ಆದಾರವಿಲ್ಲ

ಹೋಗಿ ಅಲ್ಲಿ ನಿದ್ರೆ ಮಾಡಿದ

ಆಂಜನಯ್ಯ ಸ್ವಾಮಿ ಪ್ರತ್ಯಕ್ಷ ಆಗ್ಯಾನ್"

ಇಲ್ಲಿ ಎರಡು ಆವೃತ್ತಿಗಳಲ್ಲಿ ಬೇರೆ ಬೇರೆ ನಿರೂಪಣೆ ಇದೆ. ಆದರೆ ಆಶಯ ಮಾತ್ರ ಒಂದೆ ಆಗಿದೆ. ಕನ್ನಡ ಕತೆಯಲ್ಲಿ ಶಂಭುಲಿಂಗಯ್ಯ ಪ್ರತ್ಯಕ್ಷನಾದರೆ, ತೆಲುಗು ಕತೆಯಲ್ಲಿ ಆಂಜನೇಯಸ್ವಾಮಿ ಪ್ರತ್ಯಕ್ಷನಾಗುತ್ತಾನೆ.

ಈ ಎರಡು ಪಾತ್ರಗಳು ಭಿನ್ನವಾಗಿ ಮೂಡಿಬಂದಿವೆ. ಆದರೂ ಶಿವಕುಮಾರನಿಗೆ ತೋರಿಸುವ ದಾರಿ ಒಂದೆ. ಕನ್ನಡ ಕತೆಯಲ್ಲಿ ಶಿವಕುಮಾರನು ತನ್ನ ದೊಡ್ಡ ತಾಯಂದಿರು ಹೇಳಿದ ತಂತ್ರವನ್ನು ಉಪಯೋಗಿಸುತ್ತಾನೆ. ಕತೆಗಾರರು ಈ ಸನ್ನಿವೇಶಕ್ಕೆ ತಕ್ಕಂತೆ ತಂತ್ರವನ್ನು ನಿರೂಪಿಸಿರುವುದು ನೆಪವಾದರೂ, ಆ ಸನ್ನಿವೇಶದ ಒಂದು ಚೌಕಟ್ಟನ್ನು ಒದಗಿಸುತ್ತದೆ. ಶಂಭುಲಿಂಗಯ್ಯನನ್ನು ಪ್ರತ್ಯಕ್ಷ ಮಾಡಿಕೊಳ್ಳುವ ಒಂದು ವಿಧಾನವಾಗಿದ್ದು ಅದು ಜನಪದರ ಆಶಯವಾಗಿದೆ. ಇದನ್ನು ತೆಲುಗು ಪಠ್ಯದಲ್ಲಿ ನೇರವಾಗಿ ಅಭಿವ್ಯಕ್ತಿಸಿದ್ದಾರೆ. ಇಲ್ಲಿ ಶಿವಕುಮಾರನು ಮನುಷ್ಯರು ತಿರುಗದ ಜಾಗಕ್ಕೆ ಬಂದು ಸೇರುತ್ತಾನೆ. ಅಲ್ಲೇ ಇದ್ದ ಆಂಜನೇಯ ಗುಡಿಯಲ್ಲಿ ಆಯಾಸ ನೀಗಿಸಿಕೊಳ್ಳುವಾಗ ನಿದ್ರೆ ಬರುತ್ತದೆ. ಆಗ ಆಂಜನೇಯಸ್ವಾಮಿ ಪ್ರತ್ಯಕ್ಷನಾಗುತ್ತಾನೆ. ಶಿವಕುಮಾರನು ಈ ದಾರಿಯನ್ನು ತಾನೇ ಕಂಡುಕೊಳ್ಳುತ್ತಾನೆ. ಶಂಭುಲಿಂಗಯ್ಯ, ಆಂಜನಯ್ಯ ಸ್ವಾಮಿ ವಿಭಿನ್ನ ಪಾತ್ರಗಳಾಗಿ ಮೂಡಿಬಂದಿದ್ದರೂ, ಶಿವಕುಮಾರನಿಗೆ ತೋರಿಸುವ ದಾರಿ ಮಾತ್ರ ಒಂದೆ. ಕನ್ನಡ-ತೆಲುಗು ಎರಡು ಪಠ್ಯಗಳಲ್ಲಿ ಆಯಾ ಸನ್ನಿವೇಶವೂ ಬೇರೆ ಬೇರೆ ನಿರೂಪಿಸಿದ್ದರೂ ಅದು ತಲುಪುವ ದಾರಿ ಮಾತ್ರ ಒಂದೇ ಆಗಿದೆ. ಇಲ್ಲಿ ಇಬ್ಬರು ವಕ್ತೃಗಳ ಆಲೋಚನೆ ಹಾಗೂ ಅಭಿಲಾಷೆ ಸಮಾನ ನೆಲೆಯದ್ದೇ ಆಗಿದೆ.

ಶಂಭುಲಿಂಗಯ್ಯ, ಆಂಜನೇಯಸ್ವಾಮಿ ಈ ಎರಡು ಪಾತ್ರಗಳು ಎರಡು ಆವೃತ್ತಿಗಳಲ್ಲಿ ಬೇರೆ ಆಗಿದ್ದರೂ ಶಿವಕುಮಾರನ ಕಷ್ಟ ಪರಿಹಾರಕ್ಕಾಗಿ ದೇವಕನ್ಯೆಯರ ಸೀರೆ ಕದ್ದು ತರಲು ಹೇಳುತ್ತಾರೆ. ಶಂಭುಲಿಂಗತಾತ ಹೇಳಿದಂತೆ ದೇವಕನ್ಯೆಯ ಸೀರೆ ಕುಪ್ಪಸ ಕದ್ದು

ಕನ್ನಡ: ಶಿವಕುಮಾರ ಹಿಂತಿರುಗಿ ನೋಡಲಿಲ್ಲ
ಓಡೋಡಿ ಬಂದು ಮಠದಗ ಬಿದ್ದನಲ್ಲ
ತಂದೆ ಶಂಭುಲಿಂಗ ಮುತ್ತ್ಯಾ
ಐದು ಅಳ್ಳು ಮಂತ್ರಿಸಿ ಒಕ್ಕೊಟ್ಟಿದಾಗ
ಹಲ್ಲಿಯಾಗಿ ಗೋಡಿಗಿ ಕುಂತ
ಏಳು ಮಂದಿ ದೇವಕನ್ಯೆಯರು
ಮುತ್ತ್ಯಾನ ಬೆಲ್ಲಿಗಿ ಒಡೆ ಬಂದರಲ್ಲ
ಏನಪ್ಪ ಮುತ್ತ್ಯಾ ಸೀರೆ ಕುಬಸ ಕಳ್ಳ
ಸೀರೆ ಕುಬಸ ಕಳ್ಳತನ ಮಾಡಿ ನಿನ್ನ ಮಠಕ ಬಂದ್ರಲ್ಲ
ಏನ್ರಮ್ಮಾ ಏಳು ಮಂದಿ ದೇವಕನ್ಯೆರೆ
ನನ್ನ ಮಠದಗ ಎಲ್ಲ್ಯಾನ ಹುಡ್ಕಿರಮ್ಮಾ
ಮಗ ಶಿವಕುಮಾರ ಬಹಳ ಚದಾಮ

ಒಂದೊಂದು ಅಳ್ಳು ಬಾಯಾಗ ಹಿಡಕೊಂಡು

ದೇವಕನ್ನೆ ಎದೆಗೆ ಹೊಡ್ಡ್ಯ ಕತ್ತ್ಯನಲ್ಲ

ಏನಪ್ಪ ಮುತ್ತ್ಯ ನಿನ್ನ ಮಠದಗ ಆನ

ಎದೆಗೆ ಅಳ್ಳು ಹೊಡ್ಡೆಕತ್ತ್ಯಾನ

ತೆಲುಗು (ಅನುವಾದ): ಈ ಗುಡ್ಯಾಗ ಹುಡುಗ ಬಂದನಲ್ಲ

ನನ್ನ ಸೀರೆ ಕುಬಸ ತಗಂಡು

ಏನಮ್ಮ ಹುಟ್ಟು ಬೆತ್ತಲೆ

ನನ್ನ ಗುಡಿಯೊಳಗೆ ಬಂದಿದಿ

ನಿನಗೆ ಬುದ್ಧಿ ಆದ ಬುದ್ಧಿ ಇಲ್ಲ

ಹುಡುಗ ಎಲ್ಲ್ಯಾನ ನೋಡು

ಹುಡುಗನ ನುಂಗಿನಾ ಗುಡಿಯೆಲ್ಲ ನೋಡು

ಎಲ್ಲಿ ಅಡಿಗ್ಯಾನ ನೋಡು

ಆ ಹುಡುಗ ಹಲ್ಲಿಯಾಗಿ

ದೇವಾಂಜನ ಎದೆಗೆ ಅರಳಿಂದ ಹೊಡ್ಡೆಕತ್ತ್ಯನ

ನೋಡು ಮುತ್ತ್ಯ ಇಲ್ಲಂದಿಯಲ್ಲ

ಅರಳಿಂದ ಹೊಡಿತಾನ"[೨]

ಸೀರೆ ಕುಪ್ಪಸ ಕದ್ದು ಹಿಂದಿರುಗಿ ನೋಡದ ನಿಯಮವನ್ನು ಪಾಲಿಸಿದ ಶಿವಕುಮಾರ ಶಂಭುಲಿಂಗ ಗುಡಿ ಸೇರುತ್ತಾನೆ. ಆಗ 'ಹಲ್ಲಿ'ಯಾಗಿ ಮಾಡಿ ಗೋಡೆಗೆ ಕೂಡಿಸುವ ತಂತ್ರವನ್ನು ಶಂಭುಲಿಂಗ ಮಾಡುತ್ತಾನೆ. 'ಶಿವಕುಮಾರ ಹಿಂತಿರುಗಿ ನೋಡಲಿಲ್ಲ' ಎಂಬುದರಲ್ಲಿ ಹಿಂದುರಿಗಿ ನೋಡಿದರೆ ಕೇಡುಂಟಾಗುತ್ತದೆಂಬ ಭಾವವು ವ್ಯಕ್ತಗೊಂಡಿದೆ. ಏಳು ಜನ ದೇವಕನ್ನೆಯರು ಶಂಭುಲಿಂಗ ಗುಡಿಗೆ ಬಂದು, ಶಂಭುಲಿಂಗ ತಾತನಿಗೆ ಸೀರೆಕುಪ್ಪಸ ಕಳ್ಳತನ ಮಾಡಿಕೊಂಡು ಬಂದನೆಂದು ಹೇಳುವ ಸನ್ನಿವೇಶವು, ಶ್ರೀಕೃಷ್ಣ ದೇವಕನ್ನೆಯರು ಸೀರೆ ಕುಪ್ಪಸಗಳನ್ನು ಕದ್ದು ಕಾಡಿಸುವ ಪ್ರಸಂಗ ನೆನಪಿಸುತ್ತದೆ. ಶಿವಕುಮಾರನು ಹಲ್ಲಿಯಾಗಿದ್ದುಕೊಂಡು ದೇವಕನ್ನೆಯ ಎದೆಗೆ ಅರಳಿಂದ ಹೊಡೆಯುವುದು ಸಹ ದೇವಕನ್ನೆಯನ್ನು ಕಾಡಿಸುವುದಾಗಿದೆ. ಇಲ್ಲಿ ಶಿವಕುಮಾರನ ತುಂಟಾಟವಲ್ಲ, ಇದು ತನ್ನ ಕಷ್ಟ ನಿವಾರಣೆಯಾಗಿ ಕಂಡುಬರುತ್ತದೆ. ತೆಲುಗು ಪಠ್ಯದಲ್ಲಿ ಸಹ ಶಿವಕುಮಾರ ಹಲ್ಲಿಯಾಗಿ ದೇವಕನ್ನೆಯ ಎದೆಗೆ ಅರಳಿನಿಂದ ಹೊಡೆಯುತ್ತಾನೆ. ಆದರೆ ಇಲ್ಲಿ ಒಬ್ಬಳೇ ದೇವಾಂಜನ ಬರೀ ಮೈಯಲ್ಲಿ ಬಂದಿರುತ್ತಾಳೆ. ವಿವಸ್ತ್ರಳಾಗಿ ಬಂದಂತಹ ದೇವಕನ್ನೆಯನ್ನು ಆಂಜನೇಯಸ್ವಾಮಿ ತರಾಟೆಗೆ ತೆಗೆದುಕೊಳ್ಳುತ್ತಾನೆ. ಕನ್ನಡ ಪಠ್ಯದಲ್ಲಿ ಶಂಭುಲಿಂಗಸ್ವಾಮಿ ಬಂದರೆ

ತೆಲುಗು ಪಠ್ಯದಲ್ಲಿ ಆಂಜನೇಯಸ್ವಾಮಿ ಬಂದಿದ್ದಾನೆ. ಈ ಎರಡೂ ಪಾತ್ರಗಳು ಶಿವಕುಮಾರನಿಗೆ ದಾರಿ ತೋರಿಸುತ್ತವೆ. ಎರಡೂ ಪಾತ್ರಗಳ ಗುರಿ ಒಂದೆ.

ಆದರೆ ಎರಡೂ ಕತೆಗಳಲ್ಲಿ ಬಂದ ವಿಭಿನ್ನ ಪಾತ್ರಗಳಾದ ಶಂಭುಲಿಂಗಸ್ವಾಮಿ, ಆಂಜನೇಯಸ್ವಾಮಿಯರು, ಶಿವಕುಮಾರ ಜೊತೆ ದೇವಕನ್ಯೆಯ ಗಾಂಧರ್ವ ವಿವಾಹ ಮಾಡುತ್ತಾರೆ. ಬ್ರಹ್ಮರಾಕ್ಷಸಿಯ ಜೊತೆ, ಶಿವಕುಮಾರ ಯುದ್ಧ ಮಾಡುವ ಸನ್ನಿವೇಶ ಕನ್ನಡ ಪಠ್ಯದಲ್ಲಿ ಬಂದರೆ, ತೆಲುಗು ಪಠ್ಯದಲ್ಲಿ ದೇವಕನ್ಯೆಯೇ ರಾಕ್ಷಸಿಯ ಜೊತೆ ಯುದ್ಧ ಮಾಡುತ್ತದೆ. ದೇವಕನ್ಯೆಯನ್ನು ನೋಡಿದ ಕೂಡಲೇ ಬ್ರಹ್ಮರಾಕ್ಷಸಿಗೆ ಆತಂಕವುಂಟಾಗಿ ನಡುಗುತ್ತದೆ. ಆಗ ದೇವಕನ್ಯೆಯು ಶಿವಕುಮಾರನಿಗೆ-

ಕನ್ನಡಃ ಏನಯ್ಯ ಶಿವಕುಮಾರ
ಬಿಲ್ಲು ಬಾಣ ಕೈಯಾಗ ಹಿಡಕೊಂಡು
ಆರು ಖಂಡಗ ಆಯುಧ
ಮೂರು ಖಂಡಗ ಡಾಲು
ಯುದ್ಧ ಮಾಡಯ್ಯ ಬ್ರಹ್ಮ ರಾಕ್ಷಸಿ ಮ್ಯಾಲ

ತೆಲುಗು (ಅನುವಾದ)ಃ ನನ್ನ ಮಾವನನ್ನು ನುಂಗಿದಲ್ಲದೆ
ತಿರುಗಿ ಮಗನ ಸಾಯಿಸಲು
ಇಂತಹ ಬಾದೆ ಇಡಿಸಿದ್ದಲ್ಲ
ಹೊರಗೆ ಬಾ ಎಂದಳಲ್ಲ ದೇವಾಂಜನ
ಬ್ರಹ್ಮರಾಕ್ಷಸ ಹೊರಗೆ ಬಂದದಲ್ಲ
ಎಡಗಾಲು ಪಾದ ತಲೆ ಮ್ಯಾಲೆ ಇಟ್ಟಳಲ್ಲ
ಬಗ್‌ಂತೆಂದು ಮಸಿಯಾಗಿ ಬಿದ್ದದಲ್ಲ[೪೩]

ಎರಡೂ ಪಠ್ಯಗಳಲ್ಲಿ ರಾಕ್ಷಸನನ್ನು ಸಂಹಾರ ಮಾಡುವ ಸನ್ನಿವೇಶವಿದೆ. ಕನ್ನಡ ಪಠ್ಯದಲ್ಲಿ ಯುದ್ಧ ಮಾಡುವ ವಿಧಾನ ಇದೆ. ಯುದ್ಧದ ಆಯುಧಗಳ ಗಾತ್ರಗಳ ವೈಶಿಷ್ಟ್ಯವನ್ನು ಸಹ ನಿರೂಪಿಸಿದ್ದಾರೆ. ಆದರೆ ಇಲ್ಲಿ ದೇವಕನ್ಯೆಯ ಸೂಚನೆಯ ಮೇಲೆ ಶಿವಕುಮಾರ ಯುದ್ಧ ಮಾಡುತ್ತಾನೆ. ದೇವಕನ್ಯೆಯೇ ಯುದ್ಧ ಮಾಡುವ ವಿಧಾನವನ್ನು ಸೂಚಿಸುತ್ತಾಳೆ. ತೆಲುಗು ಪಠ್ಯದಲ್ಲಿ ದೇವಕನ್ಯೆಯೇ ರಾಕ್ಷಸನನ್ನು ಹೀಯಾಳಿಸಿ ಅದನ್ನು ಹೊರಗೆ ಕರೆದು ಸಾಯಿಸುತ್ತಾಳೆ. ಇಲ್ಲಿ ಅಸಾಮಾನ್ಯ ಶಕ್ತಿ ಮೂಡಿಬಂದಿದೆ. ರಾಕ್ಷಸ ತಲೆಯ ಮೇಲೆ ಎಡಗಾಲು ಪಾದ ಇಟ್ಟಾಗ ಉರಿದು ಮಸಿಯಾಗುತ್ತದೆ. ದೇವಕನ್ಯೆಯಲ್ಲಿ ಅಸಾಮಾನ್ಯ ವ್ಯಕ್ತಿತ್ವವಿದೆ ಎಂಬುದು ತಿಳಿಯುತ್ತದೆ. ತೆಲುಗು ಪಠ್ಯದಲ್ಲಿ ಸ್ತ್ರೀ ಸಂವೇದನೆ, ಸ್ತ್ರೀಯನ್ನೇ ಮುಖ್ಯವಾಗಿ ಚಿತ್ರಿಸಿದ್ದಾರೆ.

ಆದರೆ, ತೆಲುಗಿಗಿಂತ ಕನ್ನಡ ಪಠ್ಯವು ಪ್ರಬುದ್ಧವಾಗಿ ಅಭಿವ್ಯಕ್ತಗೊಂಡಿದೆ. ನಿರೂಪಣೆಯಲ್ಲಿ, ಭಾಷೆಯ ಬಳಕೆಯಲ್ಲಿ, ಪದಗಳ ಜೋಡಣೆಯಲ್ಲಿ, ಪಾತ್ರಗಳ ಚಿತ್ರಣದಲ್ಲಿ, ಪ್ರತಿ ಸನ್ನಿವೇಶದಲ್ಲೂ ಅರ್ಥಪೂರ್ಣವಾಗಿ ಬಂದಿದೆ. ಮುಖ್ಯವಾಗಿ ಸಂಪ್ರದಾಯ, ನಂಬಿಕೆಯ ಮೌಲ್ಯಗಳು, ಸಮುದಾಯದ ಆಚರಣೆಗಳು ಈ ಎಲ್ಲ ತಿಳುವಳಿಕೆಗಳ ಹಿನ್ನೆಲೆಯಲ್ಲಿ ಜನಪದ ಆಶಯದ ನೆಲೆಯಲ್ಲಿ ಕತೆಯು ಅಭಿವ್ಯಕ್ತಗೊಂಡಿದೆ.

**ಆರ್ಯವರಕತೆ ಕನ್ನಡ-ತೆಲುಗು ಆವೃತ್ತಿಗಳು**

ಒಂದೇ ಕತೆಯನ್ನು ಬೇರೆ ಬೇರೆ ಜಿಲ್ಲೆಗಳಲ್ಲಿ ಸಂಗ್ರಹಿಸಿ ಕನ್ನಡ-ತೆಲುಗು ಎರಡು ಭಾಷೆಗಳಲ್ಲಿ ನಿರೂಪಿಸಿದ ಬಗೆಯನ್ನು ತೌಲನಿಕವಾಗಿ ಪರಿಶೀಲಿಸಲಾಗಿದೆ. ಎರಡೂ ಭಾಷೆಗಳಲ್ಲಿ ಈ ಕತೆಯ ಸಾಮ್ಯ-ವೈಷಮ್ಯವನ್ನು ಇಲ್ಲಿ ಅವಲೋಕಿಸಲಾಗಿದೆ. ಈ ಎರಡೂ ಪಠ್ಯಗಳ ಕತೆಯ ವೈಶಿಷ್ಟ್ಯ, ಪಾತ್ರಗಳ ಚಿತ್ರಣ, ಸನ್ನಿವೇಶ, ಸಂದರ್ಭ ಹಾಗೂ ಕೆಲವು ಪಾತ್ರಗಳಲ್ಲಿ, ಸನ್ನಿವೇಶಗಳಲ್ಲಿ, ಭಿನ್ನವಾಗಿ ನಿರೂಪಣೆಗೊಂಡ ಬಗೆಯನ್ನು ವಿಶ್ಲೇಷಿಸಲಾಗಿದೆ.

ಕನ್ನಡ-ತೆಲುಗು ಎರಡೂ ಪಠ್ಯಗಳಲ್ಲಿ ಮುಖ್ಯ ಪಾತ್ರಗಳಲ್ಲಿ ವ್ಯತ್ಯಾಸ ಇಲ್ಲದಿದ್ದರೂ, ತೆಲುಗು ಪಠ್ಯದಲ್ಲಿ ಕೆಲವು ಸನ್ನಿವೇಶ ದೀರ್ಘವಾಗಿ ಚಿತ್ರಿತವಾಗಿದೆ. ಕನ್ನಡ ಪಠ್ಯದಲ್ಲಿ ಸಿದ್ದೋಜಿರಾವು ಮಧ್ಯ ರಾತ್ರಿಯಲ್ಲಿ ಬಂದು ಅಣ್ಣನ ಮಕ್ಕಳನ್ನು ಕಟ್ಟಿಹಾಕಿ ಮಾರುವೇಷದಿಂದ ಸಂಪತ್ತನ್ನು ತೆಗೆದುಕೊಂಡು ಹೋಗುತ್ತಾನೆ. ತೆಲುಗು ಪಠ್ಯದಲ್ಲಿ ಸಿದ್ದೋಜಿರಾವು ಮಕ್ಕಳನ್ನು ರಮಿಸಿ ಕಂಬಕ್ಕೆ ಕಟ್ಟಿ ಸಂಪತ್ತು ತೆಗೆದುಕೊಂಡು ಹೋಗುತ್ತಾನೆ. ಸಂಗಿಶೆಟ್ಟಿ ಎಲ್ಲಯ್ಯನ ಪಾತ್ರವನ್ನು ತೆಲುಗು ಆವೃತ್ತಿಯಲ್ಲಿರುವ ಮಂತ್ರಿ ಪಾತ್ರವು ತುಂಬುತ್ತದೆ. 'ಇಂಟಿದೊಂಗ' ಪಾತ್ರವು ತೆಲುಗು ಪಠ್ಯದಲ್ಲಿ ವಿಶೇಷವಾಗಿ ಬಂದಿದೆ. ಹೀಗೆ ಎರಡು ಪಠ್ಯಗಳ ನಿರೂಪಣೆಯಲ್ಲಿ ವ್ಯತ್ಯಾಸವನ್ನು ಕಾಣಬಹುದು.

ನರೇಂದ್ರರಾವು ತನ್ನ ಮಗಳು ರುಕುಂಬಾಯಿ ಮದುವೆಯ ಖರ್ಚನ್ನು ಕಂಡು ತನ್ನ ತಮ್ಮಂದಿರಿಗೆ ದ್ವೇಷ ಹುಟ್ಟುತ್ತದೆ. ಆಗ ಸಿದ್ದೋಜಿರಾವು

ಕನ್ನಡಃ ಏನಪ್ಪ ಅಣ್ಣ ನರೇಂದ್ರರಾವು

ಅಣ್ಣ ತಮ್ಮಂದಿರ ಪಾಲ ಆಗಬೇಕು

ಈಗಲೇ ಮನೆ ಹಂಚಬೇಕು

ನಮ್ಮ ಆರ್ಯಕುಲದಗ ನೋಡ

ಅರ್ಮಜ್ಯೋತಿ ಕುಲದಗ ನೋಡ

ಪಾಲ ಪದ್ಧತಿ ಇಲ್ಲ

ಪಾಲ ಮಾಡದೂ ಇಲ್ಲ

ತೆಲುಗು (ಅನುವಾದ): ತಮ್ಮಂದಿರು ಬಂದು ಅಣ್ಣ ನರೇಂದ್ರರಾವುಗ

ಖಂಡೆರಾವು ಸಿದ್ದೋಜಿರಾವು ಕೇಳುತಾರ

ಅಣ್ಣ ಹೇಳುತಾನ

ನಮ್ಮ ಆರ್ಯ ಕುಲದಗ

ಭಾಗ ಮಾಡುವುದು ಇಲ್ಲ

ನಿಮಗೆ ಬೇಕಾದರೆ ಧನದಾನ್ಯ ತಂಗಡು ಹೋಗ್ರಿ[illegible]

ಇಲ್ಲಿ ಎರಡು ಪಠ್ಯಗಳನ್ನು ನೋಡಿದಾಗ ಅಣ್ಣ ತಮ್ಮಂದಿರ ಮಧ್ಯ ಸಂವಾದ ಬಂದಿದೆ. ತಮ್ಮಂದಿರು ಮನೆಯಲ್ಲಿ ಭಾಗ ಆಗಲೇಬೇಕು ಎಂಬ ಹಟ ತೊಟ್ಟರೆ, ಅಣ್ಣ ನರೇಂದ್ರರಾವು ನಮ್ಮ ಆರ್ಯಕುಲದಲ್ಲಿ ದಾಯ ಭಾಗ ಪದ್ಧತಿ ಇಲ್ಲ ಎಂದು ಹೇಳುತ್ತಾನೆ. ಒಂದು ಸಮುದಾಯದ ಪದ್ಧತಿಯು ಇಲ್ಲಿ ವ್ಯಕ್ತವಾಗಿದೆ. ಎರಡೂ ಆವೃತ್ತಿಗಳಲ್ಲಿ ವಕ್ಯಗಳು ವ್ಯತ್ಯಾಸವಿಲ್ಲದೆ ನಿರೂಪಿಸಿದ್ದಾರೆ. 'ತೆಲುಗು ಪಠ್ಯದಲ್ಲಿ' ನಿಮಗೆ ಬೇಕಾದರೆ ದನ, ಧಾನ್ಯಗಳನ್ನು ತಗಂಡು ಹೋಗ್ರಿ ಎಂದು ಹೇಳುವ ಮಾತಿನಲ್ಲಿ ನಿಮಗೆ ಬೇಕಾದ ಸಂಪತ್ತನ್ನು ನೀವೆ ಭೋಗಿಸಿರಿ ಭಾಗ ಮಾತ್ರ ಬೇಡ ಎಂಬ ಭಾವವು ಅಣ್ಣನಲ್ಲಿ ಕಾಣುತ್ತದೆ. ಅಣ್ಣ ತನ್ನ ಸಮುದಾಯದ ಸಂಪ್ರದಾಯ, ಆಚರಣೆಯನ್ನು ಮೀರಲು ಮುಂದಾಗುವುದಿಲ್ಲ. ತಮ್ಮಂದಿರು ದುಡುಕಿದರೂ ಅದನ್ನು ಕಾಪಾಡುವ ಕಾರ್ಯ ಹಿರಿಯನಾದ ಅಣ್ಣನಿಗೆ ಇರುವುದು ಸಹಜ.

ಸಿದ್ದೋಜಿರಾವು ಖಂಡೆರಾವು ಅಣ್ಣನಲ್ಲಿ ಭಾಗ ತೆಗೆದುಕೊಂಡು ತಮ್ಮ ದಡೆಗಾಮ, ಬಡೆಗಾಮ, ಪಟ್ಟಣಕ್ಕೆ ಹೋಗುವಾಗ-

ತೆಲುಗು (ಅನುವಾದ): ಇಬ್ಬರು ಅಣ್ಣತಮ್ಮರ ಹೆಂಡತಿರು ಎದುರು ಬಂದರಲ್ಲ

ಪಾಲ ಕೇಳ್ಕರಲ್ಲ

ಖಂಡೆರಾವು ಸಿದ್ದೋಜಿರಾವು

ಎಲ್ಲಾ ಹಂಚಿಕೊಂಡು ಬಂದಿವಂತ ಹೇಳ್ತರಲ್ಲ

ಹೆಂಡತಿರಿಗೆ ಸಮಾಧಾನಾಗಲಿಲ್ಲ

ಇದ್ದ ಲಕ್ಷ್ಮೀ ಮನ್ಯಾಗ ಬಿಟ್ಟು

ಉಳ್ಳಗಡ್ಡಿ ಮ್ಯಾಲಿನ ಹೊಟ್ಟು ಹಂಚ್ಚಿ ಕೊಟ್ಟ್ಯಾನ

ನಿಮ್ಮ ಬಾಯಿ ಬಡಿದು

ಯಾವ ಲಕ್ಷ್ಮೀ ನಮಗ ಹೇಳಿ ಕೊಡ್ರಿ ಅಂತರಲ್ಲ

ಎಂಬ್ಲುಗಡಿಗಿ ಲಕ್ಷ್ಮಿ ಹಂಚಿದರೆ ಭಾಗ ಅದಂಗೆ

ಹೆಣ್ಣುಮಕ್ಕಳ ಸಂಗತಿ ನಮಗ ಗೊತ್ತಾಗಲ್ಲ

ನಿಮ್ಮ ಅಕ್ಕದಾರುಕಾಯಮ್ಮ ಆಳ ಹೋಗಿ ಬರ್ರಿ ಅಂದ್ರು ಗಂಡ್ರು

ತಲಾಗ ಎರಡು ತಂಬಿಗಿ ಕೈಯಾಗ ಕೊಟ್ಟರಲ್ಲ

ಕೌಲೇಶಕೋಟೆ ಮೌಲೇಶಕೋಟೆಗೆ ಬಂದರಲ್ಲ[18]

ಬುರ್ರಕತೆಗಾರರು ಕತೆಯನ್ನು ಅತ್ಯಂತ ದೀರ್ಘವಾಗಿ ನಿರೂಪಿಸುವ ಹಾಗೆಯೇ ಅದೇ ಕತೆಯನ್ನು ಸಂಕ್ಷಿಪ್ತಗೊಳಿಸುವ ಪ್ರತಿಭೆಯನ್ನು ಹೊಂದಿರುವುದರಿಂದ ಈ ಆರ್ಯವರ ಕತೆಯು ಕನ್ನಡಕ್ಕಿಂತ ತೆಲುಗಿನಲ್ಲಿ ದೀರ್ಘವಾಗಿ ಅಭಿವ್ಯಕ್ತಿಸಿದ್ದಾರೆ. ಈ ಸನ್ನಿವೇಶ ಕನ್ನಡ ಪಠ್ಯದಲ್ಲಿ ಬಂದಿಲ್ಲ. ಕತೆಗಾರರು ಒಬ್ಬರಿಗಿಂತ ಒಬ್ಬರು ಮಿಗಿಲಾಗಿ ಹಾಡುತ್ತಾರೆ. ಯಾರು ಶ್ರೇಷ್ಠ ಯಾರು ಕನಿಷ್ಠ ಎಂಬುದು ಮುಖ್ಯವಲ್ಲ. ಅಣ್ಣತಮ್ಮಂದಿರು ಭಾಗ ಆದಾಗ ಹೆಣ್ಣುಮಕ್ಕಳ ಪಾತ್ರ ವಿಶೇಷವಾಗಿರುತ್ತದೆ. ಗಂಡುಮಕ್ಕಳಿಗಿಂತ ಹೆಣ್ಣುಮಕ್ಕಳಿಗೆ ಪ್ರತ್ಯೇಕ ಸಂಸಾರ ಮಾಡಬೇಕೆಂಬ ಬಯಕೆ ವ್ಯಕ್ತವಾಗಿದೆ.

ಎಂಬ್ಲುಗಡಿಗಿ(ಕಲಿಕುಂಡ) ಎಲ್ಲಾ ಸಂಪತ್ತಿಗಿಂತ ಶ್ರೇಷ್ಠವಾದುದು, ದೊಡ್ಡದೆಂದು ಸ್ತ್ರೀಯರು ತಿಳಿದುಕೊಂಡಿರುತ್ತಾರೆ. ಎಂಬ್ಲುಗಡಿಗೆಯೇ ನಿಜವಾದ ಲಕ್ಷ್ಮೀ. ಆ ಲಕ್ಷ್ಮಿಯೇ ಮನೆಯ ಅಂತಸ್ತನ್ನು ಬೆಳೆಸುತ್ತದೆ ಎಂಬ ಭಾವನೆ ಇದೆ. ಹೀಗಾಗಿ ಭಾಗ ಮಾಡಿಕೊಂಡು ಬಂದ ಗಂಡಂದಿರನ್ನು ಹೆಂಡತಿಯರು ಕೇಳುತ್ತಾರೆ. ಎಲ್ಲಾ ಸಂಪತ್ತು ಭಾಗ ಮಾಡಿಕೊಂಡು ಬಂದಿದ್ದೇವೆ ಎಂದರೆ ಹೆಂಡತಿಯರಿಗೆ ಸಮಾಧಾನ ಇರುವುದಿಲ್ಲ. 'ಉಳ್ಳಗಡ್ಡಿ ಮ್ಯಾಲಿನ ಹೊಟ್ಟು ಹಂಚಿ ಕೊಟ್ಟನ' ನಿಮ್ಮ ಅಣ್ಣ ಎಂದು ಹೆಂಡತಿಯರು ಹೇಳುವ ಮಾತುಗಳಲ್ಲಿ ಎಲ್ಲಾ ಸಂಪತ್ತನ್ನು ಉಳ್ಳಗಡ್ಡಿ ಮೇಲಿನ ಹೊಟ್ಟಿಗೆ ಹೋಲಿಸುತ್ತಾರೆ. ಎಂತಹ ಲಕ್ಷ್ಮಿ ಎಂದು ಗಂಡಂದಿರು ಕೇಳಿದಾಗ 'ಎಂಬ್ಲುಗಡಿಗಿ' ಲಕ್ಷ್ಮಿ ಎಂದು ಹೇಳುತ್ತಾರೆ. ಹೆಣ್ಣುಮಕ್ಕಳಿಗೆ 'ಎಂಬ್ಲುಗಡಿಗಿ' ಯ ಒಳಗಿನ ನೀರೇ ಶ್ರೇಷ್ಠ ಎಂಬ ಸಂಪ್ರದಾಯವನ್ನು ನಂಬಿಕೊಂಡು ಬಂದಿರುತ್ತಾರೆ. ಆ ನೀರು ಪೂಜನೀಯದ್ದು ಆ ಗಡಿಗೆ ಪೂಜನೀಯದ್ದು ಅದುವೇ ನಿಜವಾದ ಲಕ್ಷ್ಮೀ ಎಂದು ಬಗೆದಿರುತ್ತಾರೆ. ಈ ಸನ್ನಿವೇಶವು ವಾಸ್ತವ ಬದುಕನ್ನು ಪ್ರತಿನಿಧಿಸುತ್ತದೆ. ಸಾಮಾನ್ಯವಾಗಿ ಹಳ್ಳಿಗಳಲ್ಲಿ ಅಣ್ಣ ತಮ್ಮಂದಿರು ಭಾಗ ಆದ ಸಂದರ್ಭದಲ್ಲಿ 'ಎಂಬ್ಲುಗಡಿಗಿ'ಯೇ ಮುಖ್ಯವಾಗಿ ಪ್ರಸ್ತಾಪಿಸುತ್ತಾರೆ, ಹೆಣ್ಣುಮಕ್ಕಳ ವಿಷಯ ನಿಮಗೆ ಗೊತ್ತಾಗಲ್ಲ ಎಂದು ಹೇಳುವಲ್ಲಿ ಗಂಡಂದಿರಿಗೆ ಎಂಬ್ಲುಗಡಿಗೆ ಮಹತ್ವ ಮನೆಯ ಒಳಗಿನ ವಿಚಾರ ನಿಮಗೆ ಅರಿವು ಇರುವುದಿಲ್ಲ, ಅದು ಸ್ತ್ರೀಯರಿಗೆ ಮಾತ್ರ ಗೊತ್ತಿರುತ್ತದೆ ಎಂಬುದನ್ನು ತಿಳಿಸುತ್ತಾರೆ. ಸಂಪತ್ತು ಹೋಗಬಹುದು, ಮನೆ ಹೋಗಬಹುದು, ಅಂತಸ್ತು ಹೋಗಬಹುದು, ಆದರೆ 'ಎಂಬ್ಲುಗಡಿಗಿ' ಶಾಶ್ವತವಾದುದು ಎಂಬುದನ್ನು ಸೂಕ್ಷ್ಮವಾಗಿ ಗಂಡಂದಿರಿಗೆ ಮನವರಿಕೆ ಮಾಡಿಕೊಡುತ್ತಾರೆ. ಆಗ ಗಂಡಂದಿರು ಹೆಂಡಂದಿರಿಗೆ ತಲಾಗೊಂದು ತಂಬಿಗಿ ಕೊಟ್ಟು ಕೌಲೇಶಕೋಟೆ, ಮೌಲೇಶಕೋಟೆಗೆ ಕಳಿಸುವ ಗಂಡಂದಿರು 'ಲಕ್ಷ್ಮಿ'ಯನ್ನು ತರಲು ಸೂಚಿಸುತ್ತಾರೆ.

ನರೇಂದ್ರರಾವು ತಮ್ಮನ ಮಕ್ಕಳನ್ನು ಕಂಬಕ್ಕೆ ಕಟ್ಟಿಹಾಕಿ ಸಂಪತ್ತನ್ನು ಮಾರು ವೇಷದಿಂದ ಸಿದ್ದೋಜಿರಾವು ದೋಚಿಕೊಂಡು ಹೋಗುತ್ತಾನೆ. ಇದನ್ನರಿಯದೆ ನರೇಂದ್ರರಾವು ಗೆಳೆಯ ಸಂಗಿಶೆಟ್ಟಿ ಎಲ್ಲಯ್ಯ ಮಕ್ಕಳಿಗೆ

ಕನ್ನಡ: ನಡಿರಿ ನಮ್ಮ ಮನೆಗೆ ನಾವು ಸಲ್ಕಿತಿವಿ

ಒಂದು ದಿಸವ ಸಲಿವಿದರು ಎರಡು ದಿವಸ ನೋಡಿದ್ರು

ಒಂದು ತಿಂಗಳ ಸಲುವಿದರು

ನಮ್ಮ ಕುಲ ಅವರ್ದಲ್ಲ

ಅವರ ಕುಲ ನಮ್ಮದಲ್ಲ

ಅವರ್ದು ಆರ್ಯಕುಲ

ನಮ್ಮ ಕುಲ ರೆಡ್ಡಿ ಕುಲ

ಮಾಡಿದೋಟು ಮಾಡಿವಿ

ಈವಗ ನಿಮ್ಮ ಕಾಕ ಆನ

ಸಿದ್ದೋಜಿರಾಜ ಆನ

ಅವನ ಬೆಲ್ಲಿಗಿ ಹೋಗಿರಿ

ಎಂದು ಹೇಳುತ್ತಾನೆ. ಮಕ್ಕಳ ಕಷ್ಟ ಕಂಡು ಗೆಳೆತನದ ಭಾವನೆಯಿಂದ ಗೆಳೆಯನ ಮಕ್ಕಳನ್ನು ಸಲಹುತ್ತಾನೆ. ಇಲ್ಲಿ ಈ ಮಕ್ಕಳ ತಾಯಿ-ತಂದೆ, ಅಜ್ಜ-ಅಜ್ಜಿ, ಸತ್ತಾಗ ಚಿಕ್ಕಪ್ಪನವರು ಬರುವುದಿಲ್ಲ. ಗೆಳೆಯರೇ ಎಲ್ಲಾ ಕಾರ್ಯಗಳನ್ನು ಮಾಡುತ್ತಾರೆ. ಇಲ್ಲಿ ಕುಟುಂಬ ಸಂಬಂಧಕ್ಕಿಂತ ಗೆಳೆಯ ಸಂಬಂಧವೇ ಶ್ರೇಷ್ಠ ಎಂಬ ಆಶಯವು ಇದೆ. ಸಂಗಿಶೆಟ್ಟಿ ಎಲ್ಲಯ್ಯ ಗೆಳೆಯನ ಮಕ್ಕಳನ್ನು ಪೋಷಿಸಿಸುತ್ತಾನೆ. ಆದರೆ ಜಾತಿಯ ಅನಾಚಾರದಿಂದ ಮಕ್ಕಳನ್ನು ಚಿಕ್ಕಪ್ಪ ಸಿದ್ದೋಜಿರಾವು ಮನೆಗೆ ಹೋಗಿರೆಂದು ತಿಳಿಸುತ್ತಾನೆ. ಆದರೆ ತೆಲುಗು ಪಠ್ಯದಲ್ಲಿ ಸಂಗಿಶೆಟ್ಟಿ ಎಲ್ಲಯ್ಯ ಪಾತ್ರಕ್ಕೆ ಅನುಗುಣವಾಗಿ ಮಂತ್ರಿ ಪಾತ್ರ ಬಂದಿದೆ. ಮಂತ್ರಿ ಮಕ್ಕಳ ಕಷ್ಟವನ್ನು ಕಂಡು ತನ್ನ ಮನೆಗೆ ಕರೆದುಕೊಂಡು ಹೋಗುತ್ತಾನೆ. ಇಲ್ಲಿ ಮಂತ್ರಿ ಸಂಗಶೆಟ್ಟಿ ಎಂದು ನಿರೂಪಿಸಿದ್ದಾರೆ ಹೊರತು ಗೆಳೆಯನ ಪಾತ್ರವಾಗಿ ಬಂದಿಲ್ಲ. ಮಂತ್ರಿಯು ಮಕ್ಕಳ ಮನೆಗೆ ನೋಡಲು ಬಂದಾಗ ಮನೆಯಲ್ಲಿದ್ದ ಸಂಪತ್ತನ್ನು ಕಳ್ಳರು ದೋಚಿಕೊಂಡು ಹೋಗಿದ್ದರು. ಮಕ್ಕಳನ್ನು ಸಾಕಲು ಅರಮನೆಯಲ್ಲಿ ಏನು ಇದ್ದಿಲ್ಲ. ಆಗ ಮಂತ್ರಿಯು-

ತೆಲುಗು (ಅನುವಾದ): ತಾನು ಸಂಪಾದಿಸಿದ ಬೆಳ್ಳಿ ಬಂಗಾರ ಸೊತ್ತು ಮಾರಿದನಲ್ಲ

ಹುಡುಗರ್ನ ಸಲ್ಹಲಕತ್ತ್ಯನಲ್ಲ

ಹುಡುಗರಿಗೆ ಧೈರ್ಯ ಹೇಳಕತ್ತ್ಯನ

ದೊಡ್ಡಮಗ ಹನ್ನೆರಡು ವರ್ಷದವನಾಗ್ಯನ

ನಡುವಿನ ಮಗ ಏಳು ವರ್ಷದವನಾಗ್ಯನ

ಸಣ್ಣ ಮಗ ಆರು ವರ್ಷದವನು[೪೬]

ರಾಜ ನರೇಂದ್ರರಾವು ಮಂತ್ರಿಯು ರಾಜನ ಮಕ್ಕಳನ್ನು ತಾನೇ ಸಲಹುತ್ತಾನೆ. ಹುಡುಗರಿಗೆ ಧೈರ್ಯ ಹೇಳುತ್ತಾನೆ. ಹುಡುಗರು ದೊಡ್ಡವರಾಗುತ್ತಾರೆ. ಆಗ ಸಿದ್ದೋಜಿರಾವುಗೆ ಮಕ್ಕಳ ಮುಂದೆ ದೊಡ್ಡವರಾಗಿ ಶತ್ರುಗಳಾಗುತ್ತಾರೆಂಬ ಭಯದಿಂದ ಮಕ್ಕಳನ್ನು ರಮಿಸಿ ತನ್ನ ಪಟ್ಟಣಕ್ಕೆ ಕರೆದುಕೊಂಡು ಹೋಗಿ, ಕಷ್ಟ ಕೊಟ್ಟು ಸಾಯಿಸಲು ಪ್ರಯತ್ನಿಸುತ್ತಾನೆ. ಎರಡೂ ಪಠ್ಯಗಳಲ್ಲಿ ಸಂಗಶೆಟ್ಟಿ ಎಲ್ಲಯ್ಯ, ಮಂತ್ರಿ ಈ ಪಾತ್ರಗಳ ಉದಾರ ಮನೋಭಾವ ವ್ಯಕ್ತವಾಗಿದೆ. ಮಕ್ಕಳನ್ನು ಸಲುಹಿ ಮಾನವೀಯತೆ ಮೆರೆಯುತ್ತಾರೆ.

ಸಿದ್ದೋಜಿರಾಜನು ನಿಮ್ಮ ಚಿಕ್ಕಮ್ಮ ರಾಧಬಾಯಿ ನಿಮ್ಮ ಮೇಲೆ ಮನಸ್ಸಿಟ್ಟು ನೆನೆಯುತ್ತಿದ್ದಾಳೆಂದು ದಡೆಗಾಮ ಪಟ್ಟಣಕ್ಕೆ ಮಕ್ಕಳನ್ನು ಕರೆದುಕೊಂಡು ಹೋದನು. ಆಗ ಮಕ್ಕಳನ್ನು

ತೆಲುಗು (ಅನುವಾದ): ಕೆಂಪಾದ ಬಿಸಿಲಲ್ಲಿ ಸಣ್ಣ ಉಸುಕಲ್ಲಿ ನಿಲ್ಲಿಸಿದನಲ್ಲ ಕಚೇರಿಮುಂದೆ

ಚಿಕ್ಕವನಿಗಿ ಫಿರೋಜಗೆ ಕೋಪಬಂತಲ್ಲ

ಅಣ್ಣ ನಮ್ಮಮದುವೆ ಮಾಡ್ತಿನೆಂದು ಕರೆ ತಂದನಲ್ಲ

ವಿದ್ಯಾ ಕಲಿಸ್ತಿನಂತ ಕರೆತಂದನಲ್ಲ

ಇದು ದೊಡ್ಡ ಮದುವೆ

ಸಾಯಲಿಕ್ಕೆ ತಂದಾನ ಅಂತ ಮಾತಡ್ತಾರ[೪೭]

ಮಕ್ಕಳಿಗೆ ಮೋಸ ಮಾಡಿ ತನ್ನ ಪಟ್ಟಣಕ್ಕೆ ಕರೆದುಕೊಂಡು ಹೋಗುವ ಸಿದ್ದೋಜಿರಾಜನು. ಮಕ್ಕಳಿಗೆ ಮದುವೆ ಮಾಡ್ತೀನಿ, ವಿದ್ಯೆ ಕಲಿಸುತ್ತೇನೆಂದು ಹೇಳುವಲ್ಲಿ ಮೋಸ ಅಡಗಿರುತ್ತದೆ. ಚಿಕ್ಕವ ಫಿರೋಜನು ಚಿಕ್ಕಪ್ಪನ ಮನದ ಇಂಗಿತವನ್ನು ಅರಿತುಕೊಂಡಿರುತ್ತಾನೆ. ಕನ್ನಡ ಪಠ್ಯದಲ್ಲಿ ಆ ಮಕ್ಕಳೇ ದಡೆಗಾಮ ಪಟ್ಟಣಕ್ಕೆ ಬಂದಾಗ ಮಕ್ಕಳಿಗೆ ಚಿಕ್ಕಪ್ಪ ಶಿಕ್ಷೆ ಕೊಡುತ್ತಾನೆ. ಎರಡೂ ಪಠ್ಯಗಳಲ್ಲಿ ಶಿಕ್ಷೆ ಕೊಡುವ ವಿಧಾನ ಒಂದೇ ತೆರನಾಗಿದೆ.

ಸಿದ್ದೋಜಿರಾಜನು ತನ್ನ ಮನೆಗೆ ಬಂದ ಅಣ್ಣನ ಮಕ್ಕಳನ್ನು ಕುರಿತು ಹೇಳುತ್ತಾನೆ.

ಕನ್ನಡ: ಅರೆ ಮಕ್ಕಳಂದರಲ್ಲ

ಯಪ್ಪ ಕಾಕ ಅಂದರಲ್ಲ

ನಾವು ಏನು ದಂದೆ ಮಾಡಬೇಕ

ಕಟಿಗಿ ಕಡಿಯಬೇಕು

ಸೂರ್ಯಗುಡ್ಡದಗ ಚಂದ್ರಗುಡ್ಡದಗ

ಕಟಿಗಿ ಕಡಕಂಡುಬಂದು ಮನೆ ತುಂಬಬೇಕು

ಕಟಿಗಿ ಕಡಿಲಾಕ ಬ್ಯಾಗರಿ ಎಲ್ಲೋಜಿ ಹಿಂದೆ ಹೋದನಲ್ಲ

ಮಕ್ಕಳು ಕಟಿಗಿ ಕಡಿಲಕತ್ತರಲ್ಲ

ಸಣ್ಣವ ಶೀಮೋಜಿರಾಜಗ

ಕಾಲಿಗಿ ಕೊಡ್ಲಿ ಹತ್ತಿತಲ್ಲ

ರಕ್ತ ಸೋರ್‍ಲಕತ್ತದಲ್ಲ

ಆ ಬ್ಯಾಗರಿ ಎಲ್ಲೋಜಿ ನೋಡಿ ಏನಂತನ

ನೀವು ಕಡಿಯುವ ಕಟಿಗಿ ನಾನೊಬ್ಬ ಕಡ್ತಿನಿ

ಸಿದ್ದೋಜಿರಾಜನು ಅಣ್ಣನ ಮಕ್ಕಳಿಗೆ ಕಟ್ಟಿಗೆ ಕಡಿದುಕೊಂಡು ಬರಲು ಅಡವಿಗೆ ಕಳಿಸುತ್ತಾನೆ. ಚಿಕ್ಕಪ್ಪನ ಕ್ರೂರತನ ಇದರಿಂದ, ಮಕ್ಕಳು ಪಡಬೇಕಾದ ಕಷ್ಟವು ಅಭಿವ್ಯಕ್ತವಾಗಿದೆ. ತಾಯಿತಂದೆ ಇಲ್ಲದ ಸಂದರ್ಭದಲ್ಲಿ ಚಿಕ್ಕಪ್ಪರ ಮನೆಯಲ್ಲಿ ಕಷ್ಟವನ್ನು ಅನುಭವಿಸುವ ಚಿತ್ರಣವಿದೆ. ಮಕ್ಕಳ ಕಟ್ಟಿಗೆ ಕಡಿಯಲು ಹೋದಾಗ, ಮನೆಕೆಲಸ ಮಾಡುವ ಬ್ಯಾಗರಿ ಎಲ್ಲೋಜಿನನ್ನು ಕಳಿಸುವ ಸಿದ್ದೋಜಿರಾಜನು, ಮಕ್ಕಳಿಗೆ ಕಷ್ಟ ಕೊಡಲು ಕಳಿಸುತ್ತಾನೆ. ಆದರೆ ಏನು ಅರಿಯದ ಮುಗ್ಧ ಮಕ್ಕಳ ಪರಿಸ್ಥಿತಿಯನ್ನು ಅರಿತು ಬ್ಯಾಗರಿ ಎಲ್ಲೋಜಿ ತಾನೆ ಕಟ್ಟಿಗೆ ಕಡಿದು ಮಕ್ಕಳಿಗೆ ಸಹಾಯ ಮಾಡುವುದನ್ನು ಕಂಡರೆ ಅವನಲ್ಲಿ ಮಾನವೀಯತೆ ಕಂಡುಬರುತ್ತದೆ. ಇದೇ ಸನ್ನಿವೇಶ ತೆಲುಗುನಲ್ಲಿ ಬ್ಯಾಗರಿ ಎಲ್ಲಯ್ಯ ಪಾತ್ರ ಬಂದಿದ್ದರೂ, ಮಕ್ಕಳ ಹಿಂದೆ ಜೀತಗಾರರನ್ನು ಬಂಡಿಕಟ್ಟಿ ಕಳಿಸುತ್ತಾನೆ. ಸಿದ್ದೋಜಿರಾಜನು ಹೇಳಿದಂತೆ-

ತೆಲುಗು (ಅನುವಾದ): ಬ್ಯಾಗರಿ ಎಲ್ಲಯ್ಯ ನೋಡ

ತಿರುಗಿ ಕಚೇರಿಗಿ ಕರಕಂಡುಬಂದನಲ್ಲ

ಮೂವ್ವರಿಗಿ ಮೂರು ಕೊಡ್ಲಿಗಳು ಕೊಟ್ಟನಲ್ಲ ಸಿದ್ದೋಜರಾಜ

ಹನ್ನೆರಡು ಬಂಡಿ ಕಟಿಗಿ ಕಡಕಂಡುಬರ್‍ರಿ

ಜೀತಗಾರರು ಬಂಡಿಗಳು ಕಟ್ಟರಲ್ಲ

ಹುಡುಗರ್‍ನ ಬಂಡಿಮ್ಯಾಲ ಕೂಡಿಸ್ಯರಲ್ಲ

ಈಗ ಏಳೇಳು ಬೆಟ್ಟಗಳದಗ ಕರಕಂಡುಬಂದರಲ್ಲ

ದೊಡ್ನ ಮಗ  ಕೊಡ್ಲಿ ಕೈಲಿ ಹಿಡಕೊಂಡು

ಗಿಡ ಕಡಿಯಲು ಹೋದನಲ್ಲ

ಕೊಡ್ಲಿ ಪಟ್ಟಂತ ಎಗರಿ ಕಾಲಿಗೆ ಬಿತ್ತಲ್ಲ

ರಣರಂಗವಾಯ್ತಲ್ಲ ರಕ್ತ

ಆ ಜೀತಗಾರರಿಗೆ ಅಕ್ಕರೆ ಬಂತಲ್ಲ
ಮಕ್ಕಳ್ನ ಅಲ್ಲೆ ಕೂಡಿಸ್ಯರಲ್ಲ
ಅವರೇ ಕಟಿಗಿ ಕಡಿದು ಬಂಡಿ ತುಂಬ್ಯರಲ್ಲ"[೮]

ಇಲ್ಲಿ ಬ್ಯಾಗರಿ ಪಾತ್ರಕ್ಕಿಂತ ಜೀತಗಾರರು ಪಾತ್ರ ಮುಖ್ಯವಾಗಿ ಬಂದಿದೆ. ಸಿದ್ರೋಜಿರಾವು ಹನ್ನೆರಡು ಬಂಡಿಗಳನ್ನು ಕಟ್ಟಿಸಿ ಕಟ್ಟಿಗೆ ಕಡಿದುಕೊಂಡು ಬರಲು ಕಳಿಸುತ್ತಾನೆ. ಮಕ್ಕಳ ಕಷ್ಟ, ಚಿಕ್ಕಪ್ಪನ ಕ್ರೂರತನ, ಜೀತಗಾರರ ಮಾನವೀಯ ಅಭಿವ್ಯಕ್ತವಾಗಿದೆ. ಕೆಳವರ್ಗದ ಜೀತಗಾರರಿಗೆ ಕಷ್ಟ ಸುಖ ಗೊತ್ತಿರುತ್ತದೆ. ಮಕ್ಕಳ ಬಗ್ಗೆ ಕನಿಕರ ಇರುತ್ತದೆ. ನರೇಂದ್ರರಾಜನ ಮಕ್ಕಳು, ಅರಮನೆಯಲ್ಲಿರತಕ್ಕವರು ಚಿಕ್ಕಪ್ಪನ ಕುತಂತ್ರ, ರಾಕ್ಷಸತನ ಕಂಡು, ಮಕ್ಕಳಿಗೆ ಕಟ್ಟಿಗೆ ಕಡಿಯಲು ಕೊಡದೆ ತಾವೇ ಕಡಿದು ಬಂಡಿಗಳನ್ನು ತುಂಬುತ್ತಾರೆ. ಇಲ್ಲಿ ಜೀತಪದ್ಧತಿ ವ್ಯಕ್ತವಾಗಿದ್ದು ಅವರ ಪ್ರಾಮಾಣಿಕತೆಯಿಂದ ಮಾಡುವ ಕಾರ್ಯವು ಚಿತ್ರಿತವಾಗಿದೆ. ಬ್ಯಾಗರಿ ಎಲ್ಲಯ್ಯ ಪಾತ್ರ, ಜೀತಗಾರರ ಪಾತ್ರಗಳು ಇವು ಕೆಳವರ್ಗದ ಸಮುದಾಯವನ್ನು ತೋರಿಸುತ್ತದೆ. ಮೇಲ್ವರ್ಗದ ಜನರಿಗೆ ಅಧೀನರಾಗಿ, ತಮ್ಮ ಸ್ವಾಮಿತ್ವವನ್ನು ತೋರಿಸುವ ಬಗೆಯು ಇದೆ. ಹಾಗೆಯೇ ಅವರ ಕಳಕಳಿಯು ವ್ಯಕ್ತವಾಗಿದೆ.

ಸಿದ್ರೋಜಿರಾವು ಮಕ್ಕಳಿಗೆ ಕೊಟ್ಟ ಕಷ್ಟವನ್ನು ಅರಿತು, ಅವರನ್ನು ಸಾಯಿಸಲು ಹೂಡಿದ ಕುತಂತ್ರವನ್ನು ತಿಳಿದು ಬ್ಯಾಗರಿ ಎಲ್ಲಪ್ಪ ಆ ಮಕ್ಕಳನ್ನು ಅಕ್ಕ ರುಕುಂಬಾಯಿ ಪಟ್ಟಣಕ್ಕೆ ಕಳಿಸುವ ಯೋಚನೆ ಮಾಡುತ್ತಾನೆ. ಈ ಸನ್ನಿವೇಶ ಕನ್ನಡ-ತೆಲುಗು ಎರಡು ಕತೆಗಳಲ್ಲಿ ಬಂದಿದೆ. ಬ್ಯಾಗರಿ ಎಲ್ಲಯ್ಯ ಮಕ್ಕಳನ್ನು ಕರೆದು-

ಕನ್ನಡಃ ನೀವು ಅಂಜ ಬ್ಯಾಡಿರಿ ಮಕ್ಕಳೆ
ನಾನು ಕಳಿಸಿಕೊಡ್ತಿನಿ
ಕುದುರೆ ಏಸೆ ಕಟ್ಟಿದ
ಅದು ಲಡಾಯಿ ಕುದುರಿ
ಲಕ್ಷ್ಮಿದೇವಿ ಕುದುರಿ
ಆ ಕುದ್ರಿಮ್ಯಾಲ ಮೂವರು ಮಕ್ಕಳ್ನ ಹಾಕೊಂಡ
ಬ್ಯಾಗರಿ ಎಲ್ಲೋಜಿ
ಅವನೂ ಕುಂತನಲ್ಲ
ಬಂಡಿದಾರಿ ಬಡಾರಸ್ತ ಹಿಡಿದ
ಆ ಮಕ್ಕಳ್ನ ಸಟ್ಟ ಸವರಾತ್ರಿಯಲ್ಲಿ ತಗಂಡು ಹೊರಟ

ತೆಲುಗು (ಅನುವಾದ)ಃ ಏ ಸೋಮರಾವು ಅಂದ
ಏನು ತಂದೆ ಅಂತಾನ

ನಿಮ್ಮ ಅಕ್ಕ ರುಕುಂಬಾಯಿ

ಮದುವೆ ಮಾಡಿಕೊಟ್ಟಿದು ನಿಮ್ಗ ತಿಳಿಯದು

ಮುನ್ನೂರ ಅರವತ್ತು ಹರದಾರಿ ಕರಕಂಡು ಹೋಗ್ತೀನಿ

ಹೊತ್ತು ಇದ್ದರೆ ಊರು ಮುಟ್ಟುಸ್ತೀನಿ

ಮೂವ್ವರು ಮಕ್ಕಳ್ನ ಕುದ್ರಿ ಮ್ಯಾಲ ಕೂಡಿಸಿದ

ಹಿಂದೆ ಬ್ಯಾಗರಿ ಎಲ್ಲಯ್ಯ ಕುಂತ

ಮುನ್ನೂರ ಅರವತ್ತು ಹರದಾರಿ ಬಂದ

ಬೆಳಗಾಗ್ತ ಹತ್ತಿರ ಬಂತು

ಮಗ ಇದೇ ದಾರಿ

ಬಡಾರಸ್ತ ಬಂಡಿದಾರಿ

ನಿಮ್ಮಕ್ಕ ಊರಿಗಿ ಹೋಗ್ತದ ಹೋಗ್ರೀರಿ"

ಈ ಸನ್ನಿವೇಶವನ್ನು ನೋಡಿದಾಗ ಇಬ್ಬರು ವಕ್ತೃಗಳ ನಿರೂಪಣೆಯಲ್ಲಿ ತುಂಬ ಸಾಮ್ಯವಿರುವುದು ತಿಳಿಯುತ್ತದೆ. ಎರಡೂ ಪಠ್ಯಗಳಲ್ಲಿ ಬ್ಯಾಗರಿ ಎಲ್ಲಯ್ಯನೇ ಅಕ್ಕನ ಪಟ್ಟಣಕ್ಕೆ ಮಕ್ಕಳನ್ನು ಕಳಿಸುವ ಏರ್ಪಾಡು ಮಾಡುತ್ತಾನೆ. ಬ್ಯಾಗರಿ ಎಲ್ಲಯ್ಯ ಮಕ್ಕಳ ಕಷ್ಟ ಅರಿತು 'ನೀವು ಅಂಜ ಬ್ಯಾಡಿರಿ ಮಕ್ಕಳೆ' ಎಂದು ಧೈರ್ಯ ಕೊಡುತ್ತಾನೆ. ಮಕ್ಕಳನ್ನು ಸಿದ್ದೋಜಿರಾವು ಸಾಯಿಸುತ್ತಾನೆಂದು ತಿಳಿದು, ಮಕ್ಕಳನ್ನು ಅಕ್ಕನ ಪಟ್ಟಣಕ್ಕೆ ಕಳಿಸುವ ವ್ಯವಸ್ಥೆ ಮಾಡುತ್ತಾನೆ. ಬ್ಯಾಗರಿ ಎಲ್ಲಯ್ಯ ರಾಜನ ಯುದ್ಧ ಕುದುರೆಯನ್ನು ನೋಡಿಕೊಳ್ಳುವ ಕಾಯಕ ಮಾಡುವವನು. ಅದೇ ಯುದ್ಧ ಕುದುರೆಯನ್ನೇ ಮಕ್ಕಳನ್ನು ಕಳಿಸಲು ಉಪಯೋಗಿಸುತ್ತಾನೆ. ಮೂವರು ಮಕ್ಕಳನ್ನು ಕುದುರೆ ಮೇಲೆ ಕೂಡಿಸಿಕೊಂಡು ಮಧ್ಯರಾತ್ರಿಯಲ್ಲಿ ಕಾಲುದಾರಿ ಹಿಡಿದುಕೊಂಡು ಹೋಗುತ್ತಾನೆ. ಬ್ಯಾಗರಿ ಎಲ್ಲಯ್ಯನಿಗೆ ಮುಖ್ಯವಾಗಿ ಮಕ್ಕಳ ಜೀವ ಉಳಿಸಬೇಕಾಗಿತ್ತು. ಹೀಗಾಗಿ ಮಧ್ಯರಾತ್ರಿಯಲ್ಲೇ ಅವರನ್ನು ಕರೆದುಕೊಂಡು ಹೋಗುತ್ತಾನೆ. ಎರಡೂ ಪಠ್ಯಗಳಲ್ಲಿ ಕೆಳಸಮುದಾಯಕ್ಕೆ ಸೇರಿದ ಬ್ಯಾಗರಿ ಎಲ್ಲಯ್ಯ ಮಕ್ಕಳ ಜೀವ ಉಳಿಸಿ ಮಾನವೀಯತೆಯನ್ನು ಮೆರೆಯುತ್ತಾನೆ. ಇಲ್ಲಿ ಮಕ್ಕಳ ಮತ್ತು ಬ್ಯಾಗರಿ ಎಲ್ಲಯ್ಯನ ಮಧ್ಯ ಮಧುರವಾದ ಬಾಂಧವ್ಯ ಕಾಣುತ್ತದೆ. ಸೋಮರಾವು ಎಂದು ಕೂಗಿದಾಗ 'ಏನು ತಂದೆ' ಎನ್ನುವ ಮಾತಿನಲ್ಲಿ ಅವರ ಸಂಬಂಧ ವ್ಯಕ್ತವಾಗುತ್ತದೆ. ಬ್ಯಾಗರಿ ಎಲ್ಲಯ್ಯ ಪಾತ್ರದಲ್ಲಿ ಸ್ವಾಮಿತ್ವ, ದಯೆ, ಕರುಣೆ, ವಾತ್ಸಲ್ಯ, ಬಂಧುತ್ವ ಮುಂತಾದ ಗುಣಗಳು ವ್ಯಕ್ತವಾಗಿವೆ. ಮಕ್ಕಳನ್ನು ಅಕ್ಕ ರುಕುಂಬಾಯಿ ಪಟ್ಟಣಕ್ಕೆ ಬಿಟ್ಟು ಬಂದು ತನ್ನ ದೊರೆಯ ಕೆಂಗಣ್ಣಿಗೆ ಗುರಿಯಾದರು. ಮಕ್ಕಳು ಎಲ್ಲಿಗೆ ಹೋಗಿದ್ದಾರೆಂಬುದರ ಸುಳಿವನ್ನು ನೀಡುವುದಿಲ್ಲ. ಇದು ಅವನ ಉದಾರ ಮನೋಭಾವನೆಯನ್ನು ವ್ಯಕ್ತಪಡಿಸುತ್ತದೆ.

ಸೋಮರಾವು ತನ್ನ ತಮ್ಮಂದಿರ ಜೊತೆಗೂಡಿ ಅಕ್ಕ ರುಕುಂಬಾಯಿ ಪಟ್ಟಣ ಹುಡುಕುತ್ತ ಹೋಗುವಾಗ ಲಮಾಣಿ ತಾಂಡದಲ್ಲಿ ಆರು ತಿಂಗಳ ವಾಸ್ತವ್ಯ ಮಾಡುತ್ತಾರೆ. ಆ ಮಕ್ಕಳ ಕಷ್ಟವನ್ನು ಕಂಡು ಆ ಸಮುದಾಯ ಅಲ್ಲೇ ಇಟ್ಟುಕೊಳ್ಳುತ್ತದೆ. ಕನ್ನಡದಲ್ಲಿ ದಾರಿಯಲ್ಲೇ ಅಕ್ಕನನ್ನು ಕಂಡು ಪಟ್ಟಣ ಸೇರಿದರೆ ತೆಲುಗು ಪಠ್ಯದಲ್ಲಿ 'ಲಮಾಣಿ ತಾಂಡ'ದ ಸನ್ನಿವೇಶ ವಿಶೇಷವಾಗಿ ಅಭಿವ್ಯಕ್ತಗೊಂಡಿದೆ. ಸೋಮರಾವು ತನ್ನ ತಮ್ಮಂದಿರಿಗೆ ತಾಂಡ್ಯದ ಸಮುದಾಯವು-

ತೆಲುಗು (ಅನುವಾದ): ಲಮಾಣಿಗರು ತಾಯಿಯಾದರು

ಅವರೇ ತಂದಿಯಾದರಲ್ಲ
ಮಕ್ಕಳ್ನ ನೋಡಿ
ಕಾಲಿ ಇದ್ದ ಮನಿ ತೋರಿಸ್ಯಾರ
ಅಕ್ಕಿ ಬ್ಯಾಳೀ ತರಕಾರಿ ಮೊದಲ
ಹಾಲು ಮೊಸರು ಮೊದಲ
ಮಾಡಿಕೊಂಡು ತಿನ್ರಿ ಮಗ ಅಂದರಲ್ಲ
ತಾಂಡ್ಯಕ್ಕೆ ಬಂದು ಆರುತಿಂಗಳಾಯ್ತಲ್ಲ
ಮಕ್ಕಳು ಆರು ತಿಂಗಳಿಗಿ ದಷ್ಟಪುಷ್ಟವಾದರಲ್ಲ[೫೦]

ಸೋಮರಾವು ತಮ್ಮಂದಿರಿಗೆ ತಾಂಡ್ಯದ ಜನರೇ ತಾಯಿ ತಂದೆಯರಾಗಿ ಜೋಪಾನ ಮಾಡುತ್ತಾರೆ. ಲಮಾಣಿ ಸಮುದಾಯವು ಮಕ್ಕಳ ಕಷ್ಟವನ್ನು ಕಂಡು ಅವರಿಗೆ ಸಹಾಯ ಮಾಡುವುದನ್ನು ನೋಡಿದಾಗ ಆ ಸಮುದಾಯದ ಉದಾರ ಗುಣವನ್ನು ಕಾಣಬಹುದು. ತೆಲುಗು ಪಠ್ಯದಲ್ಲಿ ಮಾತ್ರ ಈ ಸನ್ನಿವೇಶ ಇದೆ. ಕತೆಗಾರರು ಈ ಸನ್ನಿವೇಶವನ್ನು ತಂದು ಕತೆಯು ಇನ್ನಷ್ಟು ದೀರ್ಘವಾಗಿ ಬೆಳೆಯಲು ಅವಕಾಶವಾಗಿದೆ. ಈ ಸನ್ನಿವೇಶವು ಕತೆಗೆ ಪೂರಕವಾಗಿ ಅರ್ಥಗರ್ಭಿತವಾಗಿ ಅಭಿವ್ಯಕ್ತಗೊಂಡಿದ್ದನ್ನು ಕಾಣಬಹುದು.

ಆ ಮಕ್ಕಳು ಲಮಾಣಿಗರ ಕುದುರೆ ನಾಯಿಗಳನ್ನು ಕಳ್ಳತನ ಮಾಡಿಕೊಂಡು ಅಕ್ಕ ರುಕುಂಬಾಯಿ ಪಟ್ಟಣ ಸೇರುತ್ತಾರೆ. ಲಮಾಣಿ ಸಮುದಾಯ ತಮಗೆ ಮೋಸ ಬಗೆದರೆಂದು ಮೋರಂ ಪಟ್ಟಣಕ್ಕೆ ಬರುತ್ತಾರೆ. ಕನ್ನಡದಲ್ಲಿ 'ಇಳ್ಯವಂತ ಪಾಳ್ಯ' ಎಂದು ಬಂದಿದೆ. ತೆಲುಗು ಪಠ್ಯದಲ್ಲಿ 'ಮೋರಂ ಪಟ್ಟಣ' ಎಂದು ಬಂದಿದೆ. ಕತೆಗಾರರ ಪ್ರತಿಭೆಯ ಹಾಗೂ ಅವರ ಕಲ್ಪನೆಯ ಪಟ್ಟಣಗಳಾಗಿ ಬಂದಿವೆ. ಲಮಾಣಿಗ ಸಮುದಾಯವು ಮೋರಂ ಪಟ್ಟಣದ-

ತೆಲುಗು (ಅನುವಾದ): ಕಚೇರಿಗೆ ಬಂದ್ರಲ್ಲ

ಏನಯ್ಯ ನಿನ್ನ ಅಳಿಂದಿರು

ದೊರೆ ಮಕ್ಕಳಲ್ಲ, ಕಳ್ಳ ಮಕ್ಕಳು

ಕುದ್ರಿಗಳು ನಾಯಿಗಳನ್ನು ಕಳ್ಳತನ ಮಾಡಿ ತಂದರ

ನಾವು ಆರು ತಿಂಗಳ ಸಲಿವೀದಿ[೫೧]

ಈ ಸನ್ನಿವೇಶವು ಸಹ ತೆಲುಗು ಕತೆಯಲ್ಲಿ ಮಾತ್ರ ಬಂದಿದೆ. ಲಮಾಣಿ ಸಮುದಾಯ ಸಾಕಿದ ನಾಯಿಗಳು, ಕುದುರೆಗಳು ವಿಶೇಷ ಪರಿಣತಿಯನ್ನು ಪಡೆದಿರುತ್ತವೆ. ಹೀಗಾಗಿ ಆ ಸಮುದಾಯವು ನೇರವಾಗಿ ಬುರಾನಸಾಬ್ ಮನೆಗೆ ಬಂದು ಅವರ ಗೋಳನ್ನು ತೋಡಿಕೊಳ್ಳುತ್ತಾರೆ. ದೊರೆ ಮಕ್ಕಳಲ್ಲ, ಕಳ್ಳಮಕ್ಕಳು ಎಂದು ಹೇಳುವಲ್ಲಿ ದೊರೆತನದ ಗುಣಗಳು ಮಕ್ಕಳಲ್ಲಿಲ್ಲ ಎಂಬ ಭಾವವನ್ನು ವ್ಯಕ್ತಪಡಿಸುತ್ತಾರೆ. ಕುದುರೆ ಮತ್ತು ನಾಯಿಗಳು ಮಾನವನ ನಂಬಿಗಸ್ಥ ಪ್ರಾಣಿಗಳಾಗಿ ಬಂದಿವೆ. ಲಮಾಣಿಗರು ನಾಯಿಗಳು, ಕುದುರೆಗಳಲ್ಲೆ ಜೀವನ ನೆಟ್ಟಿರುತ್ತಾರೆ. ಈ ಮಕ್ಕಳನ್ನು ಆರು ತಿಂಗಳು ಸಲಹಿದರೂ, ದೊರೆತನದ ಗುಣವನ್ನು ಬಿಟ್ಟು ಮೋಸ, ವಂಚನೆ, ಮಾಡಿ ಕಳ್ಳತನ ಮಾಡಿದ್ದಾರೆಂಬ ಆಶಯವನ್ನು ವ್ಯಕ್ತಪಡಿಸಿದ್ದಾರೆ.

ಇನ್ನೂ ದೀರ್ಘವಾಗಿ ನಿರೂಪಣೆಗೊಂಡ ತೆಲುಗು ಕತೆಯಲ್ಲಿ ಕೋಮಟಿ ಸೀತಯ್ಯ ಪಾತ್ರವು ಸ್ವಾರಸ್ಯದಿಂದ ಕೂಡಿದೆ. ಕೋಮಟಿ ಸೀತಯ್ಯ ಮುತ್ತು ವ್ಯಾಪಾರಿಗ, ವರ್ಷಕ್ಕೆ ಒಂದು ಸಲ ವ್ಯಾಪಾರಕ್ಕೆ ಬೇರೆ ನಾಡಿಗೆ ಹೋಗುತ್ತಿದ್ದ ತನ್ನ ಮನೆ ಕಾಯಲು ರುಕುಂಬಾಯಿಯಲ್ಲಿ ಕೇಳಿಕೊಂಡಾಗ ತನ್ನ ತಮ್ಮಂದಿರನ್ನು ಕಳಿಸುತ್ತಾಳೆ. ಸೋಮರಾವು ತಮ್ಮಂದಿರು ಕೋಮಟಿ ಸೀತಯ್ಯ ಮನೆ ಕಾಯುವಾಗ ರಾತ್ರಿಯಲ್ಲಿ ಕಳ್ಳರು ಮನೆಗೆ ಬಂದಾಗ-

ತೆಲುಗು (ಅನುವಾದ): ನಾಯಿಗಳು ನಾದ ಹಿಡಿದವ

ಸರಪಳಿ ಹರಿದವಲ್ಲ ನಾಯಿಗಳು

ಕೋಮಟಿಗರ ಮನೆಗೆ ಬಂದು

ಕಳ್ಳರ್ನ ಕಡಿದು ಹಾಕ್ಯವಲ್ಲ

ಎರಡು ನಾಯಿಗಳು ಯುದ್ಧ ಮಾಡ್ತವ

ಮೂರು ನಾಯಿಗಳು ಎಳೆದು ಹಾಕ್ತವ

ಮನೆ ಜೋಪಾನ ಆಯ್ತಲ್ಲ[೫೨]

ನಾಯಿಗಳು ಮಾನವನಿಗೆ ಅತ್ಯಂತ ಉಪಯುಕ್ತವಾದ ಪ್ರಾಣಿಗಳಾಗಿವೆ. ಸೋಮರಾವು ಹಾಗೂ ತಮ್ಮಂದಿರನ್ನು ರಕ್ಷಿಸುವುದಕ್ಕಾಗಿಯೇ ಇರುತ್ತವೆ. ಸೀತಯ್ಯನ ಮನೆ ಕಾಯುವಾಗ ಕಳ್ಳರನ್ನು ಕಂಡುಹಿಡಿಯುತ್ತವೆ. ಎರಡು ನಾಯಿಗಳು ಕಳ್ಳರನ್ನು ಕಡಿದು ಹಾಕಿದರೆ ಮೂರು ನಾಯಿಗಳು ಹೊರಗೆ ಎಳೆದು ಹಾಕುತ್ತವೆ. ಇಲ್ಲಿ ನಾಯಿಗಳು ಮಾನವನಿಗೆ ಪರೋಪಕಾರಿ ಪ್ರಾಣಿಗಳಾಗಿ ಕಾಣುತ್ತವೆ. ನಾಯಿಗಳ ಬುದ್ಧಿ, ಕಳ್ಳತನವನ್ನು ಗುರುತು ಹಿಡಿಯುವ ಸೂಕ್ಷ್ಮತೆಯನ್ನು ಅರಿತಿರುತ್ತವೆ. ಇಲ್ಲಿ ತನ್ನ ಪಾಲಕರ ಕೆಲಸವನ್ನು ತಾನೇ ಮಾಡುವುದು

ನೋಡಿದರೆ, ಅವುಗಳಲ್ಲಿ ಇರುವ ಬುದ್ಧಿಮಟ್ಟವು ವ್ಯಕ್ತವಾಗುತ್ತದೆ. ಇದು ತೆಲುಗು ಪಠ್ಯದಲ್ಲಿ ಮಾತ್ರ ಅಭಿವ್ಯಕ್ತಗೊಂಡಿದೆ.

ರುಕುಂಬಾಯಿ ಬುರಾನ್‌ಸಾಬ್ ತನ್ನ ಮಗಳನ್ನು ಸೋಮರಾವುಗೆ ಕೊಟ್ಟು ಮದುವೆ ಮಾಡಿ ಬೇರೆ ನಾಡಿಗೆ ಹೋಗಿರೆಂದು ಕಳಿಸುತ್ತಾರೆ, ಸೋಮರಾವು ಹೆಂಡತಿ ಅಂತುಬಾಯಿ ತಮ್ಮಂದಿರು ಕೂಡಿ ಗೊಲ್ಲರ ಪಟ್ಟಣಕ್ಕೆ ಬರುತ್ತಾರೆ ಆಗ

ಕನ್ನಡ: ಗೊಲ್ರು ನಾಗಮ್ಮ

ನಾಗಮ್ಮ ನೋಡಿ ಏನಂದಳ
ಅಬ್ಬಬ್ಬ ಏನುದಂಡು
ಏನು ಕಳ್ಳರು ಆರಾ
ಮನೆ ಹೊಡಿಲಕ ಬಂದ್ರೇನೋ
ಯಾರಪ್ಪ ಮಕ್ಕಳೇ ಅಂತಂದು
ಎದುರು ಬಂದಳಲ್ಲ

ತೆಲುಗು (ಅನುವಾದ): ಬರುವ ದಂಡುಗೆ ನಾಗಮ್ಮ ಎದುರು ಬಂದ್ಳು

ದಂಡನ್ನು ನೋಡಿದಳಲ್ಲ
ಗೊಲ್ಲರೆಲ್ಲ ಬೆದರಿ ಹೋದರಲ್ಲ
ಗೊಲ್ಲ ನಾಗಮ್ಮ ಒಬ್ಬಳೆ ಉಳಿದಳಲ್ಲ
ಕಟ್ಟಿಗಿ ಕೈಲಿ ಹಿಡಕೊಂಡು
ದಂಡಿಗೆ ಎದುರು ಬಂದಳಲ್ಲ
ಕಳ್ಳರಾ ದೊರೆಗಳಂತ ಕೇಳ್ತಳಲ್ಲ[೯೩]

ರುಕುಂಬಾಯಿ ತನ್ನ ತಮ್ಮಂದಿರಿಗೆ ಜೀವದ ಬೆದರಿಕೆ ಇದ್ದಿದ್ದರಿಂದ ಬೇರೆ ನಾಡಿಗೆ ಕಳಿಸಿದಾಗ, ಗೊಲ್ಲರ ಪಟ್ಟಣ ಹತ್ತಿರ ಬಂದಾಗ, ಪಟ್ಟಣದ ಜನರೆಲ್ಲ ಆ ದಂಡನ್ನು ನೋಡಿ ಓಡಿ ಹೋದರೆ ಗೊಲ್ರುನಾಗಮ್ಮ ಮಾತ್ರ ಧೈರ್ಯದಿಂದ ಎದುರು ನಿಲ್ಲುತ್ತಾಳೆ. ಈ ಸನ್ನಿವೇಶ ಕನ್ನಡ-ತೆಲುಗು ಎರಡು ಪಠ್ಯದಲ್ಲಿ ವ್ಯಕ್ತವಾಗಿದೆ. ಎರಡೂ ಪಠ್ಯಗಳಲ್ಲಿ ನಾಗಮ್ಮಳ ಧೈರ್ಯ, ಸಾಹಸ ಮೂಡಿಬಂದಿದೆ. ಇಡೀ ದಂಡನ್ನು ಎದುರಿಸುವ ಆತ್ಮಸ್ಥೈರ್ಯ ನಾಗಮ್ಮನಲ್ಲಿ ಕಾಣುತ್ತದೆ. ನೇರವಾಗಿ ಎದುರುಗೊಂಡು ನೀವು ಕಳ್ಳರಾ ಅಥವಾ ದೊರೆಗಳಾ ಎಂದು ಪ್ರಶ್ನಿಸುವ ನಾಗಮ್ಮಳಲ್ಲಿ ಇರುವ ಧೈರ್ಯವನ್ನು ಮೆಚ್ಚುವಂತದ್ದು ಕತೆಗಾರರು ಸ್ತ್ರೀಯ ಧೈರ್ಯ, ಸಾಹಸವನ್ನು ಅಭಿವ್ಯಕ್ತಿಸಿದ್ದಾರೆ.

ಸಿದ್ದೋಜಿರಾವು ತನ್ನ ಅಣ್ಣಾನ ಮಕ್ಕಳ ರುಂಡವನ್ನು ಕಡಿದುಕೊಂಡು ಬರಲು ಕಳ್ಳರಿಗೆ ಆಮಿಷ ಒಡ್ಡಿ ಕಳಿಸುತ್ತಾನೆ. ಆಗ ಕಳ್ಳರು ನೇರವಾಗಿ-

ಕನ್ನಡಃ ಎಲ್ಲಮ್ಮ ಗುಡಿಗಿ ಬಂದ್ರಲ್ಲ
ಎಲ್ಲಮ್ಮ ಸತ್ತಳು ಅಂದು
ಗುಡಿಗಿ ಉಡಿ ಒಡ್ಡಿದರು
ಅಕ್ಕಡಿಂದ ಎಷ್ಟು ಜೀವ ಹೋಗ್ತವ
ಈ ಕಡೆಯಿಂದ ಎಷ್ಟು ಜೀವ ಹೋಗ್ತವ
ಉಡಿ ಒಡ್ಡಿಕೊಂಡು ನಿಂತರ
ವಾರಗಂಟಿ ಎಲ್ಲಮ್ಮಗ
ಅಕ್ಕಂಡಿಂತಂದರ ಒಂದು ಹೂವ್ವ ಜಾರಿ ಬಿತ್ತಲ್ಲ
ಈಕಡಿಂದ ಅಂದ್ರ ಎರಡು ಹೂವು ಜಾರಿ ಬಿದ್ದವಲ್ಲ

ತೆಲುಗು (ಅನುವಾದ)ಃ ನೇರವಾಗಿ ಸವರಮ್ಮ ಗುಡಿಗಿ ಬಂದ್ರಲ್ಲ
ಸವರಮ್ಮ ಗುಡಿಯ ಮ್ಯಾಲೆ
ಮಲ್ಲಿಗೆ ಹೂವಿನ ಗಿಡ ಆದಲ್ಲ
ಕಳ್ಳರು ಉಡಿ ಒಡ್ಡಿದರಲ್ಲ
ಅಮ್ಮ ಸವರಮ್ಮ ನಾವು ಗೆದ್ದರೆ
ಈ ಗುಡಿ ಹೊಡೆದು ಹಾಕಿ
ಬೆಳ್ಳಿ ಗುಡಿಕಟ್ಟಿ ಬಂಗಾರದ ಬಾಗಿಲು ಕೂಡಿಸ್ತೀವಿ
ಮೂರು ಹುವ್ವ ಉಡಿಯಲ್ಲಿ ಬಿದ್ದವಲ್ಲ
ಎರಡು ಹೂವು ಕೆಳಗೆ ಬಿದ್ದವಲ್ಲ[೫೪]

ಕಳ್ಳರು ಕಳ್ಳತನ ಮಾಡಲು ಹೋಗುವಾಗಲೂ ಸಹ ದೇವರ ಹರಕೆಯನ್ನು ಹೊರುತ್ತಾರೆಂಬುದು ಇಲ್ಲಿ ವ್ಯಕ್ತವಾಗಿದೆ. ಎರಡೂ ಪಠ್ಯಗಳಲ್ಲಿ ಸ್ತ್ರೀ ದೇವತೆಯ ಮೊರೆ ಹೋಗುತ್ತಾರೆ. ಕಳ್ಳರಲ್ಲೂ ದೇವರ ನಂಬಿಕೆ ಇದೆ. ಒಂದು ಜೀವವನ್ನು ಹೊಡೆಯಲು ಹೋದಾಗ ಎರಡು ಕಡೆಯವರಲ್ಲಿ ಸಾವು ಸಂಭವಿಸುತ್ತದೆ. ಆ ಕಡೆಯಿಂದ ಎಷ್ಟು ಜೀವ ಹೋಗ್ತವ ಎಂದು ದೇವತೆಯ ಮುಂದೆ ಉಡಿ ಚಾಚಿ ನಿಂತುಕೊಳ್ಳಲು ಕಳ್ಳರಲ್ಲಿ ಯಾರ ಜೀವ ಹೋಗುತ್ತದೆಂಬ ಭಯ ಕಾಣುತ್ತದೆ. ಆ ಕಡೆ ಎಂದಾಗ ಒಂದು 'ಹೂ' ಅವರ ಹುಡಿಯಲ್ಲಿ ಬೀಳುತ್ತದೆ. ಈ ಕಡೆ ಎಂದಾಗ ಎರಡು 'ಹೂ' ಹುಡಿಯಲ್ಲಿ ಬೀಳುತ್ತವೆ. ಇಲ್ಲಿ ತನ್ನ ಕಡೆಯವರೇ ಹೆಚ್ಚು ಸಾಯುತ್ತಾರೆಂಬ ನಂಬಿಕೆ ಹುಟ್ಟುತ್ತದೆ. ದೇವರು ಮತ್ತು ಕಳ್ಳರ ಮಧ್ಯ ಇರುವ

ನಂಬಿಕೆ ವ್ಯಕ್ತವಾಗಿದೆ. ತೆಲುಗು ಪಠ್ಯದಲ್ಲಿ ಕಳ್ಳರು ದೇವತೆಯನ್ನು ತಾವು ಗೆದ್ದರೆ ಬೆಳ್ಳಿಯ ಗುಡಿ ಬಂಗಾರದ ಬಾಗಿಲು ಕೂಡಿಸುತ್ತೇವೆಂದು ಹರಕೆ ಮಾಡುತ್ತಾರೆ. ಇಲ್ಲಿ ಮೂರು ಹೂವು ಉಡಿಯಲ್ಲಿ ಬಿದ್ದರೆ, ಎರಡು ಹೂವು ಕೆಳಗೆ ಬೀಳುತ್ತವೆ. ಕನ್ನಡ ಪಠ್ಯ ತೆಲುಗು ಪಠ್ಯ ಎರಡರಲ್ಲಿ ವಸ್ತು ಒಂದೇ ಇದ್ದು ನಿರೂಪಣೆಯಲ್ಲಿ ವ್ಯತ್ಯಾಸ ಇದೆ. ಎರಡೂ ಪಠ್ಯಗಳಲ್ಲಿ ಕಳ್ಳರಲ್ಲೇ ಹೆಚ್ಚು ಅನಾಹುತ ಆಗುತ್ತದೆಂಬುದು ವ್ಯಕ್ತವಾಗಿದೆ.

ಕಳ್ಳರಿಂದ ತನ್ನ ಗಂಡನ ಜೀವ ತೆಗೆಸಿದ ಸಿದ್ದೋಜಿರಾವುವನ್ನು ಬನ್ನಿ ಮುಡಿಯಲೆಂದು ಅಂತುಬಾಯಿ ಆಹ್ವಾನ ನೀಡುತ್ತಾಳೆ. ಗಂಡನ ಮೇಲಿನ ಸೇಡನ್ನು ತೀರಿಸಿಕೊಳ್ಳಲು ಹವಣಿಸುತ್ತಾಳೆ. ಮೋಸದಿಂದ ಗಂಡನನ್ನು ಕೊಂದ ಸಿದ್ದೋಜಿರಾವುವನ್ನು ಮೋಸದಿಂದಲೇ ಕೊಲ್ಲಲು ಉಪಾಯ ಹೂಡುತ್ತಾಳೆ. ಕಾಳಿಕಾದೇವಿ ಪೂಜೆಗೆ ಬಂದ ಸಿದ್ದೋಜಿರಾವು ಜೊತೆ ಜಗಳ ತೆಗೆದು ನನ್ನ ಗಂಡನ ಜೀವ ಹೊಡಿದಿದ್ದಿ ಎಂದಳು.

ಕನ್ನಡಃ ಈಗ ನಿನ್ನ ಜೀವ ನಾ ಹೊಡ್ತಿನಿ
ಹೇಳಿಕೇಳಿ ಜೀವ ಹೊಡ್ತಿನಿ
ಆವಾಗ ಕೂದಲು ಕೈಯಾಗ ಕೆಡವಿದಳಲ್ಲ
ಮಗ ತುಳೇರಾವು ಮಾವನ ಎದಿಯ ಮ್ಯಾಲೆ ಕೂಡಿಸ್ಯಳಲ್ಲ
ನಿಮ್ಮಪ್ಪನ ಜೀವ ಹೊಡ್ದನ
ಅವನ ಜೀವ ನೀನು ಹೊಡಿಬೇಕು ಅಂತಳ
ಕೈಯಾಗ ಡಾಬ ಸುರಾಯಿ ಕೊಟ್ಟಳ
ಮುತ್ತ್ಯಾನ ಜೀವ ಗೋವಿಂದ ಗೋವಿಂದ ಎಂದು
ಕುತ್ತಿಗಿ ಕೊಯ್ದನಲ್ಲ ಚಂಡಾಡಿ ಬಿಟ್ಟನಲ್ಲ

ಇಲ್ಲಿ ಸ್ತ್ರೀಯ ಸೇಡಿನ ಮನೋಭಾವ ವ್ಯಕ್ತವಾಗಿದೆ. ತನ್ನ ಗಂಡನನ್ನು ಕೊಂದ ಸಿದ್ದೋಜಿರಾವುವನ್ನು ಕೊಲ್ಲಲೇಬೇಕೆಂಬ ಹಂಬಲ ಅಂತುಬಾಯಿಯಲ್ಲಿ ಇದೆ. ಹೀಗಾಗಿ ಕಾಳಿಕಾದೇವಿ ಪೂಜೆ ಮಾಡಲು ಬನ್ನಿ ಮುಡಿಯಲು ಬರಲು ಆಹ್ವಾನಿಸುತ್ತಾಳೆ. ತಾನೇ ಕಾಲು ಕೆದರಿ ಜಗಳ ತೆಗೆಯುವ ಅಂತುಬಾಯಿಯಲ್ಲಿ ಗಂಡನ ಮೇಲಿನ ಸೇಡಿನ ಕಿಚ್ಚು ಇರುತ್ತದೆ. ಮಾವ ಸಿದ್ದೋಜಿರಾವು ಕೂದಲು ಹಿಡಿದು ಕೆಳಗೆ ಹಾಕುವುದರಲ್ಲಿ ಅವಳ ಧೈರ್ಯ ಸಾಹಸ ಕಾಣುತ್ತದೆ. ತನ್ನ ಮಗನನ್ನು ಸಿದ್ದೋಜಿರಾವುನ ಎದೆಯ ಮೇಲೆ ಕೂಡಿಸಿ ಮಗನಿಂದಲೇ ಅವನ ರುಂಡವನ್ನು ಕಡಿಸುವುದರ ಮೂಲಕ ಸೇಡನ್ನು ತೀರಿಸಿಕೊಳ್ಳುತ್ತಾಳೆ. ಇಲ್ಲಿ ಕನ್ನಡ ಪಠ್ಯದಲ್ಲಿ ನೇರವಾಗಿ ಅಂತುಬಾಯಿ ಸೇಡನ್ನು ತೀರಿಸಿಕೊಂಡರೆ ತೆಲುಗು ಪಠ್ಯದಲ್ಲಿ ಭಿನ್ನವಾಗಿ ವ್ಯಕ್ತವಾಗಿದೆ. ಸಂಗಿಶೆಟ್ಟಿ ಎಲ್ಲಯ್ಯ ಮೂಲಕ ಸಿದ್ದೋಜಿರಾವುವನ್ನು ಬನ್ನಿ ಮುಡಿಯಲು ಕರೆದುಕೊಂಡು ಬರಲು ಕಳಿಸುತ್ತಾಳೆ, ಸಂಗಿಶೆಟ್ಟಿ ಎಲ್ಲಯ್ಯ ಮೋಸದಿಂದ ಸಿದ್ದೋಜಿರಾವುವನ್ನು ಬನ್ನಿ ಮುಡಿಯಲು ಕರೆದುಕೊಂಡು ಬರುತ್ತಾನೆ. ಆಗ ಎದುರಿಗೆ ಏಳು ಲಕ್ಷದ ದಂಡನ್ನು ಕಂಡು ಭಯದಿಂದ, ಸಂಗಿಶೆಟ್ಟಿ ಎಲ್ಲಯ್ಯ ಮಂತ್ರಿಗೆ ಕೇಳುತ್ತಾನೆ. ಆಗ ಸಂಗಿಶೆಟ್ಟಿ ಎಲ್ಲಯ್ಯ ಸಿದ್ದೋಜಿರಾವುಗೆ ಹೀಗೆ ಹೇಳುತ್ತಾನೆ.

ತೆಲುಗು (ಅನುವಾದ): ಇದು ದಸರ ಹಬ್ಬ

ಶಾಲೆ ಮಕ್ಕಳು ಹಸಿರು ಜಾಂಡ ಕೆಂಪುಜಾಂಡ ಕಟ್ಟಿಕೊಂಡು

ಬನ್ನಿಗಿ ಬರ್‍ತಾರ

ಬಂದು ದಂಡಿನಾಗ ಬಿದ್ದರು

ನಿನ್ನ ಇಷ್ಟ ಬಂದಗ ನೋಡಿಕೊ

ನಾನು ಹೊರಗೆ ಹೋಗ್ತಿನಿ

ಸಂಗಿಶೆಟ್ಟಿ ಕಾಣದಂತೆ ಹೋದನಲ್ಲ

ಅಂತುಬಾಯಿ ಯುದ್ದ ಮಾಡಿದಳಲ್ಲ

ಏಳು ಲಕ್ಷದ ದಂಡು ಹತ ಮಾಡ್ಯಳಲ್ಲ

ತುಳೆರಾವು ಮಗನಿಂದ

ತಾತಂದಿರ ರುಂಡಗಳ ಕಡಿಸ್ಯಳಲ್ಲ[**]

ಸಿದ್ದೋಜಿರಾವುಗೆ ಮೋಸ ಮಾಡಿ ಶಾಲೆ ಮಕ್ಕಳು ದಸರ ಹಬ್ಬದ ಬನ್ನಿ ಮುಡಿಯಲು ಬರುತ್ತಿದ್ದಾರೆಂದು ಹೇಳುತ್ತಾನೆ, ಅಂತುಬಾಯಿ ದಂಡು ಸಿದ್ದೋಜಿರಾವುನ ದಂಡಿನೊಳಗೆ ಸೇರಿದಾಗ ಸಂಗಿಶೆಟ್ಟಿ ಎಲ್ಲಯ್ಯ ಹೊರಗೆ ಹೋಗುತ್ತಾನೆ. ಇಲ್ಲಿಯೂ ಸಹ ಅಂತುಬಾಯಿಯೇ ಯುದ್ಧ ಮಾಡಿ ಎದುರು ಬಣದ ದಂಡನ್ನು ಹತ ಮಾಡುತ್ತಾಳೆ. ಮಗನಿಂದಲೇ ಸಿದ್ದೋಜಿರಾವು ರುಂಡವನ್ನು ಕಡಿಸುತ್ತಾಳೆ. ಅಂತುಬಾಯಿಯ ಚಾಣಾಕ್ಷತನದಿಂದ, ತನ್ನ ಗಂಡನ ಮೇಲಿನ ಸೇಡನ್ನು ತೀರಿಸಿಕೊಳ್ಳುತ್ತಾಳೆ. ಕತೆಯು ಕೊನೆಯತನಕ ದುರಂತದಲ್ಲೇ ಮುಗಿಯುತ್ತದೆ. ಅಣ್ಣತಮ್ಮಂದಿರ ಭಾಗದ ವಿಷಯದಲ್ಲಿ ವಿರೋಧ ವ್ಯಕ್ತವಾಗಿ ಹೇಗೆ ಕುಟುಂಬಗಳು ನಾಶವಾಗುತ್ತವೆಂಬ ಅಂಶವು ಇಲ್ಲಿ ಅಭಿವ್ಯಕ್ತಗೊಂಡಿದೆ. ಕೊನೆಗೆ ಸಿದ್ದೋಜಿರಾವುನ ಅಹಂಕಾರವು ಕೊಲೆಯ ಮೂಲಕ ಕೊನೆಗೊಳ್ಳುತ್ತದೆ. ಈ ಕತೆಯು ವಾಸ್ತವವಾಗಿ ಬದುಕಿನಲ್ಲಿ ನಡೆಯುವ ಒಂದು ಘಟನೆಯಾಗಿ ವ್ಯಕ್ತವಾಗಿದೆ. ಇಲ್ಲಿ ಎರಡು ಪಠ್ಯಗಳಲ್ಲಿ ಭಿನ್ನವಾಗಿ ಮೂಡಿಬಂದಿದ್ದರೂ ಕೊನೆಗೆ ಪ್ರಧಾನ ಘಟ್ಟದಲ್ಲಿ ಕಥಾ ವಸ್ತುವಿನ ನಿರೂಪಣೆಯು ಏಕರೂಪದಲ್ಲಿ ಇರುವುದನ್ನು ಗಮನಿಸಬಹುದು.

ಕತೆಗಳು ಭಾಷಿಕವಾಗಿ ಮಾತ್ರ ಬಿನ್ನವಾಗಿ ಕಾಣಿಸುತ್ತವೆ. ಆದರೆ ಆಶಯ ಮತ್ತು ಉದ್ದೇಶದಲ್ಲಿ ಯಾವುದೇ ವ್ಯತ್ಯಾಸಗಳು ಇಲ್ಲ. ಆಯಾ ಭಾಷೆಯಲ್ಲಿ ಹಾಡುವಾಗ ಕಲಾವಿದರು ಆಯಾ ಭಾಷಿಕ ಪರಿಸರ ವಿವರಗಳನ್ನು ಸ್ವೀಕರಿಸಿಕೊಂಡು ಹಾಡಿರುವುದು ಸ್ಪಷ್ಟವಾಗುತ್ತದೆ. ಹಾಗೆಯೇ ಸೃಜನಶೀಲವಾಗಿ ತಮಗೆ ಹೆಚ್ಚು ಪ್ರಭುತ್ವವಿರುವ ಭಾಷೆಯಲ್ಲಿ ನಿರೂಪಣೆ ಹೆಚ್ಚು ಅರ್ಥವಾಗಿರುವುದನ್ನು ಕೆಲವೊಂದು ಸಂದರ್ಭಗಳಲ್ಲಿ ಗಮನಿಸಬಹುದು. ಒಟ್ಟಿನಲ್ಲಿ ಎರಡೇ ಭಾಷೆಗಳಲ್ಲಿ ಬುರ್‍ರಕತೆಗಳು ಕಲಾವಿದರ ಸೃಜನಶೀಲ ಸಾಮರ್ಥ್ಯವನ್ನು ಅನಾವರಣಗೊಳಿಸಿರುವುದು ಸ್ಪಷ್ಟ.

# ಅಧ್ಯಾಯ ೫

# ಬುರ್ರಕತೆಗಳ ನಿರೂಪಣೆ, ಭಾಷೆ, ಶೈಲಿ

ಬುರ್ರಕತೆಗಳು ಸಾಂಪ್ರದಾಯಿಕವಾಗಿ ಅನೇಕ ಶತಮಾನಗಳಿಂದ ಗಾಯಕರ ಬಾಯಿಂದ ಬಾಯಿಗೆ ಹರಿದು ಬಂದಂತಹವುಗಳಾಗಿವೆ. ಈ ಕತೆಗಳಲ್ಲಿ ಜನಸಾಮಾನ್ಯರ ಆಡುನುಡಿ ಎದ್ದು ಕಾಣುತ್ತದೆ. ಇವರು ಬಳಸುವ ಭಾಷೆಗೆ ಯಾವುದೇ ರೀತಿಯ ಶೀಲ-ಅಶ್ಲೀಲವೆಂಬ ಭೇದ ಭಾವವಿಲ್ಲ. ಈ ಕತೆಗಾರರು ಕಥಾವಸ್ತುವಿನ ಭಾವಕ್ಕೆ ತಕ್ಕಂತೆ ಭಾಷೆಯನ್ನು ಬಳಸುತ್ತಾರೆ. ಭಾಷೆ ಸಂಸ್ಕೃತಿಯ ಒಂದು ಅಂಗ. ಭಾಷೆ, ಸಮಾಜ ಹಾಗೂ ಸಂಸ್ಕೃತಿ ಇವು ಪರಸ್ಪರ ಪೂರಕವಾದವುಗಳು. ಭಾಷೆಯನ್ನು ಒಂದು ಕಥನ ಇಲ್ಲವೇ ಇನ್ನಾವುದೋ ರೀತಿಯಲ್ಲಿ ಆ ಸಮುದಾಯ ಅಭಿವ್ಯಕ್ತ ಮಾಡಿದಾಗ ಅದರಲ್ಲಿ ಸಂಸ್ಕೃತಿಯು ಅಡಗಿರುತ್ತದೆ. ಸಮುದಾಯದ ಭಾಷಿಕ ಚಟುವಟಿಕೆಗಳು ಸಾಮಾಜಿಕ ಹಾಗೂ ಸಾಂಸ್ಕೃತಿಕ ನೆಲೆಗಟ್ಟಿನಲ್ಲಿ ಒಡಮೂಡುತ್ತವೆ. ಯಾವುದೇ ಒಂದು ಕಥನವನ್ನು ಭಾಷಿಕ ನೆಲೆಯಲ್ಲಿ ನೋಡಿದಾಗ ಭಾಷೆ ಎಂಬುದು ಸಾಂಸ್ಕೃತಿಕ ವಾಹಕ ಎಂಬುದು ತಿಳಿಯುತ್ತದೆ. ಸಂಸ್ಕೃತಿಯನ್ನು ವಿವರಿಸಲು ಹೊರಟಾಗ ಮತ್ತೆ ಭಾಷೆಯನ್ನು ಅವಲಂಬಿಸ ಬೇಕಾಗುತ್ತದೆ. ಒಂದು ಭಾಷೆಯನ್ನು ಆಡುವ ಜನರು ಅಲ್ಲಿನ ಪರಿಸರ, ಸಂಸ್ಕೃತಿಯ ವಿಶಿಷ್ಟ ಅಂಶಗಳನ್ನು ತನ್ನಲ್ಲಿ ಗರ್ಭೀಕರಿಸಿಕೊಂಡಿರುತ್ತವೆ. ಭಾಷೆಯ ಮೂಲಕವೇ ಒಂದು ಕಾವ್ಯ, ಕತೆ ಇತ್ಯಾದಿ ಸಾಹಿತ್ಯಕ ಪ್ರಕಾರಗಳು ಹುಟ್ಟಿದವು. ಹಾಗೆಯೇ ಭಾಷಿಕರ ಆಡುನುಡಿ, ಆಚಾರ ವಿಚಾರಗಳು, ಮನಸ್ಸಿನ ಭಾವನೆಗಳು ಒಂದು ಪೀಳಿಗೆಯಿಂದ ಮತ್ತೊಂದು ಪೀಳಿಗೆಗೆ ಸಾಗುತ್ತವೆ. ಭಾಷೆ ಒಂದೇ ಅಲ್ಲದೆ ಅದರ ಹಿಂದೆ ಆ ಪರಿಸರದ ಜನರ ಬದುಕು, ಅವರ ಜೀವನಕ್ರಮ ಮುಂತಾದ ಅನೇಕ ಅಂಶಗಳನ್ನು ಒಳಗೊಂಡಿರುತ್ತವೆ. ಇಲ್ಲಿ ಕಥನದ ಸಂದರ್ಭದಲ್ಲಿ ಭಾಷೆ, ಸಮಾಜ ಹಾಗೂ ಸಂಸ್ಕೃತಿ ಪ್ರಮುಖವಾಗಿರುತ್ತದೆ. ಅಲ್ಲಿನ ಪರಿಸರದಲ್ಲಿ ಸಮಾಜದ ಜನರ ದೃಷ್ಟಿಕೋನ ಹಾಗೂ ಸಂಸ್ಕೃತಿಗೆ ಅನುಸಾರವಾಗಿ ಕಥನವು ಪ್ರದರ್ಶಿತ ವಾಗುತ್ತದೆ.

ಬುರ್ರಕತೆಗಳು ಜನಪದ ಸಾಹಿತ್ಯದ ನೆಲೆಗಟ್ಟಿನಲ್ಲಿ ಹುಟ್ಟಿದಂತವು. ಈ ಕತೆಗಳನ್ನು ಭಾಷಿಕವಾಗಿ ಅವಲೋಕಿಸಿದಾಗ ಗ್ರಾಮೀಣ ಜನತೆಯ ಮನೋಧರ್ಮಕ್ಕೆ ಅನುಗುಣವಾಗಿ ಗಾಯಕರು ತಮ್ಮ ಅನುಭವವನ್ನು ಕತೆಯಲ್ಲಿ ಸೇರಿಸಿ ನಿರೂಪಿಸುತ್ತಾರೆ. ಅವರು ಹಾಡುಗಳಿಗೆ ಬುದ್ಧಿಕೌಶಲ್ಯ ನೀಡುತ್ತ, ಸುತ್ತಮುತ್ತಲಿನ ಭಾಷಿಕ ಪರಿಸರವನ್ನು ಜೀವಂತವಾಗಿ ತಮ್ಮ ಹಾಡುಗಳಲ್ಲಿ ಹೊರಹೊಮ್ಮಿಸುತ್ತಾರೆ. ಹಾಡುಗಳ ಪರಿಸರ ಮತ್ತು ಸಾಂಸ್ಕೃತಿಕ ವಿವರಗಳು, ಭಾವ ಅನುಭಾವ, ಕಲ್ಪನೆಗಳಿಗೆ ಅನುಗುಣವಾಗಿ ಬೆಸೆದುಕೊಂಡಿರುತ್ತದೆ. ಈ ಕತೆಗಳು ಶಿಷ್ಟಕಾವ್ಯಗಳಂತೆ ಯಾವುದೇ ಛಂದೋಬಂಧಗಳಿಂದ ರಚನೆಯಾಗಿರುವುದಿಲ್ಲ ಹಾಗೂ ನಿರ್ದಿಷ್ಟ ಗಾತ್ರವಿರುವುದಿಲ್ಲ. ಪ್ರಾಸದ ನಿಯಮವೂ ಇಲ್ಲ. ಅದು ಸನ್ನಿವೇಶಕ್ಕೆ ತಕ್ಕಂತೆ ಕಥನವನ್ನು ಹಿಗ್ಗಿಸುವ ಅಥವಾ ಕುಗ್ಗಿಸುವುದನ್ನು ಕತೆಗಾರರು ಮಾಡುತ್ತಾರೆ. ಚಿಕ್ಕ ಚಿಕ್ಕ ಸಾಲುಗಳು, ದೊಡ್ಡ ದೊಡ್ಡ ಸಾಲುಗಳು ಬಂದು ಅದರ ಪ್ರಮಾಣ ವೈವಿಧ್ಯದಿಂದ ಕೂಡಿರುತ್ತದೆ.

ಈ ಕತೆಗಳು ಹಾಡಿಸಿ ಕೇಳುವಂತಹವು ಹೊರತು ರಚಿಸಿ ವಾಚನ ಮಾಡುವವಲ್ಲ. ಕತೆಗಳ ಸ್ವರೂಪವನ್ನು ಗಮನಿಸಿದಾಗ ಪ್ರತಿಸಾಲಿನ ಕೊನೆಯಲ್ಲಿ ಪಲ್ಲವಿ ಹಾಗೂ ಅದನ್ನು ಅನುಸರಿಸಿ ಬರುವ ನುಡಿಗಳಿಂದ ಕೂಡಿರುವ ರಾಗ, ತಾಳಗಳನ್ನು ಹೊಂದಿರುವ ಹಾಡುಗಳೆಂದು ಸ್ಪಷ್ಟವಾಗಿ ಕಾಣುತ್ತವೆ. ಇವು ಮುಖ್ಯವಾಗಿ ಗೇಯ ಗುಣವನ್ನು ಪಡೆದುಕೊಂಡಿರುವುದರಿಂದ ಭಾವಕ್ಕೆ ಅನುಗುಣವಾಗಿ ಅದರ ಬಂಧದಲ್ಲಿ ಬದಲಾವಣೆಯಾಗುತ್ತದೆ. ಇವರ ಕತೆಯ ಭಾಷಾ ಬಳಕೆಯಲ್ಲಿ ಆಡುಮಾತಿಗೆ ಪ್ರಾಮುಖ್ಯವಿದೆ. ಹೀಗಾಗಿ ಈ ಕಥನದೊಂದಿಗೆ ಅಲ್ಲಿನ ಜನ ಸಮುದಾಯದ ಬದುಕಿನ ರೀತಿ ನೀತಿಗಳನ್ನು ಹಾಗೂ ಸಾಂಸ್ಕೃತಿಕ ವಿವರಗಳನ್ನು ಸಹ ಕಾಣಬಹುದು.

**ಭಾಷಾ ಬಳಕೆ**

ಬುರ್ರಕತೆಗಳ ಭಾಷೆ ಸರಳವಾಗಿದ್ದು ಬಿಡಿಬಿಡಿ ಪದಗಳ ಬಳಕೆ ಇರುತ್ತದೆ. ಇವು ಕೇಳುಗನ ಹೃದಯವನ್ನು ಸ್ಪರ್ಶಿಸುತ್ತದೆ. ಇವು ಹಳ್ಳಿಗಳಲ್ಲೇ ಹುಟ್ಟಿದ್ದರಿಂದ ಹಳ್ಳಿಯ ಜನರ ಜೀವನ ವಿಧಾನ ರೀತಿ-ನೀತಿ, ಚಾತುರ್ಯ, ಚಮತ್ಕಾರ, ಆದರ್ಶ, ಮೌಲ್ಯಗಳು ಚಿತ್ರಿತವಾಗಿದ್ದನ್ನು ಕಾಣಬಹುದು. ಈ ಕತೆಗಳಲ್ಲಿ ಗುಲಬರ್ಗಾ, ಯಾದಗಿರಿ ಪ್ರದೇಶದ ಪ್ರಾದೇಶಿಕ ರೂಪಗಳು ಎದ್ದು ಕಾಣುತ್ತವೆ. ಉದಾಹರಣೆಗೆ ಅಂಬಲ, ಬ್ಯಾನಿ, ಮ್ಯಾಕ, ಲಡಾಯಿ ಮುಂತಾದ ಪ್ರಾದೇಶಿಕ ಪದಗಳು ಬಳಕೆಗೊಂಡಿರುವುದರಿಂದ ಭಾಷಾ ಸಂಕೀರ್ಣತೆ ದೂರವಾಗಿ ಕತೆಯ ಆಶಯ ಜನರಿಗೆ ಸುಲಭವಾಗಿ ಅರ್ಥವಾಗುತ್ತದೆ. ಭಾಷೆಯ ಧ್ವನಿರಚನೆ ಪ್ರಕ್ರಿಯೆಗಳು, ಅನುನಾಸಿಕರಣ (ಬೇನೆ-ಬ್ಯಾನಿ-ಎ-ಆ್ಯ) ಪದಗಳೂ ಅದರ ಧ್ವನಿಗಳ ಬಳಕೆಯಲ್ಲಿ ಭಾಷೆಯ ಸಾಮಾಜಿಕ ಆಯಾಮವು ಕಂಡುಬರುತ್ತದೆ. ಒಟ್ಟಾರೆ ಬುಡ್ಗಜಂಗಮರು ಹಾಡುವ ಕತೆಗಳಲ್ಲಿ ದೇಶೀಯ ಸೊಗಡು ಇದ್ದು, ಅದು ಸಾಮಾನ್ಯ ಜನರ ಮನಸ್ಸನ್ನು ತಲುಪುವಂತೆ ರಚಿಸಿರುವುದರಿಂದ ಈ ಕತೆಗಳು ಪ್ರಸಿದ್ಧಿಯನ್ನು ಪಡೆದುಕೊಂಡಿವೆ.

ಗುಲಬರ್ಗಾ, ಯಾದಗಿರಿ ಜಿಲ್ಲೆಗಳಲ್ಲಿ ಸಂಗ್ರಹಿಸಿದ ಕತೆಗಳಾಗಿದ್ದರಿಂದ ಉರ್ದು, ತೆಲುಗು, ಇಂಗ್ಲಿಷ್ ಪದಗಳು ಕನ್ನಡ-ತೆಲುಗು ಪಠ್ಯಗಳಲ್ಲಿ ವ್ಯಕ್ತಗೊಂಡಿವೆ. ಈ ಪದಗಳು ಎರಡು ಭಾಷೆಗಳಲ್ಲಿ ಒಂದರೊಳಗೊಂದು ಬೆರತುಕೊಂಡು ಬಂದಿವೆ. ಈ ಕತೆಗಳು ಮುಖ್ಯವಾಗಿ ಪ್ರಾದೇಶಿಕತೆಯನ್ನು ಪ್ರತಿಬಿಂಬಿಸುತ್ತವೆ. ಎರಡು ಭಾಷೆಗಳಲ್ಲಿ ಪಠ್ಯಗಳು ಮೂಲ ಸೃಷ್ಟಿ ಎನ್ನುವಷ್ಟರ ಮಟ್ಟಿಗೆ ಸಮಾನತೆ ಕಂಡುಬರುತ್ತವೆ. ಮೇಲ್ನೋಟಕ್ಕೆ ಕನ್ನಡ-ತೆಲುಗು ಎರಡು ಭಾಷೆಯ ಪಠ್ಯಗಳು ಬೇರೆ ಬೇರೆಯಾಗಿ ಕಾಣುತ್ತವೆ. ಆದರೆ ಈ ಎರಡು ಭಾಷೆಯ ಪಠ್ಯಗಳು ಎರಡೂ ಮೂಲವೇ ಆಗಿವೆ. ಕನ್ನಡ ಪಠ್ಯದ ಕತೆಯನ್ನು ಹಾಡುವಾಗ ತೆಲುಗರು ಇರುತ್ತಾರೆ. ತೆಲುಗು ಪಠ್ಯವನ್ನು ಹಾಡುವಾಗ ಕನ್ನಡಿಗರು ಇರುತ್ತಾರೆ. ಇಲ್ಲಿ ಎರಡು ಭಾಷಿಕರಿಗೆ ಕತೆಯ ಹಾಡನ್ನು ಕೇಳುವಾಗ ಕತೆಯ ಒಳಗಿನ ಆಶಯ ಮುಖ್ಯವಾಗಿರುತ್ತದೆ ಹೊರತು ಭಾಷೆಯು ಮುಖ್ಯ ಅಲ್ಲ. ಬುರ್ರಕತೆಗಾರರಿಂದ ಎರಡು ಭಾಷೆಗಳ ಕತೆಗಳ ಕೇಳುಗರು ಅದೇ ಜನರಾಗಿರುತ್ತಾರೆ. ಹೀಗಾಗಿ ಕನ್ನಡ ಪಠ್ಯದಲ್ಲಿ ಬಳಕೆಗೊಂಡ ಮಿಶ್ರ ಪದಗಳು, ತೆಲುಗು ಪಠ್ಯದಲ್ಲಿ ಬಳಕೆಗೊಂಡಿದ್ದನ್ನು ಕಾಣುತ್ತೇವೆ. ಕಲಾವಿದರು ಕತೆಗಳನ್ನು ಹಾಡುವಾಗ ಬೇರೆ ಬೇರೆ ಭಾಷೆಯ ಶ್ರೋತೃಗಳೆಂದು ಅವರು ಭಾವಿಸುವುದಿಲ್ಲ. ಹಾಗೆಯೇ ಶ್ರೋತೃಗಳೂ ಸಹ ಕತೆಗಳನ್ನು ಕೇಳುವಾಗ ಬೇರೆ ಬೇರೆ ಭಾಷೆ ಎಂಬುದನ್ನು ಅವರು ತಿಳಿಯುವುದಿಲ್ಲ. ಏಕೆಂದರೆ ಕೇಳುಗರು ಸಹ ದ್ವಿಭಾಷಿಕಗಾಗಿರುವುದರಿಂದ ಅವರಿಗೆ ಕತೆಯೇ ಮುಖ್ಯವಾಗಿರುತ್ತದೆ. ಬುರ್ರಕತೆಗಳು ವಿಡಂಬನಾತ್ಮಕವಾಗಿ, ವ್ಯಂಗ್ಯವಾಗಿ, ನಾಟಕೀಯವಾಗಿ ಅಭಿವ್ಯಕ್ತಗೊಂಡಿವೆ. ಹಾಗೆಯೇ ದೈನಂದಿನ, ವ್ಯಾವಹಾರಿಕ, ಅಲ್ಲಿನ ಪರಿಸರವೇ ಕತೆಯ ಭಾಷೆಯಾಗಿ ಮೂಡಿರುತ್ತದೆ. ಮುಖ್ಯವಾಗಿ ಕತೆಗಾರರ ವೈಯಕ್ತಿಕ ನೆಲೆಯ ಅನುಭವದಿಂದ ಭಾಷೆಯು ಈ ಕತೆಗಳಲ್ಲಿ ಅಭಿವ್ಯಕ್ತಿ ಪಡೆದಿದೆ. ಹಾಗಾಗಿ ಇಲ್ಲಿನ ಭಾಷೆ ಎಂಬುದು ಕನ್ನಡ, ತೆಲುಗು ಎಂಬ ಭೇದವನ್ನು ಮರೆಸಿದ ಬುರ್ರಕಥಾ ಭಾಷೆ ಎನಿಸಿದೆ.

**೧. ಪ್ರಾದೇಶಿಕತೆ**

ಬುರ್ರಕತೆಗಳ ಕನ್ನಡ-ತೆಲುಗು ಎರಡು ಭಾಷೆಗಳು ಬೇರೆ ಬೇರೆ ಆದರೆ ಅವುಗಳಲ್ಲಿ ವ್ಯಕ್ತಗೊಂಡ ಪ್ರಾದೇಶಿಕತೆ ಒಂದೆ. ಕನ್ನಡ ಪ್ರದೇಶದಲ್ಲಿ ವಾಸವಾಗಿರುವ ಬುರ್ರಕತೆಗಾರರಾಗಿದ್ದರಿಂದ ಕನ್ನಡ ಕತೆಯ ಪ್ರಾದೇಶಿಕವೇ ತೆಲುಗು ಕತೆಯ ಪ್ರಾದೇಶಿಕವಾಗಿ ಅಭಿವ್ಯಕ್ತಗೊಂಡಿರುತ್ತದೆ. ಅವರಿಗೆ ಕತೆಯ ವಸ್ತುವು ಮುಖ್ಯವಾಗಿರುತ್ತದೆ. ಹೀಗಾಗಿ ಬುರ್ರಕತೆಗಾರರು ಕೇಳುಗರ ಮನ ತಣಿಸುವುದಕ್ಕಾಗಿ ಬೇರೆ ಬೇರೆ ಭಾಷೆಗಳಲ್ಲಿ ಅಭಿವ್ಯಕ್ತಪಡಿಸಿರುತ್ತಾರೆ. ಅವರಿಗೆ ಕತೆಯೇ ಪ್ರಧಾನವಾಗಿರುತ್ತದೆ. ಕನ್ನಡ-ತೆಲುಗು ಎರಡು ಪಠ್ಯಗಳ ಕಾಂಭೋಜರಾಜಕತೆ ಎರಡು ಕತೆಗಳಲ್ಲಿ ಕಾಂಭೋಜರಾಜನ ಪಾತ್ರದಲ್ಲಿ ಪ್ರಾದೇಶಿಕ ಕೃಷಿ ಪದ್ಧತಿಯು ನಿರೂಪಿತವಾಗಿದೆ. 'ಎತ್ತು ಇಲ್ಲದೆ ಕೈಲೇ ಕೆತ್ತಿ, ಹೊಲ ಹಸ ಮಾಡಬೇಕು ಹೊಲ ಹಸಮಾಡಿ ಎತ್ತು ಇಲ್ಲದೆ ಬೀಜ ಬಿತ್ತಬೇಕು' ಅದೇ ಸಂದರ್ಭ ತೆಲುಗಿನಲ್ಲಿ 'ಎದ್ದು ಲೇನಿದಿ, ವ್ಯವಸಮು ಲೇನಿದಿ

ಸೆಯ್ಮಿತೋನಿ ಸೆಕ್ಕಲು ಸೆಕ್ಕಿ ಸೇನು ಅಸ ಚೆಯ್ಯಾಲ ಸೇನು ಅಸಚೆಸಿ ಗೊರ್ರುಗಟ್ಟಿ ಬೀಜಾಲು ಇತ್ನಾಲು ಪೆಟ್ನಾಲ'(ಎತ್ತುಗಳಿಲ್ಲದೆ ವ್ಯವಸಾಯ ಇಲ್ಲದೆ ಕೈಯಿಂದ ಒಡ್ಡುಗಳನ್ನು ಕಿತ್ತು, ಹೊಲ ಹಸನು ಮಾಡಬೇಕು, ಹೊಲ ಹಸನು ಮಾಡಿ, ಕೂರಿಗೆ ಕಟ್ಟಿ ಬೀಜಗಳನ್ನು ಬಿತ್ತಣಿಕೆ ಮಾಡಬೇಕು). ಈ ಎರಡು ಪಠ್ಯಗಳಲ್ಲಿ ಕೃಷಿ ಪದ್ಧತಿಯು ನಿರೂಪಣೆಗೊಂಡಿದೆ.

ರಾಜನ ಕಿರಿಯ ಹೆಂಡತಿ ಸಿರಿದೇವಿ ತನ್ನ ಅರಮನೆಯಲ್ಲಿ ಹಿರಿಯ ರಾಣಿಯರ ಆರು ಜನ ಮಕ್ಕಳನ್ನು ಸಲಹುತ್ತಾಳೆ. ಸಿರಿದೇವಿ ಮಾವಿನ ಹಣ್ಣನ್ನು ಮಾರುವವಳನ್ನು ಕರೆದು ಹಣ್ಣುಗಳನ್ನು ಮಕ್ಕಳಿಗೆ ತೆಗೆದುಕೊಳ್ಳುತ್ತಾರೆ. ಅವುಗಳನ್ನು ದಾ ಪಂದ್ರ ರೂಪಾಯಿಗೆ ಖರೀದ್(ಹತ್ತು ಹದಿನೈದು ರೂಪಾಯಿ) ಮಾಡಿಕೊಂಡು ತನ್ನ ಉಡಿಯಲ್ಲಿ ಹಾಕಿಕೊಳ್ಳುತ್ತಾಳೆ. ಪ್ರಾದೇಶಿಕವಾಗಿ ಅಲ್ಲಿ ಕನ್ನಡ ಅಂಕೆಗಳನ್ನು ಹೇಳದೆ ಉರ್ದು ಅಂಕೆ ಪದಗಳನ್ನು ಬಳಸುತ್ತಾರೆ. ಶರಬಂಧರಾಜಕುಮಾರನ ರೂಪಕ್ಕೆ ಮರುಳಾಗಿ ತನ್ನ ಬೆನ್ನು ಹತ್ತಿದವರಿಗೆ ಸರಿಯಾದ ಪಾಠ ಕಲಿಸುತ್ತಾನೆ. ಈ ಸನ್ನಿವೇಶವು ಸಹ ಪ್ರಾದೇಶಿಕತೆಯಿಂದ ಕೂಡಿದೆ. ಜಂಗಿಳಿ ದನ ಬಂದು ಮೇಲೆ ಬಿದ್ದವು, ಮಾಲಿಗೌಡರ ಹೊಲದಲ್ಲಿ ಮುಂಡಿಪಲ್ಯ ಹಾಕಿದ್ದರು. ಮುಂಡಿಪಲ್ಯ ಆಯುವಾಗ ಭೀಮಣ್ಣ ಯಾರೆಂದು ಕೂಗಿದಾಗ ಅಲ್ಲಿಂದ ಕಾಲು ಕೀಳುತ್ತಾಳೆ.

ಈ ಬುರ್ರಕತೆಗಳಲ್ಲಿ ಗರ್ಭಿಣಿ ಸ್ತ್ರೀಯ ಬಯಕೆಗಳು ಪ್ರಾದೇಶಿಕ ನೆಲೆಯಿಂದ ರೂಪು ಪಡೆದಿವೆ. ಈ ಕತೆಗಳಲ್ಲಿ ಬರುವ ಸೂಲಗಿತ್ತಿ ಸುಬ್ಬಮ್ಮ ದಾದಿ ರಮಣಮ್ಮ ಪಾತ್ರಗಳಲ್ಲಿ ಪ್ರಾದೇಶಿಕತೆಯ ಸೊಗಡು, ಸನ್ನಿವೇಶ, ಭಾಷೆ ಮುಖ್ಯವಾಗಿ ಕಾಣುತ್ತದೆ. ರಾಜಕುಮಾರನನ್ನು ತೊಟ್ಟಿಲು ಹಾಕುವ ಸನ್ನಿವೇಶದಲ್ಲಿ ಬರುವ ಪ್ರಾದೇಶಿಕ ಭಾಷೆಯು ಜೊ ಜೋ ಎನ್ನ ರಾಜಕುಮಾರ, ಎನ್ನ ಜೋಗೀಶ ಕಂದನ ತೂಗಿರಮ್ಮ, ಅಳಿಜೋಳ ಬಿಳಿಜೋಳ ಗುಗ್ಗರಿ ಹಾಕಿ ಮುಂತಾದ ಸಾಲುಗಳನ್ನು ನೋಡಿದಾಗ ಶುದ್ಧ ಗ್ರಾಮೀಣ ಭಾಷೆಯು ವ್ಯಕ್ತವಾಗಿದ್ದನ್ನು ನೋಡುತ್ತೇವೆ. ಬಾಲಗಿರಿರಾಜಕುಮಾರನನ್ನು ಹೊಡೆಯಲು ಮುಂದಾದ ಪದ್ಮರಾಣಿಯು, ತಪ್ಪಿಸಿಕೊಳ್ಳಲು ರಾಜಕುಮಾರನು 'ಬೇವಿನಗಿಡ'ವನ್ನು ಏರಿ ಕೂಡುವಂತಹುದು, ಈ ಕತೆಯಲ್ಲಿ 'ಕತೆಗಾರರ ಪ್ರದೇಶದಲ್ಲಿ ಕಾಣುವ ಬೇವಿನಗಿಡ'ವನ್ನೇ ಕತೆಯಲ್ಲಿ ತಂದಿದ್ದಾಳೆ. ಮದುವೆಯ ಸನ್ನಿವೇಶವು ಸಹ ಪ್ರಾದೇಶಿಕ ಹಾಗೂ ಭಾಷೆಯನ್ನು ನೋಡಿದರೆ ಗ್ರಾಮೀಣ ಬದುಕನ್ನು ನೆನಪಿಸುತ್ತದೆ.

ಮೂರು ದಿವಸ ಮಾಡ್ಯರ ಈ ಮುದ್ದು ಲಗ್ನ
ನಾಲ್ಕು ದಿವಸ ಮಾಡ್ಯರ ನಾಗೋಲಿ ಇಳಿಸ್ಯಾರ
ಹದಿನಾರು ದಿನದಾಗ ಹಂದರ ಇಳಿಸ್ಯಾರ
ಮುತ್ತುಗಳ ಸ್ನಾಸಮ್ಮ ವಜ್ರಗಳ ಸ್ನಾಸಮ್ಮ
ಶುಬೋಮಂತ ಶುಭಲಗ್ನ ಮಾಡ್ಯರ

ಇಲ್ಲಿ ನಾಗೋಲಿ ಎನ್ನುವುದು ಮದುವೆಯ ಸಂದರ್ಭದಲ್ಲಿ ಸ್ಯಾಸೆ ಬರೆದು ನಾಲ್ಕು ಮೂಲೆಗೆ ಹಾಗೂ ಮುಂದಿನ ಸಾಲಿನ ಮಧ್ಯದಲ್ಲಿ ಒಂದು. ಒಟ್ಟು ಐದು ಮಗಿಗಳನ್ನು ಇಟ್ಟು ಅದರಲ್ಲಿ ನೀರು ಹಾಕುತ್ತಾರೆ. ಅವುಗಳಿಗೆ ದಾರ ಸುತ್ತಿದ ಮೇಲೆ ಮದುಮಕ್ಕಳು ಮಧ್ಯದಲ್ಲಿ ಕೂಡುತ್ತಾರೆ. ಆಗ ಅದರ ಮಧ್ಯದಲ್ಲಿ ಮದುಮಕ್ಕಳಿಗೆ ಎಣ್ಣೆ, ಅರಿಸಿನದಿಂದ ಮಧ್ಯದಲ್ಲಿ ಸ್ನಾನ ಮಾಡಿಸುತ್ತಾರೆ. ಇದನ್ನು ನಾಗೋಲಿ ಎಂದು ಕರೆಯುತ್ತಾರೆ. ಮಗಿಗಳಿಗೆ ಸುತ್ತಿದ ದಾರವನ್ನು ಮದುಮಕ್ಕಳು ಹಂದರದಲ್ಲಿ ಕುಳಿತುಕೊಂಡ ಸ್ಥಳದ ಮೇಲೆ ಸುತ್ತುತ್ತಾರೆ. ಇದು ಒಂದು ಪ್ರಾದೇಶಿಕ ವೈಶಿಷ್ಟ್ಯತೆಯಾಗಿ ಕಾಣುತ್ತದೆ. ಮದುವೆಯ ಸಂದರ್ಭದ ವರ್ಣನೆಯು ಸಹ ಪ್ರಾದೇಶಿಕತೆಯಿಂದ ಕೂಡಿದ್ದು ಭಾಷಿಕವಾಗಿ ಪದಗಳ ಜೋಡಣೆಯು ಸಹ ಕತೆಯ ಸೌಂದರ್ಯಕ್ಕೆ ಪೂರಕವಾಗಿದೆ.

ಮುಖ್ಯವಾಗಿ ಕತೆಯು ಭಾಷೆಯ ಬೆನ್ನೇರಿ ನಡೆಯುವುದೇ ಒಂದು ಕ್ರಿಯೆ. ಅದು ಮೂರ್ತಗೊಳ್ಳುವುದೇ ಭಾಷೆಯ ಮೂಲಕ. ಆ ನೆಲೆಯಲ್ಲಿ ಪ್ರಾದೇಶಿಕ ಸೊಗಡಿನಲ್ಲಿ ಬುರ್ರಕತೆಗಳು ದೈನಂದಿನ ವ್ಯಾವಹಾರಿಕ ಶಬ್ದಗಳು, ಸನ್ನಿವೇಶಗಳು, ಸಂದರ್ಭಕ್ಕೆ ತಕ್ಕಂತೆ ಅಭಿವ್ಯಕ್ತಗೊಂಡಿವೆ. ಪ್ರೌಢವಲ್ಲದ ಕತೆಗಾರರ ಮೌಖಿಕ ನಿವೇದನೆಯು ಸುಲಭ ಗ್ರಾಹ್ಯಾನುಕೂಲವಾದ ಸಂಕ್ಷಿಪ್ತತೆಯನ್ನು ನಿರೂಪಣೆಯಲ್ಲಿ ಕಾಣಬಹುದು. ಕತೆಗಳು ನೆನಪಿನಲ್ಲಿ ಉಳಿಯುವಂತೆ ಅವು ಸರಳ ಸ್ವರೂಪವನ್ನು ಪಡೆದುಕೊಂಡಿವೆ. ಕೇಳುಗರು ಮೆಚ್ಚುಗೆ ಗಳಿಸುವಂತಹ, ನೆರವಾಗಬಲ್ಲಂತಹ ಸ್ಪಷ್ಟತೆ ಬುರ್ರಕತೆಗಳ ಭಾಷೆಯಲ್ಲಿ ಕಾಣುತ್ತದೆ. ಒಂದು ಪ್ರದೇಶದ ಭಾಷಾ ಪರಂಪರೆಯ ವಿಶಿಷ್ಟ ವಿನ್ಯಾಸದ ಜಾಯಮಾನವು ಈ ಕತೆಗಳಲ್ಲಿ ಇದೆ. ಈ ಕತೆಗಳ ಗ್ರಾಂಥಿಕ ಭಾಷೆ ಹಾಗೂ ಅನ್ಯ ಭಾಷೆಯ ಸಂಸರ್ಗದಿಂದ ಅನೇಕ ಶಬ್ದಗಳು ಸೇರಿಕೊಂಡು ಕತೆಗಾರರ ಪ್ರಾದೇಶಿಕತೆಯನ್ನು ಗುರುತಿಸುತ್ತದೆ. ಕನ್ನಡ-ತೆಲುಗು ಎರಡು ಕತೆಗಳಲ್ಲಿ ಪ್ರಾದೇಶಿಕ ಭಾಷೆಯ ಸೊಗಡು ಎದ್ದು ಕಾಣುತ್ತದೆ.

ಬುರ್ರಕತೆಗಳಲ್ಲಿ ಪ್ರಾದೇಶಿಕವಾಗಿ ವಿಶಿಷ್ಟ ಪದಗಳನ್ನು ಬಳಸಿದ್ದಾರೆ. 'ಆನಭಂಗ'ಎಂಬ ಪದವು ಮರ್ಯಾದೆ ಕಳೆಯುವುದು ಎಂಬ ಅರ್ಥವನ್ನು ಕೊಡುತ್ತದೆ. 'ಇಳ್ಕೆ'(ವೀಳ್ಯ ಕೊಡುವುದು) ಎಂಬುದು ಮದುವೆಯ ಪ್ರಸ್ತಾಪವಾಗಿದೆ. 'ರೈತರು' ಎಂಬ ಪದವನ್ನು ರಾಜನ ಕೈಕೆಳಗಿನ ಆಸ್ಥಾನಿಕರಾಗಿ ಕಥೆಗಾರರು ಬಳಸಿದ್ದಾರೆ. 'ಎಂಡಿ' ಪದವು 'ಸೆಗಣಿ' ಪದಕ್ಕೆ ಸಮನಾಗಿ ಬಳಸಿದೆ. 'ಕಚೇರಿ' ಎಂಬ ಪದವು ಬುರ್ರಕತೆಯಲ್ಲಿ ರಾಜನ ಆಸ್ಥಾನವಾಗುತ್ತದೆ. 'ಇಚ್ಚಬತ್ತು' ಎಂಬ ಪದವು ಚಿಕ್ಕ ಇಲಿಯಾಗಿ ಬಳಸಿದ್ದಾರೆ. ಅಲ್ಲದೆ ಅನ್ಯಭಾಷಾ ಪದಗಳು ಸಹ ಪ್ರಾದೇಶಿಕ ಪದಗಳಾಗಿ ಬಂದಿವೆ. ಕೊಂಗೆ(ಕೊಕ್ಕರೆ), ನ್ಯಾಲ(ಭೂಮಿ), ಕಾಸುಪಾಕ (ಹಣ್ಣುಹಂಪಲು) ಇನ್ನೂ ಹಲವಾರು ತೆಲುಗು ಪದಗಳು ಕನ್ನಡ ಪದಗಳಾಗಿ ಬಂದಿವೆ. ಉರ್ದು ಪದಗಳಾದ ಇನಾಮ್(ಕಾಣಿಕೆ), ದೋಸ್ತು(ಗೆಳೆಯ), ಲತ್ತಿ(ಏಟು), ಸವ್ವಸವಾಹೊತ್ತು(ಮಧ್ಯರಾತ್ರಿ) ಮಂತಾದವು ಪ್ರಾದೇಶಿಕ ಕನ್ನಡ ಪದಗಳು ಎಂಬಂತೆ ಬಳಕೆಗೊಂಡಿವೆ. ಇನ್ನು ಪ್ರಾದೇಶಿಕ ಕನ್ನಡ ಪದಗಳು ಹೆಚ್ಚಾಗಿ ಅಭಿವ್ಯಕ್ತಗೊಂಡಿವೆ. ಧನ್ಯನಾಗಿ(ಶರಣಾಗಿ), ತೂಮ್ರ(ತೊಗಟೆ), ಕ್ಯಾಲಿ(ನೆನಪು), ಪಾಶಿ(ಮೋಸ),

ದಿಡ್ಡಿಬಾಗಿಲು(ಮುಖ್ಯದ್ವಾರ), ತಂಗಳು ಬಟ್ಟೆ(ಒದ್ದೆ ಬಟ್ಟೆ), ಜಟ್ಟನ(ಬೇಗ), ಗಿದ್ದುನ(ಅಳೆಯುವ ಮಾಪನ) ಮುಂತಾದ ಪದಗಳು ಬುರ‍್ರಕತೆಗಳಲ್ಲಿ ಕತೆಗಾರರು ಸಂದರ್ಭಾನುಸಾರವಾಗಿ ಬಳಸಿದ್ದಾರೆ.

**೨. ಅನ್ಯಭಾಷಾಮಿಶ್ರಣ**

ಬುರ‍್ರಕತೆಗಳಲ್ಲಿ ಮುಖ್ಯವಾಗಿ ಭಾಷಾಮಿಶ್ರಣವನ್ನು ಕಾಣುತ್ತೇವೆ. ಕನ್ನಡ-ತೆಲುಗು ಎರಡು ಭಾಷೆಯ ಪಠ್ಯಗಳಲ್ಲಿ ಇಂಗ್ಲಿಷ್, ಉರ್ದು, ತೆಲುಗು, ಕನ್ನಡ ಪದಗಳು ಒಂದರೊಳಗೊಂದು ಬೆರೆತುಕೊಂಡು ಬಂದಿವೆ. ಒಬ್ಬರೇ ವಕ್ತೃವಿನ ಒಂದೇ ಕತೆಯ ಎರಡು ಭಾಷೆಯ ಕತೆಗಳು ಹಾಗೂ ಬೇರೆ ಬೇರೆ ವಕ್ತೃಗಳ ಕನ್ನಡ ತೆಲುಗು ಆವೃತ್ತಿಗಳು. ಅವರು ಹಾಡಿದ ಈ ಕತೆಗಳಲ್ಲಿ ಸಾಮಾನ್ಯವಾಗಿ ಅನ್ಯಭಾಷಾ ಮಿಶ್ರಣವು ಸೇರಿದೆ. ಬುರ‍್ರಕತೆಗಾರರು ಅಲೆಮಾರಿಗಳಾಗಿದ್ದರಿಂದ, ಅವರು ವಾಸಿಸುವ ಪ್ರದೇಶವು ಬಹುಭಾಷಿಕರು ಇರುವುದರಿಂದ ಅನ್ಯಭಾಷಾ ಮಿಶ್ರಣವು ತನ್ನಷ್ಟಕ್ಕೆ ತಾನೇ ಅಭಿವ್ಯಕ್ತಿಯಲ್ಲಿ ಒಳಗೊಂಡಿರುತ್ತದೆ.

ಭೂಲಕ್ಷ್ಮಿಕತೆಯಲ್ಲಿ ಭೂಲಕ್ಷ್ಮಿ ತಪಸ್ಸು ಮಾಡುವ ಸನ್ನಿವೇಶವು ಈ ರೀತಿ ಬಂದಿದೆ.

> ತಪಗುರಿಯಾಗಿ ತಾಯಿ ನಿಂತಳ
>
> ಒಂದು ತಾಸಾಯ್ತು
>
> ಎರಡು ತಾಸಾಯ್ತು
>
> ಬಾರತಾಸಿನ ತನ ತಪನಿಂತಾಳ

ಈ ಕತೆಯ ಈ ಸಾಲುಗಳನ್ನು ನೋಡಿದರೆ ಭಾಷಾಮಿಶ್ರಣದ ಬಳಕೆಯಲ್ಲಿ ಉರ್ದು ಪದಗಳು ಕನ್ನಡ ಪದಗಳು ಎಂಬಂತೆ ಬಂದಿವೆ. ಹಾಗೆಯೇ-

> ತಂದೆ ಕಚೇರಿ ತೆಳಗ
>
> ಏಳು ಲಕ್ಷದಂಡು ಲಡಾಯಿ ಬಿದ್ದು
>
> ತಂದೆ ಕಚೇರಿಯೊಳಗ ಕುಂತನ

ಈ ಸಾಲುಗಳಲ್ಲಿ ಸಹ ಉರ್ದು ಮಿಶ್ರಿತ ಕನ್ನಡ ಪದಗಳು ಬಂದಿವೆ. ಶಂಕ್ರಮ್ಮ ಅವರು ತನ್ನ ಕತೆಗಳಲ್ಲಿ ಹೆಚ್ಚಾಗಿ ಉರ್ದು ಪದಗಳು ಬಳಸಿದ್ದಾರೆ. ಶಂಕ್ರಮ್ಮ ಅವರು ವಾಸಿಸುವ ಗುಲಬರ್ಗಾ ಪ್ರದೇಶವು ಮುಖ್ಯವಾಗಿ ಕಲ್ಯಾಣ(ಹೈದರಾಬಾದ್) ಕರ್ನಾಟಕವು ನಿಜಾಮನ ಆಳ್ವಿಕೆಗೆ ಒಳಪಟ್ಟಿತ್ತು. ಅದು ೧೯೪೮ ಸೆಪ್ಟೆಂಬರ್ ೧೭ರವರೆಗೆ ಅವರ ಆಳ್ವಿಕೆಗೆ ಒಳಪಟ್ಟಿತ್ತು. ಹೀಗಾಗಿ ಇವರ ಈ ಕತೆಗಳಲ್ಲಿ ಅವರಿಗೆ ಅರಿವಿಲ್ಲದೆ ಉರ್ದು ಪದಗಳು ಕನ್ನಡ ಭಾಷೆಯ ಪದಗಳಾಗಿಯೇ ಬಂದಿದೆ. ತಾಸಾಯ್ತು (ಗಂಟೆಯಾಯಿತು), ಬಾರತಾಸಿನ(ಹನ್ನೆರಡು ಗಂಟೆಯ), ಕಚೇರಿ(ಆಸ್ಥಾನ), ಲಡಾಯಿ(ಯುದ್ಧ) ಇವು ಕನ್ನಡ ಪದಗಳಾಗಿ ಬಳಕೆಗೊಂಡಿವೆ. ಗುಲಬರ್ಗಾ ಪ್ರದೇಶದಲ್ಲಿ ಸಾಮಾನ್ಯವಾಗಿ ಕನ್ನಡಿಗರು ಇಂತಹ

ಪದಗಳನ್ನೇ ಬಳಸುತ್ತಾರೆ. ಕನ್ನಡದ ಅಂಕಿಗಳಿಗೆ ಬದಲಾಗಿ ಉರ್ದು ಅಂಕಿಗಳನ್ನು ಹೆಚ್ಚಾಗಿ ಬಳಸುತ್ತಾರೆ. ಇದು ಒಂದು ಪ್ರಾದೇಶಿಕ ಭಾಷೆಯ ವೈಶಿಷ್ಟ್ಯವಾಗಿದೆ.

ಹಾಗೆಯೇ ಇಂಗ್ಲಿಷ್ ಪದಗಳು ಸಹ ಬುರ್ರಕತೆಗಳಲ್ಲಿ ಬಳಕೆಗೊಂಡಿದ್ದನ್ನು ಕಾಣುತ್ತೇವೆ.

ಗಂಡಗ ಬುತ್ತಿ ಕಟ್ಯಾಳ
ಬುತ್ತಿ ಕಟ್ಟಿ ರೆಡಿ ಮಾಡಿ ಇಟ್ಯಾಳ
ನಾನು ಟೇಮು ತಪ್ಪಿ ಟೇಮು ಬರ್‍ತಿನಿ
ಚಲೋ ಹೊತ್ತಿನಗ ಮಕ್ಕಳ್ನ ಜೋಪಾನ ಮಾಡು

ಕನ್ನಡ ಪದಗಳಿಗೆ ಇಂಗ್ಲಿಷ್ ಪದಗಳನ್ನು ಸೇರಿಸಿ ಹಾಡಿದ ಈ ಸಾಲುಗಳು ಸಹ ಭಾಷೆಯ ಬಳಕೆಯು ಅಚ್ಚುಕಟ್ಟಾಗಿ ಬಂದಿದೆ. ಇಂಗ್ಲಿಷ್ ಭಾಷೆಯ ಪ್ರಭಾವವು ಸಹ ಈ ಕತೆಗಳಿಗೆ ಪ್ರಭಾವ ಬೀರಿದೆ. ಗುಲಬರ್ಗಾ ಪ್ರದೇಶದ ಮೇಲೆ ನಿಜಾಮರ ಉರ್ದು ಭಾಷೆಯ ಹೇರಿಕೆ, ಬ್ರಿಟಿಷರು ಬಿಟ್ಟು ಹೋದ ಇಂಗ್ಲಿಷ್ ಪ್ರಭಾವ ಈ ಎರಡು ಭಾಷೆಗಳ ಪ್ರಭಾವ ಬುರ್ರಕತೆಗಳಲ್ಲಿ ಮೂರ್ತರೂಪ ಪಡೆದಿವೆ.

ತೆಲುಗು ಪದಗಳು ಕನ್ನಡ ಪದ್ಯದಲ್ಲಿ ಕನ್ನಡ ಪದಗಳಾಗಿ ಅಭಿವ್ಯಕ್ತಗೊಂಡಿದ್ದನ್ನು ಕಾಣಬಹುದು.

ಏಳು ಸಾವಿರ ಕಾಸುಪಾಕ ತೋಟ
ಸೋಬನಾಲ ಬಾವಿ
ಬಾವಿಬೆಲ್ಲಿ ಆಕೆಯ ಮನಿ
ಹೊರಗೆ ಇರಬಾರದಮ್ಮ
ಮಕ್ಕಳಿಗೆ ಹೇಳಿ
ನ್ಯಾಲ ಬೋಯ್ಯರದೊಳಗ
ಕೊಟ್ರಿ ಒಳಗ ಮಕ್ಕಳ ಹಾಕಿ

ಈ ಪದ್ಯದಲ್ಲಿ ಬಂದಿರುವ 'ಕಾಸುಪಾಕ' ಎಂಬ ಪದವು ಕನ್ನಡ ಪದವಾಗಿ ಬಂದಿದೆ. ಕಾಸುಪಾಕ ಎಂದರೆ ಹಣ್ಣಿನ ತೋಟ, ಸೋಬನಾಲ ಎನ್ನುವ ಪದ ತೆಲುಗು ಪದವಾಗಿದೆ. ಹಾಗೆ ನ್ಯಾಲ ಬೋಯ್ಯಾರ ಎನ್ನುವ ಸಾಲಿನಲ್ಲಿ ನ್ಯಾಲ ಬೊಯ್ಯಾರ ಎಂದರೆ ಭೂಮಿ ಒಳಗಿನ ಗವಿ. ಆದರೆ ಇಲ್ಲಿ ಭಾಷೆಯ ಬಳಕೆ ಮಾತ್ರ ಸಂದರ್ಭೋಚಿತವಾಗಿದೆ. ಬುರ್ರಕತೆಗಳ ಮೂಲ ತೆಲುಗು ಪ್ರದೇಶದಿಂದ ಬಂದಿರುವುದರಿಂದ ಕನ್ನಡದಲ್ಲಿ ಬಂದ ಕತೆಗಳಲ್ಲಿ ಅನೇಕ ತೆಲುಗು ಪದಗಳು ಸಹಜವಾಗಿ ಕನ್ನಡ ಪದಗಳಂತೆ ಬಳಕೆಯಲ್ಲಿ ಬಂದಿವೆ. ಇಲ್ಲಿ ಕನ್ನಡ-ತೆಲುಗು ಭಾಷೆಯ ಮಿಶ್ರಪದಗಳು, ಕೆಲವು ಸನ್ನಿವೇಶಗಳಲ್ಲಿ ಬಂದಿವೆ. ಆದರೆ ಪದ್ಯದ ಸಾಲುಗಳಿಗೆ ಕುಂದುಬಾರದೆ, ಸರಳವಾಗಿ ನಿರೂಪಿತವಾಗಿದ್ದನ್ನು ಕಾಣಬಹುದು.

ತೆಲುಗು ಕತೆಯಲ್ಲೂ ಕನ್ನಡ ಪದಗಳು, ಉರ್ದು ಪದಗಳು, ಇಂಗ್ಲಿಷ್ ಪದಗಳು ಸಹಜವಾಗಿ ಅಭಿವ್ಯಕ್ತಗೊಂಡಿದ್ದನ್ನು ಕಾಣುತ್ತೇವೆ.

ತೆಲುಗು (ಅನುವಾದ): ಆ ತಾಯಿಗೆ ಯೋಚನೆ ಬರುತ್ತಿದೆ

ಊರಾಗ ಮಕ್ಕಳಾಗದವರು ಮಸ್ತು ಮಂದಿ ಆರ

ಊರೆಲ್ಲ ಗದ್ದಲ ಆಗ್ಯದ

ಊರು ಮ್ಯಾಲ ಲಡಾಯಿ ಬಂದದ

ರಾಜ ಊರಿಗೆ ಊಟ ಕೊಟ್ಟನ

ದೀನಬಾಜಗಳಿಂದ

ಒಂಬತ್ತು ದಿನಗಳ ಮೊದಲೆ

ಲಾಸ್ಟು ದಿನದಂದು

ಹಿಮಾಮಹೇಶ ಪಟ್ನದ ಮಾಣಿಕ್ಯಲದೇವಿ

ನವಬೋಜರಾಜ ಜೊತೆ ಮದುವೆ ತೈನಾತ

ಸತ್ತು ಹೋಗ್ತಿನಿ ಚಿಕ್ಕಮ್ಮ

ಇಷ್ಟು ಮಜ್ಜಿಗೆ ಇದ್ದರೆ ಹಾಕು ತಾಯಿ[illegible]

ಇಲ್ಲಿ ತೆಲುಗು ಕತೆಯಲ್ಲೂ ಸಹ ಅನ್ಯ ಭಾಷೆಯ ಪ್ರಭಾವವನ್ನು ಕಾಣುತ್ತೇವೆ. ಅವರು ಅಭಿವ್ಯಕ್ತಿಸುವ ಕತೆಯು ಮುಖ್ಯವಾಗಿರುತ್ತದೆ. ಹೀಗೆ ಇವರ ಕನ್ನಡ ತೆಲುಗು ಎರಡು ಭಾಷೆಯ ಕತೆಗಳಲ್ಲಿ ಭಾಷಾ ಮಿಶ್ರಣವನ್ನು ಕಾಣುತ್ತೇವೆ. ಈ ಪದ್ಯದಲ್ಲಿ ವ್ಯಕ್ತವಾದ ಮಸ್ತು(ಬಹಳ), ಲಡಾಯಿ(ಯುದ್ಧ), ತೈನಾತ(ತಯಾರು) ಮುಂತಾದ ಉರ್ದು ಪದಗಳು, ಲಾಸ್ಟು ಇಂಗ್ಲಿಷ್ ಪದ, ಮಜ್ಜಿಗಿ ಕನ್ನಡ ಪದ ಹೀಗೆ ಕಥನದುದ್ದಕ್ಕೂ ಆ ಪದಗಳು ತೆಲುಗು ಪದಗಳೆಂಬಂತೆ ಅಭಿವ್ಯಕ್ತಗೊಂಡಿವೆ.

ಕನ್ನಡ-ತೆಲುಗು ಬುರ್ರಕತೆಗಳಿಂದ ಕಾಂಭೋಜರಾಜಕತೆ, ಬಾಲಗಿರಿರಾಜಕತೆ ಹಾಗೂ ಭೂಲಕ್ಷ್ಮೀಕತೆ, ಶಿವಕುಮಾರಕತೆ, ಆರ್ಯವರಕತೆ ಈ ಎಲ್ಲಾ ಪಠ್ಯಗಳಲ್ಲೂ ಒಂದೇ ತೆರನಾಗಿ ಭಾಷಾ ಮಿಶ್ರಣವಾಗಿದ್ದನ್ನು ಕಾಣಬಹುದು. ಮುಖ್ಯವಾಗಿ ವಕ್ತೃಗಳು ಹಾಡಿದ ಈ ಕತೆಗಳು ಗುಲಬರ್ಗಾ, ಯಾದಗಿರಿ,ಮೆಹಬೂಬನಗರ ಜಿಲ್ಲೆಗಳ ಈ ಪ್ರದೇಶಗಳಲ್ಲಿ ವ್ಯಾವಹಾರಿಕ ಭಾಷೆಯಾಗಿ ಉರ್ದು ಭಾಷೆ ಪ್ರಚಲಿತವಾಗಿತ್ತು. ಅಲ್ಲಿಯ ಜನರ ಕನ್ನಡ ಭಾಷೆಯಲ್ಲಿ ಪ್ರತಿ ಮಾತಿನಲ್ಲೂ ಒಂದು ಪದವಾದರೂ ಉರ್ದು ಪದ ಇರುತ್ತದೆ. ಸಮಯವನ್ನು ಹೇಳುವುದಕ್ಕಾಗಲಿ, ಹಣದ ವಿಚಾರದಲ್ಲಾಗಲಿ, ಅಂಕೆಗಳನ್ನು ಬಳಸವುದಕ್ಕಾಗಲಿ, ಮುಖ್ಯವಾಗಿ ಉರ್ದು ಪದಗಳನ್ನೇ ಬಳಸಲಾಗಿದೆ. ಹಾಗೆಯೇ ಇಂಗ್ಲಿಷ್ ಪದಗಳೂ ಸಹ ಇವೆ. ಹೀಗಾಗಿ ಅಲ್ಲಿನ ಭಾಷಿಕ ಪರಂಪರೆಯಲ್ಲೇ ಬುರ್ರಕತೆಗಳು ಮೂರ್ತರೂಪ ಪಡೆದಿದ್ದನ್ನು ಕಾಣಬಹುದು.

ಭಾಷಾಂತರ

ಕನ್ನಡ-ತೆಲುಗು ಬುರ್ರಕತೆಗಳನ್ನು ಪರಿಶೀಲಿಸಿದರೆ ಒಂದು ಇನ್ನೊಂದರ ಯಥಾವತ್ತಾದ ಭಾಷಾಂತರವಾಗಿ ರೂಪು ಪಡೆದಂತೆ ಭಾಸವಾಗುತ್ತದೆ. ಆದರೆ ಇಲ್ಲಿ ಯಾವುದು ಯಾವುದರ ಭಾಷಾಂತರ ಎಂಬುದನ್ನು ತಿಳಿಯುವುದು ಅಸಾಧ್ಯ ಎಂಬಷ್ಟರ ಮಟ್ಟಿಗೆ ನೇರವಾದ ಅಭಿವ್ಯಕ್ತಿ ಪಡೆದಿದೆ.

ಇಲ್ಲಿ ಬುರ್ರಕತೆಗಾರರಿಗೆ ಎರಡು ಭಾಷೆಗಳು ಮೂಲವೇ. ಏಕೆಂದರೆ ಕನ್ನಡ ಬೇಕೆಂದಾಗ ಕನ್ನಡದಲ್ಲಿ ಹಾಡುತ್ತಾರೆ. ತೆಲುಗಿನಲ್ಲಿ ಬೇಕೆಂದಾಗ ತೆಲುಗಿನಲ್ಲಿ ಹಾಡುತ್ತಾರೆ. ಹೀಗಾಗಿ ಬುರ್ರಕತೆಗಳ ಮೂಲವನ್ನು ಹುಡುಕ ಹೊರಟರೆ ಎರಡೂ ಮೂಲವಾಗಿ ಕಾಣುತ್ತವೆ. ಇವರು ಹಾಡಿದ ಈ ಕತೆಗಳ ಪ್ರತಿ ಸಾಲು ಪದಗಳನ್ನು ಗಮನಿಸಿದರೆ ಭಾಷಾಂತರ ಎಂಬಂತೆ ಭಾಸವಾಗುತ್ತದೆ.

ಕಾಂಭೋಜರಾಜನಿಗೆ ಏಳು ಜನ ಗಂಡುಮಕ್ಕಳು ಜನಿಸಿದ್ದಾರೆ. ಆ ಮಕ್ಕಳ ಪೋಷಣೆಯನ್ನು ರಾಜನ ಕೈ ಕೆಳಗಿನ ದಾಸಿಯರು ಮಾಡುತ್ತಾರೆ. ಆ ಸನ್ನಿವೇಶವು ಎರಡು ಕತೆಗಳಲ್ಲಿ ಒಂದು ಇನ್ನೊಂದರ ಭಾಷಾಂತರ ಎಂಬಂತೆ ಬಂದಿದೆ.

ಕನ್ನಡಃ ಬಂಗಾರು ಬಟ್ಟಾದೊಳಗ ಹಾಲ್ಕಂಗ ಕುಡಿಸುವರು
ಈ ಬೆಳ್ಳಿ ಬಟ್ಟದೊಳಗ ಬೆಣ್ಣೆಂಗ ತಿನ್ನಿಸುವರು
ಮಕ್ಕಳಿಗೆ ಜೋಪಾನ ಮಾಡ್ತರ
ಒಂದು ದಿನ ಹೊತ್ತಾಯ್ತು ಎರಡು ದಿನ ಹೊತ್ತಾಯ್ತು
ಮೂರು ದಿನ ಹೊತ್ತಾಯ್ತು ನಾಲ್ಕು ದಿನ ಹೊತ್ತಾಯ್ತು
ಐದು ದಿನ ಹೊತ್ತಾಯ್ತು
ಆರು ದಿನ ಆದಗಳಿಗೆ
ಮಕ್ಕಳ ಹೆಸರು ಪಡಿಬೇಕೆಂದು
ಕಚೇರಿದೊಳಗ ಕುಂತಾನ ರಾಜ

ತೆಲುಗು (ಅನುವಾದ): ಬಂಗಾರದ ಬಟ್ಟಲಲ್ಲಿ ಬಿಳಿ ಹಾಲು ಕುಡಿಸ್ತಾಳ
ಬೆಳ್ಳಿ ಬಟ್ಟಲಲ್ಲಿ ಬೆಣ್ಣೆಂಗ ತಿನುಸ್ತಾಳ
ಕೆಳಗೆ ಬಿದ್ದರೆ ಮಗನಿಗೆ ಮಣ್ಣು ಹತ್ತುತದ
ಹೊರಗೆ ತಂದರೆ ಮಗನಿಗೆ ಬಿಸಿಲು ತಾಗುತದ
ಮಕ್ಕಳು ಹುಟ್ಟಿ
ಒಂದು ದಿನವಾಯ್ತು ಎರಡು ದಿನವಾಯ್ತು

ಮೂರು ದಿನವಾಯ್ತು ನಾಲ್ಕು ದಿನವಾಯ್ತು

ಐದು ದಿನಗಳಾದುವು ರಾಜಕಾಂಭೋಜರಾಜ

ಊರಿಗೆ ಊಟ ಕೊಟ್ಟನಲ್ಲ

ಮಗನ ಹೆಸರು ಇಟ್ಟನಲ್ಲ[illegible]

ಈ ಎರಡು ಭಾಷೆಯ ಕತೆಗಳಲ್ಲಿ ಕೆಲವು ಸಾಲುಗಳು ಭಿನ್ನವಾಗಿ ಬಂದಿರುತ್ತವೆ. ಕನ್ನಡ ಪಠ್ಯಕ್ಕಿಂತ ತೆಲುಗಿನ ಪದ್ಯದಲ್ಲಿ ಮೂರು ಮತ್ತು ನಾಲ್ಕನೇ ಸಾಲು ಹೆಚ್ಚಾಗಿ ಬಂದಿವೆ. ಉಳಿದ ಸಾಲುಗಳು ಸಮಾನವಾಗಿವೆ. ತೆಲುಗಿನಲ್ಲಿ ಕೆಳಗೆ ಇಟ್ಟರೆ ಮಗನಿಗೆ ಮಣ್ಣು ಹತ್ತುತ್ತದೆ, ಹೊರಗೆ ತಂದರೆ ಮಗನಿಗೆ ಬಿಸಿಲು ತಾಕುತ್ತದೆ ಎಂಬ ಸಾಲುಗಳು ಹೆಚ್ಚಿಗೆ ಬಂದಿವೆ. ಇವು ಮೌಖಿಕ ಕತೆಗಳಾಗಿದ್ದರಿಂದ ಇಂತಹ ಭಿನ್ನತೆ, ಹೆಚ್ಚು ಕಡಿಮೆ ಸಾಲುಗಳು ಬರುವುದು ಸಾಮಾನ್ಯ. ಆದರೆ ಇಲ್ಲಿ ಭಿನ್ನತೆಗಿಂತ ಸಮಾನತೆಯೇ ಕಥನದುದ್ದಕ್ಕೂ ಬಂದಿದ್ದನ್ನು ಕಾಣಬಹುದು.

ಎದಿನಗಂಧಿ ಮಾವ ಕಾಂಭೋಜರಾಜನಿಗೆ ಮದ್ದುಕಟ್ಟುವ ವಿಧಾನವು ಸಹ ಕನ್ನಡ-ತೆಲುಗು ಎರಡು ಆವೃತ್ತಿಗಳಲ್ಲಿ ಸಮಾನತೆ ಇದೆ.

ಕನ್ನಡ: ಎದಿನಗಂಧಿ

ಮಾವನ ಬೆನ್ನಿನ ಹುಣ್ಣಿನ ಮ್ಯಾಲೆ ಚಾಲು ತೆಗೆದು

ಏಳು ಕೊಡ ತಣ್ಣೀರು

ಏಳು ಕೊಡ ಬಿಸಿನೀರು

ನವಿಲು ಪುಚ್ಚ ಸಂಗಡ

ಹುಣ್ಣು ಪಾಡತೊಳೆದು ಮಾವನ ಜಳಕ ಮಾಡಿಸಿ

ತೆಲುಗು (ಅನುವಾದ): ಎದಿನಗಂದಿ

ಏಳು ಕೊಡಗಳ ತಣ್ಣೀರು

ಏಳು ಕೊಡಗಳ ಬಿಸಿನೀರು

ನವಿಲು ಪುಚ್ಚ ಕೈಲಿ ಹಿಡಕೊಂಡು

ಮಾವನಿಗೆ ಮೈ ತೊಳೆದಳಲ್ಲ[illegible]

ಈ ಮೇಲಿನ ಪದಗಳ ಸಾಲುಗಳನ್ನು ನೋಡಿದರೆ ಕನ್ನಡ ಪಠ್ಯದ ಎರಡನೇ ಸಾಲು ತೆಲುಗು ಪದ್ಯದ ಕೊನೆಯ ಸಾಲು ಭಿನ್ನವಾಗಿ ಬಂದಿದ್ದನ್ನು ಬಿಟ್ಟರೆ ಉಳಿದ ಎಲ್ಲಾ ಸಾಲುಗಳು ಯಥಾವತ್ತಾಗಿ ನಿರೂಪಣೆಗೊಂಡಿದೆ. ಕನ್ನಡ ಪಠ್ಯದಲ್ಲಿ ಬಂದಿರುವ ಮಾವನ ಬೆನ್ನಿನ ಹುಣ್ಣಿನ ಮ್ಯಾಲೆ ಚಾಲು ತೆಗೆದು

ಈ ಸಾಲು ತೆಲುಗು ಪಠ್ಯದಲ್ಲಿ ಬಂದಿಲ್ಲ. ಮೌಖಿಕ ಕತೆಗಳಾಗಿದ್ದರಿಂದ ತೆಲುಗು ಪಠ್ಯದಲ್ಲಿ ಬಿಟ್ಟು ಹೋಗಿರಬಹುದು. ಹಾಗೆ ಹುಣ್ಣು ಪಾಡ ತೊಳೆದು ಮಾವನ ಜಳಕ ಮಾಡಿಸಿ ಈ ಸಾಲಿನಲ್ಲಿಹುಣ್ಣು ಪಾಡ ತೊಳೆದು ಎಂಬ ಪದಬಿಟ್ಟು ಮಾವನಿಗೆ ಜಳಕ ಮಾಡಿಸಿ ಎಂದು ತೆಲುಗುನಲ್ಲಿ ಬಂದಿದೆ.

ಬಾಲಗಿರಿರಾಜಕತೆಯಲ್ಲಿ ಬಾಲಗಿರಿರಾಜಕುಮಾರನು ತಂದೆಯ ಮಾತನ್ನು ಮೀರಿ ಪದ್ಮರಾಣಿಯನ್ನು ಗೆದ್ದು ತರುತ್ತೇನೆಂಬ ಹಟವು ಕನ್ನಡ-ತೆಲುಗು ಎರಡರ ಪಠ್ಯಗಳಲ್ಲಿ ಒಂದೇ ತೆರನಾಗಿ ಚಿತ್ರಿತವಾಗಿದೆ.

ಕನ್ನಡ: ನಾ ಹೋಗೋದು ಗಟ್ಟಿ
ನಾ ಲಡಾಯಿ ಮಾಡಿ ಹೆಣ್ಣು ಗೆದ್ದುಕೊಂಡು ಬರ್ತೀನಿ
ಆದರೆ ಒಳ್ಳೆ ಮಾತು ಮಗನೆ
ನೀ ಹೊರಟು ಹೋಗಿ ಲಡಾಯಿ ಮಾಡಿ
ಐದು ನಾಗ ಮಲ್ಲಿಗೆ ಹೂವ್ವ ತೂಕ
ಪದ್ಮರಾಣಿ ಗೆದ್ದುಕೊಂಡು ಬಂದರೆ
ದೇವಾನು ದೇವತೆಗಳು ಮೆಚ್ಚುವಂತ ಲಗ್ನ
ಕಚೇರಿ ಮುಂದ ನಾ ಮಾಡ್ತೀನಿ
ಅಂತ ಇಂತ ಹೆಣ್ಣು ನೀ ತಂದರೆ
ಊರ ಆಗಸ್ಸಿಗೆ ನಿಂದ್ರಿಸಿ
ನಿನ್ನ ರುಂಡ ತೆಗಿತೀನಿ

ತೆಲುಗು (ಅನುವಾದ): ನಾನು ಹೋಗದೆ ಗಟ್ಟಿ
ಯುದ್ಧ ಮಾಡೋದೆ ಗಟ್ಟಿ
ಪದ್ಮರಾಣಿ ತರೋದೆ ಗಟ್ಟಿ
ಹೋದ್ರೆ ಒಳ್ಳೆ ಮಾತು ಮಗನೆ
ತಣ್ಣಗೆ ಹೋಗಿ ತಣ್ಣಗೆ ಬಾ
ಐದು ನಾಗಮಲ್ಲಿಗೆ ಹೂವಿನ ತೂಕದ
ಪದ್ಮರಾಣಿ ತಂದರೆ
ದೇವಾನುದೇವತೆಗಳು ಮೆಚ್ಚುವ ಮದುವೆ ನಾ ಮಾಡ್ತೀನಿ
ಅಂತಿಂಥ ಇಂತಿಂಥ ಹೆಣ್ಣು ತಂದರೆ
ಬಂದೂಕಿಗೆ ಮದ್ದು ತುಂಬಿ
ಬಂದೂಕು ಬಾರ್ ಮಾಡಿ

ಊರು ಅಗಸ್ಸಿ ಹತ್ತಿರ ನಿಲ್ಲಿಸಿ

ನಿನ್ನ ರುಂಡ ಹೊಡಿತೀನಿ[೨೦]

ಇಲ್ಲಿ ಕನ್ನಡದಲ್ಲಿ ಹನ್ನೆರಡು ಸಾಲುಗಳು ಬಂದರೆ ತೆಲುಗು ಪಠ್ಯದಲ್ಲಿ ಹದಿಮೂರು ಸಾಲುಗಳು ಬಂದಿವೆ. ತೆಲುಗಿನ ಪಠ್ಯದಲ್ಲಿ ಬರುವ 'ಸಾಲ್ಲಗ ಪೊಯ್ಯಿ ಸಲ್ಲಗ ದಾ'(ತಣ್ಣಗೆ ಹೋಗಿ ತಣ್ಣಗೆ ಬಾ) ಎನ್ನುವ ಸಾಲು ಹೆಚ್ಚಾಗಿ ಬಂದಿದೆ. ಆದರೆ ಉಳಿದ ಸಾಲುಗಳು ಸಮಾನವಾಗಿವೆ. ಎರಡು ಭಾಷೆಗಳ ಪದ್ಯಗಳನ್ನು ನೋಡಿದರೆ ಭಾಷೆಯ ಬಳಕೆಯು ಸಹ ಅಷ್ಟೇ ಪರಿಣಾಮಕಾರಿಯಾಗಿ ವ್ಯಕ್ತವಾಗಿದೆ. ಈ ರೀತಿಯಾಗಿ ಕಾಂಭೋಜರಾಜಕತೆ, ಬಾಲಗಿರಿರಾಜಕತ ಹಾಗೂ ಭೂಲಕ್ಷ್ಮಿಕತೆ ಕನ್ನಡ-ತೆಲುಗು ಎರಡು ಪಠ್ಯಗಳಲ್ಲಿ ಹೆಚ್ಚಾಗಿ ಭಾಷಾಂತರವಾಗಿ ರೂಪುಗೊಂಡಿದೆ. ಹೀಗಾಗಿ ಬುರ್ರಕತೆಗಳು ಪರಸ್ಪರ ಭಾಷೆಗೆ ಯಥಾನುವಾದಗಳಾಗಿವೆ.

ಬುರ್ರಕತೆಗಳು ಮೌಖಿಕ ಕತೆಗಳಾಗಿದ್ದರಿಂದ ಅವು ಜನ ಸಾಮಾನ್ಯರ ಅಭಿಲಾಷೆಗಳನ್ನು ನೇರವಾಗಿ ಕತೆಗಳಲ್ಲಿ ಅಭಿವ್ಯಕ್ತಿಸಿದ್ದಾರೆ. ಕತೆಯ ನಿರೂಪಣೆಯಲ್ಲಿ ವರ್ಣನೆ, ಉತ್ಪ್ರೇಕ್ಷೆ ನಾಣ್ನುಡಿಗಳು, ಜೋಡುನುಡಿಗಳು ಹಾಗೂ ಗಾದೆಗಳು ಯಥೇಚ್ಛವಾಗಿ ಬಳಕೆಗೊಂಡಿವೆ.

ಪ್ರಾಚೀನ ಕವಿಗಳಾದ ನೃಪತುಂಗ, ಪಂಪ, ರನ್ನ, ಪೊನ್ನ, ಜನ್ನ, ನಾಗವರ್ಮ ಹಾಗೂ ವಚನಕಾರರು, ಕೀರ್ತನೆಕಾರರು, ತತ್ವಪದಕಾರರು ಮುಂತಾದವರು ತಮ್ಮ ಕಾಲದಲ್ಲಿ ಬಳಕೆಯಲ್ಲಿದ್ದ ಎಷ್ಟೋ ಗಾದೆಗಳನ್ನು ಹಾಗೂ ತಮಗಿಂತ ಹಿಂದಿನ ಪ್ರಾಚೀನರು ಬಳಸಿದ ಗಾದೆಗಳನ್ನು ಬಳಸಿಕೊಂಡಿದ್ದನ್ನು ಇಲ್ಲಿ ನೆನಪಿಸಿ ಕೊಳ್ಳಬಹುದು.

ಈ ಗಾದೆಗಳನ್ನು ಹಿಂದಿನ ಕವಿಗಳು, ನಾಲ್ನುಡಿ, ನಾಣ್ನುಡಿ, ನುಡಿ, ಸುದ್ದಿ, ಗಾದೆ ಶಾಸ್ತ್ರ, ನಾಣ್ಮಾತು, ಲೋಕೋಕ್ತಿ, ನೀತಿ ಇತ್ಯಾದಿ ಎಂದು ಬಳಸಿದ್ದುದು ಸ್ಪಷ್ಟವಾಗಿ ಗೋಚರಿಸುತ್ತದೆ. ಗಾದೆಗಳು ವಾಸ್ತವವಾದಿ ಜೀವನಕ್ಕೆ ಸಂಬಂಧಿಸಿದ ಅನುಭವೋಕ್ತಿಗಳು. ನಿತ್ಯ ಜೀವನದಲ್ಲಿ ಸ್ವಭಾವೋಕ್ತಿ ಗಾದೆಗಳು ಬಳಕೆಯಾಗುತ್ತ ಹೋಗುತ್ತವೆ. ಈ ಗಾದೆಗಳನ್ನು ಉಪಯೋಗಿಸುವವರ ಹಿಂದೆ ಒಂದು ಅನುಭವ ಇರುತ್ತದೆ. ಮೌಖಿಕವಾದ ಬಾಯಿಮಾತಿನ ಪರಂಪರೆಯಲ್ಲಿ ಗಾದೆಗಳು ಮಾನವನ ಗತಕಾಲದ ಅನೇಕ ಅಂಶಗಳನ್ನು ಉಳಿಸಿ ಬೆಳೆಸಿಕೊಂಡು ಬರುತ್ತವೆ. ಇವುಗಳಲ್ಲಿ ಸಾಮಾಜಿಕ ಮೌಲ್ಯಗಳು, ಸಮಕಾಲೀನ ಪ್ರಜ್ಞೆ ಬೆಸೆದುಕೊಂಡಿರುತ್ತದೆ. ಹಾಗೆಯೇ ಕತೆಗಳಲ್ಲಿ ನುಡಿಗಟ್ಟುಗಳನ್ನು ಬಳಸುವುದನ್ನು ಕಾಣೆವು. ಇನ್ನು ಪ್ರಪಂಚದ ಎಲ್ಲಾ ಭಾಷೆಗಳಲ್ಲು, ಸಾಹಿತ್ಯದಲ್ಲಿ ಜನಪದದಲ್ಲೂ ಕಾಣುತ್ತೇವೆ. ಈ ನುಡಿಗಟ್ಟುಗಳು ಸಹ ಸಮಸ್ತ ಜೀವನಾನುಭವದಲ್ಲಿ ಬಂದಂಥವು. ಇವು ಮುಖ್ಯವಾಗಿ ಸಮಾಜದ ಸಂಸ್ಕೃತಿಯ ಪ್ರತಿಬಿಂಬವಾಗಿವೆ.

ಪಾತ್ರಗಳ ವರ್ಣನೆಯಲ್ಲಿ ಪದಗಳ ಜೋಡಣೆ ಅಚ್ಚುಕಟ್ಟಾಗಿ ಬಂದಿವೆ.

ಸೂಲಗಿತ್ತಿ ಸುಬ್ಬಮ್ಮ

ದಾದಿ ರಮಣಮ್ಮ

ಹೊಕ್ಕಳಲ್ಲಿ ಮುತ್ತು ಹುಟ್ಟಿದಂಗ

ಮಗ ಹುಟ್ಯಾನ

ಕ್ಯಾಂವ್ ಕ್ಯಾಂವಂತ

ಮಗ ದುಃಖ ಮಾಡ್ತನ

ಅಳಿಜೋಳ ಬಿಳಿಜೋಲ ಗುಗ್ಗರಿ ಹಾಕಿ

ಸೂಲಗಿತ್ತಿ ಮೂಗಿನಾಗ ಬೊಳ್ಳಳ್ಳಿ ತುರುಕಿ

ಮೊಳ ಮೊಳ ಗಡ್ಡದವರು

ಗೇಣು ಗೇಣು ಮೀಸೆದವರು

ಗಡ್ಡನೆ ಹಿಡಿತಾನ

ಗರಗರ ತಿರುಗುತಾನ

ನೆಲಕ್ಕೆ ಹೊಡಿತಾನ (ಬಾಲಗಿರಿರಾಜಕತೆ)

ಇಂತಹ ಪದಗಳು ಕಥನದುದ್ದಕ್ಕೂ ಅಭಿವ್ಯಕ್ತಗೊಂಡು ಕತೆಯ ಸೌಂದರ್ಯಕ್ಕೆ ಪೂರಕವಾಗಿವೆ. ಹಾಗೆಯೇ ಈ ಕತೆಗಳ ಮಧ್ಯಮಧ್ಯದಲ್ಲಿ ಗಾದೆಗಳು ಬಳಕೆಯಾಗಿ ಕತೆಯನ್ನು ಇನ್ನಷ್ಟು ಸುಂದರವಾಗಿ ಕಾಣಲು ಅನುವು ಮಾಡಿಕೊಡುತ್ತವೆ. ಇವು ಶ್ರೋತೃಗಳು ಕತೆಯ ಕಡೆಗೆ ಹೆಚ್ಚು ಗಮನ ನೀಡಲು ಸಹಕಾರಿಯಾಗುತ್ತವೆ. ಈ ಗಾದೆಗಳು ಕನ್ನಡ-ತೆಲುಗು ಎರಡೂ ಪಠ್ಯಗಳಲ್ಲಿ ಅಭಿವ್ಯಕ್ತಗೊಂಡಿವೆ.

'ಚೋಟ ಇದ್ದರೆ ಚೋಟಿಲ್ಲ

ಗೇಣು ಇದ್ದರೆ ಗೇಣು ಇಲ್ಲ' (ಶಂಕ್ರಮ್ಮ, ಕಾಂಭೋಜರಾಜಕತೆ-ಕನ್ನಡ)

ಈ ಸೂಕ್ತಿ ಬಾಲಗಿರಿರಾಜ ಕತೆಯಲ್ಲಿ ಬರುತ್ತದೆ. ಅದೇ ಸೂಕ್ತಿ ತೆಲುಗು ಪಠ್ಯದಲ್ಲಿ ಬರುತ್ತದೆ.

'ಜುಟ್ಟೆಡು ಪೆಡ್ತೆ ಜುಟ್ಟೆಡು ಲೇಡು

ಜಾನೆಡು ಪೆಡ್ತೆ ಜಾನೆಡು ಲೇಡು' (ಶಂಕ್ರಮ್ಮಳ ಬಾಲಗಿರಿರಾಜಕತೆ-ತೆಲುಗು)

ಈ ಎರಡು ಪಠ್ಯಗಳ ಸೂಕ್ತಿಗಳನ್ನು ಅವಲೋಕಿಸಿದಾಗ ಕನ್ನಡ ಅನುವಾದದ ತೆಲುಗು ಸೂಕ್ತಿ, ತೆಲುಗು ಅನುವಾದದ ಕನ್ನಡ ಸೂಕ್ತಿ ಎಂಬಂತೆ ಎರಡು ಪಠ್ಯಗಳಲ್ಲಿ ಪ್ರತಿ ಪದವು ವ್ಯತ್ಯಾಸವಿಲ್ಲದೆ ಬಂದಿದೆ. ಎರಡು ಪಠ್ಯಗಳಲ್ಲಿ ಒಂದೇ ಸನ್ನಿವೇಶದಲ್ಲಿ ಅದೇ ಗಾದೆ ಮಾತು ವ್ಯಕ್ತವಾಗಿದ್ದನ್ನು ಕಂಡರೆ ಬುರ್ರಕತೆಗಾರರ ಸೃಜನಶೀಲತೆಯ ಪ್ರತಿಭೆ ಗೋಚರಿಸುತ್ತದೆ. ಈ ಮಾತನ್ನು ಮಹಿಭೂತರಾಜನು

ಬಾಲಗಿರಿರಾಜಕುಮಾರನನ್ನು ಕುರಿತು, ತನ್ನ ತಮ್ಮಂದಿರಿಗೆ ವಿವರಿಸಿ ಹೇಳಿ ಅವನನ್ನು ಗೆಲ್ಲಬೇಕೆಂದು ಸೂಚಿಸುತ್ತಾನೆ. ಈ ಸೂಕ್ತಿಯಲ್ಲಿ ಬಾಲಗಿರಿರಾಜಕುಮಾರನು ಚಿಕ್ಕ ವಯಸ್ಸಿನವರು ಇದ್ದರೂ ಸಹ ಅವನ ಶೌರ್ಯ, ಸಾಹಸ ಇಲ್ಲಿ ಧ್ವನಿಸುತ್ತದೆ. ಕಿರಿಯವನು ಹಿರಿಯವನನ್ನು ಗೆಲ್ಲುವ ಸಂದರ್ಭದಲ್ಲಿ ಈ ಉಕ್ತಿ ಬಳಕೆಗೆ ಬಂದಿರುತ್ತದೆ.

'ಸಾವಿರ ಮಂದಿಗಿ ಸರ್ದಾರ
ಮನಿ ಹೆಡ್ತಿಂಗಿ ಪಿಂಜಾರ' (ಶಂಕ್ರಮ್ಮಳ ಬಾಲಗಿರಿರಾಜಕತೆ-ಕನ್ನಡ)

ಈ ಗಾದೆ ಮಾತು ತೆಲುಗು ಪಠ್ಯದಲ್ಲೂ ಸಹ ಬರಿದಿದೆ.

'ಸಾವಿರ ಮಂದಿಕಿ ಸರ್ದಾರಾಯೆ
ಇಂಟೆ ಪೆಂಡ್ಲಕಿ ಪಿಂಜಾರ ಆಯೆ' (ಶಂಕ್ರಮ್ಮ, ಬಾಲಗಿರಿರಾಜಕತೆ-ತೆಲುಗು)

ಇಲ್ಲೂ ಸಹ ಎರಡು ಪಠ್ಯಗಳಲ್ಲಿ ಬಂದ ಈ ಗಾದೆಮಾತುಗಳು ಭಾಷಾಂತರ ಎಂಬಂತೆ ಬಂದಿವೆ. ಮಹಿಭೂತರಾಜನು ಆಹ್ವಾನಿಸಿದ ಭಯಂಕರವಾದ ಯುದ್ಧಗಳಲ್ಲಿ ಗೆದ್ದರೂ ಬಾಲಗಿರಿರಾಜಕುಮಾರನು ತನ್ನ ಹೆಂಡತಿ ಪದ್ಮರಾಣಿಗೆ ಅಂಜಿಕೊಂಡು ಓಡಿ ಹೋಗಿ ಗಿಡ ಹತ್ತಿ ಕುಳಿತುಕೊಂಡಾಗ ಈ ಉಕ್ತಿ ಹೊರಬಂದಿದೆ. ಇಲ್ಲಿ ರಾಜನು ಇಡೀ ರಾಜ್ಯವನ್ನೇ ತನ್ನ ಹಿಡಿತದಲ್ಲಿ ಇಟ್ಟುಕೊಳ್ಳಬಹುದು. ಹುಲಿಯಂತೆ ಹೊರಗಿನ ಜನರಿಗೆ ಕಾಣಿಸಬಹುದು. ಆದರೆ ಮನೆಯಲ್ಲಿ ಹೆಂಡತಿಗೆ ಆಳು ಎಂಬುದು ಈ ಗಾದೆಯ ತಾತ್ಪರ್ಯ. ಈ ಗಾದೆಯು ಸಾಮಾನ್ಯ ಜನರಿಗೆ, ಹಿರಿಯ ವ್ಯಕ್ತಿಗಳಿಗೂ ಅನ್ವಯಿಸುತ್ತದೆ. ಇಲ್ಲಿ ಬುರ್ರಕತೆಗಾರರು ಗಾದೆಯನ್ನು ಕತೆಯಲ್ಲಿ ಬಳಸಿದರೂ ಅದು ವಾಸ್ತವ ಬದುಕು, ಸಮಾಜದ ಹಿನ್ನೆಲೆಯಲ್ಲಿ ಅಭಿವ್ಯಕ್ತಗೊಂಡಿದ್ದನ್ನು ಕಾಣಬಹುದು.

'ಅದ್ದು ಮುದ್ದು ಅಡವಿ ಪಾಲಾಯ್ತು
ಮೋಚಾರ ಗಿಡದ ಪಾಲಾಯ್ತು' (ಶಂಕ್ರಮ್ಮ, ಬಾಲಗಿರಿರಾಜಕತೆ-ಕನ್ನಡ)

ಹಾಗೆಂದು ಇದೇ ಉಕ್ತಿಯು ತೆಲುಗು ಪಠ್ಯದಲ್ಲಿ ಬಂದಿದೆ.

'ಅದ್ದು ಮುದ್ದು ಅಡವಿ ಪಾಲಯೆ
ಮೋಚಾರಂ ಚಟ್ಲ ಪಾಲಾಯ' (ಶಂಕ್ರಮ್ಮ, ಬಾಲಗಿರಿರಾಜಕತೆ-ತೆಲುಗು)

ಎರಡು ಭಾಷೆಯ ಪಠ್ಯಗಳಲ್ಲಿ ಭಾಷಾಂತರವಾಗಿ ಗಾದೆ ಮಾತು ವ್ಯಕ್ತಗೊಂಡಿದೆ. ಪದ್ಮರಾಣಿಯು ತನ್ನನ್ನು ದನದ ಕಟುಕರು ಕಡಿಯುವಾಗ ಗಂಡ ಬಾಲಗಿರಿರಾಜನನ್ನು ನೆನೆಸಿಕೊಂಡು ಶೋಕದಲ್ಲಿ ವ್ಯಕ್ತವಾದ ಮಾತಿದು. ಇಬ್ಬರ ಪ್ರೀತಿಯು ಹಾಳಾಯ್ತು, ಮೋಕ್ಷ ಎಂಬುದು ಇನ್ನೆಲ್ಲಿ ಎಂದು ಪರಿತಪಿಸುವುದಾಗಿದೆ. ತಮ್ಮ ಪ್ರೀತಿಯು ಅರಣ್ಯದಲ್ಲಿ ತಿರುಗುವ ವನವಾಸದಂತೆ ಆಯಿತು. ಕಾಡಿನ ಭಯಂಕರ ದೃಶ್ಯದಲ್ಲಿ,

ಇಬ್ಬರ ಮೋಕ್ಷವು ಅಡವಿಯಲ್ಲಿ ಇರುವ ಆ ಗಿಡಗಳ ಪಾಲಾಯ್ತು ಎನ್ನುವ ನೋವು ಈ ಸೂಕ್ತಿಯಲ್ಲಿ ಅಡಗಿದೆ. ಗಂಡ-ಹೆಂಡತಿ ಅತ್ಯಂತ ಅನುರಾಗದಿಂದ ಇದ್ದಾಗ ಮುಂದೆ ಆ ಅನುರಾಗವು ಯಾವುದೋ ಒಂದು ಕೆಟ್ಟ ಗಳಿಗೆಯಲ್ಲಿ ವಂಚಿತರಾದಾಗ, ಅದು ಕೈಗೂಡದೆ ಹೋದಾಗ, ಜೀವನದ ವ್ಯಥೆಯನ್ನು ಲೋಕೋಕ್ತಿಯ ಮೂಲಕ ವ್ಯಕ್ತಪಡಿಸುವುದನ್ನು ಜನಸಾಮಾನ್ಯರಲ್ಲೂ ಕಾಣುತ್ತದೆ.

'ತಂದಿಗಿ ಒಂದು ಮಗ ಇರಬೇಕು
ದಿಲ್ಲಿಗಿ ಬಾದ್ ಶಾ'

ಈ ಸೂಕ್ತಿಯು ಕಾಂಭೋಜರಾಜಕತೆ ಹಾಗೂ ಬಾಲಗಿರಿರಾಜಕತೆಯಲ್ಲೂ ಬಂದಿದೆ. ಯಮನಂದ ಗಿರಿರಾಜನು ತನ್ನ ಮಗ ಬಾಲಗಿರಿರಾಜಕುಮಾರನು ಕಲಿತ ವಿದ್ಯೆಯನ್ನು ಕಂಡು ಈ ಮಾತು ಹೇಳುತ್ತಾನೆ. ಈ ಗಾದೆಯು ಚಾರಿತ್ರಿಕ ಅರಿವಿನ ಹಿನ್ನಲೆಯಲ್ಲಿ ಹುಟ್ಟಿಕೊಂಡಂತೆ ಕಾಣುತ್ತದೆ. ಮಗನ ಶೌರ್ಯ, ಸಾಹಸವನ್ನು ಕುರಿತು ಹೇಳುವ ದೆಹಲಿಯ ಬಾದ್‌ಶಹಾನಂತೆ ನನಗೆ ಒಬ್ಬನೇ ಮಗ ಇದ್ದರೆ ಸಾಕು ಎನ್ನುವ ಈ ಮಾತು ಅರ್ಥಗರ್ಭಿತವಾಗಿದೆ. ಬುರ‍್ರಕತೆಗಾರರಿಗೆ ದಿಲ್ಲಿಯ ಬಾದ್‌ಶಹಾ ಅಧಿಕಾರದ ಬಗ್ಗೆ ಅರಿವು ಇರುವುದರಿಂದ ಈ ಸೂಕ್ತಿಯನ್ನು ಬಳಸಿದ್ದಾರೆ. ಹಾಗೆಯೇ ಕಾಂಭೋಜರಾಜನು ತನ್ನ ಮಗ ಶರಬಂಧರಾಜಕುಮಾರನ ಶೌರ್ಯವನ್ನು ಕಂಡು ಈ ಮಾತನ್ನು ಹೇಳುತ್ತಾನೆ.

'ಉಗಾದಿಗಿ ಮೈ ತೊಳೆದರೆ
ಕಾರ ಹುಣ್ಣೀಗಿ ಬಟ್ಟೆ ಒಗೆಯುವದು' (ಶಂಕ್ರಮ್ಮ, ಬಾಲಗಿರಿರಾಜಕತೆ)

ಬಾಲಗಿರಿರಾಜಕತೆಯಲ್ಲಿ ಕುಂಬಾರ ಗುಂಡಯ್ಯನ ಹೆಂಡತಿ ಕುರುಡಿ ಪೋಲವ್ವಳನ್ನು ಕುರಿತು ವ್ಯಕ್ತವಾದ ಮಾತಿದು. ತಿಂಗಳಿಗೊಮ್ಮೆ ಸ್ನಾನ ಮಾಡುವವರು, ಬಟ್ಟೆಗಳನ್ನು ತೊಳೆಯುವವರನ್ನು ಕುರಿತು ಹೇಳಿದ ಮಾತಾಗಿದೆ. ಊರು ಹೊರಗೆ ಮಸೀದಿಯಲ್ಲಿ ಗಂಡ ಗುಂಡಯ್ಯನ ಜೊತೆ ವಾಸಿಸುವ ಪೋಲವ್ವಳಿಗೆ ಏಳು ಜನ ಗಂಡುಮಕ್ಕಳು ಏಳು ಜನ ಸೊಸೆಯರು ಇದ್ದರೂ ಯಾರೂ ಇವರನ್ನು ಪೋಷಣೆ ಮಾಡುವುದಿಲ್ಲ. ಅಂತಹ ಸಂದರ್ಭದಲ್ಲಿ ಮಸೀದಿಯಲ್ಲಿ ಅಸ್ತವ್ಯಸ್ತವಾಗಿ ಜೀವನ ಸಾಗಿಸುತ್ತಾರೆ. ಅಂದು ಬಟ್ಟೆ ಒಗೆಯಲು ಜೀರ‍್ಲಲಚಮಣ್ಣ ಬಾವಿಗೆ ಬಂದಾಗ ಪದ್ಮರಾಣಿಯು ಸಹ ಗಂಡ ಬಾಲಗಿರಿರಾಜನಿಗೆ ನೀರು ತರಲು ಅದೇ ಬಾವಿಗೆ ಹೋಗುತ್ತಾಳೆ. ಅಂತಹ ಸಂದರ್ಭದಲ್ಲಿ ಪೋಲವ್ವಳನ್ನು ಕುರಿತು ಬಂದ ಮಾತಿದು. ಈ ಸೂಕ್ತಿಯು ತನ್ನ ಜೀವನದ ಬಗ್ಗೆ ತನಗೆ ಅರಿವಿಲ್ಲದವರನ್ನು ಕುರಿತು ಈ ಮಾತು ಅನ್ವಯಿಸುತ್ತದೆ.

'ಹೊಟ್ಟೆಗಿ ಹಸನಿಲ್ಲ ಕಣ್ಣಿಗೆ ನಿದ್ರೆಯಿಲ್ಲ' (ಶಂಕ್ರಮ್ಮ, ಬಾಲಗಿರಿರಾಜಕತೆ)

ಬಾಲಗಿರಿರಾಜಕುಮಾರನು ಮಹಿಭೂತರಾಜನು ಒಡ್ಡಿದ ಯುದ್ಧಗಳಲ್ಲಿ ಗೆದ್ದರೂ ಇನ್ನೂ ಯುದ್ಧ ಮಾಡಬೇಕೆಂದಾಗ ಈ ಮೇಲಿನ ಮಾತನ್ನು ಹೇಳುತ್ತ, ಊಟ ಮಾಡಲು ಒಂದು ತುತ್ತು ಅನ್ನ ನೀರನ್ನು

ಕೇಳುತ್ತಾನೆ. ಬಾಲಗಿರಿರಾಜಕುಮಾರನು ಹೊಟ್ಟೆಗೆ ಅನ್ನವಿಲ್ಲದೆ, ಹಗಲು ರಾತ್ರಿ ಎನ್ನದೆ ಯುದ್ಧ ಮಾಡುವ ಅಂಶವು ಈ ಗಾದೆಯಲ್ಲಿ ಅಡಗಿದೆ. ಬುರ್ರಕತೆಗಾರರ ಕತೆಯ ಸನ್ನಿವೇಶಕ್ಕನುಗುಣವಾಗಿ ಗಾದೆ ಮಾತುಗಳನ್ನು ವ್ಯಕ್ತಪಡಿಸಿದ್ದಾರೆ. ಮುಖ್ಯವಾಗಿ ಭಾಷೆಯಲ್ಲಿ ಹಿತಮಿತವಾದ ಪದಗಳ ಜೋಡಣೆ ಕಾಣುತ್ತದೆ.

'ಅವನು ಕೊಡಲಾರದ ಶೆಟ್ಟಿ, ನೀನು ಬಿಡಲಾರದ ಜಟ್ಟಿ' (ಶಂಕ್ರಮ್ಮ, ಬಾಲಗಿರಿರಾಜಕತೆ)

ಈ ಗಾದೆಯ ಮಾತನ್ನು ಜೀರ್ಲನಾಗಮ್ಮ ಹೇಳುತ್ತಾಳೆ. ಬಾಲಗಿರಿರಾಜಕುಮಾರನು ಆ ಮುದುಕಿಯು ದೆವ್ವ ಎಂದು ಕುಣೆಯುವಾಗ, ತನ್ನ ಪರಿಚಯವನ್ನು ಹೇಳದೆ ಹೋದಾಗ ಅವನ ಗುಣಗಳನ್ನು ಜರಿಯುತ್ತಾಳೆ. ಇನ್ನೊಬ್ಬರಿಗೆ ಮೋಸ ಮಾಡುವವನು ಎನ್ನುವ ಭಾವವು ಈ ಮಾತಿನಲ್ಲಿ ವ್ಯಕ್ತವಾಗಿದೆ.

'ಒಂದು ರೊಟ್ಟಿ ಮುತ್ತೈದೆತನ ಹೋದರೆ
ಅರ್ಧರೊಟ್ಟಿ ಮತ್ತೈದೆತನ ಏನು ಮಾಡಲಿ' (ಶಂಕ್ರಮ್ಮ, ಬಾಲಗಿರಿರಾಜಕತೆ)

ಮಹಿಭೂತರಾಜನು ನಿನಗೆ ಇನೊಂದು ಗಂಡು ಹುಡುಕಿ ಮದುವೆ ಮಾಡುತ್ತೇನೆ ಎಂದಾಗ, ಪದ್ಮರಾಣಿ ಈ ಮೇಲಿನಂತೆ ಹೇಳುತ್ತಾಳೆ. ಎರಡನೇ ಮದುವೆಗಿಂತ ಮೊದಲನೆಯ ಮದುವೆಯೇ ಶ್ರೇಷ್ಠ. ಎರಡನೇ ಮದುವೆ ಎಂದರೆ ಒಂದು ರೊಟ್ಟಿಯಲ್ಲಿ ಅರ್ಧ, ಅಂದರೆ ಅದರಲ್ಲಿ ಅರ್ಧ ಆಯುಷ್ಯ ಕಳೆದಂತೆ, ಭಾರತೀಯ ಸಂಪ್ರದಾಯದಲ್ಲಿ ಒಬ್ಬನೇ ಗಂಡನು ಎನ್ನುವ ಅಂಶವು ವ್ಯಕ್ತವಾಗಿದೆ. ಹೀಗಾಗಿ ಸತ್ತ ಗಂಡನೇ ಮುಖ್ಯ ಹೊರತು ಮತ್ತೊಂದು ಮದುವೆ ಬೇಕಿಲ್ಲ ಎನ್ನುತ್ತಾಳೆ.

'ಕಾಲಿಗೆ ನಿಲ್ಕದಿಲ್ಲ ಕೈಗೆ ನಿಲ್ಕದಿಲ್ಲ'

'ಸರ್ದಾರ ಮಗನೇನ ಸಾಮರ್ಥ್ಯ ಮಗನೇನ'

'ಮಾತಾಡಿದರೆ ಮುತ್ತು ಹೊಡೆದಾಗ'

'ಹುಲಿ ಹೊಟ್ಟೆಯೊಳಗೆ ಹುಲೀನೇ ಹುಟ್ಟಿತು' (ಶಂಕ್ರಮ್ಮ, ಬಾಲಗಿರಿರಾಜಕತೆ)

ಹೀಗೆ ಈ ಕತೆಯುದ್ದಕ್ಕೂ ಅನೇಕ ಗಾದೆ ಮಾತುಗಳು ಬಂದು ಕತೆಯ ಭಾಷೆ ಮತ್ತು ಸೌಂದರ್ಯವನ್ನು ಹೆಚ್ಚಿಸಿದೆ.

'ಹುವ್ವ ಮಾರುವ ಜಾಗದಗ ಕುಂತರೆ ಹುವ್ವ ಭೂಷಣ ಬರ್ತದ' (ಶಂಕ್ರಮ್ಮ, ಬಾಲಗಿರಿರಾಜಕತೆ)

ಈ ಗಾದೆ ಮಾತು ಕಾಂಭೋಜರಾಜಕತೆಯಲ್ಲಿ ಬರುತ್ತದೆ. ಸಾಕುತಾಯಿ ಸಿರಿದೇವಿಯ ಆರು ಜನ ಮಕ್ಕಳು ಪಟ್ಟಣದ ಹುಡುಗರ ಜೊತೆಗೆ ಶಾಲೆಗೆ ಹೋಗುತ್ತೇನೆಂದು ಹಟ ಮಾಡಿದಾಗ ಈ ಮಾತನ್ನು ಹೇಳುತ್ತಾಳೆ. ಈ ಸಾಲಿನ ತಿರುಳೆಂದರೆ ರಾಜನ ಮಕ್ಕಳು ಯಾವ ರೀತಿ ಇರಬೇಕೆಂಬುದನ್ನು ತಿಳಿಸುತ್ತದೆ. ರಾಜನ ಮಕ್ಕಳು ರಾಜಗಾಂಭೀರ್ಯದಿಂದ ಇರಬೇಕು. ಗಾಂಭಿರ್ಯತೆಯಿಂದಲೇ ಶಾಲೆಗೆ ವಿಶೇಷವಾಗಿ

ಹೋಗಬೇಕು. ಸಾಮಾನ್ಯ ಮಕ್ಕಳ ಜೊತೆ ಹೋಗಬಾರದು. ಅಂತಹವರ ಜೊತೆಗೆ ಹೋದರೆ ಮನೆತನಕ್ಕೆ ಕುಂದು ಬರುತ್ತದೆ. ಮುಖ್ಯವಾಗಿ ಈ ಗಾದೆಯ ತಾತ್ಪರ್ಯವೆಂದರೆ ಯಾರ ಸಂಪರ್ಕದಲ್ಲಿ ಬೆಳೆಯುತ್ತಾರೋ ಅಂತಹ ಗುಣ ಹೊಂದುತ್ತಾರೆ. ಒಳ್ಳೆಯವರ ಗೆಳೆತನದಲ್ಲಿ ಬೆಳೆಯಬೇಕೆಂಬ ಆಶಯ ಇಲ್ಲಿದೆ. ಇಲ್ಲಿ ರಾಜಕುಮಾರನನ್ನು ಹೂವಿಗೆ ಹೋಲಿಸಿದರೆ, ಸಾಮಾನ್ಯರ ಮಕ್ಕಳನ್ನು ಹುಲ್ಲಿಗೆ ಹೋಲಿಸಲಾಗಿದೆ. ಹೂವು ಮತ್ತು ಹುಲ್ಲಿನ ಗುಣವಿಶೇಷಗಳನ್ನು ಹೇಳುತ್ತಾ ಹೂವಾಗಬೇಕೆ ಹೊರತು ಹುಲ್ಲಲ್ಲ ಎಂಬುದು ಇಲ್ಲಿಯ ನಿರೂಪಣೆ. ಈ ಗಾದೆ ಮಾತು ಭಾಷಿಕವಾಗಿ ಪ್ರಾಸಬದ್ಧವಾಗಿ ಸಮರ್ಥವಾಗಿ ಬಂದಿದೆ.

'ಒಳ್ಳಿನ್ಯಾಗ ತಲೆ ಇಟ್ಟೇನಿ, ಈ ಒನಿಕೆ ಪೆಟ್ಟಿಗಿ ಯಾಕ ಅಂಜಲಿ' ಹಾಗೆಯೇ ತೆಲುಗು ಪಠ್ಯದಲ್ಲಿ ಅದೇ ಗಾದೆ ಮಾತು ವ್ಯಕ್ತವಾಗಿದೆ. ರೋಟ್ಲೆ ತಲಕಾಯ ಪೆಟ್ಟಿನ, ರೋಕಲಿದೆಬ್ಬಕು ಎಂದುಕು ಅದುರುಕುಂದು' ಇಲ್ಲಿ ಎರಡು ಭಾಷೆಯ ಆವೃತ್ತಿಗಳಲ್ಲಿ ಗಾದೆಗಳು ಭಾಷಾಂತರ ಎಂಬಂತೆ ಬಂದಿವೆ. ಆರು ಮಂದಿ ಹಿರಿಯ ರಾಣಿಯರು ಸಿರಿದೇವಿಯೇ ವಿಷವನ್ನು ತಮ್ಮ ಮಕ್ಕಳಿಗೆ ವಿಷ ಕೊಟ್ಟಿದ್ದಾಳೆಂದು ಪಟ್ಟಣದ ಹಿರಿಯರ ಎದುರು 'ಸೀರೆ ಕುಪ್ಪಸ' ಬಿಚ್ಚಲು ತಯಾರಾಗುತ್ತಾರೆ. ಆದರೆ ಸಿರಿದೇವಿ ತಾನು ಅದಕ್ಕೆ ಒಪ್ಪದೆ ಈ ಮಾತನ್ನು ಕೇಳಿ ನಗ್ನಳಾಗಲು ನಿರಾಕರಿಸುತ್ತಾಳೆ. ನನ್ನ ಮೇಲೆ ಹಿರಿಯ ರಾಣಿಯರ ತಪ್ಪನ್ನು ನನ್ನ ತಲೆಗೆ ಕಟ್ಟುತ್ತಿದ್ದಾರೆ. ನಾನು ತಪ್ಪೇ ಮಾಡಿಲ್ಲ ಯಾಕೆ ಅಂಜಿಕೊಳ್ಳಲಿ ಎನ್ನುತ್ತಾಳೆ. ಅಂದರೆ ಒರಳಿನಲ್ಲಿ ತಲೆ ಇಟ್ಟಿದ್ದೇನೆ, ತಪ್ಪಿನಲ್ಲಿ ನನ್ನನ್ನು ಸಿಲುಕಿಸಿದ್ದಾರೆ. ಆ ಒನಕೆಯ ಪೆಟ್ಟಿಗೆ ಯಾಕೆ ಅಂಜಲಿ ಎಂದು ಹೇಳುತ್ತಾಳೆ. ಪ್ರಾಣ ಹೋದರೆ ಹೋಗಲಿ ನನ್ನ ಮಾನವನ್ನು ಈ ಜನರ ಮುಂದೆ ಕಳೆದುಕೊಳ್ಳುವುದಿಲ್ಲ ಮಾನಮರ್ಯಾದೆಗೆ ಅಂಜುತ್ತೇನೆ ಹೊರತು ಪೆಟ್ಟಿಗೆ ಅಂಜುವಳಲ್ಲ ಎಂದು ಹೇಳುತ್ತಾಳೆ. ಇನ್ನು ಮುಂದುವರಿದು ಸಿರಿದೇವಿಯು

'ಬಂದರೆ ಬರಲಿ ಗುರುವಿನ ಅಂತಕರಣ ಇರಲಿ'

ಎಂದು ಹೇಳುತ್ತಾಳೆ. 'ಸೀರೆ ಕುಪ್ಪಸ' ಕಳಚುವುದು ಒಂದು ಕಡೆ ಇರಲಿ, ತಲೆಯ ಮೇಲಿನ ಸೆರಗನ್ನು ಸರಿಸುವುದಿಲ್ಲ ಎನ್ನುತ್ತ ಕಷ್ಟ ಬಂದರೆ ಬರಲಿ, ಆ ಗುರುವಿನ ಆಶೀರ್ವಾದ ಇದ್ದೇ ಇರುತ್ತದೆ ಎಂದು ನಂಬುತ್ತಾಳೆ. ಸತ್ಯಕ್ಕೆ ಜಯವು ಸಿಗುತ್ತದೆಂಬ ನಂಬಿಕೆ ಅವಳಲ್ಲಿ ಇರುತ್ತದೆ. ಇಲ್ಲಿ ಸಿರಿದೇವಿ 'ಹರ ಮುನಿದರೆ ಗುರು ಕಾಯುವನೆಂಬ' ಸೂಕ್ತಿಯಂತೆ ಗುರುವಿನ ಮೇಲೆ ತನ್ನ ಭಾರವನ್ನು ಹಾಕಿ ಈ ಮೇಲಿನ ಮಾತನ್ನು ಹೇಳುತ್ತಾಳೆ. ಭಾರತೀಯ ಸಂಸ್ಕೃತಿ ಪರಂಪರೆಯಲ್ಲಿ ಸ್ತ್ರೀ ಧರ್ಮಕ್ಕೆ ಹೆಚ್ಚಿನ ಪ್ರಾಶಸ್ತ್ಯವಿದೆ ಎಂಬುದನ್ನು ಈ ಸೂಕ್ತಿ ತಿಳಿಸುತ್ತದೆ. ಇಲ್ಲಿ ದೇವರಿಗಿಂತ ಗುರುವೆ ದೊಡ್ಡವನು ಎಂಬ ಪ್ರಜ್ಞೆ ಬಂದಿದೆ.

'ಓಡಿದರೆ ವನ್ನೆಕಾರ ಸೋತೆನಯ್ಯ ಸೊಗಸುಗಾರ'

ಇದೇ ಸಾಲು ತೆಲುಗು ಪಠ್ಯದಲ್ಲಿ ನಿರೂಪಣೆಗೊಂಡಿದೆ, 'ಸೋಲಿತಿನಯ್ಯ ಸೊಗಸುಗಾರ, ಓಡಿತಿನಯ್ಯ ವನ್ನೆಕಾರ'(ಶಂಕ್ರಮ್ಮ, ತೆಲುಗು- ಕಾಂಭೋಜರಾಜಕತೆ). ಈ ಎರಡು ಪಠ್ಯಗಳ ಸಾಲುಗಳು ಒಂದೇ

ಸನ್ನಿವೇಶದಲ್ಲಿ ಭಾಷಾಂತರ ಎಂಬಂತೆ ಬಂದಿದೆ. ಶರಬಂಧರಾಜಕುಮಾರನು ಸುಂದರಮ್ಮಳನ್ನು ಗೆದ್ದಾಗ ಈ ಮಾತನ್ನು ಹೇಳುತ್ತಾಳೆ. ತನ್ನನ್ನು ಗೆಲ್ಲಲು ಎಂಥೆಂಥ ರಾಜಮಹಾರಾಜರು, ಜಟ್ಟಿಗಳ ಕೈಯಲ್ಲಿ ಆಗಿರಲಿಲ್ಲ, ಆದರೆ ನೀನು ನನ್ನನ್ನು ಸೋಲಿಸಿದೆ ಎಲ್ಲರಿಗಿಂತ ಮಿಗುಲು ನೀನು. ನನ್ನ ಓಟಕ್ಕೆ ಕತ್ತರಿ ಹಾಕಿದ್ದಿ ನಿನ್ನ ಬಣ್ಣ ನಿನ್ನ ಚತುರತೆಗೆ ನಾನು ಸೋತೆನೆಂದು ಹೇಳುತ್ತಾಳೆ. ತನ್ನನ್ನು ಮದುವೆಯಾಗಲು ಅಂಗಲಾಚುತ್ತಾಳೆ. ಇಂತಹ ಅನೇಕ ಗಾದೆಗಳು ಈ ಕತೆಯಲ್ಲಿ ಬಂದಿದ್ದನ್ನು ಕಾಣಬಹುದು.

**ಹಾಡಿನ ಧ್ವನಿ**

ಬುರ್ರಕತೆಗಳು ಸಮಯ ಹಾಗೂ ಸಂದರ್ಭಕ್ಕೆ ತಕ್ಕಂತೆ ವಿಡಂಬನಾತ್ಮಕವಾಗಿ, ವ್ಯಂಗ್ಯ ಹಾಸ್ಯಗಳ ಸಮರ್ಥ ಭಾಷೆಯ ಮೂಲಕ ಕತೆಗಳು ವಿಸ್ತರಿಸಿ ಇದರ ಮೂಲಕ ಕತೆಯ ಸೊಗಸು ರಸವತ್ತಾಗಿ ಕಾಣುತ್ತದೆ.

**೧. ವಿಡಂಬನೆ, ವ್ಯಂಗ್ಯ**

ಶಿಷ್ಟ ಕಾವ್ಯದಲ್ಲಿ, ಸಾಹಿತ್ಯದಲ್ಲಿ ವಿಡಂಬನೆ, ವ್ಯಂಗ್ಯವನ್ನು ಕಾಣಬಹುದು. ಹಾಗೆಯೇ ಮೌಖಿಕ ಬುರ್ರಕತೆಗಳಲ್ಲಿ ವಿಡಂಬನೆ, ಹಾಸ್ಯ ವ್ಯಕ್ತವಾಗಿದೆ. ಈ ಸನ್ನಿವೇಶವು ಸಂದರ್ಭಾನುಸಾರವಾಗಿ ವ್ಯಕ್ತಗೊಂಡಿರುತ್ತದೆ.

ಕಾಂಭೋಜರಾಜನ ಹಿರಿಯ ಆರು ಜನ ರಾಣಿಯರು ಅತ್ಯಂತ ಸೋಮಾರಿಗಳು, ಮೈಗಳ್ಳರು. ಇನ್ನೊಬ್ಬರನ್ನು ಕಂಡು ಅಸೂಯೆ ಪಟ್ಟುಕೊಳ್ಳುವವರು. ಹಾಗೆ ಅವರು ರಾಜನ ಜೊತೆ ತೋಟದಲ್ಲಿ ಶ್ರಮ ವಹಿಸಿರುವುದಿಲ್ಲ. ಆದರೆ ನಿಜವಾಗಿ ರಾಜನ ಜೊತೆ ಶ್ರಮಪಟ್ಟವಳು ಸಿರಿದೇವಿ. ಅದರ ಪ್ರತಿ ಫಲ ಇವಳಿಗೆ ಸಿಗೋದು ತಪ್ಪಿ ಹಿರಿಯ ರಾಣಿಯರಿಗೆ ಸಿಗುತ್ತದೆ. ಇಂತಹ ಸೋಮಾರಿ ಹಿರಿಯ ರಾಣಿಯರು ಸ್ವತಃ ಶ್ರಮಪಟ್ಟು ಸಂತಾನ ಭಾಗ್ಯ ಪಡೆದಿದ್ದೇವೆಂದು ಹೇಳುತ್ತಾರೆ.

ಆ ಅರಮನೆಯೊಳಗೆ ದೊಡ್ಡ ತಾಯಿಯರು
ಬಹಳ ಪುಣ್ಯ ಮಾಡಿದವರು
ಪುಣ್ಯ ಮಾಡಿದವರು ಇದ್ದದಕ
ನಮ್ಮ ಭಕ್ತಿ ಮೆಚ್ಚಿ ಸಂತಾನ ಕೊಟ್ಟಾನ ನಮಗ

ಈ ಪದ್ಯದಲ್ಲಿ ಬಹಳ ಪುಣ್ಯ ಮಾಡಿದವರು ಎನ್ನುವ ಸಾಲು ವ್ಯಂಗ್ಯವಾಗಿ ಬಂದಿದೆ. ಸೋಮಾರಿಗಳಾದ ಹಿರಿಯ ರಾಣಿಯರು ತಮ್ಮಷ್ಟಕ್ಕೆ ತಾವೇ ಜಂಬ ಕೊಚ್ಚಿಕೊಂಡು 'ನಮ್ಮ ಭಕ್ತಿ ಮೆಚ್ಚಿ ಸಂತಾನ ಕೊಟ್ಟಾನ ನಮಗ' ಎಂದು ದಾಸಿಯರಿಗೆ ಹೇಳುತ್ತಾರೆ. ಇಲ್ಲಿ ನಿಜವಾಗಿ ಹಿರಿಯ ರಾಣಿಯರು ಶ್ರಮವಿಲ್ಲದೆ ಪ್ರತಿಫಲ ಪಡೆದುಕೊಂಡಿದ್ದಾರೆಂಬ ಅಂಶವು ವಿಡಂಬನಾತ್ಮಕವಾಗಿ ಬಂದಿದೆ.

ಸಿರಿದೇವಿಯ ಭಕ್ತಿ ಮೆಚ್ಚಿ ಪಾರ್ವತಿಯು ಪರಮಾತ್ಮನಿಗೆ ಸಂತಾನ ಭಾಗ್ಯ ಕೊಟ್ಟು ಬರಬೇಕೆಂದು ಹೇಳುತ್ತಾಳೆ. ದಾಸವೇಷಧಾರಿಯಾದ ಪರಮಾತ್ಮನು ಕಾಂಭೋಜರಾಜನ ತೋಟದಲ್ಲಿ ಹುಟ್ಟಿ ಬರುತ್ತಾನೆ. ಮಕ್ಕಳ ಭಾಗ್ಯ ಕೊಡುತ್ತೇನೆಂದು ಹೇಳಿದ ಕೂಡಲೇ ಆರು ಜನ ಹಿರಿಯ ರಾಣಿಯರೇ ಓಡಿ ಬರುತ್ತಾರೆ.

ಮಕ್ಕಳು ಎಂಬ ಶಬ್ದ ಕಿವಿಯಾಗ ಬಿದ್ದಗಳಿಗೆ

ಆರು ಮಂದಿ ದೊಡ್ಡ ತಾಯಿದವರು

ತೋಟಕ್ಕೆ ಬಹಳ ಕಷ್ಟ ಪಡೆದವರು

ಕೈಯಾಗ ಇಸ ಬಟ್ಲ ತೆಗೆದು ನೆಲಕ್ಕೆ ಒಡಿದು

ನೀವು ಓಡು ನಾ ಓಡು ಅಂತ ಆರು ಮಂದಿ ಒಡೆ ಬಂದರು

ನಿಜವಾಗಿ ಕಷ್ಟಪಟ್ಟವಳು ಸಿರಿದೇವಿ. ಆದರೆ ಇಲ್ಲಿ ದಾಸ ವೇಷದ ಪರಮಾತ್ಮನು ಸಂತಾನ ಕೊಡುತ್ತೇನೆಂದು ಕಿವಿಗೆ ಬಿದ್ದ ಕೂಡಲೇ ಓಡಿ ಬರುತ್ತಾರೆ. ತೋಟಕ್ಕೆ ಬಹಳ ಕಷ್ಟ ಪಡೆದವರು ಎನ್ನುವ ಸಾಲಿನಲ್ಲಿ ವಿಡಂಬನೆ ಇದೆ. ಕೆಲಸಕ್ಕೆ ಹಿಂದೆ ಊಟಕ್ಕೆ ಮುಂದೆ ಎನ್ನುವಂತೆ ಇಲ್ಲಿ ಆರು ಮಂದಿ ಹಿರಿಯ ರಾಣಿಯರು ಸಂತಾನ ಭಾಗ್ಯ ಬಯಸಿ ಓಡಿ ಬರುವ ಸನ್ನಿವೇಶವು ವಿಡಂಬನೆಯಿಂದ ಕೂಡಿದೆ.

**೨. ಹಾಸ್ಯ**

ಜನಪದ ಕಥನಕಾವ್ಯಗಳಲ್ಲಿ ಹಾಸ್ಯಪ್ರಜ್ಞೆಯನ್ನು ಕಾಣುತ್ತೇವೆ. ಇಲ್ಲಿನ ಹಾಸ್ಯಕ್ಕೆ ಮೂಲ ಅವಿವೇಕತನ, ಮೂರ್ಖತನವಾಗಿರುತ್ತದೆ. ಬುರ್ರಕತೆಗಳು ದೀರ್ಘವಾಗಿ ಬೆಳೆದುಕೊಂಡು ಜನರಿಗೆ ಮನರಂಜನೆಯನ್ನು ಒದಗಿಸಿ, ಅವರನ್ನು ಎಚ್ಚರಿಸುವ ದೃಷ್ಟಿಯಿಂದ ಹಾಸ್ಯವು ಕತೆಗಳಲ್ಲಿ ಬಂದಿರುವುದನ್ನು ಕಾಣಬಹುದು. ಹಾಸ್ಯವನ್ನು ಸಹ ಬುರ್ರಕತೆಗಳಲ್ಲಿ ಸಮರ್ಥವಾಗಿ ಭಾಷೆಯ ಮೂಲಕ ಅಭಿವ್ಯಕ್ತಿಸಿದ್ದಾರೆ.

ಕಾಂಭೋರಾಜಕತೆಯಲ್ಲಿ ಪ್ರಾಣಿಗಳ ನಿರೂಪಣೆಯಲ್ಲಿ ಹಾಸ್ಯ ತುಂಬಿದೆ. ಈ ಕತೆಯಲ್ಲಿ ಬರುವ ಹುಲಿ, ನರಿ, ಕರಡಿ, ಬೆಕ್ಕು ಇವುಗಳಲ್ಲಿ ಹಾಸ್ಯದ ಹೊನಲಿದೆ. ಸುಂದರಮ್ಮ ತನ್ನ ನಾಟ್ಯಕ್ಕೆ ಈ ಪ್ರಾಣಿಗಳನ್ನು ಬಳಸುತ್ತಾಳೆ. ಇವುಗಳಿಂದ ಗಂಡಸರನ್ನು ಗೆಲ್ಲುತ್ತಿದ್ದಳು.

ತಾಳಮೇಳ ಬಾರಿಸುವವರು

ಹುಲಿಗಿ ಉಪ್ಪಂಗಿ ಕೊಟ್ಟಳ

ಕರಡಿಗಿ ಮದ್ದಲಿ ಕೊಟ್ಟಳ

ಕೋತಿಗೆ ರಾಗ ತೆಗಿತದ

ಬೆಕ್ಕಿನ ತಲಿಮ್ಯಾಲ ದೀಪ ಇಟ್ಟಳ

ತನ್ನ ನಾಟ್ಯಕ್ಕೆ ಬಳಸಿಕೊಂಡ ಸುಂದರಮ್ಮ ಕೊನೆಗೆ ಶರಬಂಧರಾಜಕುಮಾರನ ತಂತ್ರಕ್ಕೆ ಈ ಪ್ರಾಣಿಗಳು ಮಾರು ಹೋಗಿ ತಾಳ ಮೇಳ ನಿಲ್ಲಿಸುತ್ತವೆ. ಇದರಿಂದ ಸುಂದರಮ್ಮ ಸೋತು ಸುಣ್ಣವಾಗುತ್ತಾಳೆ. ಅವಳ ಅದ್ದೂರಿಯಾದ ಶೃಂಗಾರ, ನಾಟ್ಯದ ತಯಾರು, ಪ್ರಾಣಿಗಳ ತುಂಟತನದಿಂದ ಸುಂದರಮ್ಮನು ಸೋಲುವ ಪ್ರಸಂಗ ಹಾಸ್ಯ ತರುತ್ತದೆ.

ಶರಬಂಧರಾಜಕುಮಾರ ಬಡಿಗೇರ ಮೋನಯ್ಯನ ಹೇಳಿಕೆಯಂತೆ ಪ್ರಾಣಿಗಳಿಗೆ ಹುಲಿಗೆ-ಗೊಸ್ತ, ಕರಡಿಗೆ-ಕಡಬುಗುಗ್ಗರಿ, ನರಿಗೆ-ಬಾರಿಹಣ್ಣು, ಕೋತಿಗೆ-ಬೆಲ್ಲ, ಪುಟಾಣಿ, ಬೆಕ್ಕಿಗೆ-ಚಿಕ್ಕದಾದ ಇಲಿ ಇವೆಲ್ಲವುಗಳನ್ನು ಅವುಗಳ ಮುಂದೆ ಹಾಕಿದಾಗ ಅವು ತಮ್ಮ ತಾಳಮೇಳ ಬಿಟ್ಟು ತಿನ್ನುವುದರಲ್ಲಿ ಮಗ್ನವಾಗುತ್ತವೆ. ಈ ಸನ್ನಿವೇಶವು ಹಾಸ್ಯದ ಹೊನಲು ತರುತ್ತದೆ.

ಎಲೆಗಳಲ್ಲೇ ಊಟ ಮಾಡುವ ಮಹಾಭೂತರಾಜನಿಗಾಗಿ ಜೀರ್ಣನಾಗಮ್ಮ ಮುತ್ತುಗದ ಎಲೆಗಳನ್ನು ತರಲು ಅಡವಿಗೆ ತೆರಳುತ್ತಾಳೆ. ಆದರೆ ಬಾಲಗಿರಿರಾಜನ ಯುದ್ಧದಲ್ಲಿ ಹತವಾಗಿದ್ದವರು ದೆವ್ವಗಳಾಗಿದ್ದರೆಂಬ ನಂಬಿಕೆ ಒಂದು ಕಡೆ. ಇದರಿಂದ ಭಯ ಇನ್ನೊಂದು ಕಡೆ. ಆ ಭಯದ ನೆರಳಲ್ಲಿ ಅಡವಿ ಸೇರುತ್ತಾಳೆ. ಬಾಲಗಿರಿರಾಜ ತನ್ನದೇಶಕ್ಕೆ ಹೊರಡದೆ ಒಂದು ದೊಡ್ಡ ಮುತ್ತುಗದ ಗಿಡದ ಮೇಲೆ ವಾಸಿಸಿರುತ್ತಾನೆ. ಮುದುಕಿ ಜೀರ್ಣನಾಗಮ್ಮ ಅದೇ ಗಿಡದ ಹತ್ತಿರ ಬಂದು ಆ ಗಿಡದ ಎಲೆಗಳನ್ನು ಒಂದೊಂದು ಕೀಳಲು ಹರಸಾಹಸ ಮಾಡುತ್ತಾಳೆ. ಇದನ್ನು ಗಮನಿಸಿದ ಬಾಲಗಿರಿರಾಜಕುಮಾರನು ಮುದುಕಿಯನ್ನು ಕಂಡುಹಿಡಿದು ಗಿಡದ ಮೇಲಿಂದ ಎಲೆಗಳನ್ನು ಒಂದೊಂದು ಕಿತ್ತು ಕೆಳಗೆ ಹಾಕುತ್ತಾನೆ. ಆ ಸನ್ನಿವೇಶವು ಕುತೂಹಲಭರಿತ ಹಾಸ್ಯವಾಗಿ ಚಿತ್ರಿತಗೊಂಡಿದೆ.

ಮುದುಕಿ ಅಕ್ಕಡಿ ಇಕ್ಕಡಿ ತಿರುಗಿ ನೋಡಿದಳು
ಗಾಳಿಗೆ ಬಿದ್ದದ ಎಲೆ ಅಂತಂದ್ಹು
ಅವೀಸು ಎಲೆ ತಗೊಂಡು
ಕುಂಚಿಗಿಯೊಳಗ ಹಾಕಿಕೊಂಡು
ಗಂಟು ಕಟ್ಟಿಕೊಂಡು ತಲಿಮ್ಯಾಲ ಹೊತ್ತುಕೊಂಡು
ಮುಂದಕ್ಕೆ ಮೂರು ಹೆಜ್ಜೆ ಇಟ್ಟಳು
ಮ್ಯಾಲ ಕುಂತ ಮೊಮ್ಮಗ ಪಾಡ ನೋಡಿ
ಏ ಆಯಿ ಜೀರ್ಣನಾಗಮ್ಮ ನಾ ಬರ್‍ತಿನಿ ಎತ್ತಿಕೊಂಡು ಹೋಗು
ಓಯಮ್ಮ ದೆವ್ವದ ಮ್ಯಾಲ ಮಣ್ಣು ಸುರುವಲಿ
ಎಲಿ ಒಳಗ ಕುಂತಾದ
ನಾನು ಬರ್‍ತಿನಿ ಎತ್ತಿಕೊಂಡು ಹೋಗಂತದ

ಓಯಮ್ಮ ಹೆಸರು ಇಟ್ಟು ನನ್ನ ಕರಿತದ

ತಲಿಮ್ಯಾಲ ಗಂಟು ದಪ್ಪನ ಕೆಳಗೆ ಹಾಕ್ಯಳ

ಮುದುಕಿ ಮೊಳದೋಟು ಕಟಿಗಿ ತಗೊಂಡು

ಗಂಟಿನ ಚೆಲ್ಲಿಗಿ ಬಂದು ಗಂಟು ಬಿಚ್ಚಿ

ಒಂದೊಂದು ಎಲಿ ಕೈಲಿ ಹಿಡಕೊಂಡು

ಓ ದೆವ್ವ ಇದ್ದಿದ್ಯ ಹೋಗಿದ್ಯ ಅಂತಳ

ಪಟ ಪಟ ಬಡಿತಾಳ

ಇದರಂತಲೇ ಎಲಿ ಎಲ್ಲ ಹೊಡೆದು

ಈ ಸನ್ನಿವೇಶದಲ್ಲಿ ಬಾಲಗಿರಿರಾಜಕುಮಾರ ಹಾಗೂ ಜೀರ್ಲನಾಗಮ್ಮ ಮಧ್ಯ ತುಂಬಾ ಸಮಯ ವಾಗ್ವಾದ ನಡೆಯುತ್ತದೆ. ಇಲ್ಲಿ ಜೀರ್ಲನಾಗಮ್ಮ ದೆವ್ವ ಎಂಬ ಭ್ರಮೆಯಿಂದ ಮಾತಾಡುತ್ತಾಳೆ. ತಾನು ದೆವ್ವದ ಜೊತೆಗೆ ಮಾತಾಡುತ್ತಿದ್ದೇನೆ ಎಂಬ ಭ್ರಮೆಯಿರುತ್ತದೆ. ತಾನು ಆರಿಸಿಕೊಂಡ ಕುಂಚಿಗೆಯಲ್ಲಿ ಹಾಕಿಕೊಂಡಿದ್ದ ಎಲೆಗಳನ್ನು ಒಂದೊಂದು ತೆಗೆದು ಕಟ್ಟಿಗೆಯಿಂದ ಹೊಡೆದು ಹೊಡೆದು ಹೋದೆಯಾ ದೆವ್ವ ಎನ್ನುವ ಅವಳ ಮಾತಿನಲ್ಲಿ ಆ ಸಂಭಾಷಣೆಯು ಹಾಸ್ಯದಿಂದ ಕೂಡಿದೆ. ಇಲಿಗೆ ಪ್ರಾಣ ಸಂಕಟ ಬೆಕ್ಕಿಗೆ ಚೆಲ್ಲಾಟ ಎನ್ನುವ ಹಾಗೆ ಆ ಮುದುಕಿಗೆ ದೆವ್ವದ ಭ್ರಮೆಯಿಂದ ಪ್ರಾಣಸಂಕಟದಲ್ಲಿ ಸಿಲುಕಿ ಒದ್ದಾಡುತ್ತಾಳೆ. ಬೆಕ್ಕಿನ ಚೆಲ್ಲಾಟದಂತೆ ರಾಜಕುಮಾರನಿಗೆ ಮುದುಕಿಯ ಕೂಗು, ಅವಳು ಕುಣಿಯುವ ಮೋಜು ನೋಡಿ ಚೆಲ್ಲಾಟವಾಡುತ್ತಾನೆ. ಈ ಇಬ್ಬರ ನಡುವಿನ ಚೆಲ್ಲಾಟದಲ್ಲಿ ಹಾಸ್ಯಪ್ರಜ್ಞೆ ವ್ಯಕ್ತವಾಗಿದೆ.

ಬಾಲಗಿರಿರಾಜಕತೆಯಲ್ಲಿ ಕುರುಡಿ ಪೋಲವ್ವ ಪಾತ್ರವು ಸಹ ಹಾಸ್ಯದಿಂದ ಕೂಡಿದೆ. ಪದ್ಮರಾಣಿ ಎಂದು ಹೇಳಿಕೊಂಡು ಸುಖವನ್ನು ಭೋಗಿಸುವ ಪೋಲವ್ವ ಕೊನೆಗೆ ಸಂಕಷ್ಟಕ್ಕೆ ಈಡಾಗುತ್ತಾಳೆ. ರಾಜ ಯಮನಂದಗಿರಿರಾಜನು ತನ್ನ ಮಗ ಬಾಲಗಿರಿರಾಜಕುಮಾರನಿಗೆ ಗೆದ್ದು ತಂದ ಪದ್ಮರಾಣಿ ಜೊತೆ ಮದುವೆ ಮಾಡಲು ಮನೆಗೆ ಕರೆತರಲು ರಾಜನ ಕೈ ಕೆಳಗಿನವರನ್ನು ಕಳಿಸಿರುತ್ತಾನೆ. ಕರೆತರಲು ಹೋದವರು ಮತ್ತು ಪೋಲವ್ವಳ ನಡುವೆ ನಡೆಯುವ ಸಂವಾದವು ಹಾಸ್ಯಮಯವಾಗಿ ಬಂದಿದೆ.

ಹತ್ತು ಮಂದಿ ಮನೆಯ ಒಳಗೆ ಬಂದು

ವರುಸದ ಮ್ಯಾಲೆ ಕುಂತಾಕಿನ

ಕೈ ಹಿಡಿದರ ಕೆಳಗೆ ಜಟಗಿ ಹೊಡ್ನದ

ಎಮ್ಮೆಗೊಡ್ಡು ಬಿದ್ದಂಗೆ ಕೆಳಗ ಬಿದ್ದಳ

ಅವ ಒಂದು ಗುದ್ದು ಗುದ್ದುತಾನ

ಇವ ಒಂದು ಗುದ್ದು ಗುದ್ದುತಾನ

ದೊಬ್ಬಿಕಂತ ದೊಬ್ಬಿಕಂತ ಮ್ಯಾನದ ಬೆಲ್ಲಿಗಿ ತಂದರ

ಮ್ಯಾನದಗ ಕುಂದ್ರಿಸಲಿಕ್ಕೆ ಹೋದರ

ಕಾಲು ಹಿಡಿಯುವಲ್ಲುವು ಕೈ ಹಿಡಿಯುವಲ್ಲುವು

ಅಂಗ ಇಂಗ ಮಾಡಿ ಮ್ಯಾನದಗ ತುರುಕಿದರು

ಹತ್ತು ಮಂದಿ ಹೊತ್ತು ಕೊಂಡು ಹೊಗ್ತರ

ವಜ್ಜಿ ಆದಗಳಿಗೆ ದಪ್ಪನ ಕೆಳಗೆ ಒಕ್ಕೊಡ್ತರ

ಆಯಿಕಂತ ಮ್ಯಾನ ಹೊತ್ತುಕೊಂಡು

ಕಚೇರಿ ಮುಂದ ತಂದು ಎತ್ತಿ ಹೊಕ್ಕೊಟ್ರು

ರಾಜನ ಕೈ ಕೆಳಗಿನವರು ಹತ್ತು ಮಂದಿ ಪೋಲವ್ವಳನ್ನು ಹೊತ್ತುಕೊಂಡು ಬರುವ ಸನ್ನಿವೇಶದಲ್ಲಿ ಭಾಷೆಯ ಬಳಕೆ ಅಚ್ಚುಕಟ್ಟಾದ ಹಾಸ್ಯವಾಗಿ ಮೂಡಿದೆ. ಬಾಲಗಿರಿರಾಜಕುಮಾರನಿಗೆ ಮೋಸ ಮಾಡಿ ತಾನೇ ಪದ್ಮರಾಣಿ ಎಂದು ಹೇಳಿಕೊಂಡು ತಿಂದು ಕೊಬ್ಬಿ ಹೋಗಿರುತ್ತಾಳೆ. ಅವಳನ್ನು ಪಲ್ಲಕ್ಕಿಯಲ್ಲಿ ಕೂಡಿಸಲು ಹರಸಾಹಸ ಮಾಡುವಲ್ಲಿಯೇ ಹಾಸ್ಯಪ್ರಜ್ಞೆ ವ್ಯಕ್ತವಾಗಿದೆ. ಅವಳಿಗೆ ಎಲ್ಲರೂ ಒಂದೊಂದು ಏಟನ್ನು ಕೊಡುವುದು, ಅವಳನ್ನು ದಪ್ಪನೆ ಕೆಳಗೆ ಹಾಕಿ ಮತ್ತೆ ಎತ್ತಿಕೊಂಡು ಹೋಗುವುದು, ಅವಳ ಆಕಾರ ಮುಂತಾದ ಅಂಶಗಳು ಹಾಸ್ಯಮಯವಾಗಿ ಬಂದಿದೆ.

### ಕತೆಯ ಶೈಲಿ

ಬುರ್ರಕತೆಗಳ ಧಾಟಿಯು ಗದ್ಯ ಪದ್ಯ ಮಿಶ್ರಿತ. ಇದನ್ನು ಸರಳ ಚಂಪೂ ಎಂದು ಹೇಳಬಹುದು. ಕತೆಯನ್ನು ಸಂದರ್ಭಾನುಸಾರ, ಸನ್ನಿವೇಶಕ್ಕನುಗುಣವಾಗಿ ಅದರ ಧಾಟಿಯನ್ನು ಬದಲಾವಣೆ ಮಾಡಿಕೊಳ್ಳುತ್ತಾರೆ. ಯುದ್ಧ ಸಂದರ್ಭದ ಧಾಟಿಯೇ ಬೇರೆಯಾಗಿರುತ್ತದೆ. ಜೋಗುಳ ಸನ್ನಿವೇಶ, ಮದುವೆಯ ಸನ್ನಿವೇಶ, ಶೋಕದ ಸನ್ನಿವೇಶ ಮುಂತಾದ ಸಂದರ್ಭದಲ್ಲಿ ಕತೆಯ ಧಾಟಿ ಭಿನ್ನವಾಗಿ ನಿರೂಪಣೆಗೊಂಡಿರುತ್ತದೆ.

ಕತೆಯನ್ನು ಪ್ರಾರಂಭದಲ್ಲಿ ಹಾಡುವಾಗ ಮೊದಲು ಹಿಮ್ಮೇಳದ ಅರ್ಭಟದಿಂದ ಕೂಡಿರುತ್ತದೆ. ಆಯಾ ಸನ್ನಿವೇಶವು ಶ್ರೋತೃಗಳನ್ನು ತನ್ನೆಡೆಗೆ ಸೆಳೆದುಕೊಳ್ಳುವ ತಂತ್ರವಾಗಿರುತ್ತದೆ. ಯುದ್ಧದ ಸನ್ನಿವೇಶ ಬಂದಾಗ ಏರು ಧ್ವನಿಯಲ್ಲಿ ನಿರೂಪಣೆ ಪಡೆದಿರುತ್ತದೆ. ಇಲ್ಲಿ 'ಬಳಿ ಬಳೀ ಬಳಲೇನು' ಎಂಬ ಪಲ್ಲವಿಯು ಯುದ್ಧದ ಧ್ವನಿಯನ್ನು ತಿಳಿಸುತ್ತದೆ. ಆ ಧಾಟಿಯು ಆವೇಶಭರಿತವಾಗಿದ್ದು ಕೇಳುಗರನ್ನು ಸಹ ಆವೇಶ, ಉದ್ವೇಗಕ್ಕೆ ಒಳಗಾಗುವಂತೆ ಮಾಡುತ್ತದೆ.

ಬಳಿ ಬಳೀ ಬಳರಾನು ಬಳನೇಡು

ದಂಡಿ ಒಳಗೇನ ಮಗ ಎನ್ನ ಎಗರೇನ

ಆ ಸಿದ್ದಿ ಮಂದಿ ಹೋಗಿ

ಸಿಪಾಯಿ ದಂಡು

ಎಡಕಡಿಗಿ ಕಡಿದರೆ ಬಲಕಡಿಗಿ ಬರ್ತರ

ಬಲಕಡಿಗಿ ಕಡಿದರೆ ಎಡಕಡಿಗಿ ಬರ್ತರ (ಶಂಕ್ರಮ್ಮ, ಬಾಲಗಿರಿರಾಜಕತೆ)

ಈ ಸಾಲುಗಳು ಆರಂಭದ ಪಲ್ಲವಿ ಧಾಟಿ ಯುದ್ಧದ ಸನ್ನಿವೇಶವನ್ನು ತಿಳಿಸುತ್ತದೆ. ಸಂದರ್ಭಾನುಸಾರ ಹಾಡಿನ ಧ್ವನಿಯು ಬದಲಾಗುತ್ತದೆ. ಯುದ್ಧದ ಸನ್ನಿವೇಶ ಮುಗಿದ ಕೂಡಲೆ ಮತ್ತೆ ಸಾಮಾನ್ಯ ಸರಳ ಧಾಟಿಯ ನಿರೂಪಣೆ ಕಾಣುತ್ತೇವೆ. ಇಲ್ಲಿ ಭಾಷೆಯ ಬಳಕೆ, ಆ ಸಂದರ್ಭದ ತಂತ್ರವು ಅಚ್ಚುಕಟ್ಟಾಗಿ ಅಭಿವ್ಯಕ್ತವಾಗಿದ್ದನ್ನು ಕಾಣಬಹುದು.

ಹಾಗೆಯೇ ಮಗು ಜನಿಸುವ ಸಂದರ್ಭವು ಸಹ ಯುದ್ಧದ ಧಾಟಿಯಲ್ಲಿ ನಿರೂಪಣೆಗೊಂಡಿದ್ದನ್ನು ನೋಡಬಹುದು.

ಬಳಿ ಬಳೀ ಬಳರಾನು ಬಳನೋಡು

ಅವರವರ ಏಡನ್ನ ಊರ ಗದ್ದಲ ಮಾಡಿ

ಕೇರಿ ಗದ್ದಲ ಮಾಡಿ (ಶಂಕ್ರಮ್ಮ, ಕಾಂಭೋಜರಾಜಕತೆ)

ಮಗು ಹುಟ್ಟುವ ಸನ್ನಿವೇಶವು ಸಹ ಯುದ್ಧಕ್ಕಿಂತ ಭಯಂಕರವಾದದ್ದು ಎನ್ನುವ ಅಂಶವು ಆ ಧಾಟಿಯಲ್ಲಿ ಕಂಡುಕೊಳ್ಳಬಹುದು. ಆ ಮಗು ಹುಟ್ಟುವಾಗ ಪ್ರಕೃತಿಯಲ್ಲಿ ಬದಲಾವಣೆ ಕಾಣುತ್ತದೆ. ಮೂಲೆಗಿದ್ದ ಮುದೇರು ಉರುಳಿಕೊಂಡು ಬಿದ್ದರು. ಕಚೇರಿ ಒಳಗ ಕುಳಿತ ತಂದೆಯನ್ನು ಕೆಳಗೆ ಹಾಕಿ ಮಗು ಹುಟ್ಟುತ್ತದೆಂದು ನಿರೂಪಣೆ ಬಂದಿದೆ. ಅಂದರೆ ಇಲ್ಲಿ ಜನಿಸುವ ಮಗು ಅಂತಿಂಥವನಲ್ಲ ಹುಟ್ಟುವಾಗಲೇ ತಾನು ಧೀರ, ವೀರ, ದುಷ್ಟರ ಶಿಕ್ಷಕ ಎನ್ನುವ ಹಾಗೆ ಅಭಿವ್ಯಕ್ತಗೊಂಡಿದೆ. ಮದುವೆಯ ಸನ್ನಿವೇಶದ ಧಾಟಿಯು ಸರಳ ಸುಂದರವಾಗಿ ವ್ಯಕ್ತವಾಗಿದೆ.

ಸಣ್ಣ ಬಾಲರಾಜಗ ಪದ್ಮರಾಣಿಗೆ ಶುಭಲಗ್ನ ಮಾಡ್ತರ

ಡಾಕಲೇ ಹೊಡೆದಾರವ್ವ ದಡಿಗಳು ಕಟ್ಟ್ಯಾರ

ನಿಂಬೆಯ ಹೊಡೆದು ನೆರಳಾಕ್ಯರ

ಐರೋಣ ಕೊಡಗಳು ಅವರು ಹೊಂದಿಸೇ ಇಟ್ಟ್ಯಾರ

ಸುಲಿಗಿ ಸುತ್ತ್ಯಾರ ನೀರು ಬೆರಿಸ್ಯಾರ

ಮೂರು ದಿವಸ ಮಾಡ್ಯರ ಅವರು ಈ ಮುದ್ದು ಲಗ್ನ

ಮುತ್ತುಗಳ ಸ್ಯಾಸೆಮ್ಮ ಇದು ವಜ್ರಗಳ ಸ್ಯಾಸೆಮ್ಮ

ಹದಿನಾರು ದಿನದಾಗ ಅವರ ಹಂದರೇನ ಇಳಿಸ್ಯಾರ (ಶಂಕ್ರಮ್ಮಳ ಬಾಲಗಿರಿರಾಜ ಕತೆ)

ಹೀಗೆ ಬುರ್ರಕತೆಗಳ ಹಾಡುಗಳು ಸಮಯ, ಸಂದರ್ಭ, ಸನ್ನಿವೇಶಕ್ಕೆ ಅನುಗುಣವಾಗಿ ಅವರ ಧಾಟಿ ವ್ಯಕ್ತವಾಗಿದೆ. ಈ ಸನ್ನಿವೇಶವನ್ನು ರಾಗಬದ್ಧವಾಗಿ ಅಂತ್ಯಪ್ರಾಸದಲ್ಲಿ ಹಾಡಿದ್ದನ್ನು ಕಾಣಬಹುದು. ಇಲ್ಲಿ ಹಾಡುಗಳು ಸಹ ಆಡುಮಾತಿಗಿಂತ ಭಿನ್ನವಾಗಿಲ್ಲ. ಅದನ್ನು ಗದ್ಯದ ಜೊತೆಗೆ ಹೋಲಿಸಿದರೆ, ಅಷ್ಟೇನು ದೊಡ್ಡ ಪ್ರಮಾಣದಲ್ಲಿ ಅಂತರ ಕಾಣುವುದಿಲ್ಲ. ಬುರ್ರಕತೆಗಳು ಹಾಡುವಾಗ ಲಯ-ಧಾಟಿಯಿಂದ ಮಾತ್ರ ವ್ಯತ್ಯಾಸವನ್ನು ಕಾಣಬಹುದು. ಹಾಡಿದ ನಂತರ ಗದ್ಯದಲ್ಲಿ ಸರಳವಾಗಿ ಮಾತಿನ ಶೈಲಿಯನ್ನು ನಿರೂಪಿಸಿದ್ದನ್ನು ಕಾಣುತ್ತೇವೆ.

**ಪ್ರಾಸ**

ಬುರ್ರಕತೆಗಳ ಹಾಡುಗಳು ಕೆಲವು ಸನ್ನಿವೇಶಕ್ಕನುಗುಣವಾಗಿ ಪ್ರಾಸಬದ್ಧವಾಗಿ ನಿರೂಪಿತಗೊಂಡಿದ್ದನ್ನು ನೋಡಬಹುದು. ಜನಪದದ ಕೆಲವು ಹಾಡುಗಳು ಪ್ರಾಸಬದ್ಧವಾಗಿ ರಚನೆಗೊಂಡಿದ್ದನ್ನು ಕಾಣುತ್ತೇವೆ. ಶಿಷ್ಟ ಕವಿಗಳು ಪ್ರಾಸವನ್ನು ಬಳಸಿದ್ದು ಕಾಣಬಹುದು. ಆದರೆ ಈ ಕತೆಯಲ್ಲಿ ಹಾಡಿದ ಹಾಡುಗಳು ಉದ್ದೇಶಪೂರ್ವಕವಾಗಿ ಪ್ರಾಸ ಬಳಸದೆ ಅದು ಸನ್ನಿವೇಶ ಸಂದರ್ಭಕ್ಕೆ ತಕ್ಕಂತೆ ಪ್ರಾಸ ತನ್ನಷ್ಟಕ್ಕೆ ತಾನೇ ಮೂರ್ತಗೊಂಡಿದೆ. ಪ್ರಾಸವು ತಕ್ಷಣ ಶ್ರೋತೃಗಳ ಮೇಲೆ ಪರಿಣಾಮ ಬೀರುವಂತಹುದು. ಪ್ರಾಸ ಇರುವ ಹಾಡುಗಳು ನೆನಪಿನಲ್ಲಿ ಉಳಿಯಲು ಸಹಾಯಕವಾಗುತ್ತವೆ. ಆದರೆ ಇಲ್ಲಿ ವ್ಯಕ್ತಗೊಂಡ ಪ್ರಾಸ ಸಹಜವಾದುದು.

ಬಾಲಗಿರಿರಾಜಕುಮಾರನು ಯುದ್ಧ ಮಾಡುವ ಸನ್ನಿವೇಶವು ಈ ರೀತಿಯಾಗಿ ನಿರೂಪಣೆಗೊಂಡಿದೆ.

ಮಗ ಕುಪ್ಪಳಿಸಿ ಎಗರ್‍ಯಾನ
ಬಾಲನೆ ಹಿಡಿತಾನ
ಗರಗರ ತಿರುವುತಾನ
ನೆಲಕ್ಕೆ ಹಾಕಿ ಹೊಡಿತಾನ
ಎದಿಮ್ಯಾಲ ಕಾಲಿಟ್ಟು ರುಂಡನೆ ತೆಗಿತಾನ
ಚಂಡಾಡುತಾನ (ಶಂಕ್ರಮ್ಮ, ಬಾಲಗಿರಿರಾಜಕತೆ)

ಇಲ್ಲಿ ಅಂತ್ಯಪ್ರಾಸವಿರುವುದನ್ನು ಗಮನಿಸಬಹುದು. ಪದಗಳ ಜೋಡಣೆ, ಕ್ರಮಬದ್ಧವಾದ ಪ್ರಾಸವು ಲಯವನ್ನು ಪೋಷಿಸಿದೆ.

ಪದ್ಮರಾಣಿಯು ಸತ್ತ ಗಂಡನ ತಲೆಯ ಮೇಲೆ ಹೊತ್ತುಕೊಂಡು ಅರಣ್ಯದಲ್ಲಿ ನಡೆದುಕೊಂಡು ಹೋಗುವಾಗ ತನಗೆ ಒದಗಿದ ಸಂಕಷ್ಟದಿಂದ ಶಿವನನ್ನು ಶಪಿಸುವ ಸನ್ನಿವೇಶ ಈ ರೀತಿ ವ್ಯಕ್ತವಾಗಿದೆ.

ಬೆಟ್ಟವೇರಿ ಬೆಟ್ಟ ಇಳಿತಾಳ
ಗುಡ್ಡವೇರಿ ಗುಡ್ಡ ಇಳಿತಾಳ

ಪದ್ಮರಾಣಿ ಕಾರಕಂಟಿ ಬನದಾಗ ಬರುತಾಳ

ಅರಣ್ಯದಾರಿ ಹಿಡಿದಳ

ಹನ್ನೆರಡು ಹರದಾರಿ ಬಂದಳ

ಅರಣ್ಯದೊಳಗ ಏನಂತ ದುಃಖ ಮಾಡ್ತಳ

ಜಗದೀಶ ನಿನ್ನ ಉರಿಗಣ್ಣು ಉಚ್ಚಿಬೀಳಲಿ

ಗಜಶೂಲ ಮುರಿದು ಬೀಳಲಿ

ಎಡಕ್ಕೆ ವೀರಭದ್ರ ಸಾಯಲಿ

ಬಲಕ್ಕೆ ಗಣೇಶ ಸಾಯಲಿ

ತೊಡಿಮ್ಯಾಲ ಪಾರ್ವತಿ ನಿನಗ ಬಳಿ ಹೊತ್ತಲಿ

ಜಡಿಯೊಳಗ ಗಂಗಾದೇವಿ ಉರಿದು ಹೋಗಲಿ

ಬೆಳ್ಳಿ ಮಠಕ ಬೆಂಕಿ ಹಚ್ಚಲಿ

ಬಂಗಾರು ಮಠಕ ಮಣ್ಣು ಸುರುವಲಿ (ಶಂಕ್ರಮ್ಮ, ಬಾಲಗಿರಿರಾಜಕತೆ)

ತನ್ನ ಕಷ್ಟದ ಸಂದರ್ಭದಲ್ಲಿ ಶಪಿಸುವ ಪದ್ಮರಾಣಿ ಪರಮಾತ್ಮನನ್ನೇ ಶಪಿಸುತ್ತಾಳೆ. ದುಃಖದ ಸನ್ನಿವೇಶವು ಸಹ ಪ್ರಾಸಬದ್ಧವಾಗಿ ಬಂದಿದೆ. ಈ ಅಂತ್ಯಪ್ರಾಸದ ಸನ್ನಿವೇಶವು ಕೇಳುಗರಿಗೆ ಹಿತವಾಗುತ್ತದೆ. ತೊಡಿಮ್ಯಾಲ ಜಡಿಯೊಳಗ ಎಂಬಲ್ಲಿ ಆದಿಪ್ರಾಸದ ಬಳಕೆಯನ್ನು ಗಮನಿಸಬಹುದು.

ಸುಂದರಮ್ಮನ ನಾಟ್ಯಕ್ಕಾಗಿ ಪ್ರಾಣಿಗಳು ಸಂಗೀತ ಸುಧೆಯನ್ನು ಪ್ರಚುರ ಪಡಿಸುವ ಸನ್ನಿವೇಶವು ಲಯ, ಪ್ರಾಸ ಹಾಗೂ ರಾಗಬದ್ಧವಾಗಿ ಅಭಿವ್ಯಕ್ತವಾಗಿದೆ.

ತಾಳಮೇಳ ತೈನಾತ ನಡದದ

ರಾಗದಾಟಿ ನಡೆದದ

ಹುಲಿ ಉಪ್ಪಂಗಿ ಊದುತದ

ಕರಡಿ ಮದ್ದಲಿ ಬಾರಿಸ್ತದ

ಕೋತಿ ತಾಳ ಬಾರಿಸ್ತದ

ಬೆಕ್ಕಿನ ತಲಿಮ್ಯಾಲ ದೀಪ ಇಟ್ಟದ

ಸುಂದರಮ್ಮ ಡ್ಯಾನ್ಸ್ ನಡ್ಸದ (ಶಂಕ್ರಮ್ಮ, ಕಾಂಭೋಜರಾಜಕತೆ)

ಈ ಪದ್ಯದಲ್ಲಿ ಸರಳ, ಸುಂದರ ನಿರೂಪಣೆ ಇದೆ. ಪ್ರಾಣಿಗಳು ಆ ಸನ್ನಿವೇಶಕ್ಕೆ ಬಂದು, ಪ್ರಾಣಿಗಳು ಮತ್ತು ಮಾನವ ಸಂಬಂಧದ ಸನ್ನಿವೇಶ ಮನೋಜ್ಞವಾಗಿ ಇಲ್ಲಿ ವ್ಯಕ್ತಗೊಂಡಿದೆ. ಕತೆಯ ಪ್ರತಿಯೊಂದು ಸನ್ನಿವೇಶವು ಕೇಳುಗರಲ್ಲಿ ಮತ್ತೆ ಮತ್ತೆ ಕೇಳಬೇಕೆಂಬ ಹಂಬಲವನ್ನು ಹುಟ್ಟಿಸುತ್ತದೆ.

ಸುಂದರಮ್ಮ ನಾಟ್ಯ ಮಾಡಲು ತಯಾರಾಗುವ ಸಂದರ್ಭದಲ್ಲೂ ಪ್ರಾಸ ಬಂದಿದೆ.

ಸುಂದರಮ್ಮ ಮುತ್ತಾಕಿದ ಸೀರೆ ಉಟ್ಕೊಂಡು

ಮುತ್ತಾಕಿದ ಕುಬಸ ತೊಟಕೊಂಡು

ವಸ್ತ್ರ ವಡವಿ ಮೈ ತುಂಬ ಇಟಕೊಂಡು

ಕಾಲಿಗೆ ಗೆಜ್ಜೆ ಕಟಕೊಂಡು (ಶಂಕ್ರಮ್ಮ, ಕಾಂಭೋಜರಾಜಕತೆ)

ಸುಂದರಮ್ಮಳ ಸೌಂದರ್ಯದ ವರ್ಣನೆ ಸಹ ಪ್ರಾಸಬದ್ಧವಾಗಿ ಬಂದಿದೆ. ಇಲ್ಲಿ ಕತೆಗಾರರ ಪ್ರತಿಭೆ, ಅವರ ಅನುಭವವನ್ನು ಕಾಣುತ್ತೇವೆ. ಇಲ್ಲಿ ಜನಪದರ ಪ್ರಾಸಗಳಿಂದಲೇ ಹಾಡಿನ ಮೃದುತ್ವ ಗುಣಗಳು ಹೊರಬಂದು ಶ್ರೋತೃಗಳಿಗೆ ಇಂಪಾದ ಧ್ವನಿ ನೀಡುತ್ತವೆ.

## ವರ್ಣನೆ

ಇಲ್ಲಿನ ಬುರ್ರಕತೆಗಳಲ್ಲಿ ಪ್ರತಿಯೊಂದು ಪಾತ್ರದ ವರ್ಣನೆಯು ಸೊಗಸಾಗಿ ಚಿತ್ರಿತವಾಗಿದೆ. ಶಿಷ್ಟ ಕಾವ್ಯದಂತೆ ಜನಪದ ಬುರ್ರಕತೆಯ ಹಾಡುಗಳಲ್ಲಿ ಜನಪದ ಹಿನ್ನೆಲೆಯಲ್ಲಿ ಅಲಂಕಾರ, ಉತ್ಪ್ರೇಕ್ಷೆ ಅಭಿವ್ಯಕ್ತವಾಗಿದೆ.

ಕಾಂಭೋಜರಾಜನು ತನ್ನ ಬಾವಿಯಲ್ಲಿ ನೀರಿನ ಸೆಲೆ ಹೊರಹೊಮ್ಮಿದಾಗ ಆ ಸನ್ನಿವೇಶದ ವರ್ಣನೆಯನ್ನು ನೋಡಬಹುದು.

ರಾಜ ಚಾಲು ತೆಗೆದು ಬಾವಿ ಕಡೆಗೆ ನೋಡಿದ

ಬಾವಿ ತುಂಬ ನೀರು ಬಿದ್ದವ

ಟೆಂಗು ಹಾಲು ಬಿದ್ದಂಗ (ಶಂಕ್ರಮ್ಮ, ಕಾಂಭೋಜರಾಜಕತೆ)

ಇಲ್ಲಿ ವ್ಯಕ್ತವಾದ ಬಾವಿಯ ನೀರು 'ತೆಂಗಿನ ಹಾಲಿಗೆ' ಹೋಲಿಸಲಾಗಿದೆ. ನೀರು ಅಷ್ಟು ಪರಿಶುದ್ಧವಾಗಿವೆ ಎನ್ನುವ ಭಾವವು ಈ ಪದ್ಯದಲ್ಲಿ ವ್ಯಕ್ತವಾಗಿದೆ.

ಪದ್ಮರಾಣಿಯ ಭಾವಚಿತ್ರವನ್ನು ನೋಡಿ ಮೋಹಗೊಳ್ಳುವ ಬಾಲಗಿರಿರಾಜಕುಮಾರನು ತಾನು ಓದುತ್ತಿರುವ ಪತ್ರದ ಮೇಲೆ ಬಿದ್ದು ಮೂರ್ಛೆಗೊಳ್ಳುತ್ತಾನೆ.

ಸೂರ್ಜಗನ್ನ ಭಿನ್ನವಾದ

ಭಿನ್ನವಿಲ್ಲದ ಬಿಚಾರಿಚಾಲು

ಹೆಣ್ಣುಮಗಳು (ಶಂಕ್ರಮ್ಮ, ಬಾಲಗಿರಿರಾಜಕತೆ)

ಪದ್ಮರಾಣಿಯನ್ನು ಸೂರ್ಯನಿಗೆ ಹೋಲಿಸುತ್ತ, ಸೂರ್ಯನಿಗಿಂತ ಅತ್ಯಂತ ಪ್ರಕಾಶಮಾನವಾಗಿ ಪದ್ಮರಾಣಿಯ ಚಿತ್ರ ಕಂಡಿತು ಎನ್ನುವ ಭಾವವು ಇಲ್ಲಿದೆ. ಬುರ್ರಕತೆಗಳಲ್ಲಿ ಬರುವ ಪಾತ್ರಗಳ ವರ್ಣನೆ ಸೊಗಸಾಗಿದೆ.

ಬಾಲಗಿರಿರಾಜಕುಮಾರನು ಯುದ್ಧ ಮಾಡುವ ಸನ್ನವೇಶವನ್ನು ವೀರ, ಆವೇಶದಿಂದ ಕತೆಗಾರರು ವರ್ಣಿಸಿದ್ದಾರೆ.

ಬಳೆ ಬಳೇ ಬಳಲೇನು ಬಳಲೇಡು
ದಂಡಿನ ಒಳಗೇನ
ಮಗ ಕುಪ್ಪಳಿಸಿ ಏಗರ‍್ಯಾನ
ಬಾಲನೆ ಹಿಡಿತಾನ ಗರಗರ ತಿರುಗುತಾನ
ನೆಲಕೆ ಹಾಕಿ ಹೊಡಿತಾನ
ಎದಿಮ್ಯಾಲ ಕಾಲಿಟ್ಟು ರುಂಡನೆ ತೆಗಿತಾನ
ಚೆಂಡಾಡುತಾನ

ಕಥೆಗಾರರು ಈ ಯುದ್ಧದ ವರ್ಣನೆಯನ್ನು ಯುದ್ಧ ನಡೆದಿದೆಯೋ ಏನೋ ಎನ್ನುವಂತೆ ಅವರ ಆಂಗಿಕ ಅಭಿನಯದ ಮೂಲಕ ನಿರೂಪಿಸುತ್ತಾರೆ. ಆ ಒಂದು ಸನ್ನಿವೇಶವು ಕಥನದ ಶೈಲಿಯಿಂದ ಶ್ರೋತೃಗಳನ್ನು ಯುದ್ಧರಂಗಕ್ಕೆ ತೆಗೆದುಕೊಂಡು ಹೋಗುತ್ತಾರೆ. ಆ ಸನ್ನಿವೇಶದಲ್ಲಿ ವಕ್ತೃಗಳು ತಾವೇ ಯುದ್ಧ ಮಾಡುತ್ತೇವೆಯೋ ಎಂಬಂತೆ ಅವರ ಮುಖದಲ್ಲಿ ಕಾಣುವ ಭಾವಾವೇಶ ಇರುತ್ತದೆ. ಆಗ ಶ್ರೋತೃಗಳು ಮೂಖವಿಸ್ಮಿತರಾಗಿ ಕಥೆಯನ್ನು ಆಲಿಸುತ್ತಾರೆ. 'ಬಳೆ ಬಳೇ ಬಳಲೇನು ಬಳಲೇಡು' ಎನನಲ್ಟು ಸಾಲು ಯುದ್ಧದ ಸಂದರ್ಭವನ್ನು ತೋರಿಸುತ್ತದೆ. ಈ ಸನ್ನವೇಶದಲ್ಲಿ ಹಾಡುವ ಲಯವೇ ಯುದ್ಧವನ್ನು ಸೂಚಿಸುತ್ತದೆ. ಅಲ್ಲದೇ ಇಲ್ಲಿ ಬಳಕೆಗೊಂಡ ಪದಗಳೇ ವೀರಾವೇಶವನ್ನು ತೋರಿಸುತ್ತದೆ.

### ನಾಟಕೀಯತೆ

ಬುರ‍್ರಕತೆಗಳು ಗದ್ಯ-ಪದ್ಯ ಮಿಶ್ರಿತ ಶೈಲಿಯಲ್ಲಿ ಮೂರ್ತರೂಪ ಪಡೆದಿವೆ. ಅಧ್ಯಯನಕ್ಕೆ ಸಂಬಂಧಿಸಿದ ಕತೆಗಳಲ್ಲಿ ವೀರ, ಛಲ ಸಾಹಸಮಯವಾದ, ಕುತೂಹಲಭರಿತವಾದ ಸನ್ನಿವೇಶಗಳು ಅಡಗಿವೆ. ಇಲ್ಲಿ ಬಳಕೆಗೊಂಡಿರುವುದು ಪ್ರಾದೇಶಿಕ ಸೊಗಡು, ಗ್ರಾಮೀಣ ಸೊಗಡು. ಇಲ್ಲಿ ಬಳಕೆಗೊಂಡ ಭಾಷೆಯನ್ನು ನೋಡಿದಾಗ ನಿತ್ಯ ಬಳಸುವ ಶೈಲಿಯಾಗಿದ್ದು ಅದು ಮುಂದಿನ ತಲೆಮಾರಿಗೆ ಆ ಪರಂಪರೆಯನ್ನು ರವಾನಿಸುವ ಸಂವಹನವಾಗಿ ಕಾಣುತ್ತದೆ.

ಸಿರಿದೇವಿಯ ಮೇಲೆ ಅಪರಾಧ ಹೊರಿಸಿ ಸ್ಮಶಾನದಲ್ಲಿ ಗವಿ ಮಾಡಿ ಬಂಧನದಲ್ಲಿ ಇಟ್ಟಿರುತ್ತಾರೆ. ಪಾರ್ವತಿ ಅಪ್ಪಣೆಯ ಮೇರೆಗೆ ಪರಮಾತ್ಮ ಬಂದು ಅವಳಿಗೆ ತೊಡಿಸಿದ ಬೇಡಿಗಳನ್ನು ಬಂಗಾರ ಮಾಡಿ, ಅಲ್ಲೇ ಬಂಗಾರದ ಅರಮನೆಯನ್ನೇ ಹುಟ್ಟಿಸುತ್ತಾನೆ. ಆ ಸನ್ನಿವೇಶದಲ್ಲಿ ಇಬ್ಬರ ನಡುವೆ ನಡೆಯುವ ಸಂಭಾಷಣೆ, ಕಥಾತಂತ್ರವು ಬಂದಿದೆ.

ಸಿರಿದೇವಿ: ಪರಮಾತ್ಮನಲ್ಲಿಗೆ ಓಡಿ ಬಂದು

ಯಪ್ಪ ಪರಮಾತ್ಮ

ಯಾಕ ಕೊಟ್ಟೆಪ್ಪ ಸುಖ ಎಂಜಲಜಲ್ಮಕ

ನಿನ್ನಿಂದ ಬರ್‍ತೀನಿ ಕರಕೊಂಡು ಹೋಗು ತಂದಿ

ಪರಮಾತ್ಮ : ಮಗಳೇ ನಿನ್ನನ್ನು ಕರಕಂಡು ಹೋದರೆ

ಈ ಕತೆ ಇಲ್ಲಿಗೆ ಮುಗೀತದ

ಮುಂದೆ ಕತೆ ಸಾಗಲ್ಲ

ಮುಂದೆ ಕತೆ ನಿನ್ನಿಂದಲೆ ಸಾಗ್ತದ

ಬ್ಯಾಡಮ್ಮ ನಾನು ಹೇಳಿದಂತೆ ಮಾಡು

ನೀ ಚೆನ್ನಾಗಿ ಕೇಳು ಮಗಳೆ (ಶಂಕ್ರಮ್ಮ, (ಕನ್ನಡ) ಕಾಂಭೋಜರಾಜಕತೆ)

ಸಿರಿದೇವಿ-ಪರಮಾತ್ಮನ ಮಧ್ಯೆ ಸಂಭಾಷಣೆ ನಡೆಯುತ್ತದೆ. ಸಿರಿದೇವಿ ತನ್ನನ್ನು ಬದುಕಿಸಿದ್ದನ್ನು ಪ್ರತಿಭಟಿಸಿ, ಸತ್ತು ಹೋದ ಜನ್ಮ ಮತ್ತೆ ಹುಟ್ಟಿದ್ದುದು ಅದು ಎಂಜಲಕ್ಕೆ ಸಮ ನಿನ್ನಿಂದಲೇ ಬರುತ್ತೇನೆ ಎಂದು ಹೇಳುತ್ತಾಳೆ. ನಿನ್ನನ್ನು ಕರೆದುಕೊಂಡು ಕೈಲಾಸಕ್ಕೆ ಹೋದರೆ ಈ ಕತೆಯು ಮುಂದೆ ಸಾಗಲ್ಲ, ಅದು ನಿನ್ನಿಂದಲೇ ಕತೆ ಮುಂದುವರಿಯುವ ಸೂಚನೆ ಸಿಗುತ್ತದೆ.

ಕಾಂಭೋಜರಾಜಕತೆಯಲ್ಲಿ ನಾಟಕೀಯವಾಗಿ ಸಂಭಾಷಣೆಯ ಮೂಲಕ ವ್ಯಕ್ತವಾದದ್ದು ಈ ರೀತಿ ಇದೆ.

ಶರಬಂಧರಾಜ: ಮುತ್ತ್ಯಾ ಈ ದಾರಿ ಯಾವ ಊರಿಗೆ ಹೋಗ್ತದ? ಎಂದು ಪ್ರಶ್ನಿಸುತ್ತಾನೆ.

ಮಲ್ಲಣ್ಣ: ಇದು ಎದಿನಗಂಧಿ ಪಟ್ನಕ ಹೋಗ್ತದ, ಎಂದು ಹೇಳುತ್ತಾನೆ.

ಶರಬಂಧ: ಮುತ್ತ್ಯಾ ಎದಿನಗಂಧಿ ಪಟ್ನದೊಳಗ ಎದಿಗನಗಂಧಿ ತಂದೆ ಯಾರು? ಎಂದು ಪ್ರಶ್ನಿಸುತ್ತಾನೆ.

ಮಲ್ಲಣ್ಣ: ಬಕಾಸುರ.... ಬಕಾಸುರನ ಮಗಳು ಎದಿನಗಂಧಿ, ಆ ಎದಿನಗಂಧಿ ಪಟ್ನದೊಳಗ ಬಳಿಬುಡ್ಡಿಯೊಳಗ ಔಷಧ ಇರ್ತದ ಎಂದು ಹೇಳುತ್ತಾನೆ.

ಶರಬಂಧ: ಈ ದಾರಿ ಯಾವ ಊರಿಗೆ ಹೋಗ್ತದ ಮುತ್ತ್ಯಾ ಎಂದನು

ಮಲ್ಲಣ್ಣ: ಮಗನೆ ಈ ದಾರಿ ಚಿತ್ರಾಂಗ ಪಟ್ನಕ ಹೋಗ್ತದ ಎಂದು ಹೇಳುತ್ತಾನೆ.

ಶರಬಂಧ: ಚಿತ್ರಾಂಗದ ತಾಯಿ, ತಂದೆ ಆರೇನು ಮುತ್ತ್ಯಾ ಎಂದು ಪ್ರಶ್ನಿಸುವನು.

ಮಲ್ಲಣ್ಣ: ತಾಯಿ ಇಲ್ಲ ತಂದಿ ಇಲ್ಲ

ಎರಡು ಹುಲಿಗಳು ಸಣ್ಣ ಕೂಸು ಇದ್ದಾಗ

ತಂದು ಸಲವಿಕೊಂಡವ

ಗಂಡು ಹುಲಿ ಹೆಣ್ಣು ಹುಲಿ

ಅವೆ ತಾಯಿತಂದೆ ಚಿತ್ರಾಂಗದೆಗೆ

ಶರಬಂಧ: ಈ ಪಟ್ಟಣದ ದಾರಿ ಯಾ ಊರಿಗೆ ಹೋಗ್ತದ...

ಮಲ್ಲಣ್ಣ: ಪೂಲಾವತಿ, ರೂಪಾವತಿ ಪಟ್ನಕ ಹೋಗ್ತದ ಮಲ್ಲಿಗೆ ಹೂ ತೋಟದಾಗ, ನಾಗರಾಜ ಮಕ್ಕಳು ಘೂಲಾವತಿ, ರೂಪಾವತಿ ಎಂದು ಹೇಳಿದನು.

ಶರಬಂಧ: ಈ ದಾರಿ ಯಾವ ಊರಿಗೆ ಹೋಗ್ತದ ಎಂದು ಮತ್ತೆ ಕೇಳಿದನು.

ಮಲ್ಲಣ್ಣ: ಸುಂದರಮ್ಮ ಪಟ್ನಕ ಹೋಗ್ತದ (ಶಂಕ್ರಮ್ಮ, (ಕನ್ನಡ) ಕಾಂಭೋಜರಾಜಕತೆ)

ಇಲ್ಲಿ ಶರಬಂಧ ಹಾಗೂ ಅಡವಿ ಕಾಯುವ ಮಲ್ಲಣ್ಣ ಪಾತ್ರಗಳ ಮೂಲಕ ಈ ರೀತಿಯಾಗಿ ನಾಟಕೀಯ ಸಂಭಾಷಣೆಯು ಅಭಿವ್ಯಕ್ತವಾಗಿದೆ. ಈ ಎರಡು ಪಾತ್ರಗಳ ಮಧ್ಯದಲ್ಲಿ ನಡೆಯುವ ಈ ಸನ್ನಿವೇಶವು ನಾಟಕೀಯ ಶೈಲಿಯಿಂದ ಕತೆಗೆ ಕಳೆಗಟ್ಟಿದೆ.

ಹೀಗೆ ಬುರ್ರಕತೆಗಳ ಕಲಾವಿದರ ಭಾಷೆಯ ವಿವಿಧ ಸಾಧ್ಯತೆಗಳನ್ನು ಅರ್ಥಪೂರ್ಣವಾಗಿ ಬಳಸಿಕೊಂಡಿದ್ದಾರೆ. ಭಾಷೆಯ ಬಳಕೆಯ ಸೊಗಡು ಆಡುನುಡಿಗೆ ಸಮೀಪವಾಗಿದೆ. ಹಾಗೆಯೇ ಹೆಚ್ಚು ಜೀವಂತಿಕೆಯನ್ನು ಪಡೆದುಕೊಂಡಿದೆ. ಇದು ಕಲಾವಿದರ ಭಾಷಿಕ ಪ್ರಭುತ್ವವನ್ನು ಮತ್ತು ಸಮಕಾಲೀನ ಪ್ರಜ್ಞೆಯನ್ನು ಖಚಿತಪಡಿಸುತ್ತದೆ.

# ಅಧ್ಯಾಯ ೬

# ಸಮಾರೋಪ: ಬುರ್ರಕತೆ ಸಾಂಸ್ಕೃತಿಕ ಅನುಸಂಧಾನ ಕತೆ

ಬುರ್ರಕತೆ ಎನ್ನುವುದು ಒಂದು ಸಾಂಸ್ಕೃತಿಕ ಅನುಸಂಧಾನ ಕತೆ. ಈ ಕತೆಗಳು ತನ್ನ ಪರಿಸರಕ್ಕೆ ತಕ್ಕಂತೆ ಸಾಂಸ್ಕೃತಿಕ ಸಂಬಂಧಗಳನ್ನು ಅಳವಡಿಸಿಕೊಂಡ ಬಗೆಯನ್ನು ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ. ಜೊತೆಗೆ ಕತೆಯ ಆಂತರ್ಯದಲ್ಲಿ ಮಾನವೀಯ ಸಂವೇದನೆಗಳು ಅನುಸಂಧಾನ ನಡೆಸಿವೆ ಎಂಬುದನ್ನು ಪ್ರಸ್ತುತ ಪ್ರಬಂಧದಲ್ಲಿ ಗುರುತಿಸಲು ಯತ್ನಿಸಲಾಗಿದೆ.

ಜನಪದ ಕತೆಗಳು(ಕಾವ್ಯಗಳು) ಸಾಹಿತ್ಯದಲ್ಲಿ ಉನ್ನತ ಸ್ಥಾನ ಪಡೆದಿವೆ. ಫಿನ್‌ಲ್ಯಾಂಡ್, ಗ್ರೀಸ್, ಭಾರತ ಮುಂತಾದ ದೇಶಗಳ ಜನಪದ ಕಾವ್ಯಗಳು ಆಯಾ ದೇಶಗಳ ಸಂಸ್ಕೃತಿಯನ್ನು ಪ್ರತಿಬಿಂಬಿಸಿದವುಗಳಾಗಿವೆ. ಈ ಹಿನ್ನೆಲೆಯಲ್ಲಿ ಬುರ್ರಕತೆಗಳೂ ಸಹ ಸಂಸ್ಕೃತಿ, ಪರಂಪರೆ, ಸ್ವಾಭಿಮಾನ ಮುಂತಾದ ಅಂಶಗಳನ್ನು ಒಳಗೊಂಡಿವೆ. ಯಾವುದೇ ಒಂದು ಕಾವ್ಯ ಅಥವಾ ಕತೆಯೊಳಗಿನ ವಸ್ತು, ದೇಶದ ಸಾಂಸ್ಕೃತಿಕ ಆಗು ಹೋಗುಗಳ ಮೇಲೆ ಪರಿಣಾಮ ಬೀರಬಹುದು. ಈ ಕತೆಗಳಲ್ಲಿ ಬರುವ ಸಮಾಜದ ಒಳಹಾದಿಗಳು, ಬದುಕಿನ ಸತ್ಯಗಳು, ಮಾನವೀಯ ಸಂಬಂಧಗಳು, ಹುಟ್ಟು, ಸಾವು, ಶೋಕ, ಸಂಪ್ರದಾಯ, ನಂಬಿಕೆಗಳು ಮುಂತಾದವು ಜನತೆಯ ಮನೋಧರ್ಮವನ್ನು ಪ್ರತಿನಿಧಿಸುವ ಹಾಗೂ ಅಭಿವ್ಯಕ್ತಿಸುವ ಬಹುದೊಡ್ಡ ಮಾಧ್ಯಮವಾಗಿ ಹೊರಹೊಮ್ಮಿದ್ದನ್ನು ಕಾಣಬಹುದು. ಈ ಬುರ್ರಕತೆಗಳಲ್ಲಿ ಕಂಡುಬರುವ ಮಾನವೀಯ ಮೌಲ್ಯಗಳು, ಭಾಷಾಂತರ ಪ್ರಕ್ರಿಯೆ, ಕತೆಯ ಕಲಾತ್ಮಕತೆ ಮುಂತಾದ ಅಂಶಗಳಲ್ಲಿ ಕಲಾವಿದರ ಸಾಂಸ್ಕೃತಿಕ ತಿಳುವಳಿಕೆ, ಬೌದ್ಧಿಕ ಸಾಮರ್ಥ್ಯ ಹಾಗೂ ಅವರ ಪ್ರತಿಭೆಯ ಅಗಾಧತೆ ವ್ಯಕ್ತವಾಗುತ್ತದೆ.

ಬುರ್ರಕತೆಗಳು ಮೇಲ್ನೋಟಕ್ಕೆ ಕನ್ನಡ-ತೆಲುಗು ಎರಡೂ ಭಾಷೆಗಳಲ್ಲಿ ಪ್ರಕಟಗೊಳ್ಳುವ ಕಲಾರೂಪಗಳಾಗಿವೆ. ಅಧ್ಯಯನಕಾರರಿಗೆ ಇವೆರಡೂ ವಿಭಿನ್ನ ಭಾಷೆಗಳು. ವಿಭಿನ್ನ ಸಂಸ್ಕೃತಿಗಳ ಸಂದರ್ಭದ ಕತೆಗಳೆಂದು ಭಾಸವಾಗುತ್ತವೆ. ಆದರೆ ಎರಡು ಭಾಷಾ ಭೇದಗಳನ್ನು ಮರೆತು ಬುರ್ರಕತೆಗಳು ಅನೇಕ ಕಾರಣಗಳಿಗಾಗಿ

ಎರಡೂ ಸಂಸ್ಕೃತಿಗಳ ಅನುಸಂಧಾನದ ಕತೆಗಳಾಗಿ ಗೋಚರಿಸುತ್ತವೆ. ಈ ಕಾರಣಕ್ಕಾಗಿಯೇ ಬುರ್ರಕತೆಗಳು ಪರಂಪರಾಗತವಾಗಿ ಉಳಿದು ಬೆಳೆದುಕೊಂಡು ಬಂದಿವೆ. ಬುರ್ರಕತೆಗಳ ಆಶಯ, ನಿರೂಪಣೆಗಳ ನೆಲೆಯಿಂದ ಈಗಾಗಲೇ ಹಿಂದಿನ ಅಧ್ಯಾಯಗಳಲ್ಲಿ ವಿವರಿಸಿದ ಹಿನ್ನೆಲೆಯಲ್ಲಿ ಇವುಗಳನ್ನು ಪರಿಭಾವಿಸಬಹುದಾಗಿದೆ. ಬುರ್ರಕತೆಗಳು ಮಾನವೀಯತೆ, ಪ್ರಾದೇಶಿಕತೆ, ಭಾಷೆ, ಭಾಷಾಂತರ ಹಾಗೂ ಕಲಾತ್ಮಕತೆ ಎಂಬಿತ್ಯಾದಿ ನೆಲೆಗಳಲ್ಲಿ ಎರಡು ಸಂಸ್ಕೃತಿಗಳ ಅನುಸಂಧಾನದ ಕತೆಗಳಾಗಿ ಉಳಿದುಕೊಂಡಿವೆ.

ಪ್ರಸ್ತುತ ಅಧ್ಯಯನದಲ್ಲಿ ಕಂಡುಕೊಳ್ಳಲಾಗಿರುವ ಫಲಿತಗಳನ್ನು ಮುಂದೆ ವಿಸ್ತರಿಸಬಹುದು.

## ೧. ಮಾನವೀಯ ಸಂವೇದನೆಗಳು

ಜನಪದರ ಬದುಕಿನ ಮೌಲ್ಯಗಳೇ ಮಾನವೀಯ ಸಂಬಂಧಗಳು. ಜನಪದರ ಅಥವಾ ಕಥನಗಾರರ ಅನುಭವಗಳನ್ನು ಅವರು ಕಂಡುಂಡ ನೋವು-ನಲಿವುಗಳನ್ನು ಕತೆಗಳಾಗಿ ಹೊರಹೊಮ್ಮಿಸಿದ್ದಾರೆ. ಕತೆಗಳ ಮುಖಾಂತರ ಅಲ್ಲಿನ ಸಂಸ್ಕೃತಿಯನ್ನು ಮೌಖಿಕವಾಗಿ ದಾಖಲಿಸಿದ್ದಾರೆ. ಬುರ್ರಕತೆಗಳಲ್ಲಿ ಮಾನವೀಯ ಮೌಲ್ಯಗಳಿಗೆ, ಜಾತಿ ಧರ್ಮವನ್ನು ಮೀರಿ ನಿಂತ ಮನುಷ್ಯತ್ವಕ್ಕೆ ಹೆಚ್ಚು ಒತ್ತುಕೊಟ್ಟಿವೆ. ರಾಜ ರಾಣಿಯರ ಬಂಜೆತನದ ಅಳಲು ಮಕ್ಕಳ ಭಾಗ್ಯಕ್ಕಾಗಿ ಅನುಭವಿಸುವ ಯಾತನೆ ಹಾಗೂ ಹಂಬಲವು ವ್ಯಕ್ತವಾಗಿದೆ. ಹಾಗೆಯೇ ವಂಶೋದ್ಧಾರಕ್ಕಾಗಿ ತನ್ನ ಜೀವನವನ್ನು ಬಲಿ ಕೊಟ್ಟು, ಮಕ್ಕಳನ್ನು ಹೆತ್ತು ತನ್ನ ಬಯಕೆಯನ್ನು ಈಡೇರಿಸಿಕೊಂಡು ಮೋಕ್ಷ ಪಡೆಯಬೇಕೆಂಬ ಆಶಯವಿದೆ. ಅಧಿಕಾರ, ಆಸ್ತಿಗಾಗಿ, ರಾಜ್ಯಕ್ಕಾಗಿ ಅಣ್ಣಂದಿರು ತಮ್ಮನನ್ನು ಕೊಲ್ಲುವುದು, ತಮ್ಮಂದಿರು ಅಣ್ಣನ ಮಕ್ಕಳನ್ನು ಕೊಲ್ಲುವುದಕ್ಕೆ ಅವರಲ್ಲಿ ಮೂಡಿದ ಕೆಟ್ಟ ಆಲೋಚನೆಗಳೇ ಕಾರಣವಾಗಿದೆ. ದೈವ ಬಲದಿಂದ ಮತ್ತೆ ಬದುಕಿದ ತಮ್ಮನು, ದುರ್ಗುಣಗಳಿಂದ ಕೆಡುಕನ್ನು ಬಯಸಿ ಕಣ್ಣು ಕಳೆದುಕೊಂಡ ಅಣ್ಣಂದಿರನ್ನು ಅರಮನೆಗೆ ಕರೆದುಕೊಂಡು ಹೋಗುವ ಸಂದರ್ಭದಲ್ಲಿ ಕರುಣರಸದ ಪ್ರತಿಪಾದನೆ ಇದೆ.

ಗೋ ಹತ್ಯೆಯಿಂದ ಇಡೀ ರಾಜನ ವಂಶವೇ ಶಾಪಕ್ಕೆ ತುತ್ತಾಗುತ್ತದೆ. ಅದರ ಕರ್ಮವನ್ನು ಮಕ್ಕಳು ಅನುಭವಿಸುತ್ತಾರೆ. ಆಕಳು ಮತ್ತು ಮಾನವರ ನಡುವಿನ ಸಂಬಂಧ ಹಾಗೂ ಮಾನವ ಕೆಡುಕನ್ನು ಮಾಡಿದಾಗ ಅದರಿಂದ ಆಗುವ ಅನಾಹುತ ವ್ಯಕ್ತಗೊಂಡಿದೆ. ಮನೆಯಂಗಳದಲ್ಲಿ ನೆಟ್ಟ ತುಳಸಿಗಿಡ ಒಣಗಿದರೆ ಅದು ಸಾವಿನ ಸಂಕೇತವಾಗುತ್ತದೆ. ಇಂತಹ ಸಂಕೇತಗಳ ಮೂಲಕ ಪ್ರಕೃತಿ ಮತ್ತು ಮಾನವ ಸಂಬಂಧವು ಮೌಲ್ಯಯುತವಾಗಿದ್ದನ್ನು ಕಾಣುತ್ತೇವೆ. ಮನೆ ಮುಂದೆ ಅಥವಾ ಹೊಲದಲ್ಲಿ ಯಾವುದೇ ಗಿಡ ಒಣಗಿದರೆ ಅದು ಸಾವಿನ ಸಂಕೇತ ಎಂಬ ನಂಬಿಕೆ ಇಲ್ಲಿದೆ. ರಾಣಿಯು ತನ್ನ ಮಗನ ಸತ್ತ ವಿಷಯವನ್ನು ತುಳಸಿಗಿಡ ಒಣಗಿರುವುದರಲ್ಲಿ ಕಾಣುತ್ತಾಳೆ. ರಾಣಿಯ ಶೋಕವು ತಾಯಿ ಕರುಳಿನ ಕೂಗಾಗಿ ವ್ಯಕ್ತವಾಗಿದೆ. ತಾಯಿಯು ಸತ್ತು ಹೋಗಿದ್ದರೂ ಮಕ್ಕಳ ಕಷ್ಟ ಕಂಡು ಸತ್ತ ಮಕ್ಕಳನ್ನು ಬದುಕಿಸಲು ದೈವ ಸ್ವರೂಪದಲ್ಲಿ ಬರುವಂತಹುದು ಜನಪದರ ನಂಬಿಕೆಯ ಭಾಗವಾಗಿದೆ. ಮಕ್ಕಳನ್ನು ಬದುಕಿಸಿ ಆಕಳಾಗಿ

ಹಾಲುಣಿಸುವುದು ಸಹ ತಾಯಿ ಮಕ್ಕಳ ವಾತ್ಸಲ್ಯ ಹಾಗೂ ಆಕಳು ಮಾನವನಿಗೆ ಉಪಕಾರ ಮಾಡುವ ಪ್ರಾಣಿ ಎಂಬುದು ಇಲ್ಲಿ ವ್ಯಕ್ತವಾಗಿದೆ. ಮಲತಾಯಿಯು ಮೃಗೀಯತೆಯಿಂದ ಮಕ್ಕಳಿಗೆ ಮಾನಸಿಕ ಹಿಂಸೆ ಕೊಡುವುದು, ಕೊನೆಗೆ ಮಕ್ಕಳನ್ನು ಕೊಲ್ಲುವುದರ ಮೂಲಕ ಸವತಿ ಮಕ್ಕಳ ಮತ್ಸರದಿಂದಾಗಿ ಮನುಷ್ಯತ್ವವು ಮೃಗತ್ವಕ್ಕೆ ಹೋಗುವುದನ್ನು ಸೂಚಿಸುತ್ತದೆ.

ರಾಜಕುಮಾರಿಯು ತನ್ನ ಆಯುಧಾಗಾರದಲ್ಲಿ ಬಿದ್ದು ಸತ್ತ ರಾಜಕುಮಾರನ ದೇಹದ ತುಂಡುಗಳನ್ನು ತಲೆ ಮೇಲೆ ಹೊತ್ತುಕೊಂಡು, ಅವನೇ ಗಂಡನೆಂದು ತಿಳಿದು, ಗಂಡನ ದೇಹವನ್ನು ಹುಡುಕುತ್ತ ಹೊರಡುವುದರಲ್ಲಿ ಗಂಡ-ಹೆಂಡತಿಯ ಪವಿತ್ರ ಪ್ರೇಮವಿದೆ. ಹೆತ್ತ ತಂದೆಯನ್ನೇ ಧಿಕ್ಕರಿಸಿ ತಾನು ಇಚ್ಛೆಪಟ್ಟ ಗಂಡನೊಡನೆ ಹೋಗುವುದು ಸ್ತ್ರೀ ಸ್ವಾತಂತ್ರ್ಯದ ಪ್ರತೀಕವಾಗಿದೆ. ಏಳು ಜನ ರಾಣಿಯರು ಮತ್ತು ರಾಜನು ಮಕ್ಕಳ ಕೊರಗನ್ನು ನೀಗಲು ಪಡಲಾರದ ಕಷ್ಟಪಟ್ಟರೂ ಫಲ ಸಿಗಲಿಲ್ಲ. ಕೊನೆಗೆ ಸಾಮೂಹಿಕವಾಗಿ ವಿಷ ಕುಡಿದು ಸಾಯಲು ಮುಂದಾಗುವುದರಲ್ಲಿ ಸಹ ಗಂಡ-ಹೆಂಡತಿಯರ ಪ್ರೇಮ, ಮಕ್ಕಳ ಭಾಗ್ಯದ ಹಂಬಲ ಮುಂತಾದ ಅಂಶಗಳು ಕಂಡುಬರುತ್ತವೆ. ರಾಜನು ಧರ್ಮವನ್ನು ಹೀಯಾಳಿಸಿದ್ದರಿಂದ ಜೀವಂತ ಶವದಂತಾಗಿ ಕಷ್ಟ ಅನುಭವಿಸುತ್ತಾನೆ.

ಶೈವ-ವೈಷ್ಣವ ಎರಡು ಮತಗಳಿದ್ದು ಅಲ್ಲಿ ಕಲಹ ಕಂಡುಬಂದರೂ ಕೊನೆಗೆ ಧರ್ಮಕ್ಕಿಂತ ಮಾನವೀಯತೆ ಮುಖ್ಯ ಎಂಬ ಭಾವವು ವ್ಯಕ್ತವಾಗಿದೆ. ರಾಜಕುಮಾರನು ತನ್ನನ್ನು ಕಡಿಯಲು ತಂದೆ ಮುಂದೆ ಬಂದಾಗ ತಾಯಿ ತಂದೆಯನ್ನು, ದೇವರನ್ನು ನೆನೆಯದೆ ಹೆಂಡತಿಯನ್ನು ನೆನೆದು ದುಃಖಿಸುವುದು ಸಹ ಹೆಂಡತಿ ಮೇಲಿನ ಪ್ರೀತಿಯ ದ್ಯೋತಕ. ಅವಳೇ ಸರ್ವಸ್ವವೆಂದು ತಿಳಿದ ರಾಜಕುಮಾರನಲ್ಲಿ ಮಾನವೀಯತೆ ಕಾಣುತ್ತದೆ. ಇಲ್ಲಿ ಗಂಡ-ಹೆಂಡತಿಯ ಪ್ರೀತಿ, ಪ್ರೇಮ ಎಂಬುದು ಪವಿತ್ರ ಸಂಬಂಧವಾಗಿದೆ. ಸೊಸೆಯೇ ಮಾವನಿಗೆ ಉಪಚಾರ ಮಾಡುವ ಸನ್ನಿವೇಶವು ಸಹ ಮಾನವೀಯ ನೆಲೆಯಿಂದಲೇ ಆಗಿದೆ. ಬುರ್ರಕತೆಗಳ ಮುಖ್ಯ ಆಶಯ ಮಾನವೀಯ ಸಂವೇದನೆಗಳೇ ಆಗಿವೆ. ಇಲ್ಲಿನ ಘಟನೆಗಳು, ಪಾತ್ರಗಳು ಮಾನವೀಯ ನೆಲೆಯ ಸೃಷ್ಟಿಗಳಾಗಿವೆ. ಬುರ್ರಕತೆಯ ಒಳಗಿನ ಲೋಕದಲ್ಲಿ ಅನೇಕ ವ್ಯಕ್ತಿಗಳು ಮಾನವೀಯ ಸಂಬಂಧಗಳ ನೆಲೆಯಲ್ಲಿಯೇ ವ್ಯವಹರಿಸುತ್ತಾರೆ ಹಾಗೂ ಕೇಳುವವರ ಹೃದಯವನ್ನು ಮಾನವೀಯ ನೆಲೆಯಲ್ಲಿ ಕತೆ ಸ್ಪರ್ಶಿಸುತ್ತದೆ. ಆದ್ದರಿಂದ ಬುರ್ರಕತೆ ಎಂಬುದು ಮಾನವೀಯ ನೆಲೆಯಲ್ಲಿ ಕನ್ನಡ-ತೆಲುಗು ಸಂಸ್ಕೃತಿಯನ್ನು ಅನುಸಂಧಾನಗೊಳಿಸುವ ಕತೆ ಎನಿಸಿದೆ.

### ೨. ಪ್ರಾದೇಶಿಕತೆ

ಬುರ್ರಕತೆಗಳು ಪ್ರಾದೇಶಿಕ ನೆಲೆಯಲ್ಲಿ ಬಂದಂತಹವು. ಇಲ್ಲಿ ಕನ್ನಡ-ತೆಲುಗು ಎರಡೂ ಕತೆಗಳನ್ನು ಪರಿಶೀಲಿಸಿದಾಗ ಎರಡು ಭಾಷೆಯ ದೃಷ್ಟಿಯಿಂದ ಬೇರೆ ಬೇರೆ ಕಂಡುಬರುತ್ತದೆಯೇ ಹೊರತು ಕತೆಯ ವಸ್ತುವಿನಿಂದಲ್ಲ. ಬುರ್ರಕತೆಗಳು ನಿರ್ದಿಷ್ಟ ಪ್ರಾದೇಶಿಕತೆಯನ್ನು ಹೊಂದಿರುತ್ತವೆ. ಎರಡೂ ಭಾಷೆಯ

ಕತೆಗಳನ್ನು ಗಮನಿಸಿದಾಗ ಕೊನೆಗೆ ಅದು ಬುರ್ರಕತೆಯ ಪ್ರಾದೇಶಿಕತೆಯಾಗಿ ಕಾಣಿಸುತ್ತದೆ. ಏಕೆಂದರೆ ಈ ಕತೆಗಳ ಒಳಗೆ ಒಂದು ನಿರ್ದಿಷ್ಟ ಪ್ರಾದೇಶಿಕತ ಇದೆ. ಇಲ್ಲಿ ಭಾಷಿಕವಾಗಿ ಕನ್ನಡ-ತೆಲುಗು ಎಂಬ ಪ್ರತ್ಯೇಕ ಪ್ರಾದೇಶಿಕತ ಕಾಣಸುವುದಿಲ್ಲ. ಎತ್ತುಗಳ ಸಹಾಯ ಇಲ್ಲದೆ ರಾಜ-ರಾಣಿಯರು ಬರೀಗೈಯಲ್ಲಿ ಹೊಲವನ್ನು ಉತ್ತು ಬಿತ್ತುವುದು ಶ್ರಮದ ಹಿನ್ನೆಲೆಯಲ್ಲಿ ಕೃಷಿ ಪದ್ಧತಿ ವ್ಯಕ್ತವಾಗಿದೆ. ಇಲ್ಲಿ ಭಾಷಿಕವಾಗಿ ಕನ್ನಡ-ತೆಲುಗು ಎಂಬ ಪ್ರತ್ಯೇಕ ಕೃಷಿ ಪದ್ಧತಿ ಕಾಣಸುವುದಿಲ್ಲ. ರಾಜಕುಮಾರನ ಕೃಷಿ ಪದ್ಧತಿಯು ಕೃಷಿ ಸಮಾಜವೊಂದರ ಬದುಕನ್ನು ತೆರೆದಿಡುವಂತಿದೆ. ಹಾಗೆಯೇ ಎರಡೂ ಕತೆಗಳಲ್ಲಿ ವ್ಯಕ್ತವಾದ ಪಟ್ಟಣಗಳು ಭೂಚಕ್ರಪಟ್ಟಣ, ಕಾಶಿ, ರಾಮೇಶ್ವರ, ದಿಲ್ಲಿ, ರಾಮಲಿಂಗಜಾತ್ರೆ, ಚಿತ್ರಾಂಗಿ ಪಟ್ಟಣ, ಸುಂದರಮ್ಮ ಪಟ್ಟಣ ಮುಂತಾದವು ಬುರ್ರಕತೆಯ ಸಾಂದರ್ಭಿಕ ಪಟ್ಟಣಗಳಾಗಿ ಮುಖ್ಯವಾಗುತ್ತವೆ. ಇವು ಐತಿಹಾಸಿಕ ಸ್ಥಳಗಳಾಗದೆ ಕತೆಯಲ್ಲಿ ಮಾತ್ರ ಬರುವ ಸಾಂದರ್ಭಿಕ ವಾಸ್ತವವಾಗಿರುತ್ತದೆ.

**೩. ಭಾಷೆ**

ಬುರ್ರಕತೆಗಳು ಮೇಲ್ನೋಟಕ್ಕೆ ಕನ್ನಡ-ತೆಲುಗಿನ ಎರಡು ಭಾಷೆಯ ಕತೆಗಳು. ಇವು ಬೇರೆ ಬೇರೆಯಾಗಿ ಎರಡು ಪ್ರತ್ಯೇಕ ಸಂಸ್ಕೃತಿಯನ್ನು ಪ್ರತಿನಿಧಿಸುವಂತೆ ಕಾಣುತ್ತವೆ. ಅಲ್ಲದೆ ಕತೆಯ ನಿರೂಪಣೆಯ ವಕ್ತೃ ಒಬ್ಬರೇ ಆಗಿರುವುದರಿಂದ ಅವರಿಗೆ ಎರಡು ಭಾಷೆಗಳು ಬೇರೆ ಬೇರೆ ಎನಿಸುತ್ತದೆ. ತೆಲುಗಿನಲ್ಲಿ ಹಾಡುವಾಗ ಕನ್ನಡ ಭಾಷೆಯ ಶ್ರೋತೃಗಳು, ಕನ್ನಡದಲ್ಲಿ ಹಾಡುವಾಗ ತೆಲುಗು ಭಾಷೆಯ ಶ್ರೋತೃಗಳೂ ಇರುತ್ತಾರೆ. ಆದರೆ ಇಲ್ಲಿ ಈ ಎರಡು ಭಾಷೆಗಳಿಗಿಂತ ಆ ಕತೆಗಳ ಒಳಗಿನ ಆಶಯ ಮುಖ್ಯವಾಗಿರುತ್ತದೆ. ಬುರ್ರಕತೆಗಳೆಂಬುದು ಮಾತ್ರ ಅವರಿಗೆ ತಿಳಿದಿರುತ್ತದೆ. ಎರಡು ಭಾಷೆಯ ಪಠ್ಯಗಳನ್ನು ಅವಲೋಕಿಸಿದರೆ ಉರ್ದು, ಇಂಗ್ಲಿಷ್, ಕನ್ನಡ, ತೆಲುಗು ಈ ಭಾಷೆಗಳು ಎರಡು ಪಠ್ಯಗಳಲ್ಲಿ ಒಂದರೊಳಗೊಂದು ಬೆರೆತು ಬಂದಿರುತ್ತವೆ. ಹೀಗಾಗಿ ಕತೆಯ ಪ್ರದರ್ಶನ ಮತ್ತು ಅದರ ಹೂರಣ ಇಲ್ಲಿ ಮುಖ್ಯವಾಗಿದ್ದು ಭಾಷೆ ಇಲ್ಲಿ ಆನುಷಂಗಿಕ ಮಾತ್ರ ಎನಿಸಿದೆ. ಬುರ್ರಕತೆಗಾರರು ಅಭಿವ್ಯಕ್ತಿಸುವ ಕತೆಯಲ್ಲಿ ಭಾಷೆಯು ಗೌಣವಾಗಿ, ಅವರು ಜನರಿಗೆ ನೀಡುವ ಸಂದೇಶವೇ ಮುಖ್ಯವಾಗಿರುತ್ತದೆ. ಬುರ್ರಕತೆಯ ಭಾಷೆಯ ನಿರೂಪಣಾ ವಿಧಾನ, ನಾಟಕೀಯತೆ, ಗಾದೆ ಮಾತುಗಳ ಬಳಕೆ, ಆಡುನುಡಿಯ ಮಾತು ಎಂಬಿತ್ಯಾದಿಗಳೆಲ್ಲ ಜನಮಾನಸವನ್ನು ಆಕರ್ಷಿಸಿದೆ.

**೪. ಭಾಷಾಂತರ**

ಬುರ್ರಕತೆಗಾರರಿಗೆ ಭಾಷಾಂತರ ಎಂಬ ಪರಿಕಲ್ಪನೆಯೇ ಇಲ್ಲ. ಆದರೆ ಕನ್ನಡ-ತೆಲುಗು ಎರಡು ಭಾಷೆಗಳಲ್ಲಿ ಅಭಿವ್ಯಕ್ತಿಸುವುದು ಮಾತ್ರ ಗೊತ್ತಿದೆ. ಎರಡು ಭಾಷೆಯ ಕತೆಗಳನ್ನು ಪರಿಶೀಲಿಸಿದರೆ ಭಾಷಾಂತರ ಪ್ರಕ್ರಿಯೆಯ ನೆಲೆಯಲ್ಲಿ ರೂಪುಗೊಂಡಿದ್ದು ಕಂಡುಬರುತ್ತದೆ. ಬುರ್ರಕತೆಗಾರರು ಪ್ರಜ್ಞಾಪೂರ್ವಕವಾಗಿ ಭಾಷಾಂತರ ಮಾಡುವವರಲ್ಲ. ಆದರೆ ಅಭಿವ್ಯಕ್ತಿಯಲ್ಲಿ ಭಾಷಾಂತರ ಪ್ರಕ್ರಿಯೆ ಇರುವುದನ್ನು

ಗುರುತಿಸಬಹುದು. ಒಂದು ಹಂತದಲ್ಲಿ ಇದು ಒಂದು ಇನ್ನೊಂದರ ಯಥಾವತ್ತಾದ ಭಾಷಾಂತರವೇ ಆಗಿದೆ. ಬುರ್ರಕತೆಗಳಲ್ಲಿ ಮುಖ್ಯವಾಗಿ ಎರಡು ನೆಲೆಯ ಭಾಷಾಂತರ ಪ್ರಕ್ರಿಯೆಯನ್ನು ಕಾಣಬಹುದು. ಮೊದಲನೆಯ ಹಂತದಲ್ಲಿ ತಮ್ಮ ಅನುಭವಗಳನ್ನು ಭಾಷಾಂತರ ಮಾಡಿಕೊಳ್ಳುವ ಪ್ರಕ್ರಿಯೆ. ಇಲ್ಲಿ ಅವರಿಗೆ ತೆಲುಗು ಅನುಭವ, ಕನ್ನಡ ಅನುಭವ ಎಂಬಿವು ಎರಡು ಪ್ರತ್ಯೇಕವಾಗಿ ಇಲ್ಲ. ತೆಲುಗು ಕತೆ ಮತ್ತು ಕನ್ನಡ ಕತೆಯಲ್ಲಿ ಸಮಾನವಾದ ವಿವರಗಳ ಮೂಲಕವೇ ಕತೆಯ ನಿರೂಪಣೆ ಮಾಡುತ್ತಾರೆ. ರಾಜನ 'ಆಸ್ಥಾನ' ಕತೆಯಲ್ಲಿ ರಾಜ 'ಕಚೇರಿ' ಎಂದಾಗುತ್ತದೆ. 'ವಿಷ', 'ಆಪು' ಆಗುತ್ತದೆ. ಇದು ಪದಕ್ಕೆ ಪದ ಭಾಷಾಂತರ ಎಂಬ ನೆಲೆಯಲ್ಲಿ ವಿವರಿಸಿಕೊಳ್ಳಲು ಅವಕಾಶವಿದೆ. ಇದು ಅನುಭವದಿಂದ ಕಂಡುಕೊಂಡ ವಿವರಗಳಾಗಿ ನಿರೂಪಣೆಯಲ್ಲಿ ಅಭಿವ್ಯಕ್ತವಾಗಿದೆ. ಎರಡನೆಯ ಹಂತದಲ್ಲಿ ಕತೆಯ ಯಥಾವತ್ತಾದ ನಿರೂಪಣೆ ಎರಡೂ ಭಾಷೆಗಳಲ್ಲಿ ನಡೆಯುತ್ತದೆ. ಕನ್ನಡ ಕತೆಗಳ ಸಾಲುಗಳು, ತೆಲುಗು ಕತೆಗಳ ಸಾಲುಗಳು ಯಥಾವತ್ತಾಗಿ ನಿರೂಪಿಸುತ್ತಾ ಕತೆಯನ್ನು ವಿಸ್ತರಿಸುವುದನ್ನು ಕಾಣಬಹುದು. ತೆಲುಗಿನ ಒಂದು ಸಾಲು ಪಠ್ಯ ಇಟ್ಟುಕೊಂಡು ಭಾಷಾಂತರ ಮಾಡಿದಷ್ಟು ನಿಖರವಾಗಿದೆ ಕನ್ನಡ ಪಠ್ಯ. ಕೆಲವೆಡೆ ಮಾತ್ರ ಒಂದೆರಡು ಸಾಲು ಹೆಚ್ಚಾಗಿ ಬಂದಿರಬಹುದು. ಎಂಬುದನ್ನು ಬಿಟ್ಟರೆ ಇದು ಯಥಾವತ್ತಾದ ಭಾಷಾಂತರವೇ ಆಗಿದೆ.

**೫. ಕಲಾತ್ಮಕತೆ**

ಈ ಬುರ್ರಕತೆ ಕಲಾವಿದರು ತಮ್ಮ ಕತೆಗಳನ್ನು ಕಾವ್ಯ ಅಥವಾ ಮಹಾಕಾವ್ಯ ಎಂದು ಕರೆಯುವುದಿಲ್ಲ. ಅವರ ಕಲೆಗೆ ಕತೆಯೆಂದೇ ಕರೆಯುತ್ತಾರೆ. ಕತೆಯ ನಿರೂಪಣೆಯಲ್ಲಿ ಅವರ ಕಲೆ ಅಡಗಿದೆ. ಒಂದೇ ಕತೆಯನ್ನು ಅತ್ಯಂತ ದೀರ್ಘವಾಗಿ ಹಾಡಬಹುದು, ಅದೇ ಕತೆಯನ್ನು ಸಂಕ್ಷಿಪ್ತಗೊಳಿಸುವ ಕಲೆಯನ್ನೂ ಅವರು ಕರಗತ ಮಾಡಿಕೊಂಡಿರುತ್ತಾರೆ. ಸಂದರ್ಭಾನುಸಾರ ಕತೆ ಹಾಗೂ ಹಾಡುವ ಧಾಟಿಯನ್ನು ಬದಲಾಯಿಸಿಕೊಳ್ಳುತ್ತಾರೆ. ಕತೆಯಲ್ಲಿ ಪ್ರೇಕ್ಷಕರನ್ನು ಎಚ್ಚರಗೊಳಿಸಲು ಕತೆಯನ್ನು ದೀರ್ಘವಾಗಿ ವಿಸ್ತರಿಸಿಕೊಂಡು ಹೋಗಲು ಅವರು ಶಕ್ತರಾಗಿದ್ದಾರೆ. ಹಾಗೆಯೇ ಕಲಾತ್ಮಕವಾಗಿ ಹಾಸ್ಯ ಪ್ರಸಂಗವನ್ನು ನಿರೂಪಿಸಲೂ ಪರಿಣತರಿದ್ದಾರೆ. ಸಂದರ್ಭಾನುಸಾರವಾಗಿ ನಾಣ್ನುಡಿಗಳು, ನಿರೂಪಣೆ, ಉತ್ಪ್ರೇಕ್ಷೆ, ಪಾತ್ರಗಳ ವರ್ಣನೆಯು ಕಥನಗಾರರ ಪ್ರತಿಭಾಶಕ್ತಿಯನ್ನು ಪ್ರತಿಬಿಂಬಿಸುತ್ತದೆ.

ಯುದ್ಧದ ವರ್ಣನೆಯನ್ನು ನಿರೂಪಿಸುವಾಗ ಕಲಾತ್ಮಕವಾಗಿ ಯುದ್ಧದ ವಾತವಾರಣವನ್ನೇ ನಿರ್ಮಿಸುತ್ತಾರೆ. ವೀರ, ಛಲ, ಆವೇಶ ಮುಂತಾದವುಗಳನ್ನು ಆಂಗಿಕ ಅಭಿನಯದಿಂದ ಅಭಿವ್ಯಕ್ತಿಸುತ್ತಾರೆ. ದುಃಖದ ವಿಷಯವನ್ನು ನಿರೂಪಿಸುವಾಗ, ರಾಣಿಯು ತನ್ನ ಮಗನನ್ನು ಕಳೆದುಕೊಂಡಾಗ, ಅಲ್ಲದೇ ರಾಜಕುಮಾರನು ತನ್ನ ಹೆಂಡತಿಯನ್ನು ಕಳೆದುಕೊಂಡು, ತನ್ನಿಂದ ದೂರವಾದ ಸಂದರ್ಭದಲ್ಲಿ ಶೋಕರಸವನ್ನೇ ಹರಿಸುತ್ತಾರೆ. ಕತೆಯ ಕೊನೆಯಲ್ಲಿ ನಾಯಕ ಅಥವಾ ನಾಯಕಿಗೆ ಜಯವನ್ನೇ ಅಭಿವ್ಯಕ್ತಪಡಿಸುತ್ತಾರೆ. ಸತ್ತ ನಾಯಕನು ಮತ್ತೆ ದೈವ ಸಂಕಲ್ಪದಿಂದ ಬದುಕುವುದು ಹೀಗೆ ಯಾವುದೇ ಸನ್ನಿವೇಶವಿರಲಿ ಅದನ್ನು ಕಲಾತ್ಮಕವಾಗಿ ನಿರೂಪಿಸುತ್ತಾರೆ.

ಹೀಗೆ ಬುರ್ರಕತೆ ಎಂಬ ನೆಲೆಯಲ್ಲಿ ಕನ್ನಡ-ತೆಲುಗು ಎರಡು ಸಂಸ್ಕೃತಿಯ ಅನುಸಂಧಾನದ ಪ್ರಕ್ರಿಯೆ ನಡೆಯುತ್ತದೆ. ಭಾಷೆ, ಸಂಸ್ಕೃತಿಗಳ ಎಲ್ಲೆಗಳನ್ನು ಮೀರಿ ಬುರ್ರಕತೆಗಾರರು ಹಾಗೂ ಶ್ರೋತೃಗಳಿಗೆ ಮಾನವೀಯತೆಯ ಸಂದೇಶವನ್ನು ಸಾರುತ್ತ ಪರಸ್ಪರ ಒಂದಾಗುತ್ತಾರೆ. ಭಾಷಾ ಗಡಿಗಳನ್ನು ಮೀರಿ ಸಂವಹನದ ಮೂಲಕ ರಂಜನೆಯನ್ನು ಅನುಭವಿಸುತ್ತಾರೆ. ಪ್ರಾದೇಶಿಕ ಭಿನ್ನತೆಗಳನ್ನು ಮರೆತು ಬುರ್ರಕತೆಯ ಆಶಯಗಳ ಮೂಲಕ ಭಾವನಾತ್ಮಕವಾಗಿ ಒಂದಾಗುವ ಪರಿ ಇಲ್ಲಿದೆ. ಭಾಷೆ ಭಾಷೆಗಳಲ್ಲಿ ಪುನರ್ ನಿರೂಪಣೆಗೊಳ್ಳುವ ಈ ಕಥಾನಿರೂಪಣೆ ಭಾಷಾಂತರವಾಗಿ ಕಾಣಿಸಬಹುದಾದರೂ ಅದನ್ನು ಮೀರಿದ ನಿರೂಪಣಾ ತಂತ್ರವೊಂದು ಸೃಜನಶೀಲವಾಗಿ ಅನಾವರಣಗೊಳ್ಳುವುದನ್ನು ಇಲ್ಲಿನ ಕತೆಗಳಲ್ಲಿ ಕಾಣಬಹುದು. ಇವೆಲ್ಲ ಮನುಷ್ಯ ಮನುಷ್ಯರ ನಡುವೆ ನಡೆಯುವ ವ್ಯವಹಾರವಾಗಿ ಒಂದು ಜೀವನ ವಿಧಾನವನ್ನು ಪೋಷಿಸುವ ಸಾಂಸ್ಕೃತಿಕ ಉತ್ಪನ್ನಗಳಾಗಿ ಸಮಾಜದಲ್ಲಿ ಉಳಿದುಕೊಂಡಿವೆ. ಬುರ್ರಕತೆಯ ನಿರೂಪಕರು ಸಮಾಜದ ಸೃಜನಶೀಲ ಪ್ರತಿಭೆಗಳಾಗಿದ್ದಾರೆ. ಸಾಮಾಜಿಕರಿಗೆ ಜೀವನ ಸಂದೇಶವನ್ನು ನೀಡುವ ವಿಸ್ಮಯಕಾರಿ ಸನ್ನಿವೇಶ ಬುರ್ರಕತೆಗಳಲ್ಲಿದೆ. ಅದಕ್ಕಾಗಿ ನಿರ್ದಿಷ್ಟವಾದ ಜನ ಸಮುದಾಯವೊಂದು ಪರಂಪರಾಗತವಾಗಿ ಬುರ್ರಕತೆಯನ್ನು ತಲೆಮಾರಿನಿಂದ ತಲೆಮಾರಿಗೆ ಮುಂದುವರಿಸಿಕೊಂಡು ಬಂದಿದೆ. ಸಾಮಾಜಿಕ ಸ್ವಾಸ್ಥ್ಯವನ್ನು ಕಾಪಾಡುವಲ್ಲಿ ಬುರ್ರಕತೆಗಾರರ ಪರಂಪರಾಗತ ಕೊಡುಗೆ ಅಪಾರವಿದೆ. ಅಧ್ಯಯನಾಸಕ್ತರಿಗೆ ಬುರ್ರಕತೆಗಾರರು ಕಟ್ಟಿಕೊಡುವ ಭಾಷಿಕ, ಸಾಂಸ್ಕೃತಿಕ ಸಂರಚನೆಗಳು ಪ್ರಮುಖ ಆಕರಗಳಾಗಿ ಗಮನ ಸೆಳೆಯುತ್ತವೆ. ಈ ಎಲ್ಲಾ ಕಾರಣಗಳಿಗಾಗಿ ಬುರ್ರಕತೆಗಳ ವಿಭಿನ್ನ ಆವೃತ್ತಿಗಳ ಪ್ರಸ್ತುತ ಅಧ್ಯಯನವು ಒಂದು ಪ್ರಮುಖ ಹೆಜ್ಜೆಯಾಗಲಿದೆ.

## ಅನುಬಂಧ-೧

### ಉದ್ಧೃತ ತೆಲುಗು ಬುರ್‍ರಕತೆಗಳ ಮೂಲಪಠ್ಯ

೧. ರಾಜ ಕಚೇರಿಲ ಕೂಸೋನಿ

ಬಂಗಾರು ಪಂಚಾಂಗಂ ಚೇತು ಪಟ್ಟುಕೋನಿ

ಎಂಡಿ ಕಡ್ಡಿ ಏಸಿ ಪಂಚಾಂಗಂ ಚೂಸ್ತೆ

ಪಂಚಾಂಗಂಲ ಏಮಂಟ ಎಲ್ಲಿಂದಿ

ಏಮಯ್ಯ ಕಾಂಭೋಜರಾಜ ಮೀ ನಾಯನ ಶಮರಾಜ

ಏನ್ನಟಿ ಕಾಲಮಂದುನ

ಏಡುಸಾವಿರ ಕಾಸುಪಾಕ ತೋಟ ಪೆಟ್ಟಿಂಡೆ

ಆ ತೋಟಕು ಒಕ್ಕಸೀಮ ಪೋವನಿಕ ಸಂದುಲೇಕುಂಡ

ಪಾವಂದಿ ಚೇಸಿಂಡೆ

ಒಕ್ಕ ಮನಿಷಿ ಪೋಕುಂಡ ಪಾವಂದಿ ಚೇಸಿತೆ

ಪಶುವುಲು ಪೋಕುಂಡ ಪಾವಂದಿ ಚೇಸಿಂಡೆ

ಅತವಂಟಿ ತೋಟಕಿ ಪರಮಾತ್ಮುಡು ಸಾಕಿಂದಿ

ಆವು ಗಂಗಿಮ್ಮೆಲ

ಈನನಿಕೆ ನಿಂಡ ದಿನಾಲು ಆಯಿಂಡೆ

ತೋಟ ಮೀನ ಮನಸ್ಸು ಪೆಟ್ಟೆ

ತೋಟಲ ಪೊಯ್ಯಿ ಐದು ಬುಕ್ಕಲು ನಾಗಮಲ್ಲೆ ಪುವ್ವಲು

ಬೋಜನಮು ಚೇಸಿಂದಿ

೨. ವಾಳ ದೇಶಮುಖಿ ವಾಳು ಎಲ್ಲಿ ಪೊಯ್ಯಿರಿ

ಎಲ್ಲಿ ಪೋತೆ ರಾಜ ಕಾಂಭೋಜರಾಜ

ಏಡು ಮಂದಿ ಬಾರ್‍ಯಲು ತೋಲುಕೋನಿ

ಬಾಯಿಕಾಡಿಕೆ ವಚ್ಚಿ

ಬಾಯಿ ಗಡ್ಡಮೀದ ಕೂಸೋನಿ

ಸೆನ್ಗೆ ಸುವ್ವುಲ ಶಾಲು

ಆ ಶಾಲು ಕಂಡ್ಲಕು ಪಟ್ಟುಕೋನಿ

ಭಾಮ ಮನಮು ಪಾಪಮು ಚೇಸಿ ಪುಟ್ಟಿನಾಮು

ಮನ ಭಕ್ತಿ ದೇವುಡು ಮೆಚ್ಚಲೇದು

ಮನಕಿ ಸಂತಾನಮು ಇಯ್ಯಲೇದು

ಉಂಡರಾದು ಮನದಿ ಗೊಟ್ಟು ಜಲ್ಮಮು

ಗೊಳೋಮಂಟ ಗೋಟಕನ್ನೀರು ತೀಸೆ

೩. ನೀ ಧರ್ಮಗುಣಂ ಮೆಚ್ಚಿ ಪುಟ್ಕಡಂತ ಬಂದಿಖಾನಂಲ

ಧರ್ಮ ಲೇದಂಟ ಶಬ್ದ ರಾಲೇದು

ಇಸ್ತ ಅನಿಶಬ್ದ ವಚ್ಚೆ

ಅಪ್ಪುಡು ಪರಮಾತ್ಮುಡು ಐದು ರವ್ವಲು ಚೇತುಲ ಪಟ್ಟುಕೋನಿ

ಘಟ ಘಟ ಮಂತ್ರಿಸಿ

ಬಂಧಿಖಾನಂಮೀನ ಕೊಟ್ಟೆ

ತಲ್ಲಿ ಸೆರೆಬಂದಿಖಾನಂ ಮಾಯಂ ಆಯ

ಏಡಂತರಾಲ ಬಂಗಾರು ಮಾಲು·ಆಯೆ

ಕಾಲುಕುನ್ನ ಬೇಡಿಲು ಬಂಗಾರು ಚೈನಲು ಆಯೆ

ಚೈಕುನ್ನ ಬೇಡಿ ಬಂಗಾರು ಗಾಜುಲು ಆಯೆ

ನೆತ್ತಿಕಿ ಇನ್ನ ಟೋಪಿ ಬಂಗಾರು ಖ್ಯಾದಿ ಪುವ್ವಾಯೆ

ಕಂಡ್ಲಕುನ್ನ ಇನ್ನ ಚಾಳಿಸುಲು ಬಂಗಾರಿ ಚಾಳಿಸುಲು ಆಯೆ

೪. ಅಮ್ಮ ಸಿರಿದೇವಿ

ಇಂಟ್ಲಾನೆ ಸಾಕಿನವು ಇಂಟ್ಲಾನೆ ಪೆಂಚಿನವು

ಈಪೊದ್ದು ದಿನಮುದುನ ಆಕಾಶವೇಣೆ ಭೂಲಕ್ಷ್ಮೀವೇಣೆ

ನಾಕು ಚೂಪಿಯ್ಯಿ ತಲ್ಲಿ

ತಲ್ಲಿಕಿ ಅಡ್ಗೆ ಕೊಡ್ಕು

ಸಿರಿದೇವಿ ಕೊಡ್ಕುನಿ ತೋಲ್ಕೋನಿ

ಎಡಂತರಾಲ ಮಾಲಮೀನ ವಚ್ಚೆ
ಅಮ್ಮ ಮೀನ ಉನ್ನದಿ ಎಂದಿ ತಲ್ಲಿ
ಮೀವ ಉನ್ನದಿ ಅಕಾಶವೇಣಿ ಕೊಡ್ಕ
ಕಿಂದ ಉನ್ನದಿ ಭೂಲಕ್ಷ್ಮೀವೇಣಿ
ನರಲೋಕಂ ಮುಂದಿ ಕಷ್ಟಂಚೇಸಿ ಬತ್ಕುತಾರು
ಚುಟ್ಟುಮುಟ್ಟು ಚೂಸಿನ ಕೊಡ್ಕು
ತಂಡ್ರಿ ಊರು ತಟ್ಟು ಕನ್ನುಪಡೆ

೫. ಅಪ್ಪುಡು ಸುಂದರಮ್ಮ
ಪೈ ಕಂಡ್ಲಪಡೆದಿ ಸೀರ ಕಟ್ಟುಕೋನಿ
ಪೈ ಕಂಡ್ಲಪಡೆದಿ ರವಿಕೆ ತೊಡ್ಕೋನಿ
ಎಂಟಿಕನಿಕಿ ಮುತ್ತ್ಯಂ ಕುರ್ಸುಕೋನಿ
ಕಾಳಕಿ ಗಜ್ಜೆಲು ಕಟ್ಟುಕೋನಿ
ಒಂಟಿ ತೀಗಮೀದ ಡ್ಯಾನ್ಸ್ ಚೇಸ್ಕುಂಟ ವಸ್ತುಂದಿ
ಕುಸ್ನತೋನ ಶರಬಂಧರಾಜ
ತಾಳಂ ಮ್ಯಾಳಂ ಸಜ್ಜು ಆಯಿಂದಿ

೬. ಕಾಂಭೋಜ ಏಮಂಟ ದುಃಖಂ ಚೇಸ್ತಡು
ಭಾಮ ಸಿರಿದೇವಿ
ಅರಿಚೇತುಲ ರಾಮಚಿಲ್ಕ ಉನ್ನಟ್ಟು
ಚಿನ್ನ ವಿಲುಕಿ ಬಂಗಾರು ಮುತ್ಯಾಲು ಉಂಗುರಂ ಉನ್ನಟ್ಲು
ಅಟವಂಟಿದಾನಿವಿ
ಚೆಯ್ಯದಾನಿ ತಪ್ಪುಲು ನೂವು ಚೇಸಿನವೋ
ಮೀ ಅಕ್ಕೋಳೇ ಚೇಸಿನಾರೋ
ವಾಳ ಪಿಲ್ಲಲ್ಕಿ ವಾಳೆ ಮಂದು ಪೆಟ್ಟುಕೋನಿ
ನೀ ಮೀನ ಆಪಾದಂ ಆಡಿತೆ
ಈ ಸೆರೆ ಬಂದಿಖಾನಂ ಮಾಯಂ ಆಯಿ
ನೀಕಿ ಭಗವಂತುಡು ಸುಖಂ ಇಯ್ಯನಿ
ಈ ಬಂದಿಕಾನಂಲ ಮರುವುಲು ಪಡಿ ನೂವು ಸಸ್ತವು

ಇದಿಂತ ಮಾಟ ರಾಜ ಆಡಿ

ಪಿಡಿಕೆಡುನಿಂಡ ಮನ್ನು ಪಟ್ಟುಕೋನಿ

ಅಡಿವಿಕಿ ಪಂಡ್ಲಿ ಚೇಸಿ ಪೋತುಂಡ ಭಾಮ

ರಾಜ ದುಃಖಂ ಚೇಸ್ತದು

ಪಿಡಿಕೆಡು ಮನ್ನು ಬಂದಿಖಾನಂ ಮೀಸ ಕೊಟ್ಟೆ

೭. ಮುಗ್ಗುರು ಮುಸಲೋಳು ಸಂದುಲ ನಿಲಪಡಿ

ವಚ್ಚಿನಾಡ ಲೇದಂಟ ತಂಗಿ ತಂಗಿ ಚೂಸುತುನ್ನಾರು

ಕುಸ್ಸತೋನ ವಾಳಮೀನ ಕನ್ನುಪಡೆ

ಓ ತಾತ ಅನೆ

ಓಯಮ್ಮ ಮನ್ಮಡು ಮಮ್ಮನಿ ಚೂಚೆಗದ ಅನಿ

ಏಮಿಸುದ್ದಿ ಮನ್ಮಡ

ತಾತ ಸಂದುಲ ನಿಲಪಡಿ

ತಂಗಿ ತಂಗಿ ಎಂದುಕು ಚೂಸ್ತರು

ದಾಂಡಿತಾತ

ಮನ್ಮಡ ನೂವು ಕೊಡ್ತವನಿ ಮಾಕಿ ಭಯಂ

ಮಿಮ್ಮನಿ ಎಂದುಕಿ ಕೊಡ್ನು ತಾತ ವಿಮ್ಮನಿ ಕೊಟ್ಟನು

ಮುಸಲೋಳು ವಚ್ಚಿ ಮುಂಗಲ ನಿಲಪಡಿರಿ

ತಾತ ಮಾಮ ಎಕ್ಕಡ ಪೋಯಿಂಡು ತಾತ

ಕೊಡ್ಕ ಬಾಲಗಿರಿರಾಜ ಮೀ ಮಾಮನಿ ಮೇಮು ಚೂಡಲೇಡು

ಸಂಗೀತಂಕಿ ಚಿಂತಕಾಯಲು ರಾಲವು

ಒಕ್ಕ ಕಟ್ಟೆನ್ನ ಚೇತ ಪಟ್ಟುಕೋನಿ ಚಿಟ್ಟುಕು ಕೊಡ್ತೆ

ಚಿಂತ ಕಾಯಲು ರಾಲುತವಿ

ಈ ಮುಸಲೋಳು ಊಕ ಅಡ್ಗುತೆ ಚೆಪ್ಪರು

ಮುಸಲೋಳನಿ ಚೇತುಲ ಪಟ್ಟುಕೋನಿ

ವಂಗ ಪೆಟ್ಟಿ ಮೂಡು ಗುದ್ದುಲು ಪೆಟ್ಟೆ

ಚಚ್ಚಿಪೋತಮು ಬಾಲಗಿರಿರಾಜ ಮಮ್ಮನಿ ಕೊಟ್ಟ ಪೋಕು

ಮೀ ಮಾಮ ಉನ್ನ ಸುದ್ದಿ ಮೇಮು ಚೆಪ್ಪುತಮು

యాద ఉండదు తాత చెప్పుంది
నువు లడాయి చెయ్యనికి పోత
లడాయి చూచి ఇంత దండుని కలాస్ చేసే
నన్న దఖ్ఖునియ్యుడు నన్ను కలాస్ చేస్తాడు

౮. ఆడంత కొడ్కుకి అద్దినంత సొమ్ములు
కంటిచంద్ర హారము మ్యాడకి చేపిచ్చింది
ఓనమాలదండలు కొడ్కు మ్యాడకి ఏసింది
చేరు చేరు బంగారు కడ్యాలు చేపిచ్చింది
కొడ్కు చేతుకి ఏపిచ్చింది
చేరు చేరు బంగారు మొల్తాడు చేపిచ్చింది
కొడ్కు నడుముకు ఏసింది
ఏడు పెట్యాల సొమ్ములు
కొడుకుకు చేపిచ్చింది
బంగారు సిరిపావు కొడ్కు పణకి పెట్టింది
సూర్జగన్న భిన్నం ఉండదు
బిన్నంలేంది బిచరిచాలు కొడ్కు
కుడికంట్ల కుడుపులు
ఎడ్మకంట్ల ఏక చక్రము
ఈమున ఇంజావరి ద్యావర కమల
కొడ్కుకి ఉన్నది
అరికాల్న దామర పద్మ ఉన్నది
అరిచేతుల వైకుంఠగల్లవాడు
అసొంటి కొడ్కు చిన్నబాలరాజ

౯. మాస్తరు పాటి చేతుల పట్టుకోని
భూమికన్న మొదలు ఏమి పుట్టింది
ఓ నామ సరస్వతి రెండు అక్షరాలు
పాటిమీన రాసి కొడ్కు చేతుకి ఇచ్చే

ಕೊಡ್ಕು ಪಾಟ ಚೇತುಲ ಪಟ್ಟುಕೋನಿ ಓದಿ ಚೂಸೆ

ಮಾಸ್ತರ ಏಮೋ ನಮುಸ್ಕಾರಂ ತಂಡ್ರಿ

ಓ ಅಂಟ ರಾಯನಿಕ ಉರ್ಕಿ ಪೊಯ ಕೊಡ್ಕುನಿ ಕಾದು

ನಾ ಅಂಟ ರಾಯನಿಕ ನಾದನಿ ಕೊಡ್ಕು ಕಾದು

ರಾಮಾಯಣ ಪುಸ್ತಾಕಲು ಜೈಮಿನಿ ಭಾರತ

ಚಿನ್ನಬಾಲ ಶಿಕ್ಷ, ಪೆದ್ದಬಾಲ ಶಿಕ್ಷ

ಈ ಪುಸ್ತಕಾಲು ನಾಕು ತೆಚ್ಚಿಯ್ಯಿ

ತೊಮ್ಮಿದಿ ಗಂಟಲ ಓದಿ ನಾನು ಎಲ್ಲಿ ಪೋತ

೧೦. ಬಳೆ ಬಳೆ ಬಳಲೇನು ತಾನ ತಂದನ ತಾನ

ಏನ್ನ ದಂಡುಲಕು ಕುಷ್ಪಳಿಸಿ ಎಗರಿನಾಡು

ತೋಕಲು ಪಡುತಾಡು ಗರಗರ ತಿಪ್ಪುತಾಡು

ನೆಲಕು ಕೊಡ್ತಡು ಗೊಂತುಲು ಕೋಸ್ತಡು

ಎಡ್ಮ ತಟ್ಟುಕಿ ನರಿಕತೆ ಕುಡಿ ತುಟ್ಟುಕಿ ವಸ್ತವಿ

ಕುಡಿ ತಟ್ಟುಕಿ ನರಿಕತೆ ಎಡ್ಮ ತಟ್ಟುಕಿ ವಸ್ತವಿ

ಒಕ್ಕೊಕ್ಕ ಏಟುಕಿ ಸಾವಿರಲ ಏನ್ಗಲು ಕಲಾಸ್ ಆಯಿನವಿ

ತೊಮ್ಮಿದಿ ಗಂಟಲ ತೊಮ್ಮಿದಿ ತಾಸಲ ದಗ್ಗೆರ

ಏಡು ಸಾವಿರಲದಂಡು ಕೊಡ್ಕು ನರ್ಕಿನಾಡು

ಏನ್ಗೆಲ ರಕ್ತಮು ವಾಗಾಯಿ ಪಾರು ತದಿ

ಆ ರಕ್ತಮುಲ ಕೊಡುಕು ಈಜಾತಿ ವಸ್ತಡು

ದಂಡು ಕಲಾಸ್ ಚೇಸಿ ಮಾಮ ಕಚೇರಿ ಲೋಪಲ

ಕೊಡ್ಡು ಇಂಗ ಎಗರಿಂಡು

ನಮಸ್ಕಾರಂ ಓ ಮಾಮ ಪಿಲ್ಲನಿ ಇಯ್ಯಿ ಓ ಮಾಮ

೧೧. ಲೆಯ್ಯಿಕೊಮ್ಮ ಪದ್ಮರಾಣಿ ಲೆಯ್ಯಿಕೊಮ್ಮ ಪದ್ಮರಾಣಿ

ಮದಮತ್ಸರಲು ಕಂಡ್ಲಕೊಚ್ಚಿನವಿ

ಕಾಮಕ್ರೋದಂ ನೆತ್ತಿಕಿ ಎಕ್ಕಿಂದಿ

ಆಗಂ ಇಯ್ಯಿ ನಾಕು ಭೋಗಂ ಇಯ್ಯಿ

ನಿನ್ನು ಚೂಸಿ ತಾಳಲೇನು ನಿನ್ನು ಚೂಸಿ ನಿಲ್ವಲೇದು

ತಲ್ಲಿನಿ ಲೇಪಿ ಲೇಪಿ ಯಾಸರಿಕೊನ್ನಡು

ಲೇಪಲೋಕ ಯಾಸರಿಕೊನ್ನಡು

ತಲ್ಲಿಲೇಪಾಯ

ನಾ ಭಾರ್ಯನಿ ನಾ ಚೆಯ್ಯಿ ಪೆಟ್ಟಿ ಲೇಪುತನು

ನಾಕೇಮಿ ತಪ್ಪುಲೇದನ್ನಡು

ಏಡಂತರಾಲ ಮಾಲುಲೋಪಲ

ಬಂಗಾರು ಕತ್ತುಲು ಉನ್ನವಿ ಗೊತ್ತುಲೇದು

ಮನಿಸ್ಸಿ ವಸ್ತೆ ಮನಿಸ್ಸಿ ಕತ್ತರಿಸ್ತವಿ

ಚೀಮೆ ವಸ್ತೆ ಚೀಮೆ ಕತ್ತರಿಸ್ತವಿ

ಅಟವಂಟೆ ಆಯುಧಲು ಉನ್ನದಿ ಕೊಡ್ಕುಕಿ ಗೊತ್ತುಲೇದು

ಕುಡಿಚೆಯ್ಯಿ ಇಂಗ ತೀಸಿನಾಡು ಕತ್ತುಲಲ್ಲ ಪೆಟ್ಟಿನಾಡು

ಭಾರ್ಯನಿ ಲೇಪನಿಕೆ ಪೊಯ್ಯಿನಾಡು

ಕುಡಿಚೆಯ್ಯಿ ಆಡಿಕೆ ಕತ್ತರಿಚ್ಚಿ ತಲ್ಲಿ ಪರ್ಲುಮಿನ ಪಡ್ಡದಿ

ಕುಡಿಚೆಯ್ಯಿ ಪೊಯ್ಯಿಟಾಳಕು

ನೆತ್ತಿಲುನ್ನ ಪಸುರಂತ ದಿಗಿ ಪೊಯಿಂದಿ

೧೨. ಅಕ್ಕಡ ಏಮಿ ಪಟ್ನಂಟೆ

ಬಾಲಟೇಜುಲ ಪಟ್ನಂ

ಮಾರು ಮರಾತೋಡು ಮಹಿಭೂತರಾಜ

ರಾಜ ಬಾರ್ಯ ಸೂರ್ಯವತಿ

ರಾಜ ಪೊಟ್ಟಲ ಒಕ್ಕಟೇ ಬಿಡ್ಡ

ಗಂಗಮ್ಮ ವರಮುನುಂಟೆ ಪುಟ್ಟಿಂದಿ

ಮಲ್ಲೆ ಪುವ್ವುಲ ತೋಟಲ ಪುಟ್ಟಿಂದಮ್ಮ

ಐದು ನಾಗಮಲ್ಲಿಗೆ ಪುವ್ವುಲ ತೂಕಂ ಉಂಡದಿ

ಮರಾತೋಳು ಏಡುಮಂದಿ ಅನ್ನತಮ್ಮುಲು

ಆರು ಮಂದಿ ಕಡಮಲ ಪಿಲ್ಲರು ಲೇರು

ಪೆದ್ದೋಡು ಮಹಿಂಭೂತ ಪೊಟ್ಟಲ ಒಕ್ಕತೆ ಬಿಡ್ಡ

೧೩. ಪೋಲಮ್ಮ ಇದಿಂತ ಇನ್ನೋನಿ

ನಾ ಕೊಡ್ಕಮ್ಮ ಬಾಲಗಿರಿರಾಜ

ನಾ ಕೋಡಲು ಮೂವ್ವ ಪದ್ಮರಾಣಿ

ಅತ್ತ ಈ ಕೊಡ್ಕು ಚೂಸ್ತೆ ಎಟ್ಲ ಉಂಡಡು

ನೂವ್ವು ಚೂಸ್ತೆ ಇಟ್ಲ ಉಂಡವು

೧೪. ಬಾಯಿಲ ಪಡ್ಡ ಪದ್ಮರಾಣಿ

ದ್ಯಾವರ ಕಮಲ ಪೂವಾಯಿ ಬಾಯಿನಿಂಡ ತಿರ್ಗುತುಂಡೆ

ತಂಬಳ ಲಚಮಣ್ಣಾ

ತೋಟಕಿ ನೀಳು ಇಡ್ವಲನಿ

ತೇಲರ್ಧ್ಯಾಮುನ ನೀಳು ಮೋಟ ಕೊಟ್ಟಪಟ್ಟೆ

ಮೋಟಲ ತಲ್ಲಿ ಪುವ್ವುಲು ವಚ್ಚಿ ಪಡೆ

ತಲ್ಲಿ ಪುವ್ವುಲು ಬೈಟಿಕಿ ತೀಸೆ

ನೀಳ ಕಾಲ್ವಲ ವಚ್ಚಿ ಪುವ್ವುಲು ಪಡೆ

ಪುವ್ವುಲು ಮಾಯ ಆಯೆ ಪದ್ಮರಾಣಿ ಪುಟ್ಟೆ

೧೫ ಎಂಡಕಿ ಕಂಡ ಕತಕತ ಉಡಿಕಿ

ಪುಲಿನೇಳು ಕಾರುತುನ್ನದಿ

ಪದ್ಮರಾಣಿ ಚೂಸಿ ನಾಮೊಗಿನಿದಿ ಮಧುಮಾಂಸ ಕಿಂದಿಕಿ ಇಡಿಸ್ತೆ

ಆರುನೆಲ್ಲ ಆವಿಷಂ ತಕ್ಕ ಆವುತದಿ

ಆಯಮ್ಮ ಏಡುಗಜಲ ಎಂಟಿಕೆಲು ಇಡಸಿ

ನಾ ಎಂಟಿಕಲಿಕಿ ನೂನೆ ಲೇದನಿ

ಎಂಟಿಕಲಿಕಿ ತಲ್ಲಿ ಅಂಟಿಸುಕುಂಟದಿ

ಎಂತ ಕಮ್ಮಟಿ ವಾಸನ ವಸ್ತದಿ

ಅತ್ತರಿ ನೂನೆವಾಸನ ಮಲ್ಲೆ ಪುವ್ವಲ ವಾಸನ

೧೬. ಕಟಿಕೋಳು ಮೋಸುಕೋನಿ ವಚ್ಚಿರಿ

ದೂಳು ನರಿಕೆ ಬಂಡಮೀನ ತಲ್ಲಿನಿ ಪಂಡಪೆಟ್ಟಿರಿ

ತಲ್ಸಮ್ಮ ನೀ ತಾತ ಪೆದ್ದಲ್ಲಿ ತಲ್ಬು

ನೀ ಇಂಟಿ ದೇವಿನಿ ತಲ್ಬು ತಲ್ಲಿ

ದೇವಿನಿ ತಲ್ಲಪಾಯ

ಚಿನ್ನಬಾಲಗಿರಿರಾಜ

ನಾ ವೋಚಾರಮು ನೀಕು ಪೋವಕುಪಾಯ

ನೀ ಮೋಚಾರಮು ನಾಕು ಪೋವಕುಪಾಯ

ಅದ್ದು ಮುದ್ದು ಅಡವಿ ಪಾಲಾಯ

೧೭. ಏದಂತರಾಲು ಮಾಲು

ನಾಕೇಮು ಅರ್ಥಂಲೇದು

ಎಡ್ಮ ಕಾಲುತೋನಿ ತನ್ನಿ ಇಲ್ಲಂತ ಪಡೇಸಿ

ಅತ್ತಮಾಮನಿ ಗುಂಜುಕೋನಿ ವಚ್ಚಿ

ಇದ್ದರು ಪ್ರಾಣಂತೀಸಿ ಬಿಡ್ಡನಿ ತೋಲ್ಕೋನಿ ಎಲ್ಲುತ

ಚೂಸಿನ ಜನಂ ಏಮಂಟರು

ಊರಿಕಿ ಎಲ್ಲಿ ವಚ್ಚಿ ಪನ್ನೆಂಡೇಂಡ್ಲು ದಗ್ಗರ ಕಷ್ಟಂ ಚೇಸಿ

ಲಾಸ್ಟುಕು ಅತ್ತಮಾಮ ಜಲ್ಮಂ ತಿನಿ ಪಿಲ್ಲನಿ ತೀಸ್ಕ ಪೋಯಿಂಡು

ರಂಡಕೊಡ್ಕು ಅನಿ ಅಂಟಾರು

ಈ ಮಾಟ ನೇನು ಅನುಪಿಂಚಕೋನು

ಕುಸೋನಿ ಮಾಮ ಎನ್ನೊದ್ದುಲು ಇಂಟ್ಲ ಕೂಸುಂಟಡು

ನೇನು ಕಚೇರಿಲ ಕೂಸುಂಟ

೧೮. ಊರಿಲ ಆಡಿಪಿಲ್ಲಲು ಕಂಡ್ಲ ಚೂಸಿ

ಕೊಡ್ಕ ಚಿನ್ನಬಾಲಗಿರಿರಾಜ

ಎನ್ನೊದ್ದುಲು ಕಾಸುಕೋನಿ ಕುಸುಂಟವು

ವಾಡು ಇಯ್ಯಕುನ್ನೋಡು ಅಯ

ನೂವು ಚೇಸುಕುನ್ನೋಡು ಅಯ್ತಿವಿ

೧೯. ಸೇತುಕ್ಕಿಂದ ರೈತುಲ್ಲಾರ

ಮಂಗಲೋನಿ ತೋಲ್ಕರಾ ಪೋಂಡಪ್ಪ

ಚೇತುಕ್ಕಿಂದ ರೈತುಲು ಪೊಯ್ಯಿ

ಮಂಗಲೋಳ ಇಂಟಿಕಿ ಪೊಯ್ಯಿ ಮಂಗಳೋಳನಿ ತೋಲ್ಕೊಚ್ಚಿರಿ

ಪೋಲವ್ವ ನೆತ್ತಿ ಕತ್ತರಿಚ್ಚಿ

ಮೂಡು ಉಲಿಗಡ್ಡಲು ತೆಚ್ಚಿ ಕಟ್ಟಿ

ಜೇಡಿಗಿಂಜಲು ತೆಚ್ಚಿ ಜೇಡಿ ನಾಮಲು ಪೆಟ್ಟಿರಿ

ನಲ್ಲ ಗಾಡ್ದಿನಿ ಪಟ್ಟು ಕೊಚ್ಚಿರಿ ಗಾಡ್ದಿಮೀನ ಕುಸ್ಸಪೆಟ್ಟಿ

ಒಕ್ಕಮೋಪು ಈತ ಬಡಿಗೆಲತೋನ ಬೊಟ್ಟುಕುಂಟ

ದೀವಿಬಾಜಲತೋಟ ಸಪ್ಪುಡ ಚೇಸುಕುಂಟ

ಊರು ಸುಟ್ಟಿ ಏಡು ಸುಟ್ಲು

ಆಯಮ್ಮವಿ ಮೆರಿಪಿಚ್ಚಿರಿ

ಊರಿಕೊಕ್ಕ ಪರ್ರು ದೂರಂ

ಸುನ್ನಂ ಬಟ್ಟಿಕಿ ತೆಚ್ಚಿ ಸುನ್ನಂ ಬಟ್ಟಿಲ ಏಸಿರಿ

ಸುನ್ನಂ ಬಟ್ಟಿಲ ಕಾಲಿ ಪೊಯ್ಯಿಂದಿ

೨೦. ನೀವು ಇಚ್ಚಿನ ಬ್ರತುಕು ಭಾಗ್ಯಂ ಮಸ್ತುಗ ಉನ್ನದಿ

ಮುತ್ಯಾಲು ಉನ್ನವಿ ರತ್ನಾಲು ಉನ್ನವಿ

ಏನಿಗಾಲು ಗುರ್ರಲು

ಮಸ್ತು ದ್ರವ್ಯಂ ಉಂಟೆ ಏಮಿ ಚೆಯ್ಯಲ

ಪೊಟ್ಟಿಲ ಸಂತಾನಮು ಲೇದು

ಸಂತಾನಮು ಕೋಸಂ ನೀ ಸ್ಥಳಂಕಿ ವಚ್ಚಿನ

ನಾಕು ಸಂತಾನಮು ಇಯ್ಯಾಲ ಪರಮಾತ್ಮುಡ

ಸಂತಾನಮು ಇಸ್ತ ತಪಂ ಭಿನ್ನಂಚೆಯಿ

ಗಟ್ಟಿ ಇಸ್ತವೇಮಿ ದೇವುಡ ಅಂಟದಿ

ಗಟ್ಟಿ ಇಸ್ತ ದಿಗಮ್ಮ

ತಪಂ ಭಿನ್ನಂಚೇಸಿ ದಿಗಿಂದಿ

೨೧. ಈ ರಾಜ ಅಕ್ಕಡ ಪೋತಾಡು ಇಕ್ಕಡ ಪೋತಾಡು

ಇಂಟಿಕಿ ವಸ್ತಾಡು

ಬಿಡ್ಡಲು ಬಿಡ್ಡಲು ಅಂಟ ಅಡುಗುತಾಡು

ಬಿಡಲಮೀನ ಪಾಣಂ ಉನ್ನುಡು

ನಾಮೀನ ಪಾಣಂಲೇದು

೨೨. ವಚ್ಚಿನ ಬಿಡ್ಡಲ್ಲಿ ತೋಲುಕುನೆ

ಬಂಗಾರು ಜಾಲೆಟ್ಲವಚ್ಚಿ

ಬಿಡ್ಡಲ್ಲಿ ಜಳಕಂ ಚೇಸಿ

ಉತ್ತಿವ ಬಟ್ಟಲು ಇಚ್ಚೆ

ಬಟ್ಟಲು ಏಸುಕೋನಿ ಬೋಜನಂಕಿ ಕುಸುನ್ರಿ ಬಿಡ್ಡಲು

ಬೈಟ ಪೆದ್ದ ಮಂದಿ ಚೂಸ್ತಾರು

ಬಿಡ್ಡಲ ಭೋಜನಂಕಿ ಲೋನ ಸೀಕಟಿಂಟಕ್ಕು ತೋಲುಕೋನಿವಚ್ಚಿಂದಿ

ಬಿಡ್ಡಲಿಕಿ ಗಿನ್ನೆಲ ಬುವ್ವ ಪೆದ್ತೆ

ಆ ಗಿನ್ನೆಕಿ ಇಸಂ ಎಕ್ಕುತದಿ

ಏಳು ಇಸ್ತಾರಾಕುಲು ತೀಸ್ಕೋನಿ ವಚ್ಚಿಂದಿ

ಏಡು ಮಂದಿ ಬಿಡ್ಡಲಕಿ ಏಸಿಂದಿ

ವಂಡಿನ ಬುವ್ವ ಏಡುಮಂದಿಕಿ ನೆತ್ತಿಕಿ ಒಕ್ಕ ಬುಕ್ಕ ಪೆಟ್ಟಿಂದಿ

ಬುವ್ವಮೀನ ನೆಯ್ಯಿ ಅನಿ ಜೇಡಿನೂನೆ ಪೋಸಿಂದಿ

ಏಮಿತಲ್ಪನಿ ಚಿನ್ನ ಪಿಲ್ಲಲು

ನಾಲ್ಕು ಮೊಕಂ ಅನ್ನಂ ಕಲ್ಪುಕೋನಿ ಬಿಡ್ಡಲು ತಿನ್ನಾರು

ತಿನ್ನ ಒಕ್ಕ ಗಂಟ ಪೊದ್ದುಕು ಕಲಿಪಿನ ಚೇತುಲು

ಕಾಕಲು ಲೇಸಿಂದಿ

ತಿನ್ನ ನೋರು ಬೊಗ್ಗಲು ವಚ್ಚಿನವಿ

ಕಡುಪುಲ ಅರ್ಭಟಂ ಲೇಸಿಂದಿ

೨೩. ರಾಜ ಕಚೇರಿ ಇಡಸಿ ರಾಜ ಭಾರ್ಯ ಇಂಟಿಕಿ ವಚ್ಚೆ

ವಚ್ಚಿನ ರಾಜುಕು ಉಡ್ಕು ಉಡ್ಕು ನೀಳು ಪೋಸೆ

ಉತ್ತಿನ ಬಟ್ಟಲು ಇಚ್ಚೆ

ಬಚ್ಚ ಭೋಜನಾಲು ಚೆಯ ಪೆಟ್ಟಿ

ಏಮಯ್ಯ ರಾಜ

ನೀ ಬಿಡ್ಡಲು ಮೀದ ಚಾನ ಪಾನಂ ಉಂಡವು

ನನ್ನೇಮಿ ತಿನ್ನವಂಟ ಅಡ್ಗವು

ನಾಕು ಜರಮು ವಚ್ಚಿಂದನಿ ಅಡ್ಗವು

బిడ్డలు మీదనే బాన పానము
ఈ ఏడు మంది బిడ్డల్ని
అరంద అడవిల ఇడసి వస్తె
నీ ఇంట్ల సంసారము చేస్త
బిడ్డలిగన్న ఇడసి రాక పోకుంటే
ఒెరె రవికె చేత పట్టుకోని
నా తల్లిగారింటికి నేనెల్లిపోత
భామ మాణిక్యలదేవి
అటువంటి మాట అడరాదు భామ
బిడ్డలు పెద్దోళ్ళు అయినొంక
పరాయి ఇంటికి ఇస్తె పోతరు
మన ఇంటి దీపము కాదు బిడ్డలు
ఆ బిడ్డలమీన ఎందుకంట ఇంథ పొట్కనొప్పి

౨౪. తపం భిన్న చేసి దిగింది
ముత్యాల కొంగు సాపుకోని
ఈయి దేవుడ నాకు సంతానము
నీకు సంతానము ఇస్త
నీకు ఒక్క వచనము అడుగుత
ఆ వచనముకి నాకు వచనము ఇయ్యాల
ఏమి అడుగుతావు అడుగు దేవుడా
ఏడు బిడ్డల సంతానము నీకు ఇస్త
బిడ్డలు పుట్టిన తొమ్మిది దినాల్కి
ఏడు సిరసుల నాగేంద్ర వస్తడు
వచ్చి నీకు కాట్కబెట్టి నిన్ను తీస్కోని వస్తడు
నీ జల్మము నా తోన
నీ బిడ్డలు ఏడు మంది నీ మొగని తోన
చెయ్యి ముట్టి ఇచ్చేదిలేదు

ತೋಟಲ ಎಲ್ಲಿಪೋ

ಮಲ್ಲೆಪುವ್ವುಲ ಚೆಟ್ಲಲ್ಲ ಏಡು ಮಲ್ಲೆ ಪುವ್ವುಲು ತೆಂಚುಕೋ

೨೫. ಆ ಏಡು ಮಂದಿ ಬಿಡ್ಡಲು ಚೂಸಿ

ಈ ಸವತಿ ಪಿಲ್ಲಲು ಎವ್ವರು ಸಾಕಲೆ

ಎವ್ವರು ಜೋಪಾನಂ ಚೆಯ್ಯಲ

ಕಂಡ್ಲುಮಂಡೆ ಮಾರುದಲ್ಲಿಕಿ

೨೬. ಬಾಯಿಲ ಏಸಿಂದಿ ಏಡು ಮಂದಿ ಬಿಡ್ಡಲ್ನಿ

ಪೆದ್ದ ಬಂಡ ತೆಚ್ಚಿಂದಿ

ಬಾಯಿ ಮೀದ ಬಂಡ ಮೂಸಿಂದಿ

ರೇಣುಕಂಪ ತೆಚ್ಚಿಂದಿ

ಇಂಟ್ಲಾಕು ವಚ್ಚಿ ಇಲ್ಲಂತ ಅಲ್ಕಿಂದಿ

ಅಲ್ಕುಕೋನಿ ಬಂಗಾರು ಜಾಲಟ್ಲ ವಚ್ಚಿಂದಿ

ನೆತ್ತಿಕಿ ಪೋಸುಕುನ್ನದಿ

ನೆತ್ತಿಕಿ ಪೋಸುಕೋನಿ ವಂಟ ಪೋಲೇಲು ಚೇಸುಕುನ್ನದಿ

ಪಾಲುಬುವ್ವಲು ಚೇಸುಕುನ್ನದಿ

ಬಚ್ಚ ಬೋಜನಾಲು ಚೇಸುಕುನ್ನದಿ

ಚೇಸು ಕೋನಿ ಸಮಿತಿ ಪೀಡ

ಈಡಿಕೆ ಅರವಾಯ

೨೭. ನವಭೋಜರಾಜ ಕಚೇರಿ ಲೋಪಟ ಕುಸ್ನತೋನ

ಯೋಚನ ಚೆಯ್ಯಪಟ್ಟೆ

ತೊಮ್ಮಿದಿ ದಿನಾಲ್ಕಿ ನಾಗರಾಜ ವಸ್ತಡು

ಭೂಲಕ್ಷ್ಮಿ ಕಾಟು ಇಚ್ಚೆ ಭೂಲಕ್ಷ್ಮಿ ಕೊಂಡ ಪೋತಾಡು

ಇಂಟಿ ಸುಟ್ಟುಮೂಟು ಅಗ್ಗಿಗುಂಡಂ ತೋಡಿಪಿಸ್ತಾಡು

ರೈತುಲು ತೋಲುಕೋನಿ ವಚ್ಚಿ ತೋಡಿನಾಡು

ತೋಡಿ ಸಿರಿಗಂಧಂ ಸೆಕ್ಕಲು ಏಸಿ

ಅಗ್ಗಿಗುಂಡಂ ಚಾಲು ಚೇಸಿನಾಡು

ಇಂಟಿ ಸುಟ್ಟಮೂಟ ಧಗಧಗ ಮಂಡುತುನ್ನದಿ

ಚೀಮ ಪೋವನಿಕ ಸಂದುಲೇದು

ಸಂದುಲೇಕುಂಡ ಅಗ್ಗಿಗುಂಡಂ ಚಾಲು ಚೇಸೆ

೨೮. ನಾ ಪಾಣಂ ಪೋತದಿ ನೇನು ಸಸ್ತ

ಏಡು ಮಂದಿ ಪಿಲ್ಲಲ್ನಿ ಮಂಚಿಗ ಜೋಪಾನಂ ಚೇಸ್ಕೊ

ಬಿಡ್ಡಳಿ ಅದ್ದುಮದ್ದು ಅಡವಿ ಪಾಲಾಯ

ಬಿಡ್ಡಲ ವೋಚಾರಂ ನೇನು ಚೂಡ ಪೋತಿ

ನೀ ಬಿಡ್ಡಲು ನೀ ಚೇತುಲ ರಾಜ

ರಾಜ ತೊಡಮೀನ ಭೂಲಕ್ಷ್ಮಿ ತಲ ಪಟ್ಟಿ

ಪಳ್ಳ ಪಳ್ಳ ಕನ್ನೀಳು ತೀಸಿ ಪ್ರಾಣಂ ಇಚ್ಚಿಂದಿ

೨೯. ಗುರ್ರಮಂಥ ಲಘು ವಚ್ಚಿಂದಿ

ಏನ್ಗಂತ ಶಕ್ತಿ ವಚ್ಚಿಂದಿ

ಯಾಡ ಉಂಡರು ತಲ್ಲಿ ನಾ ಬಿಡ್ಡಲು ಸೂಪಿಯಮ್ಮ

ಮೀ ಕಾಳು ಮಕ್ಕುತ

ವಚ್ಚಿ ವಾಳ ಕಾಳಕು ಪಡ್ಡಡು

ರಾಜ ಮಾ ಕಾಳಕು ಎಂದುಕು ಪಡ್ತವು

ದಾ ತೋಲ್ಕ ಪೋತಮು

ಎಂಟ ಪೆಟ್ಟುಕೋನಿ ಪಗಡಿ ಬಜಾರ್ಲ ವಸ್ತುನ್ನಾರು

ಬಿಡ್ಡಲು ಆಡವಸ್ತುನ್ನಾರು ಚೂಡು ರಾಜ

ಬಿಡ್ಡಲು ಚೂಪಿಚ್ಚಿ ವಾಳು ಎನ್ನಿಕಿ ಆಯಿರಿ

ಬಿಡ್ಡಲು ಚೂಸೆಟಾಳಕ ಉರ್ಕಿ ಉಕ್ಕಿ ವಚ್ಚಿ

ಬಿಡ್ಡಲತಾನಿಕ ವಚ್ಚಿ ಕಾಳಮೀನ ಬೋರ್ಲಪಡ್ಡಡು

೩೦. ಕನ್ನತಲ್ಲಿ ಭೂಲಕ್ಷ್ಮಿ

ನಿಜರೂಪಂ ಭೂಲಕ್ಷ್ಮಿ ಆಯಿ ನಿಲಪಡೆ

ತಲ್ಲಿ ತಟ್ಟು ಪಿಲ್ಲಲು ಚೂಸಿರಿ

ಚೂಸಿ ಪಿಲ್ಲಲು ತಲ್ಲಿ ಕಾಳಮೀದ ಪಡಿರಿ

ದುಃಖಂಚೆಯ್ಯ ಪಟ್ಟಿರಿ

ಕನ್ನತಲ್ಲಿ ಭೂಲಕ್ಷ್ಮಿ ಕನಿ ಮಂದಿ ಚೆಯ್ಯಿಕಿ ಇಚ್ಚಿ ಪೋಯಿನವಮ್ಮ

೩೧. ಎಕ್ಕಡ ಪೋತಿರಿ

ಯಾ ದಿಕ್ಕುಕಿ ಪೋತಿರಿ ಮೀರು

ಪಚ್ಚಿ ಪರದೇಶಿನಿ ಚೇಸಿ ಪೋತಿರಿ

ಬಜಾರು ಬಜಾರು ತಿರುಗಿ ಚೂಸ್ತಡು

ಊರಂತ ತಿರುಗಿ ಚೂಸೆ

ಯಾಡ ಚೂಸ್ತೆ ಬಿಡ್ಡಲು ಲೇರು

ಚೆಟ್ಟು ಚೆಟ್ಟು ತಿರುಗಿ ಚೂಸ್ತಡು

ಗುಟ್ಟ ಗುಟ್ಟ ತಿರುಗಿ ಚೂಸ್ತಡು

ಯಾಡ ಬಾಯಿಂಟೇ ಆಡ ದಿಗಿ ಚೂಸ್ತಡು

ಸೇದಿ ಬಾಯಿ ಸೇದಿ ಚೂಸ್ತಾಡು

ಯಾಡ ಚೂಸಿನ ಗೂಡ ಬಿಡ್ಡಲು ಕಂಟಿಕಿ ಕನಪಡರು

ಆಕಾಶವೇಣಿ ಐಕ್ಯಂ ಚೇಸುಕುನ್ನವ

ಭೂಲಕ್ಷ್ಮೀದೇವಿ ದಾಪೆಟ್ಟು ಕುನ್ನವ

ಎಕ್ಕಡ ಪೋತಿರಮ್ಮ ಬಿಡ್ಡಲಾರ

ರಾಜ ದುಃಖಂ ಚೇಸ್ತಾಡು

೩೨. ಶರಣು ಶರಣು ಶಾರದಾಂಬ

ಪುಟ್ಟಿತಿವಮ್ಮ ಬಿಜವಾಡಲೋನ

ನಿಲಕುಂಟಿವಿ ಮಹೇಶ್ವರಿ

ವಾಡ ವಾಡ ತಿರುಗೇಡು ತಲ್ಲಿ

ಬಿಜವಾಡಲ ನಿಲಕುಂಟೆವಮ್ಮ

೩೩. ಶರಣು ಶರಣು ಶರಣು ಓಯಮ್ಮ

ಅಮ್ಮ ಮಧುರಾಂಭ

ಶರಣುಚೇಸೆ ನಾ ಬಾರವಮ್ಮ

ಅಮ್ಮ ಮಧುರಾಂಭ

ಸಂಕಲ ಬಾಲಲತೋಟಿ ಒತ್ತುರಮ್ಮ ನೀ ಸೇವಕು

ಗುಡಿಲೋ ಬಂಡಾರುತಲ್ಲಿ

ಗುಡಿಸುಟ್ಟ ಯಾಪರಿಲ್ಲಲು

ನೀ ಗುಡಿಕಿ ಮೇಮು ಒತ್ತುಮು

ನೀ ಸ್ನಾವ ಸೇತುಮು

ತೆಲ್ಲ ಜೀರಲತೋಟಿ

ತೆಲ್ಲ ರೈಕಲತೋಟಿ

ಗಂಡ ಜೋತುಲತೋಟಿ

ಮ್ಯಾಕ ಪೋತುಲತೋಟಿ

ವತ್ತುರಮ್ಮ ನೀ ಸೇವಕು

ಸಂಕಲ ಬಾಲಲತೋಟಿ

ನಿಂಡು ಗಡ್ಡಲು

ಗಂಡಜೋತುಲವತ್ತುರಮ್ಮ

ನೀ ಸೇವಕು

೩೪. ಅಮ್ಮ ನೀಕು ಏಮಿ ಕಾವಲೇ

ಸಾಮಿ ನಾಕು ಕಾವಲ್ಸಿಂದಿ ಸಂತಾನಂ

ಪಟ್ಟಮ್ಮ ಅಂತ ಕೋರಿಕೆ ಉಂದಿಗದ

ಸಂತಾನಂ ಇಸ್ತುಂಡ

ಸಾಮಿ ಇಸ್ತವ ಸಂತಾನಂ

ಒಕ್ಕಟೆ ಆರ್ತಿ ಪಂಡು ರೆಂಡು ತೀಗ್ಯ ಮಲ್ಲೆಲು

ಆಯಮ್ಮ ವಡಿಲೋ ಪೆಟ್ಟೆಂಡು

೩೫. ಶನಿಮಾತ್ಮನಿ ಬಾಯ್ಲುಕಿ ಇಡ್ಸೆ

ಕೋಳನಿ ಆಗಾರಂ ಇಸ್ತೆ ಕೋಳನಿತಿನು

ಯಾಟಲ್ನಿ ಆಗರಂ ಇಸ್ತೆ ಯಾಟಲ್ನಿತಿನು

ಜಲಂ ಉತ್ಕುಂ ವಚ್ಚಿನ ನೀಳುತ್ರಾಗಿ

ಬಂಡಾಯಿ ಪಡಲೇ

೩೬. ಏಮಯ್ಯ ಧರ್ಮಲವಾರು

ನಾವ್ವ ತೋಡಿನ ಬಾವುಲ ನೀಳುವಾಡಿ

ಸ್ನಾನಂ ಚೇಸಿ ಮುಕ್ತಿ ಫಲಂ ಇಚ್ಚಿ ಪೋತಮು

ಲೇಕಪೋತೆ ಎಲ್ಲಿ ಪೋತಮು

ಸಾಮಿ ಏಮಿ ಚೆಯ್ಯಲ

ಏಡು ಬಾವುಲು ತೋಡಿತ

ಏ ಬಾವುಲ ತೋಡಿನ ಬಂಡನೆ ಪಡ್ಡದಿ

ನೂವು ಲೇದನು ಲೇದಂಟೆ ಮೇಮು ಪೋತಮು

ಸಾಮಿ ನಾಕು ಲೇದನಿ ಶಬ್ದಂ ನಾಕು ನೋಟಿತೋ ರಾದು

ಅಯ್ಯೆ ಲೇದನಿ ಶಬ್ದಂ ನೀ ನೋಡಿಕಿ ರಾದು ಗದ

ನೀ ಕೊಡ್ಕನಿ ತೆಚ್ಚಿ ಬಾವುಕಿ ಆರಾಂ ಇಯ್ಯಿ

೩೭. ನಾಯನ ರೈತುಲ್ನಾರ

ಮೀರು ಪೋಯ್ಯಿ ನಾ ಕೊಡ್ಕುನಿ ತೆಚ್ಚಿ

ಬಾವುಕಿ ಆರಾಂ ಇಯ್ಯನಿಕೆ

ನಾ ಬಾರ್ಯಕಿ ಚೆಪ್ಪಿರಿ

ರೈತುಲು ವಚ್ಚಿರಿ

ಅಮ್ಮ ಭಾಗೀರಾಥಿದೇವಿ

ಭಗವಂತುಡು ವಚ್ಚಿ ನೀ ವೋಗಿನ್ನಿ

ನೀ ಕೊಡ್ಕುನಂಟ ಬಾವುಕಿ ಆರಾಂ ಇಯ್ಯಮನಿ

ಚೆಪ್ಪಿಂಡಮ್ಮ

೩೮. ಬಾರ್ಯ ಭರ್ತಕಲ್ಸುಕೋನಿ

ಪನ್ನಂಡಾಮಡ್ಡ ದೂರಂ ನಡ್ಚಿರಿ

ಆ ಬಾವುಲುನ್ನ ಶನಿಮಾತ್ಮುಡು

ಮಲ್ಲ ಎಂಟ ಪಡೆ

ಶನಿಮಾತ್ಮುಡು ಈಳ ಎಂಟ ಪಡೆ

ಎಕ್ಕಡಿಲೇಂದಿ ದೂಪಾಯೇ

ಶನಿಮಾತ್ಮುಡು ಅಯಮ್ಮಕಡುಪುಲ ಜೊರ್ರೆ

ದೂಪಕು ತಾಳಲೇಕ

ಅಯ್ಯ ನಾ ಪ್ರಾಣನಾಥ ಧೂಪಕು ನಿಲ್ಲಲೇದು

ದಾಮುಕಿ ತಾಳಜಾಲನು

೩೯. ರಾಜು ಬ್ರಹ್ಮರಾಕ್ಷಸಿವುನ್ನ ಬಾವುಕಿ ವಚ್ಚೆ

ಆ ಬ್ರಹ್ಮರಾಕ್ಷಸಿ

ಆಹಾ! ಎಸೊಂಟಿ ಮಹಾರಾಜು

ಏಮಿ ಮಹಾನುಭಾವುಡು

ಇಂತ ನಾಲ್ಗು ರಾಜ್ಯಲಮಂದಿ ನುಂಗಿನ

ಕಾನಿ ಇಟವಂಟಿ ರಾಜು ಅನೆದಿ

ಮೇಘಂಲೋನ ಮೆರ್ಪು ನೆರ್ಸನಟ್ಲ ಉಂಡದು

ಈ ರಾಜನಿಗಾನ ನುಂಗಿತೆ

ಬಂಗಾರ ಕಡ್ಸೆ ಮೈನ ಕಡ್ಮುಲ ಉಂಟಡು

ನೇನು ರಾಜು ನಿ ಮಿಂಗುತನಿ ಗಡಗಡಾಂಟ ಬೈಟಿಕಿ ಎಲ್ಲೆ

ರಾಜು ಸೇತುಲ ಕತ್ತಿಲೇದು ಕಠಾರಲೇದು

ರಾಜು ಒಕ್ಕ ಗಂಟದಗ್ಗೆರ

ಬ್ರಹ್ಮ ರಾಕ್ಷಸಿ ದಗ್ಗೆರ ಯುದ್ದಂ ಚೇಸೆ

ರಾಜುನಿ ಗುಟಕ್ಕನಂಟ ಮಿಂಗೆ

೪೦. ಸೀರಲೇದು ರೈಕೆಲೇದು

ರೆಂಡು ಟೇಕು ಆಕುಲ ತೀಸುಕುನೆ

ಪೊಟ್ಟಮೀನ ಒಕ್ಕ·ಟೇಕು ಆಕು ಕಟ್ಟುಕುನೆ

ತಿರ್ಗುಕುಂಟ ಪಗಡಾಲ ಬಂಡಕು ವಚ್ಚೆ

ಆ ಬಂಡಕಾಡ ಎವ್ವರಂಟೆ ಸೆಂಚೋಳು

ವಾಳೂ ಏಡು ಮಂದಿ ಆಡಿಪಿಲ್ಲಲು

೪೧. ಕೊಡ್ಕು ಪನ್ನಂಡಾಮಡ ದೂರಂ ನಡಿಸಿಂದು

ಅಕ್ಕಡೆ ನರುಡತಿರುಗನಿ ಸ್ಥಳಲ

ಆಂಜನಯ್ಯ ಸ್ವಾಮಿ ಗುಡಿ ಕಾನೊಚ್ಚಿಂದಿ

ಆ ಗುಡಿಲ ಪೊಯ್ಯಿ ಪನುಕುನೆ

ನಡ್ಸಿ ನಡ್ಸಿ ಯಾಸರಿಕೆ ವಚ್ಚಿಂದಿ

ಅನ್ನಂಲೇದು ಆದಾರಂ ಲೇದು

ಮೊಯ್ಯಿ ಆಡ ನಿದ್ರ ಪಟ್ಟೆ

ಆಂಜನಯ್ಯ ಸ್ವಾಮಿ ಪ್ರತ್ಯಕ್ಷಂಗಾಯ

೪೨. ಈ ಗುಡಿಲಕು ಪಿಲಗಾಡು ವಚ್ಚಿಗದ

ನಾ ಸೀರರ್ಕಿ ತೀಸ್ಕೋನಿ

ಏಮಮ್ಮ ಪುಟ್ಟು ಬತ್ತೆಲ

ನಾ ಗುಡಿಲಕು ವಚ್ಚಿನವು

ನೂಕು ತೆಲ್ವಿಲೇದ, ಬುದ್ದಿಲೇದ

ಪಿಲಗಾಡು ಯಾಡ ಉಂಡಡು ಸೂಡು

ಪಿಲಗಾನಿನಿ ಮಿಂಗಿನನ ಗುಡ್ಯಂತ ಸೂಡು

ಯಾಡ ದಾಗಿಂಡು ಸೂಡು

ಆ ಪಿಲಗಾಡು ಬಲ್ಲಿ ಆಯಿ

ದೇವಾಂಜನ ಎದಲಕು ರವ್ವಲತೋ ಕೊಟ್ಟಪಟ್ಟೆ

ಚೊಡುತಾತ ಲೇದಂಟವಿ

ರವ್ವಲತೋ ಕೊಡ್ತುನ್ನಾಡು

೪೩. ಮಾಮನಿ ಮಿಂಗಿಂದಿಕಾಕ

ಮಲ್ಲ ಕೊಡ್ಕುನಿ ಸಂಪಲನಿ

ಇಂತಬಾದ ಪೆಟ್ಟಪಿಸ್ತುನ್ನದ

ಬೈಟಕಿ ಎಲ್ಲು ಅನೆ ದೇವಾಂಜನ

ಬ್ರಹ್ಮರಾಕ್ಷಸಿ ಬೈಟಕಿ ವಚ್ಚೆ

ಎಡ್ಮ ಪಾದಂ ತಲಮೀನ ಪೆಡ್ತೆ

ಬಗ್‌ಮಂಟ ಮಂಡಿ ಮಸಿವಾಯಿ ಪಡೆ

೪೪. ತಮ್ಮುಲು ವಚ್ಚಿ ಅನ್ನನರೇಂದ್ರರಾವುಕಿ

ಖಂಡೆರಾಯ್ದು ಸಿದ್ದೋಜಿರಾಯ್ದು ಅಡ್ಗುತುನ್ನಾರು

ಅನ್ನ ಚೆಪ್ಪುತಾಡು

ಮನ ಆರ್ಯವಾಳ ಕುಲಂಲ

ಭಾಗಮು ಪಂಚೆದಿಲೇದು

ಮೀಕು ಕಾವಲಂಟೆ ಧನಧಾನ್ಯಂ ಕೊನಪೊಂಡಿ

೪೫. ಇದ್ದರು ಅನ್ನತಮ್ಮುಲು ಬಾರ್ಯಲು ಎದುರಿ ವಚ್ಚಿರಿಗದರ
ಪಾಲು ಅಡ್ಗಿರಿಗದರ
ಖಂಡೆರಾಯ್ಡು ಸಿದ್ದೋಜಿರಾಯ್ಡು
ಅಂತ ಪಂಚುಕೋನಿ ವಚ್ಚಿನಮು ಅನಿ ಚೆಪ್ಪಿರಿ
ಬಾರ್ಯಲು ಒಪ್ಪದಾನಂ ಕಾಕ ಪೊಯ್ಯಿರಿ
ಉನ್ನ ಲಕ್ಷ್ಮಿ ಇಂಟ್ಲ ಪೆಟ್ಟಿ
ಉಲಿಗಡ್ಡಮೀದ ಪೊಟ್ಟಂತೆ ಪಂಚಿ ಇಚ್ಚಿಂಡು
ಮೀ ನೋರು ಕೊಟ್ಟಿ
ಏಮಿ ಲಚ್ಚಿಮಿ ಉಂಡದಿ ಮಾಕು ಚೆಪ್ಪರಿ ಅನ್ನರು
ಕಲಿಕುಂಡ ಲಚ್ಚಿಮಿ ಪಂಚಿತೆ ಭಾಗಮು ತೆಗುತದಿ
ಆದಿ ಪಿಲ್ಲಲ ಸಂಗತಿ ಮಾಕಿ ಎರ್ಕಲೇದು
ಮೀ ಅಕ್ಕ ದಾರುಕಾಯಮ್ಮ ದಗ್ಗರ ಎಲ್ಲಿ ಪೋರನ್ರಿ ಮೊಗ್ಗು
ತಲಾಕ ರೆಂಡು ಚೆಂಬುಲು ಚೇತುಲ ಪೆಟ್ಟಿರಿ
ಕೌಲೇಶಕೋಟ ಮೌಲೇಶಕೋಟ ವಚ್ಚಿರಿ
೪೬. ವಾಡು ಗಡಿಚ್ಚುಕ್ಕುನ್ನ ಎಂಡಿ
ಬಂಗಾರು ಸೊತ್ತು ಅಮ್ಮಿಂಡುಗದರ
ಪಿಲ್ಲಲ್ಕಿ ಸಾಕ ಪಟ್ಟೆದಗರ
ಪಿಲ್ಲಲ್ಕಿ ಧೈರ್ಯಂ ಚೆಪ್ಪಪಟ್ಟೆಗದರ
ಪೆದ್ದಕೊಡ್ಕು ಏಡೆಂಡ್ಲಾಯು
ಚಿನ್ನಕೊಡ್ಕು ಆರ್ಲೆಂಡ್ಲಾಯ
೪೭. ಎರ್ರಟಿ ಎಂಡಲ ಸನ್ನ ಉಸ್ಕಲ
ನಿಲಪಟ್ಟಿನ್ನಾಡುಗದರ ಕಚೇರಿಮುಂಗಲ
ಚೀನ್ನೋನ್ಕಿ ಫಿರೋಜಿಕಿ ಕೋಪಂ ವಚ್ಚೆಗದರ
ಅನ್ನ ಮನಪೆಂಡ್ಲಿ ಚೇಸ್ತನನಿ ತೋಲ್ಕೊಚ್ಚೆಗದರ
ಸದ್ದುನೆರ್ಡು ತನನಿ ತೋಲ್ಕೊಚ್ಚೆಗದರ
ಇದಿ ಪೆದ್ದ ಪೆಂಡ್ಲಿ
ಸಾವನಿಕ ತೆಚ್ಚಿಂಡು ಅನಿ ಅನುಕುಂಟಾರು

೪೮. ಬ್ಯಾಗರಿ ಎಲ್ಲಯ್ಯ ಚೂಡುಗದರ

ಮಲ್ಲ ಕಚೇರಿಕಿ ತೋಲ್ಕೊಚ್ಚಿಗದರ

ಮುಗ್ಗುರ್ರಿ ಮೂಡು ಗೊಡ್ಡಂಡ್ಲು ಇಚ್ಚಿನಾಡುಗದ ಸಿದ್ಧೋಜಿರಾಜ

ಪನ್ನೆಂಡು ಬಂಡ್ಲು ಕಟ್ಟೆಲು ಕೊಟ್ಕೋನಿ ರಾ ಅನ್ನಡುಗದ

ಗಾಸಗಾಳು ಬಂಡ್ಲು ಕಟ್ಟಿರಿಗದ

ಪಿಲ್ಲಲ್ನಿ ಕುಸ್ಸ ಪೆಟ್ಟಿರಿ ಬಂಡಿಮೀನ

ಇಪ್ಪುಡು ಏಡೇಡು ಗಟ್ಲಲ್ಲ ತೋಲ್ಕೊಚ್ಚಿರಿಗದ

ಪೆದ್ದಕೊಡ್ಕು ಗೊಡ್ಡಲಿ ಚೇತುಲ ಪಟ್ಟು ಕೋನಿ

ಚೆಟ್ಟು ಕೊಟ್ಟನಿಕಿ ಪಾಯೆಗದ

ಗೊಡ್ಡಲಿ ಪಟ್ಟಿನ ಎಗರಿ ವಚ್ಚಿ ಕಾಲುಕಿ ಪಡೆಗದ

ರಣರಣಮು ರಕ್ತಮಾಯೆಗದ

ಆ ಗಾಸಗಾಳಕಿ ಅಕ್ಕರೆ ವಚ್ಚಿಗದ

ಪಿಲ್ಲಲ್ಕಿ ಆಡನೆ ಕುಸ್ಸ ಪೆಟ್ಟಿಗದ

ವಾಳೆ ಕಟ್ಟೆಲು ನರ್ರಿ ಬಂಡ್ಲು ನಿಂಪಿರಿಗದ

೪೯. ಏ ಸೋಮರಾವು ಅನೆ

ಏಂದಿ ನಾಯುನ ಅನ್ನರು

ಮೀ ಅಕ್ಕ ರುಕುಂಬಾಯಿ

ಪೆಂಡ್ಲಿ ಚೇಸಿಚ್ಚಿಂದಿ ಮೀಕಿ ತೆಲ್ಸದಿ

ಮುನ್ನೂಟೊಕ್ಕ ಅರವೈ ಆಮಡ ತೋಲ್ಕೊಪೋತ

ಪೊದ್ದುಗಾನ ಉಂಟೆ ಊರು ಮುಟ್ಟಿಸ್ತ

ಪೊದ್ದುತೆಲ್ಲ ಆವನಿಕ ದಗ್ಗರ ಉಂಟೆ

ಬಾಟಲ ಇಡ್ಸಿ, ಊರಿಕೆ ವಸ್ತ

ಮುಗ್ಗುರಿ ಕೊಡ್ಕುಲನಿ ಗುರ್ರಂಮೀನ ಕುಸ್ಸ ಪೆಟ್ಟೆ

ಎಸ್ಸ ಬ್ಯಾಗರಿ ಎಲ್ಲಯ್ಯ ಕುಸ್ಸೆ

ವಚ್ಚೆ ಮುನ್ನೋಟ ಅರವೈ ಆಮಡ ವಚ್ಚೆ

ತೆಲ್ಲ ಆವನಿಕೆ ದಗ್ಗೆರ ವಚ್ಚೆ

ಕೊಡ್ಕ ಇದೇ ತಾವ

ಬಡಾರಸ್ತ ಬಂಡಿತಾವ

ಮೀ ಅಕ್ಕ ಊಳಕಿ ಪೋತದಿ ಪೋಂಡ್ರಿ

೫೦. ಲಂಬಡೋಳು ತಲ್ಲಿ ಆಯಿರಿ

ಪಾಳೆ ತಂಡ್ರಿ ಆಯಿರಿಗದ

ಪಿಲ್ಲಾಲ್ನಿ ಅಂದುಕೋನಿ

ಕಾಲಿ ಇಲ್ಲು ಚೂಪಿರಿ

ಬಿಯ್ಯಂ ಪಪ್ಪು ಕಾಯಗೂರಲು ಮೊದಲಾಗಿ

ಪಾಲು ಪೆರುಗು ಮೊದಲಾಗಿ

ಚೇಸ್ಕ ತಿನಂಡ್ರಿ ಕೊಡ್ಕ ಅನ್ರಿ

ತಾಂಡಕು ವಚ್ಚಿ ಆರುನೆಲ್ಲಾಯೆ

ಪಿಲ್ಲಲು ಆರು ನೆಲ್ಲಕು ಮಜಬೂತ ಆಯ್ರಿ

೫೧. ಕಚೇರಿಕಿ ವಚ್ಚಿಂಡಗದರ

ಏಮಯ್ಯ ಮೀ ಅಲ್ಲುಂಡ್ಲು

ದೊರ ಕೊಡ್ಕುಲುಕಾದು ದೊಂಗ ಕೊಡ್ಕುಲು

ಗುರ್ರಲು ಕುಕ್ಕಲು ದೊಂಗಗತನಂಚೇಸಿ ತೆಚ್ಚಿಂಡ್ರು

ಮೇಮು ಆರುನೆಲ್ಲು ಸಾಕಿನಮು

೫೨. ಕುಕ್ಕಲು ಪಸಿ ಇಗ್ಗೆಗದ

ಗೊಲ್ಲುತೆಂಪುಕುನೆ ಕುಕ್ಕಲು

ಕೋಮಟೋಳ ಇಂಟ್ಲವಚ್ಚಿ

ದೊಂಗಲ್ನಿ ಕೊರ್ಕಿ ಎಸಿನವಿ

ರೆಂಡು ಕುಕ್ಕಲು ಯುದ್ಧಂಚೇಸ್ತವಿಗದ

ಮೂಡು ಕುಕ್ಕಲು ಇಗ್ಗಿ ಎಸ್ತುಂಡವಿಗದ

ಇಲ್ಲು ಜತ್ನಂ ಆಯೆಗದ

೫೩. ವಚ್ಚೆ ದಂಡುಕು ನಾಗಮ್ಮ ಎದುರೊಚ್ಚೆ

ದಂಡುನಿ ಚೂಸಿಂದಗದರ ಗೊಲ್ಲಳಂತ ಅದುರ್ಕ ಪೊಯ್ಯಿರಿಗದರ

ಗೊಲ್ಲನಾಗಮ್ಮ ಒಕ್ಕತೆ ಉಂಡದಿಗದರ

ಕಚ್ಚೆ ಚೇತುಲ ಪಟ್ಟಿಂದಿಗದರ

ದಂಡುಕು ಎದುರು ವಚ್ಚಿಂದಿಗದರ

ದೊಂಗಲ ದೊರಲ ಅನಿ ಅಡ್ಡುಗತದಿಗದರ

೫೪. ಸಕ್ಕಗ ಸವರಮ್ಮ ಗುಡಿಕಿ ವಚ್ಚಿಂಡ್ರು

ಸವರಮ್ಮ ಸಿಗರಂಮೀನ

ಐಚ್ಚ ವಾಗ ಮಲ್ಲೇಲ ಚೆಟ್ಟು ಉಂಡದಿ

ದೊಂಗಲು ಉಡಿ ಸಾಪಿಂಡ್ರು

ಅಮ್ಮ ಸವರಮ್ಮ ಮೇಮು ಗೆಲಿಸ್ತೆ

ಈ ಗುಡಿ ಪಲ ಕೊಟ್ಟಿ

ವಿಂಡಿ ಗುಡಿ ಕಟ್ಟಿ ಬಂಗಾರ ವಾಕುಳ ಪೆಡ್ತ

ಮೂಡು ಪುವ್ವಲು ವಳ್ಳೆ ಪಡಿನವಿ

ರೆಂಡು ಪುವ್ವಲ ಕಿಂದ ಪಡೆಗದರ

೫೫. ಇದಿ ದಸರ ಪಣಗ ಸಾಲೆ ಪಿಲ್ಲಲು ಪಚ್ಚಜಾಂಡ

ಎರ್ರಜಾಂಡ ಕಟ್ಟುಕೋನಿಗದ

ಬನ್ನಿಕಿ ವಸ್ತ್ರುಗದ

ವಚ್ಚಿ ದಂಡುಲ ಪಡಿರಿಗದ

ಮೀ ಇಷ್ಟಂ ವಚ್ಚಿನಟ್ಲ ಚೂಸುಕೋರಿ

ನೇನು ಬೈಟಿಕಿ ಪೋತಗದರ

ಸಂಗಿಶೆಟ್ಟಿ ಮಾಯಂ ಆಯಿ ಪೊಯ್ಯಿಗದರ

ಅಂತುಬಾಯಿ ಯುದ್ಧ ಚೇಸೆಗದರ

ಏಡುಲಕ್ಷಲ ದಂಡು ಕತಂಚೇಸೆಗದರ

ತುಳೆರಾವು ಕೊಡ್ಕುನುಂಟಿಗದರ

ತಾತೋಳ ರುಂಡಲು ನರ್ಕಿಪಿಚ್ಚೆಗದರ

೫೬. ಊಳೆ ಪಿಲ್ಲಗಾನವಾರು ಮಸ್ತು ಮಂದಿ ಉಂಡರು

ಊರಂತ ಗದ್ದಲ ಮಯಿಂದಿ

ಊರು ಮೀನ ಲಡಾಯಿ ಉಚ್ಚಂದಿ

ರಾಜ ಊರಿಕಿ ಭೋಜನಂ ಇಚ್ಚೆ

ದೀನಬಾಜಲತೋಟಿ

ತೊಮ್ಮಿದಿ ದಿನಾಲು ಮಗ್ಗೆ

ಲಾಸ್ಟು ದಿನಂ ರೋಜು

ಹಿಮಾಮಹೇಶಂ ಪಟ್ನಂಲ ಮಾಣಿಕ್ಯಲದೇವಿ

ನವಭೋಜರಾಜಕಿ ಪೆಂಡ್ಲಿ ಕ್ರೆನಾತ

ಸಚ್ಚಿ ಪೋತ ಚಿನ್ನಮ್ಮ

ಇಂತ ಮಜ್ಜಿಗಿ ಉಂಟೆ ಪೊಯ್ಯಿತಲ್ಲ

೫೭. ಬಂಗಾರ ಬಟ್ಟಾಲ ತೆಲ್ಲನಿ ಪಾಲೆಟ್ಲ ತಾಪುತದಿ

ಎಂಡಿ ಬಾಟ್ಟಾಲ ಎನ್ನೆಟ್ಲ ತಿನಪಡ್ತದಿ

ಕಿಂದ ಪೆಡ್ತೆ ಕೊಡ್ಕುಕಿ ಮನ್ನು ಅಂಟುತುನ್ನಾದಿ

ಬೈಟಕಿ ತೆಸ್ತೆನ ಕೊಡ್ಕುಕಿ ಎಂಡಾನ ಕೊಡುತದಿ

ಕೊಡ್ಕುಲ ಪುಟ್ಟೆನ್ನ

ಒಕ್ಕದಿನಮಾಯ ರೆಂಡು ದಿನಲಾಯ

ಮೂಡು ದಿನಲಾಯ ನಾಲ್ಗು ದಿನಲಾಯ

ಐದು ದಿನಲಾಯ

ರಾಜ ಕಾಂಭೋಜರಾಜ

ಊರಿಕಿ ಭೋಜನಮು ಇಚ್ಚಿನಾಡು

ಕೊಡ್ಕೂಲ ಪೇರು ಪೆಟ್ಟಾಲನಿ

೫೮. ಎದಿನಗಂಧಿ

ಏಡು ಕಡ್ಡಲ ಸನ್ನೀಳು

ಏಡು ಕಡ್ಡಲ ಉಡ್ಕುನೀಳು

ನಮಿಲು ಪುಚ್ಚ ಚೇತುಲ ಪಟ್ಟುಕೋನಿ

ಮಾಮಕಿ ಪೆಯ್ಯಿ ಕಡ್ಗುತುಂದಿ

೫೯. ನೇನು ಪೊಯ್ಯದೇ ಗಟ್ಟಿ

ಲಡಾಯಿ ಹೆಜ್ಜೆ ಚೇಸೆದೆ ಗಟ್ಟಿ

ಪದ್ಮರಾಣಿ ತೆಚ್ಚೆದೆ ಗಟ್ಟಿ

ಪೋತೆ ಮಂಚಿ ಮಾಟ ಕೊಡ್ಕ

ಸಲ್ಲಗ ಪೊಯ್ಯಿ ಸಲ್ಲಗ ದಾ

ಐದು ನಾಗ ಮಲ್ಲೇ ಪುವ್ವುಲ ತೂಕಂ

ಪದ್ಮರಾಣಿನಿ ತೆಸ್ತೆ

ದೇವಾನುದೇವತುಲು ಮೆಚ್ಚೆಟಿ ಪೆಂಡ್ಲಿ ನೇನು ಚೇಸ್ತ

ಅಟವಂಟಿ ಇಟವಾಟಿ ಆಡಿ ಪಿಲ್ಲನಿ ತೆಸ್ತಿವಂಟೆ

ಬಂದೂಕಿಕಿ ಮಂದು ನಿಂಪಿ

ಬಂದೂಕು ಬಾರ್ ಚೇಸಿ

ಊರಿ ಅಗಸಿಕಾಡ ನಿಲಪೆಟ್ಟಿ

ನೀ ತಲಪಂಡು ಕೊಡ್ತ

## ವಕ್ತೃಗಳ ವಿವರ

೧. **ಈರಮ್ಮ,** ವಯಸ್ಸು: ೭೨, ವೃತ್ತಿ: ಬುರ್ರಕತೆಗಳನ್ನು ಹಾಡುವುದು. ಸ್ಥಳ: ದರೋಜಿ, ಸಂಡೂರು ತಾಲೂಕು, ಬಳ್ಳಾರಿ ಜಿಲ್ಲೆ. ವಿವರ: ಇವರು ಸುಮಾರು ಎಪ್ಪತ್ತು ಎಂಬತ್ತು ಬುರ್ರಕತೆಗಳನ್ನು ಹಾಡುತ್ತಾರೆ. ಕನ್ನಡ ರಾಜ್ಯೋತ್ಸವ ಪ್ರಶಸ್ತಿ, ನಾಡೋಜ ಪ್ರಶಸ್ತಿ ಸೇರಿ ಅನೇಕ ಪ್ರಶಸ್ತಿಗಳನ್ನು ಪಡೆದಿದ್ದಾರೆ. ಬುರ್ರಕತೆ ಈರಮ್ಮ ಎಂದೇ ಪ್ರಸಿದ್ಧಿ ಪಡೆದಿದ್ದಾರೆ. (ಪ್ರಸ್ತುತ ಅಧ್ಯಯನಕ್ಕೆ ಈರಮ್ಮನವರಿಂದ ಡಾ. ಕೆ.ಎಂ. ಅವರು ಸಂಗ್ರಹಿಸಿ ಪ್ರಕಟಿಸಿದ ಕೃಷ್ಣಗೊಲ್ಲರ ಕಾವ್ಯ ಆಕರವಾಗಿ ಬಳಸಿಕೊಳ್ಳಲಾಗಿದೆ)

೨. **ಎಲ್ಲಮ್ಮ,** ವಯಸ್ಸು: ೫೦, ವೃತ್ತಿ: ಬುರ್ರಕತೆಗಳನ್ನು ಹಾಡುವುದು. ಸ್ಥಳ: ಅಣೆಗೇರ, ಚಿತ್ತಾಪೂರ ತಾಲೂಕು, ಗುಲಬರ್ಗಾ ಜಿಲ್ಲೆ. ವಿವರ: ಇವರು ಕನ್ನಡದಲ್ಲಿ ಮಾತ್ರ ಬುರ್ರಕತೆಗಳನ್ನು ಹಾಡುತ್ತಾರೆ. ತನ್ನ ಸುತ್ತಮುತ್ತಲಿನ ಪ್ರದೇಶದಲ್ಲಿ ಬುರ್ರಕತೆಗಳನ್ನು ಹೇಳಿ ಜೀವನ ಸಾಗಿಸುತ್ತಾರೆ.

೩. **ನೀಲಮ್ಮ,** ವಯಸ್ಸು: ೬೫, ವೃತ್ತಿ: ಬುರ್ರಕತೆಗಳನ್ನು ಹಾಡುತ್ತಾರೆ ಸ್ಥಳ; ಚಿತ್ತಾಪೂರ, ಗುಲಬರ್ಗಾ ಜಿಲ್ಲೆ. ವಿವರ: ನೀಲಮ್ಮ ಇವರು ತನ್ನ ಪ್ರದೇಶದಲ್ಲಿ ಬುರ್ರಕತೆಗಳನ್ನು ಹೇಳುವುದರಲ್ಲಿ ಎತ್ತಿದಕೈ. ಇವರು ಸುಮಾರು ಅರವತ್ತು ಎಪ್ಪತ್ತು ಕತೆಗಳನ್ನು ಹೇಳುತ್ತಾರೆ. ಇವರು ಕನ್ನಡ-ತೆಲುಗು ಎರಡೂ ಭಾಷೆಗಳಲ್ಲಿ ಹಾಡುತ್ತಾರೆ.

೪. **ಮಾರೆಮ್ಮ,** ವಯಸ್ಸು: ೬೬, ವೃತ್ತಿ: ಬುರ್ರಕತೆಗಳನ್ನು ಹಾಡುವುದು. ಸ್ಥಳ; ಎಲಸತ್ತಿ, ಯಾದಗಿರಿ ತಾಲೂಕು ಮತ್ತು ಜಿಲ್ಲೆ. ವಿವರ: ಇವರು ಬುರ್ರಕತೆಗಳನ್ನು ತನ್ನ ತಾಯಿಯಿಂದ ಕಲಿತ್ತಿದ್ದನ್ನು ನೆನಪಿಸುತ್ತಾರೆ. ಕನ್ನಡ-ತೆಲುಗು ಎರಡು ಭಾಷೆಗಳಲ್ಲಿ ಕತೆಗಳನ್ನು ಹಾಡುತ್ತಾರೆ. ತನ್ನ ಪ್ರದೇಶದಲ್ಲಿ ಬುರ್ರಕತೆಗಳನ್ನು ಹೇಳುವುದರಲ್ಲಿ ಪ್ರಸಿದ್ಧಿಯನ್ನು ಪಡೆದಿದ್ದಾರೆ. ಕತೆಗಳನ್ನು ಕೇಳಿ ತನ್ನ ಊರಿನ ಗೌಡರು ಹೊಲವನ್ನು ದಾನವಾಗಿ ಕೊಟ್ಟಿದನ್ನು ನೆನಪಿಸಿಕೊಳ್ಳುತ್ತಾರೆ.

೫. **ಶಂಕ್ರಮ್ಮ**, ವಯಸ್ಸು: ೬೦, ವೃತ್ತಿ: ಬುರ್ರಕತೆಗಳನ್ನು ಹಾಡುವುದು. ಸ್ಥಳ: ರಾಮತೀರ್ಥ; ಚಿತ್ತಾಪೂರ ತಾಲ್ಲೂಕು, ಗುಲಬರ್ಗಾ ಜಿಲ್ಲೆ. ವಿವರ: ಶಂಕ್ರಮ್ಮನ ಗಂಡ ಮಹಾದೇವಪ್ಪ ಹಗಲು ವೇಷಗಳನ್ನು ಹಾಕಿ ಪ್ರದರ್ಶಿಸುತ್ತಾರೆ. ಇವರು ಹಾರ್ಮೋನಿಯಂ ನುಡಿಸುವುದರಲ್ಲಿ ನಿಪುಣರು. ಶಂಕ್ರಮ್ಮ ಇವರು ಕನ್ನಡ-ತೆಲುಗು ಎರಡೂ ಭಾಷೆಗಳಲ್ಲಿ ಬುರ್ರಕತೆಗಳನ್ನು ಅತ್ಯಂತ ಇಂಪಾಗಿ ಹಾಡುತ್ತಾರೆ. ಸುಮಾರು ಐವತ್ತರಿಂದ ಅರವತ್ತು ಕತೆಗಳನ್ನು ಹಾಡುತ್ತಾರೆ. ಪ್ರತಿನಿತ್ಯ ಬುಡಿಗೆಯನ್ನು ಹಿಡಿದುಕೊಂಡು ಬುರ್ರಕತೆ ಹೇಳಿ ಭಿಕ್ಷಾಟನೆ ಮಾಡಿ ಜೀವನ ಸಾಗಿಸುತ್ತಾರೆ. ಇವರಿಗೆ ನಾಲ್ಕು ಜನ ಗಂಡು ಮಕ್ಕಳು ಇಬ್ಬರು ಹೆಣ್ಣುಮಕ್ಕಳು ಇದ್ದು ಇವರೆಲ್ಲರ ಮದುವೆಯಾಗಿದ್ದರಿಂದ ಮಕ್ಕಳು ಮೊಮ್ಮಕ್ಕಳಿಂದ ಕೂಡಿದ ದೊಡ್ಡ ಕುಟುಂಬವಾಗಿದೆ. ಇವರು ಕತೆ ಹೇಳುವಾಗ ಸಂಗಡಿಗರಾಗಿ ಶಾಂತಮ್ಮ(ವಯಸ್ಸು ೫೬) ಇವರು ಧ್ವನಿಗೂಡಿಸುತ್ತಾರೆ. ಈ ಕತೆಗಳನ್ನು ಹೇಳುವಾಗ ಸಂಗಡಿಗರು ಪ್ರಮುಖ ಪಾತ್ರ ವಹಿಸುತ್ತಾರೆ. ಶಂಕ್ರಮ್ಮ ಇವರು ತನ್ನ ಪ್ರದೇಶದಲ್ಲಿ ಕತೆ ಹೇಳುವುದರಲ್ಲಿ ಹೆಸರು ಪಡೆದಿದ್ದಾರೆ.

೬. **ಶಾಂತಮ್ಮ**, ವಯಸ್ಸು: ೬೬, ವೃತ್ತಿ: ಬುರ್ರಕತೆಗಳನ್ನು ಹಾಡುವುದು. ಸ್ಥಳ: ಮಕ್ತಲ್, ಮೆಹಬೂಬನಗರ ಜಿಲ್ಲೆ(ಆಂಧ್ರಪ್ರದೇಶ), ವಿವರ: ಇವರು ತೆಲುಗಿನಲ್ಲಿ ಮಾತ್ರ ಬುರ್ರಕತೆಗಳನ್ನು ಹಾಡುತ್ತಾರೆ. ಸುಮಾರು ಎಪ್ಪತ್ತು ಕತೆಗಳನ್ನು ಹಾಡುತ್ತಾರೆ. ಇವರು ಪ್ರತಿನಿತ್ಯ ಬುರ್ರಕತೆಗಳನ್ನು ಹೇಳಿ ಭಿಕ್ಷೆ ಪಡೆದು ಜೀವನ ಸಾಗಿಸುತ್ತಾರೆ.

# ಅನುಬಂಧ-೨


## ಪರಾಮರ್ಶನ ಗ್ರಂಥಗಳು

### ಕನ್ನಡ ಕೃತಿಗಳು

೧. ಅಂಜನಪ್ಪ ಯಳನಾಡು (೧೯೯೨), ಹಗಲುವೇಷದವರ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೨. ಅಂಬಳಿಕೆ ಹಿರಿಯಣ್ಣ (ಡಾ) (ಸಂ), (೧೯೮೫), ಲೌಕಿಕ ಸಂಪ್ರದಾಯದ ಬೌದ್ಧಿಕ ಕಾವ್ಯಗಳು, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೩. ಅಂಬಳಿಕೆ ಹಿರಿಯಣ್ಣ (ಡಾ), (೧೯೯೪), ಜಾನಪದ; ಕೆಲವು ಅಧ್ಯಯನಗಳು, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು.

೪. ಅಮೃತ ಸೋಮೇಶ್ವರ (ಸಂ), (೧೯೯೭), ತುಳು ಪಾಡ್ದನ ಸಂಪುಟ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ.

೫. ಇಮ್ರಾಪುರ ಎಸ್.ಜಿ. (೧೯೮೯), ಜನಪದ ಒಗಟುಗಳು, ಪ್ರಸಾರಾಂಗ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೬. ಕಾಳೆಗೌಡ ನಾಗವಾರ (ಪ್ರೊ), ಅಂಬಳಿಕೆ ಹಿರಿಯಣ್ಣ (ಡಾ), (ಸಂ), (೨೦೦೦), ಜೀಶಂಪ ಅವರ ಜಾನಪದ ಬರಹಗಳು, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು.

೭. ಉಪಾಧ್ಯಾಯ ಎಸ್.ಪಿ. (-?) ಜನಪದ ಆರಾಧನೆ ಮತ್ತು ರಂಗಕಲೆ, ಪ್ರಾದೇಶಿಕ ರಂಗಕಲೆಗಳ ಅಧ್ಯಯನ ಕೇಂದ್ರ, ಉಡುಪಿ.

೮. ಕ್ಯಾತನಹಳ್ಳಿ ರಾಮಣ್ಣ (೧೯೮೨), ಗೊಂದಲಿಗರುः ಒಂದು ಅಧ್ಯಯನ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು.

೯. ಕ್ಯಾತನಹಳ್ಳಿ ರಾಮಣ್ಣ ಬೋರೆಗೌಡ ಚಿಕ್ಕಮರಳಿ (ಸಂ), (೨೦೦೪), ಜೀಶಂಪ ಜಾನಪದ, ಕರ್ನಾಟಕ ಸಂಘ (ರಿ) ಎಂ.ಎಲ್. ಶ್ರೀಕಂಠೇಶಗೌಡ ಸಂಶೋಧನ ಕೇಂದ್ರ, ಮಂಡ್ಯ.

೧೦. ಖಂಡೋಬಾ ಪಿ.ಕೆ. (೧೯೯೨), ಉತ್ತರ ಕರ್ನಾಟಕ ಜನಪದ ಕಲೆಗಳು, ಜನಪದ ಗಂಗೋತ್ರಿ, ಕನ್ನಡ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು.

೧೧. ಗದ್ದಗೀಮಠ ಬಿ.ಎಸ್. (೧೯೬೬), ಕನ್ನಡ ಜಾನಪದ ಗೀತೆಗಳು, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೧೨. ಚಕ್ಕರೆ ಶಿವಶಂಕರ್ (೨೦೦೬), ಜನಪದ ಕಲಾ ಪ್ರವೇಶ, ಸಾಗರ ಪ್ರಕಾಶನ, ಬೆಂಗಳೂರು.

೧೩. ಚಕ್ಕೆರೆ ಶಿವಶಂಕರ್ (೨೦೦೮), ಜನಪದ ವೃತ್ತಿಗಾಯಕರು, ಕರ್ನಾಟಕ ಜಾನಪದ ಪರಿಷತ್ತು, ಬೆಂಗಳೂರು.

೧೪. ಚೆನ್ನಣ್ಣ ವಾಲೀಕಾರ (೧೯೮೮), ಜನಪದ ವೃತ್ತಿ ಗಾಯಕರು, ಪ್ರಸಾರಾಂಗ, ಗುಲ್ಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ.

೧೫. ಚೆನ್ನಬಸಪ್ಪ ಗೊ.ರು. (೧೯೭೭), ಕರ್ನಾಟಕ ಜನಪದ ಕಲೆಗಳು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೧೬. ಚಂದ್ರಪ್ಪ ಎನ್ (ಪ್ರೊ), (೨೦೦೨), ಎಲ್ಲಮ್ಮ: ಒಂದು ಜಾನಪದೀಯ ಅಧ್ಯಯನ, ಮುಂಡ ಪ್ರಕಾಶನ, ಬೆಂಗಳೂರು.

೧೭. ಚಂದ್ರಶೇಖರ ಕಂಬಾರ (ಡಾ), (೧೯೮೫), ಕನ್ನಡ ಜಾನಪದ ವಿಶ್ವಕೋಶ (ಸಂಪುಟ ೧, ೨) ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೧೮. ಜವರೇಗೌಡ. ದೇ. (೧೯೯೧), ಜನಪದ ಅಧ್ಯಯನ, ಚೇತನ ಬುಕ್ ಹೌಸ್, ಬೆಂಗಳೂರು.

೧೯. ಕಲಬುರ್ಗಿ ಎಂ.ಎಂ. (ಸಂ), (೨೦೦೧), ಕೊಮಾರ ರಾಮಯ್ಯನ ಚರಿತ್ರೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

೨೦. ಪ್ರಭಾಕರ ಎ.ಎಸ್, (೨೦೦), ಬುಡಕಟ್ಟು ಬದುಕಿನ ಸ್ಥಿತ್ಯಂತರಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

೨೧. ತಪಸ್ವಿಕುಮಾರ್ ನಂ. (೧೯೮೨), ಕನ್ನಡ ಜನಪದ ಗೀತೆಗಳ ಸಾಂಸ್ಕೃತಿಕ ಅಧ್ಯಯನ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು.

೨೨. ತಪಸ್ವೀಕುಮಾರ್ ನಂ. (ಡಾ), (೧೯೯೫), ಸಂಸ್ಕೃತಿ ವಿಕಾಸ, ಭಾರತಿ ಪ್ರಕಾಶನ, ಮೈಸೂರು.

೨೩. ತಾಳ್ತಜೆ ವಸಂತಕುಮಾರ್, (೧೯೯೮), ಸಂಶೋಧನ ತರಂಗ, ಕನ್ನಡ ಭವನ, ಮುಂಬಾಯಿ ವಿಶ್ವವಿದ್ಯಾಲಯ ಮುಂಬಯಿ.

೨೪. ತಿಪ್ಪೇರುದ್ರಸ್ವಾಮಿ ಎಚ್. (ಡಾ), (೧೯೮೫), ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ಪ್ರಕಾಶಕರು: ಡಿ.ವಿ.ಕೆ. ಮೂರ್ತಿ ಮೈಸೂರು.

೨೫. ತಿಪ್ಪೆಸ್ವಾಮಿ ಜಿ.ಆರ್. (ಡಾ), (೨೦೦೫), ಮೌಖಿಕ ಕಥನ, ವಿಜಯಲಕ್ಷ್ಮೀ ಪ್ರಕಾಶನ, ಕುವೆಂಪು ನಗರ ಮೈಸೂರು.

೨೬. ದಾಸನೂರು ಕೂಸಣ್ಣ (೧೯೯೯), ಶೋಷಿತ ಜಂಗಮರ ಮೀಸಲಾತಿ, ಮಾತಂಗ ಪ್ರಕಾಶನ, ಮೈಸೂರು.

೨೭. ದುರ್ಗದಾಸ್ ಕೆ.ಆರ್. (೧೯೮೫), ಬಳ್ಳಾರಿ ಜಿಲ್ಲೆಯ ಬಯಲಾಟಗಳು, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೨೮. ನಾವಡ ಎ.ವಿ. (೧೯೯೩), ಜಾನಪದ ಸಮಾಲೋಚನ, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು.

೨೯. ನಾವಡ ಎ.ವಿ. (ಪ್ರೊ), (೧೯೯೯), ಸಿರಿಪಾಡ್ದನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

೩೦. ನಾವಡ ಎ.ವಿ. (ಸಂ), (೨೦೦೭), ಕರಾವಳಿ ಜಾನಪದ, ಪ್ರಕಾಶನ: ೭೪ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನ, ಉಡುಪಿ.

೩೧. ನಾಗರಾಜ್. ಡಿ.ಆರ್. (೨೦೦೮), ಶಕ್ತಿ ಶಾರದೆಯ ಮೇಳ, ಅಕ್ಷರ ಪ್ರಕಾಶನ, ಹೆಗ್ಗೋಡು (ಸಾಗರ).

೩೨. ಪರಮಶಿವಯ್ಯ ಜೀ.ಶಂ (೧೯೭೯), ದಕ್ಷಿಣ ಕರ್ನಾಟಕದ ಕಾವ್ಯ ಪ್ರಕಾರಗಳು, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೩೩. ಪರಮಶಿವಯ್ಯ ಜೀ.ಶಂ. (೧೯೮೦), ಕರ್ನಾಟಕ ಜನಪದ ವಾದ್ಯಗಳು, ಐ.ಬಿ.ಎಚ್. ಪ್ರಕಾಶನ, ಬೆಂಗಳೂರು.

೩೪. ಪರಮಶಿವಯ್ಯ ಜೀ.ಶಂ. (೧೯೮೧), ಜಾನಪದ ಒಂದು ಅಧ್ಯಯನ, ಕರ್ನಾಟಕ ವಿದ್ಯಾವರ್ಧಕ ಸಂಘ, ಧಾರವಾಡ.

೩೫. ಪರಮಶಿವಯ್ಯ ಜಿ.ಶಂ. (ಸಂ), (೧೯೮೧), ಕನ್ನಡ ವೃತ್ತಿಗಾಯಕ ಕಾವ್ಯಗಳು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೩೬. ಪರಮಶಿವಯ್ಯ ಜಿ.ಶಂ. (೧೯೯೬), ಜಾನಪದ ಕೆಲವು ಮುಖಗಳು, ಚೇತನ ಬುಕ್‌ಹೌಸ್, ಮೈಸೂರು.

೩೭. ಪೋತೆ ಎಚ್.ಟಿ. (೨೦೦೦), ಹೈದರಾಬಾದ್ ಕರ್ನಾಟಕ ಜನಪದ ಪ್ರದರ್ಶನ ಕಲೆಗಳು, ಅಂಬು ಪ್ರಕಾಶನ, ರಾಯಚೂರು.

೩೮. ಪ್ರತಾಪ ರಾ. ಬಹುರೂಪಿ (ಸಂ), (೨೦೦೫), ಬುಡ್ಗಜಂಗಮರು, ಕರ್ನಾಟಕ ಬುಡ್ಗ ಜಂಗಮ ಸಂಘ, ಹೊಸಪೇಟೆ.

೩೯. ಬಸವರಾಜ ಕುರುವ (ಡಾ), (೨೦೧೧), ಜನಪದ ಮಹಾಕಾವ್ಯಗಳ ನಿರ್ಮಾಣ ಪ್ರತಿಭೆಯ ನೆಲೆಗಳು, ಗೀತಾಂಜಲಿ ಪಬ್ಲಿಕೇಶನ್, ಬೆಂಗಳೂರು.

೪೦. ಬಾಲಗುರುಮೂರ್ತಿ, ಪ್ರತಾಪ.ರಾ ಬಹುರೂಪಿ (ಸಂ), (೨೦೦೮) ಬುಡ್ಗಜಂಗಮ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

೪೧. ಬೋರಲಿಂಗಯ್ಯ ಹಿ.ಚಿ. (ಸಂ), (೧೯೮೧), ಕರ್ನಾಟಕ ಜಾನಪದ ಕಲೆಗಳ ಕೋಶ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

೪೨. ಬೋರಲಿಂಗಯ್ಯ ಹಿ.ಚಿ (ಡಾ), (೨೦೦೦), ಬುಡಕಟ್ಟು ದೈವಾರಾಧನೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

೪೩. ಭಾನುಮತಿ ವೈ.ಸಿ. (ಡಾ), (೨೦೦೩), ಜಾನಪದ ಅಂತರ್ಯ, ತಳಗವಾದಿ ಪ್ರಕಾಶನ, ಮೈಸೂರು.

೪೪. ಮಂಜುನಾಥ ಬೇವಿನಕಟ್ಟಿ (ಡಾ), (೨೦೦೯), ಕರ್ನಾಟಕ ಜನಪದ ಸ್ತ್ರೀ ದೈವಗಳ ಸಾಂಸ್ಕೃತಿಕ ಪದಕೋಶ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

೪೫. ಮೈತ್ರಿ. ಕೆ.ಎಂ. (ಡಾ), (೧೯೯೭), ಕುಮಾರರಾಮ ಕಾವ್ಯ ಮತ್ತು ಕೃಷ್ಣಗೊಲ್ಲರ ಕಾವ್ಯ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

೪೬. ಮೈತ್ರಿ ಕೆ.ಎಂ. (ಡಾ), (೨೦೦೨), ಬುಡಕಟ್ಟು ಕುಲಕಸುಬುಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

೪೭. ಮೈತ್ರಿ ಕೆ.ಎಂ. (ಡಾ), (೨೦೦೫), ಎಲ್ಲಮ್ಮ ಕಥನ ಕಾವ್ಯ, ವಿದ್ಯಾನಿಧಿ, ಪ್ರಕಾಶನ, ಗದಗ.

೪೮. ಮೈತ್ರಿ ಕೆ.ಎಂ. (ಡಾ), (೨೦೦೫), ಬುಡ್ಗಜಂಗಮರು, ಕರ್ನಾಟಕ ಬುಡ್ಗಜಂಗಮರ ಸಂಘ (ರಿ), ಹೊಸಪೇಟೆ.

೪೯. ಮೊಗಳ್ಳಿ ಗಣೇಶ (ಡಾ), (೨೦೦೬), ಮೌಖಿಕ ಕಥನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

೫೦. ಮೋಹನ ಕುಂಟಾರ್ (ಡಾ), (೨೦೦೦), ಯಕ್ಷಗಾನ ವಾಚಿಕಾಧ್ಯಾಯನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

೫೧. ಮೋಹನ ಕುಂಟಾರ್ (ಡಾ), (೨೦೦೬) ಕೇರಳ ಕಥನ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

೫೨. ಮೋಹನ ಕುಂಟಾರ್ (ಡಾ), (೨೦೦೯) ಯಕ್ಷಗಾನ ಆಹಾರ್ಯ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

೫೩. ರಮೇಶ ಸ.ಚಿ. (ಡಾ), (ಸಂ), (೧೯೯೯), ಸ್ವಾಸಿ ಚಿನ್ನಮ್ಮ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

೫೪. ರಾಘವನ್ ಸಿ. (ಅನು), (೨೦೦೬), ಮಲೆಯಾಳ ಜಾನಪದ ಹಾಡುಗಳು, ಸಾಹಿತ್ಯ ಅಕಾಡೆಮಿ, ಭಾಷಾಂತರ ಕೇಂದ್ರ, ಬೆಂಗಳೂರು.

೫೫. ರಾ.ಗೌ. (ರಾಮೇಗೌಡ), (೨೦೦೮), ಕಿಟೆಲ್‌ಕೋಶದ ಗಾದೆಗಳು, ಡಿ.ವಿ.ಕೆ., ಕೃಷ್ಣಮೂರ್ತಿಪುರಂ, ಮೈಸೂರು.

೫೬. ರಾಜಶೇಖರ ಪಿ.ಕೆ. (ಡಾ), (ಸಂ), (೧೯೯೦), ಜನಪದ ವೀರಕಾವ್ಯ ಪಿರಿಯಾಪಟ್ಟಣ ಕಾಳಗ, ಹೊನ್ನಾರು ಜನಪದ ಗಾಯಕರು, ಮಾನಸ ಗಂಗೋತ್ರಿ.

೫೭. ರಾಜಶೇಖರ ಪಿ.ಕೆ. (ಡಾ), (ಸಂ), (೨೦೦೬), ಜನಪದ ಮಹಾಕಾವ್ಯ ಮಲೆಯ ಮಹಾದೇಶ್ವರ, ಸಂಪುಟ ಎರಡು, ಕನ್ನಡ ಮತ್ತು ಸಾಂಸ್ಕೃತಿ ಇಲಾಖೆ, ಕನ್ನಡ ಭವನ, ಬೆಂಗಳೂರು.

೫೮. ರಾಜೇಂದ್ರ ಡಿ.ಕೆ. (ಡಾ), (ಸಂ), (೧೯೮೫), ಕರಪಾಲ ಮೇಳ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೫೯. ರಾಮಚಂದ್ರಪ್ಪ ಬರಗೂರು (ಸಂ), (೨೦೦೨), ಕರ್ನಾಟಕ ಸಂಗಾತಿ, ಕನ್ನಡ ಅಭಿವೃದ್ಧಿ ಪ್ರಾಧಿಕಾರ ಬೆಂಗಳೂರು.

೬೦. ರಾಮಚಂದ್ರೇಗೌಡ ಹಿ.ಶಿ. (ಪ್ರೊ), (೧೯೯೮), ಜಾನಪದ ಸಾಂಸ್ಕೃತಿಕ ಆಯಾಮಗಳು, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

೬೧. ರಾಮಚಂದ್ರೇಗೌಡ. ಹಿ.ಶಿ. (ಪ್ರೊ), (ಸಂ), (೨೦೦೪), ಜಾನಪದ ಗ್ರಹಿಕೆ, ಪರಿಕಲ್ಪನೆ, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು.

೬೨. ಲಕ್ಕಪ್ಪಗೌಡ ಎಚ್.ಜೆ. (ಸಂ), (೧೯೯೮), ಕರ್ನಾಟಕ ಬುಡಕಟ್ಟುಗಳು, ಸಂಪುಟ, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು.

೬೩. ಲಕ್ಕಪ್ಪಗೌಡ ಎಚ್.ಜೆ. (ಸಂ), (೨೦೦೦), ಕರ್ನಾಟಕ ಬುಡಕಟ್ಟುಗಳು (ಸಂಪುಟ ಎರಡು), ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು.

೬೪. ವೀರಣ್ಣ ದಂಡೆ (ಡಾ), (೧೯೮೧), ಜನಪದ ಕತೆ ವಸ್ತು ಮತ್ತು ತಂತ್ರ, ಬಸವ ಪ್ರಕಾಶನ ಕಲಬುರ್ಗಿ.

೬೫. ವೀರಣ್ಣ ದಂಡೆ (ಡಾ), (೧೯೯೬), ಜನಪದ ಸಾಹಿತ್ಯ ಸಿದ್ಧಾಂತಗಳು, ಬಸವ ಪ್ರಕಾಶನ, ಕಲಬುರ್ಗಿ.

೬೬. ವೀರಣ್ಣ ದಂಡೆ (ಡಾ), (೨೦೦೪), ಜನಪದ ಕಾವ್ಯ ಮೀಮಾಂಸೆ ಹಾಗೂ ವಿಮರ್ಶಾ ಪ್ರಸ್ಥಾನಗಳು, ಕವಿಮಾರ್ಗ ಪ್ರಕಾಶನ, ಕಲಬುರ್ಗಿ.

೬೭. ವೀರಣ್ಣ ದಂಡೆ (ಡಾ), (೨೦೦೩), ದೇಸಿ (ಸಂಪುಟ ಒಂದು) ಭಾಗ್ಯಶ್ರೀ ಎಂಟರ್‌ಪ್ರೈಸೆಸ್, ಬೆಂಗಳೂರು.

೬೮. ವೀರಣ್ಣ ದಂಡೆ (ಡಾ), ಶ್ರೀಪಾದಶೆಟ್ಟಿ (ಡಾ), (ಸಂ), (೨೦೦೬), ಸುವರ್ಣ ಜಾನಪದ ಲೇಖನಗಳು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು.

೬೯. ವೆಂಕನಗೌಡ, (೨೦೦೨), ಬಳ್ಳಾರಿ ಮತ್ತು ಆಂಧ್ರ ಗಡಿಭಾಗದ ಹಗಲು ವೇಷಗಾರರುಃ ಒಂದು ಅಧ್ಯಯನ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

೭೦. ವೀರೇಶ ಶೇ. ಬಡಿಗೇರ, (೧೯೯೯), ಉತ್ತರ ಕರ್ನಾಟಕದ ಜಾನಪದ ಗೀತ ಮೇಳಗಳುಃ ಒಂದು ಸಾಂಸ್ಕೃತಿಕ ಅಧ್ಯಯನ, ವಿಮೋಚನ ಪ್ರಕಾಶನ, ಅಥಣಿ, ಬೆಳಗಾವಿ ಜಿಲ್ಲೆ.

೭೧. ವೆಂಕಟೇಶ ಇಂದ್ವಾಡಿ (ಡಾ), (ಸಂ), (೨೦೧೦), ಸಿರಿ ಜಾನಪದ ಕಾವ್ಯ; ಸಾಂಸ್ಕೃತಿಕ ಮುಖಾಮುಖಿ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

೭೨. ಶಂಕರನಾರಾಯಣ ತೀ.ನಂ. (ಸಂ), (೧೯೯೬) ಜನಪದ ಮಹಾಕಾವ್ಯ, ಕರ್ನಾಟಕ ಸಂಘ, ದಕ್ಷಿಣ ಕನ್ನಡ.

೭೩. ಶಂಕರನಾರಾಯಣ ತೀ.ನಂ. (ಡಾ), ವೆಂಕಟೇಶ. ಎಂ.ಎಸ್ (ಡಾ), (ಸಂ), (೨೦೦೪), ಜಾನಪದ ಸಾಹಿತ್ಯ ಪ್ರಕಾರಗಳು, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ ಬೆಂಗಳೂರು.

೭೪. ಶ್ರೀಕಂಠ ಕೂಡಿಗೆ (ಸಂ), (೧೯೯೯), ಕನ್ನಡ ಲಾವಣಿಗಳು, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

